# ಕರ್ನಾಟಕದ ಪಿಂಜಾರರು

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧಕ

**ದಾದಾಪೀರ್. ಬಿ.ಸಿ.**

ಮಾರ್ಗದರ್ಶಕ

**ಡಾ. ಮಂಜುನಾಥ ಬೇವಿನಕಟ್ಟಿ**

೨೦೦೪







**ಜಾನಪದ ಅಧ್ಯಯನ ವಿಭಾಗ**

ಸಮಾಜ ವಿಜ್ಞಾನಗಳ ನಿಕಾಯ,

ಕನ್ನಡ ವಿಶ್ವವಿದ್ಯಾನಿಲಯ,

ಹಂಪಿ, ವಿದ್ಯಾರಣ್ಯ - ೫೮೩ ೨೭೬

# ದೃಢೀಕರಣ

ಡಾ॥ ಮಂಜುನಾಥ ಬೇವಿನಕಟ್ಟಿ ಅವರ ಮಾರ್ಗದರ್ಶನದಲ್ಲಿ 'ಕರ್ನಾಟಕದ ಪಿಂಜಾರರು' ಎಂಬ ವಿಷಯ ಕುರಿತು ಈ ಸಂಶೋಧನಾತ್ಮಕ ಸಂಪ್ರಬಂಧವನ್ನು ಸಿದ್ಧಪಡಿಸಲಾಗಿದೆ. ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಈ ಮಹಾಪ್ರಬಂಧ ಬಿಡಿಯಾಗಿ ಅಥವಾ ಇಡಿಯಾಗಿ ಇದುವರೆಗೆ ಪ್ರಕಟವಾಗಿರುವುದಿಲ್ಲ ಮತ್ತು ಯಾವುದೇ ಇತರೆ ವಿಶ್ವವಿದ್ಯಾಲಯಗಳಿಗೆ ಪಿಎಚ್.ಡಿ. ಪದವಿಗಾಗಿ ಈ ಪ್ರಬಂಧವನ್ನು ಸಲ್ಲಿಸಿರುವುದಿಲ್ಲ.

ದಾದಾಪೀರ್. ಬಿ.ಸಿ.
ಸಂಶೋಧಕ

# ದೃಢೀಕರಣ

ನನ್ನ ಮಾರ್ಗದರ್ಶನದಲ್ಲಿ **ದಾದಾಪೀರ್. ಬಿ.ಸಿ.** ಅವರು **'ಕರ್ನಾಟಕದ ಪಿಂಜಾರರು'** ಎಂಬ ವಿಷಯ ಕುರಿತು ಈ ಸಂಶೋಧನಾತ್ಮಕ ಸಂಪ್ರಬಂಧವನ್ನು ಸಿದ್ಧಪಡಿಸಿದ್ದಾರೆ. ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಈ ಮಹಾಪ್ರಬಂಧ ಬಿಡಿಯಾಗಿ ಅಥವಾ ಇಡಿಯಾಗಿ ಇದುವರೆಗೆ ಪ್ರಕಟವಾಗಿರುವುದಿಲ್ಲ ಮತ್ತು ಯಾವುದೇ ಇತರೆ ವಿಶ್ವವಿದ್ಯಾಲಯಗಳಿಗೆ ಪಿಎಚ್.ಡಿ. ಪದವಿಗಾಗಿ ಈ ಪ್ರಬಂಧವನ್ನು ಸಲ್ಲಿಸಿರುವುದಿಲ್ಲ.

ಬಿ. ಮಂಜುನಾಥ
**ಡಾ. ಮಂಜುನಾಥ ಬೇವಿನಕಟ್ಟಿ**
ಪ್ರವಾಚಕರು
ಜಾನಪದ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾನಿಲಯ,
ಹಂಪಿ, ವಿದ್ಯಾರಣ್ಯ - ೫೮೩ ೨೭೬

# ಕೃತಜ್ಞತೆ . . . .

- ನನ್ನ ವಿದ್ಯಾ ಗುರುಗಳಾದ ಪ್ರೊ. ಎಚ್.ಎಂ. ಚನ್ನಯ್ಯ, ಪ್ರೊ. ಜಿ.ಎಚ್. ನಾಯಕ, ಪ್ರೊ. ಕಾಳೇಗೌಡ ನಾಗವಾರ ಹಾಗೂ ಹಿತೈಷಿಗಳಾದ ಪ್ರೊ. ಕೃಷ್ಣಮೂರ್ತಿ ಹನೂರು, ಕುಂ. ವೀರಭದ್ರಪ್ಪ ಮತ್ತು ಪ್ರೊ. ಬಿ.ವಿ. ವೀರಭದ್ರಪ್ಪ ಅವರಿಗೆ.
- ನನ್ನ ವೈಚಾರಿಕ ವ್ಯಕ್ತಿತ್ವದ ಭಾಗವಾಗಿರುವ ನನ್ನ ಪ್ರೀತಿಯ ಅಣ್ಣ ಎನ್.ಸಿ. ರಾಜಾಸಾಬ್ ಮತ್ತು ಪ್ರೊ. ಬರಗೂರು ರಾಮಚಂದ್ರಪ್ಪ ಅವರಿಗೆ.
- ಈ ಅಧ್ಯಯನದ ಮಾರ್ಗದರ್ಶಕರೂ, ಆತ್ಮೀಯರೂ ಆದ ಡಾ. ಮಂಜುನಾಥ ಬೇವಿನಕಟ್ಟಿ ಅವರಿಗೆ.
- ಸದಾ ಪ್ರೀತಿ ತೋರುವ ಗೆಳೆಯರಾದ ರಾಜಪ್ಪ ದಳವಾಯಿ, ಮಲ್ಲಿಕಾರ್ಜುನ ಕಲಮರಹಳ್ಳಿ, ಡಿ. ನಾಗಣ್ಣ, ಸಣ್ಣ ಹನುಮಪ್ಪ, ಎ.ಬಿ. ರಾಮಚಂದ್ರಪ್ಪ, ಯಳನಾಡು ಅಂಜನಪ್ಪ, ಪಿ. ಮೆಹಬೂಬ್ ಸಾಬ್, ಮಹಬೂಬ್ ಸುಬಾನಿ, ಚಂದ್ರಹಾಸ ಹಿರೇಮಳಲಿ, ಎಸ್. ವೆಂಕಟೇಶಮೂರ್ತಿ ಮತ್ತು ಜಿ.ಆರ್. ಗುರುಮೂರ್ತಿ ಅವರಿಗೆ.
- ಪಿಂಜಾರರ ಬದುಕನ್ನು ಕುರಿತಂತೆ ಆಸಕ್ತಿದಾಯಕ ಅಭಿಪ್ರಾಯ ನೀಡಿದ ಮಹಬೂಬ್‌ಬಾಷಾ ಮತ್ತು ಮಹಮ್ಮದ್ ಜಿಯಾವುಲ್ಲಾ ಅವರಿಗೆ.
- ನನ್ನ ಪ್ರೀತಿಯ ಪ್ರಾಂಶುಪಾಲರಾದ ಡಾ. ಎ.ಎನ್. ವೆಂಕಟೇಶರೆಡ್ಡಿ ಮತ್ತು ಪ್ರೊ. ಬಿ.ಎಸ್. ಚಂದ್ರಶೇಖರನ್ ಅವರಿಗೆ.
- ಕರ್ನಾಟಕ ರಾಜ್ಯ ಪಿಂಜಾರ / ನದಾಫ್ ಸಂಘದ ರಾಜ್ಯಾಧ್ಯಕ್ಷರೂ, ಪ್ರೀತಿ-ದಯೆ-ಸಹನೆಯ ಸಾಕಾರರೂಪವೂ ಆಗಿರುವ ಹಿರಿಯರಾದ ಜನಾಬ್ ಹಿರೇಹಾಳ್ ಇಬ್ರಾಹಿಂ ಅವರಿಗೆ.
- ಪಿಂಜಾರರ ಕುರಿತಾದ ವಿವರಗಳನ್ನು ನೀಡಿದ ಎಲ್ಲಾ ವಕ್ತೃಗಳಿಗೆ.
- ನನ್ನ ಎಲ್ಲಾ ಬಗೆಯ ಬೆಳವಣಿಗೆಯಲ್ಲಿ ಸಂತೋಷ ಕಾಣುವ ತಂಗಿಯರಾದ ರಜಿಯಾ, ಫಾಮಿದಾ ಮತ್ತು ಎನ್.ಜಿ. ನಬೀಸಾಬ್, ಡಾ. ಮಹಮ್ಮದ್ ಹೊನ್ನೂರ್, ಜೆ.ಕೆ. ಹುಸೇನ್‌ಮಿಯಾ ಅವರಿಗೆ
- ಪ್ರೀತಿಯ ಬಾಭಿ ಫಕ್ರೂಬಿ ಮತ್ತು  ಮಗಳಾದ ನಜ್ಮಾ ಅವರಿಗೆ.
- ನನ್ನ ಶ್ರೇಯಸ್ಸಿಗೆ ಕಾರಣರಾಗಿರುವ, ಪಿಂಜಾರರ ಕುರಿತು ಅಪಾರವಾದ ಸಾಂಸ್ಕೃತಿಕ ವಿವರಗಳನ್ನು ನೀಡಿದ ನನ್ನ ಪ್ರೀತಿಯ ಅವ್ವ-ಅಪ್ಪ ಅವರಿಗೆ.
- ಅಧ್ಯಯನಕ್ಕೆ ಅಗತ್ಯವಾದ ಭಾವಚಿತ್ರಗಳನ್ನು ಒದಗಿಸಿದ ಪ್ರೀತಿಯ ತಮ್ಮ ಅಮೀರ್ ಮತ್ತು ಗೆಳೆಯರಾದ ಪಿ. ದಾದಾಪೀರ್, ಎಚ್.ಎನ್. ಶಫೀ ಹಾಗೂ ಭಾವಚಿತ್ರಗಳನ್ನು ಬಹುವರ್ಣದಲ್ಲಿ ಮುದ್ರಿಸಿಕೊಟ್ಟ ನನ್ನ ಅಣ್ಣನ ಮಗ ಪ್ರೀತಿಯ ಚಿರಾಗ್ ಅವರಿಗೆ.
- ಭೈರವ ಮಲ್ಟಿಟೆಕ್‌ನ ಗೋಪಿನಾಥ್ ಹಾಗೂ ತಪ್ಪಿಲ್ಲದಂತೆ ಅಚ್ಚುಕಟ್ಟಾಗಿ ಅಕ್ಷರ ಜೋಡಣೆ ಮಾಡಿದ ಪ್ರಸನ್ನ ಅವರಿಗೆ.
- ಇಡೀ ಸಂಶೋಧನೆಯ ಸಂದರ್ಭದಲ್ಲಿ ಅವ್ಯಕ್ತವಾದ ಪ್ರೀತಿ ತೋರಿ ಸ್ಫೂರ್ತಿ ತುಂಬಿದ ನನ್ನ ಪ್ರೀತಿಯ ಪತ್ನಿ ರಾಜಹಂಶಿರಾಬಾನು, ಮಕ್ಕಳಾದ ನಿಹಾರ್, ನೀವಾ ಅವರಿಗೆ.

*ಈ ಎಲ್ಲರಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ.*

ದಿನಾಂಕ : ೧೬-೫-೨೦೦೪
ಮಂಡ್ಯ - ೫೭೧೪೦೧.

ದಾದಾಪೀರ್ ನವಿಲೇಹಾಳ್

ಅಧ್ಯಾಯ - ೧

# ಪ್ರಸ್ತಾವನೆ

## ೧.೧ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ:

ಕರ್ನಾಟಕದ 'ಪಿಂಜಾರ' ಜನಾಂಗದ ಅಧ್ಯಯನಕ್ಕೆ ಒತ್ತಾಸೆ ನೀಡುವ ಬಹುಮುಖ್ಯ ವಿಚಾರವೆಂದರೆ ಪಿಂಜಾರರು ನಮ್ಮ ನಾಡಿನ ಅಲ್ಪಸಂಖ್ಯಾತರಲ್ಲಿಯೇ ಅತಿ ಹಿಂದುಳಿದ ಅಲ್ಪ ಸಂಖ್ಯಾತರಾಗಿರುವುದು ಮತ್ತು 'ಕರ್ನಾಟಕದ ಬುಡಕಟ್ಟುಗಳಲ್ಲಿಯೇ ವಿಶಿಷ್ಟವಾದ ಪಿಂಜಾರ ಜನಾಂಗವು ಹಿಂದೂ-ಮುಸ್ಲಿಂ ಭಾವೈಕ್ಯಕ್ಕೆ ಸಂಕೇತ'[1] ವಾಗಿರುವುದು.

ಸಾಮಾನ್ಯವಾಗಿ ಅಧ್ಯಯನಕ್ಕೆ ಒಳಪಡುವ ಜನಾಂಗಗಳ ಸಾಂಸ್ಕೃತಿಕ ವಿವರಗಳನ್ನು ಕಲೆಹಾಕುವ 'ಕ್ಷೇತ್ರ ಕಾರ್ಯ'ಕ್ಕೆ ಮಾತ್ರ ಸೀಮಿತಗೊಳ್ಳದೆ, ಆ ನಿಟ್ಟಿನಲ್ಲಿ ಒಂದು ಜನಾಂಗದ ನೆಲೆ-ಬೆಲೆಯನ್ನು ಗುರುತಿಸುವುದು ಸಾಧ್ಯವಾಗಬೇಕು ಎನ್ನುವುದು ಪಿಂಜಾರರ ಅಧ್ಯಯನಕ್ಕೆ ಇರುವ ಮತ್ತೊಂದು ಕಾಳಜಿ. ಮತಧರ್ಮನಿಷ್ಠ ಸಮಾಜವೊಂದರಲ್ಲಿ ಜನಾಂಗಿಕ ಅಧ್ಯಯನಗಳು ಪಡೆಯುತ್ತಿರುವ ಸಾಂಸ್ಕೃತಿಕ ಒಳರಚನೆಯ ಸ್ವರೂಪವನ್ನು ಗಮನಿಸಿದರೆ ಆಳದಲ್ಲೆಲ್ಲೋ ಮನುಷ್ಯ ನಿರ್ಮಿತ ಸಾಮಾಜಿಕ ನಿರ್ಬಂಧಗಳನ್ನು ಮೀರುವ ನಿಸರ್ಗ ಸಹಜ ರೀತಿಯು ತಿಳಿಯುತ್ತದೆ. ಈ ಹಿನ್ನೆಲೆಯಲ್ಲಿ ನಿಜ ಸಂಸ್ಕೃತಿಯ ರೂಪಗಳು ವಾಸ್ತವದಲ್ಲಿ ಯಾವುದನ್ನು 'ಸಂಸ್ಕೃತಿ' ಎಂದು ಬಿಂಬಿಸಲಾಗುತ್ತಿದೆಯೋ ಅದಕ್ಕಿಂತ ಬೇರೆಯೇ ಆದ ರೀತಿಯಲ್ಲಿ ನೆಲೆಗೊಂಡಿವೆ ಎನ್ನುವುದು ಸ್ಪಷ್ಟವಾಗುತ್ತದೆ. ಜನಾಂಗಿಕ ಅಧ್ಯಯನದ ಸಂದರ್ಭದಲ್ಲಿ ಮಾಹಿತಿ ಸಂಗ್ರಹಣೆಯ ಜೊತೆ ಜೊತೆಗೆ ವಿಶ್ಲೇಷಣೆ ಹಾಗೂ ಮೌಲ್ಯಮಾಪನ ಕಾರ್ಯವೂ ಒಂದು ರೀತಿಯಲ್ಲಿ ಆಗುತ್ತದೆ ಎನ್ನುವುದು ನಿಜವಾದರೂ ಪ್ರಸ್ತುತ ಸಂದರ್ಭದಲ್ಲಿ ಜನಾಂಗಿಕ ಅಧ್ಯಯನದ ವಿಧಾನಗಳು ಈ ಬಗೆಯ ಸಾಂಪ್ರದಾಯಿಕ ಪ್ರಕ್ರಿಯೆಗೆ ಮಾತ್ರ ಚಾಚಿಕೊಳ್ಳದೆ ಸಾಂಸ್ಕೃತಿಕ ವಿನ್ಯಾಸದ ಅರ್ಥಶೋಧವನ್ನು ಪ್ರಧಾನ ಗುರಿ ಎಂದು ನಂಬುತ್ತದೆ. ಈ ಕಾರಣದಿಂದ ಜನಾಂಗಿಕ ಅಧ್ಯಯನಕ್ಕೆ ತರ್ಕಬದ್ಧ ವೈಚಾರಿಕ ನೆಲೆ ಪ್ರಾಪ್ತವಾಗುತ್ತದೆ.

ಇತ್ತೀಚಿನ ದಿನಗಳಲ್ಲಿ **Microscopic Minority** ಎಂದೇ ಗುರುತಿಸಲಾಗುತ್ತಿರುವ ಈ ಪಿಂಜಾರ ಜನಾಂಗವು ದಟ್ಟವಾದ ಸಾಂಸ್ಕೃತಿಕ ಸಂಪತ್ತಿನಿಂದ ಕೂಡಿರುವುದು ಈ ಬಗೆಯ ಅಧ್ಯಯನಕ್ಕೆ ಸಂಶೋಧನಾತ್ಮಕ ವಿವರಗಳನ್ನು ಒದಗಿಸಿಕೊಳ್ಳುವ ದೃಷ್ಟಿಯಿಂದ ಮಹತ್ವವಾದುದು. ಹಾಗೂ 'ಸಂಸ್ಕೃತಿ ಅಧ್ಯಯನ'ವು ಸಾಮಾಜಿಕವಾಗಿ ಅನಿವಾರ್ಯವಾದಂತಹ ಕ್ರಮವಾಗಿರುವುದರಿಂದ ಭಾರತದಂತಹ ನೆಲದಲ್ಲಿ 'ಸಂಸ್ಕೃತಿ' ಎನ್ನುವುದು ಕೇವಲ ಧಾರ್ಮಿಕಾಚರಣೆಗಳಿಗೆ ಮಾತ್ರ ಸಂಬಂಧಿಸಿದ ವಿಷಯವಾಗಿಲ್ಲ. ಅದು ತನ್ನ ಒಳರಚನೆಯಲ್ಲಿ ಸಾಮಾಜಿಕ, ರಾಜಕೀಯ ಆಶಯಗಳನ್ನು ಅಡಗಿಸಿಟ್ಟುಕೊಂಡ ಪರಿಣಾಮವಾಗಿ ಇಲ್ಲಿನ ಸಾವಿರಾರು ಜಾತಿ-ಜನಾಂಗಗಳ ಒಟ್ಟಾರೆ ಜೀವನ ವಿಧಾನವನ್ನು ಒಳಗೊಂಡಿದೆ. ಇದರ ಜೊತೆ ಜೊತೆಗೆ ಸಂಭವಿಸುವ ರಾಜ್ಯಾಧಿಕಾರಗಳ ನಿರ್ವಹಣೆಯಲ್ಲಿ ಕೂಡ ಇಂಥ ಒತ್ತಾಸೆಯಿರುತ್ತದೆನಿಸುತ್ತದೆ. ಯಾಕೆಂದರೆ

ಸಾವಿರಾರು ವರ್ಷಗಳ ಇತಿಹಾಸದುದ್ದಕ್ಕೂ ಅನೇಕ ಬಗೆಯ ನರಳಿಕೆಯಲ್ಲಿರುವ ವೈವಿಧ್ಯಮಯ ಸಾಂಸ್ಕೃತಿಕ ಭಿತ್ತಿಗಳ ಮೂಲ ವೈಶಿಷ್ಟ್ಯಗಳು ಈ ಹೊತ್ತಿಗೂ ಹೊಚ್ಚ ಹೊಸದೆನ್ನಬಹುದಾದ ಅರ್ಥ ವಿವರಣೆಗಳನ್ನು ಬಿಟ್ಟುಕೊಡುತ್ತಿರುವಾಗ ಈ ಬಗೆಯ ಅಧ್ಯಯನವನ್ನು ನಿರ್ಲಕ್ಷಿಸುವುದಾದರೂ ಹೇಗೆ ? ಈ ನೆಲದ ಧಾರ್ಮಿಕ ಮೇಲುಸ್ತರವೆಲ್ಲಾ ಸ್ವಪ್ರತಿಷ್ಠೆ ಹಾಗೂ ದುರಹಂಕಾರ ಪ್ರದರ್ಶನದ ಅಬ್ಬರ ಮಾಡುತ್ತಿದ್ದರೆ ನಿತ್ಯಯಾತನೆ ಮೌನ ರೋದನದಲ್ಲಿ ಕ್ರಿಯಾಶೀಲವಾಗಿರುವ ಕೆಳಸ್ತರವನ್ನು ಈಗಲಾದರೂ ತೆರೆದ ಕಣ್ಣು-ಮನಸ್ಸುಗಳಿಂದ ನೋಡುವುದು ಸಾಧ್ಯವಾಗಬೇಕು. ಹಾಗಂತಲೇ ಇಂದಿನ ಅಧ್ಯಯನದ ಆದ್ಯತೆ ಸಮಾಜದ ಕಟ್ಟಕಡೆಯ ಮನುಷ್ಯ ಮತ್ತು ಆತನ ಬದುಕು. ಎಲ್ಲ ಬಗೆಯ ಬೌದ್ಧಿಕ ಪ್ರತಿಭೆಯನ್ನು ತನ್ನ ದೈಹಿಕ ಪರಿಶ್ರಮಕ್ಕೆ ಅರ್ಥಪೂರ್ಣ ಸಾಧನದ ಹಾಗೆ ಬಳಸಿಕೊಂಡ ಈತ ಬರೆಯದೆ ಬದುಕಿದ, ಬಂಡಾಯ ಕಾಣದೆ ಬಂಟನಾದ, ಬಾಯಿ ಬೇಡುವುದಕ್ಕೆ ಬಳಕೆಯಾಯಿತೇ ಹೊರತು ಪ್ರತಿರೋಧಕ್ಕಲ್ಲ. ಆದುದರಿಂದ ಈ ಬಗೆಯ ಅಧ್ಯಯನಕ್ಕೆ ಚಾರಿತ್ರಿಕ ವಾಸ್ತವಗಳನ್ನು, ಸಮಕಾಲೀನ ಸತ್ಯಗಳಿಗೆ ಮುಖಾಮುಖಿಯಾಗಿಸುವುದು ಮತ್ತು ಆ ಮೂಲಕ ಅವೆರಡನ್ನೂ ಒಟ್ಟಾಗಿಯೇ ಗ್ರಹಿಸುವುದು ಸಾಧ್ಯವಾಗುತ್ತದೆ.

ಈ ಹಿನ್ನೆಲೆಯಲ್ಲಿ ಕರ್ನಾಟಕದ ಪಿಂಜಾರರ ಒಟ್ಟು ಸಾಂಸ್ಕೃತಿಕ ವಿವರಗಳನ್ನು ಸಂಗ್ರಹಿಸುತ್ತಲೇ ಚಾರಿತ್ರಿಕ ಸಂದರ್ಭದಲ್ಲಿ ಅವುಗಳನ್ನು ವಿಶ್ಲೇಷಿಸುವ ಪ್ರಯತ್ನವನ್ನು ಮಾಡಲಾಗಿದೆ. ಪಿಂಜಾರರ ಮೂಲ, ಸಾಮಾಜಿಕ ಜೀವನ ಮತ್ತು ಧಾರ್ಮಿಕ ಆಚರಣೆಗಳು, ಆರ್ಥಿಕ ಸ್ಥಿತಿಗತಿಗಳು, ಕಸುಬು ಮತ್ತು ಹಿನ್ನೆಲೆ, ರಾಜಕೀಯ ಜೀವನ ಹಾಗೂ ಅವರ ಸಾಮಾಜಿಕ-ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಕುರಿತ ಈ ಅಧ್ಯಯನ ಪಿಂಜಾರರ ಒಟ್ಟು ಜೀವನ ವಿಧಾನವನ್ನು ಸಮಕಾಲೀನ ಸಾಮಾಜಿಕ ಸಂದರ್ಭದೊಂದಿಗೆ ಮುಖಾಮುಖಿಯಾಗಿಸುವ ಉದ್ದೇಶವನ್ನೂ ಹೊಂದಿದೆ. ಈ ಬಗೆಯ ಅಧ್ಯಯನಕ್ಕೆ ಶಿಸ್ತು ತಂದು ಕೊಡುವ ಪಿಂಜಾರರನ್ನೂ ಕುರಿತಾದ ಈವರೆಗಿನ ಬರಹಗಳು ಮತ್ತು ಅಥೆಂಟಿಸಿಟಿಯನ್ನು ಒದಗಿಸುವ ಜನಾಂಗದ ಹಿರಿಯರು ಮತ್ತವರ ಅನುಭವಗಳನ್ನು ಈ ಅಧ್ಯಯನದ ಮೂಲ ಆಕರಗಳೆಂದೇ ಸ್ವೀಕರಿಸಲಾಗಿದೆ.

ಇಂಡಿಯಾದ ಸಾಮಾಜಿಕ ಇತಿಹಾಸ ಮುಖ್ಯವಾಗಿ 'ಸಂಸ್ಕೃತಿ'ಯನ್ನು ಒಂದು ಬಗೆಯ ಪ್ರಧಾನ ಹಾಗೂ ಜನಪ್ರಿಯ ನೆಲೆಯಲ್ಲಿ ವಿಶ್ಲೇಷಿಸಿಕೊಳ್ಳುತ್ತಾ ಬಂದಿದೆ. ಮನುಷ್ಯ ಜೀವನದ ಒಂದೊಂದೂ ವಿಕಾಸದ ಹಂತದಲ್ಲೂ ಆ ಕಾಲದ ಪ್ರಭಾವಶಾಲಿ ಮತ್ತು ಬಲಶಾಲಿ ಸ್ತರವನ್ನೇ 'ಸಂಸ್ಕೃತಿ' ಎಂದು ಬಿಂಬಿಸಲಾಗಿದೆ. ಸಂಜ್ಞೆಗಳಲ್ಲಿ ಬದುಕು ನೂಕುತ್ತಿದ್ದ ಮನುಷ್ಯ ಕೂಗುವ, ಮಾತನಾಡುವ, ಬರೆಯುವ, ಹಾಡುವ ಸ್ಥಿತ್ಯಂತರಗಳಲ್ಲಿ ವಿಕಾಸಗೊಂಡಾಗಲೆಲ್ಲಾ ತಾನು ನಾಶವಾದ, ಕರಗಿಹೋದ ವಿಷಾದ, ವಿಷಣ್ಣತೆಗಳನ್ನು ಉಳಿಸಿಕೊಂಡಿದ್ದಾನೆ. ಬಲಶಾಲಿ ಮನಸ್ಸು ಗುಂಪುಕಟ್ಟಿಕೊಂಡು ಆರ್ಥಿಕ ಉತ್ಪಾದನಾ ವಿಧಾನಗಳನ್ನು ತನ್ನಲ್ಲಿ ಕೇಂದ್ರೀಕರಿಸುತ್ತಾ ಅದೇ 'ವ್ಯವಸ್ಥೆ' ಎಂಬ ಭಯ ಬಿತ್ತಿ ನಂಬಿಸಲಾಗಿದೆ. ವ್ಯವಸ್ಥೆಯ ಈ ಸ್ಥಾವರ ರೂಪವನ್ನೇ 'ಸಂಸ್ಕೃತಿ' ಎಂದು ಕರೆಯುವ ವಾಡಿಕೆಗೆ ಪರಂಪರೆಯ ಅರ್ಥವನ್ನೂ ಕೊಡಲಾಗಿದೆ. ಈ ಸಂಸ್ಕೃತಿ, ಪರಂಪರೆಗಳ ಅಬ್ಬರದಲ್ಲಿ ಮೌನವಾಗಿದ್ದವರ ಜಂಗಮ ಸ್ವರೂಪ ನಿರ್ಲಕ್ಷ್ಯಕ್ಕೊಳಗಾಗುತ್ತ ಬಂದಿದೆ.

ಆದುದರಿಂದಲೇ ನಮ್ಮ ಸಂಸ್ಕೃತಿ ಅಧ್ಯಯನದ ಸಂದರ್ಭದಲ್ಲಿ 'ಮಾತು'' ಸ್ಥಾವರವಾಗಿ 'ಮೌನ' ಜಂಗಮವಾಗಿ ಕ್ರಿಯಾಶೀಲತೆಯನ್ನೇ ಉಸಿರಾಡುವ ಚೈತನ್ಯಶಾಲೀ ರೂಪವಾಗಿ ಬಿಡುತ್ತದೆ. ಮಾತು ಅಕ್ಷರವಾಗಿ, ಅಕ್ಷರ ಆಳುವ ಪ್ರಭುವಾಗಿ 'ವ್ಯವಸ್ಥೆ'ಯ ಭಾಗವಾಗುತ್ತದೆ. ಈ ವ್ಯವಸ್ಥೆ ಹೇಳಿದ್ದು ಕಾನೂನು, ಮಾಡಿದ್ದು ನೀತಿಯಾಗಿ ಸ್ತಬ್ಧವಾಗುತ್ತದೆ. ಇದಕ್ಕೆ ಆರ್ಥಿಕ ಧಾರ್ಷ್ಟ್ಯ, ರಾಜಕೀಯ ಶಕ್ತಿ ಮತ್ತು ಪಾಂಡಿತ್ಯದ ಬೆಂಬಲ ದಕ್ಕುವುದರಿಂದ ತನ್ನ ಕಟ್ಟಳೆಗಳು ಶ್ರೇಷ್ಠ ಮತ್ತು ಅನುಕರಣೀಯವೆಂಬಂತೆ ಸಾರಲಾಗುತ್ತದೆ. ಶತಮಾನಗಳ ಕಾಲ ಇಂಡಿಯಾದ ಸಾಮಾಜಿಕ ಬದುಕು ಇಂತಹ ಹುಸಿ ಅಹಂಕಾರವನ್ನೇ ಪುರಾತನ, ಉದಾತ್ತ ಎಂದು ಸಹಿಸಿಕೊಂಡಿರುವುದರಿಂದ ಇದೇ 'ನಿಜ' ಎನಿಸಿಬಿಟ್ಟಿದೆ.

ಆದರೆ ನಿಜ ಸಂಸ್ಕೃತಿಗಳ ಶೋಧನೆಯ ಪ್ರಯತ್ನ ಕೆಲವಾರು ವರ್ಷಗಳಿಂದ ಶುರುವಾದಂತಿದೆ. 'ಮರೆ'ಯಲ್ಲಿದ್ದುದ್ದನ್ನು 'ಬಯಲಿ'ಗೆ ತರುವ ಈ ಪ್ರಯತ್ನದಲ್ಲಿ ನಿಜವೇ ನಾಚುತ್ತಿರುವ ವಿಪರ್ಯಾಸವೂ ನಡೆಯುತ್ತಿದೆ. ಏಕರೂಪವೆಂದು ನಂಬಿಸಿದ ಇತಿಹಾಸದಲ್ಲಿ ಬಹುಮುಖೀ ಸಂಸ್ಕೃತಿಗಳ ಅನಾವರಣ ಅಪರೂಪಕ್ಕೆಂಬಂತೆ ನಡೆದರೂ ಜಾಣತನದಿಂದ ಅದನ್ನು ತಳ್ಳಿಹಾಕಿದ 'ವ್ಯವಸ್ಥೆ' ಈಗಲೂ ಅದೇ ತರಹದ ಜಾಣಕಿವುಡನ್ನೂ ಪ್ರದರ್ಶಿಸುತ್ತಿದೆ. ಆದರೆ ನಿರ್ಲಕ್ಷಿತ ನಿಜ ಸಂಸ್ಕೃತಿಗಳ ಆಶಯಗಳು ಬದಲಾಗಿವೆ. ಅವುಗಳ 'ಮೌನ' ಈಗ ಬಂಡಾಯದ ಸ್ವರೂಪ ಪಡೆದಿದೆ. ವ್ಯವಸ್ಥೆಯ ಜಡತೆಯನ್ನು ಅವು ಪ್ರಶ್ನಿಸುತ್ತಿವೆ. ಈಗ ಅದು ಉತ್ತರಿಸಲೇಬೇಕಾಗಿದೆ ಎಂಬಂತಹ ಅನಿವಾರ್ಯ ಸ್ಥಿತಿ ಒದಗಿದಾಗಲೆಲ್ಲಾ ತನ್ನನ್ನೂ ಒಳಗೊಂಡಂತೆ ಆತ್ಮಹತ್ಯಾತ್ಮಕ ಕ್ರಮಗಳತ್ತ ತುಡಿಯುತ್ತಿರುವುದು ಮಾತ್ರ ಶೋಚನೀಯವಾಗಿದೆ. ಈ ಬಗೆಯ ಚಿಂತನೆ ನಿಜಸಂಸ್ಕೃತಿಗಳ ಹುಡುಕಾಟದ ಸಂದರ್ಭದಲ್ಲಿ ಎದುರಾಗುವ ಗೊಂದಲ ಹಾಗೂ ಇಕ್ಕಟ್ಟುಗಳನ್ನು ಅರ್ಥಮಾಡಿಕೊಳ್ಳಲು ಸಹಾಯವಾಗುತ್ತದೆ ಮತ್ತು ಇಂಡಿಯಾದ ಸಾಮಾಜಿಕ ಮೇಲುಸ್ತರದ ನಡವಳಿಕೆಗಳನ್ನು ಸಾಂಸ್ಕೃತಿಕವಾಗಿಯೂ ಉತ್ತಮ ಮಟ್ಟದವು ಎಂಬಂತೆ ವ್ಯಾಖ್ಯಾನಿಸಿರುವುದನ್ನು ಕೆಲವು ನಿದರ್ಶನಗಳಿಂದ ಅವು ನಿಜಕ್ಕೂ ಉತ್ತಮವೇ, ಅಲ್ಲವೇ ಎಂದು ತಿಳಿಯುವ ಪ್ರಯತ್ನ ಮಾಡಬಹುದಾಗಿದೆ.

ಭಾರತದ ಜಾತಿ ವಿಭಜನೆಯ ಕ್ರಮದಲ್ಲಿಯೇ ಸಮಾಜವನ್ನು ಕುರಿತಾದ 'ಐಕ್ಯ'ದ ಅಥವಾ 'ಸಮಾನತೆ'ಯ ಆದರ್ಶವಾಗಲೀ, ಆಶಯವಾಗಲೀ ಇಲ್ಲ. ಬದುಕಿನ ಉತ್ಪಾದನಾ ವಿಧಾನದ ಸ್ವಾಮ್ಯವನ್ನು ಬೌದ್ಧಿಕ ಕಸರತ್ತು ನಡೆಸುವವರಲ್ಲಿಯೇ ಕೇಂದ್ರೀಕರಿಸಿಕೊಂಡ ಪರಿಣಾಮವಾಗಿ 'ಶ್ರಮ' ಎನ್ನುವುದು ಕನಿಷ್ಠ ಮೌಲ್ಯದ ಸರಕಾಗಿಬಿಟ್ಟಿತು. ಅಂದರೆ ದೈಹಿಕ ಶ್ರಮ ಬೌದ್ಧಿಕ ಕಸರತ್ತಿಗಿಂತ ಕಡಿಮೆ ಮಟ್ಟದ್ದು ಎಂಬಂತಹ ಭ್ರಮೆಯನ್ನು ಹುಟ್ಟುಹಾಕಿ ಆರ್ಥಿಕ ಲಾಭವನ್ನು ತಂದುಕೊಡುವ ಕೃಷಿ, ಶಿಕ್ಷಣ, ಕೈಗಾರಿಕೆ ಮೊದಲಾಗಿ ಎಲ್ಲ ಉತ್ಪನ್ನಗಳ ಹಕ್ಕುದಾರಿಕೆಯನ್ನು ಈ ಮೇಲ್ವರ್ಗಗಳು ಪಡೆದುಕೊಂಡವು. ಸಂಪತ್ತನ್ನು ಭೋಗಿಸುವ ಸಲೀಸು ಸಂಭ್ರಮದ ಹಾದಿಯಲ್ಲಿ ಪ್ರತಿಷ್ಠೆ, ಶೋಕಿ, ನಾಜೂಕುಗಳನ್ನೇ ಶ್ರೇಷ್ಠತಮವಾದವುಗಳು ಎಂಬಂತೆ ಅರ್ಥೈಸಲಾಯಿತು. ಈ ನೆಲದ ಬನಿಯಲ್ಲಿ ಹೊರಳಾಡಿ ಮೈಕೈ ಕೆಸರು ಮಾಡಿಕೊಂಡು ಅರೆಹೊಟ್ಟೆ, ಅರೆಬೆತ್ತಲೆಯಲ್ಲಿ ಬದುಕು ಸವೆಸುತ್ತ ಬಂದ ಶ್ರಮಮೂಲ ಜೀವಗಳು ತಾವು ಪಡೆದುಕೊಂಡು ಬಂದದ್ದೇ ಇಷ್ಟು ಎಂಬ ವಿಷಾದದಲ್ಲಿ

ನಲುಗಿದವು. ಇತಿಹಾಸದುದ್ದಕ್ಕೂ ಈ ಶ್ರಮಜೀವಿಗಳಿಗೆ 'ಪ್ರೀತಿ' ತೋರದ ಕೈಗಳು ಅವರ ಅನ್ನವನ್ನೂ ನಿರಂತರವಾಗಿ ಕಸಿದುಕೊಂಡಿವೆ. ಅವರ ದುಡಿಮೆ, ಬೆವರನ್ನೂ ನಿಕೃಷ್ಟವಾಗಿ ಕಾಣಲಾಗಿದೆ. ಸಾಲದೆಂಬಂತೆ ಆ ವರ್ಗವನ್ನು ಪಶುಗಳಂತೆ, ಕ್ರಿಮಿಗಳಂತೆ ಹೀಗಳೆಯಲಾಗಿದೆ. ಇನ್ನೂ ವಿಚಿತ್ರವೆಂದರೆ ಶ್ರಮಜೀವಿಗಳ ಮೂಲಭೂತ ಅಗತ್ಯಗಳಿಗೆ ನಿರಂತರವಾಗಿ ಎರವಾದ ಮೇಲ್ವರ್ಗದ 'ವಿದ್ರೋಹ'ವನ್ನು ಜಾಣತನವೆಂದು ಕರೆದು ಶ್ರಮಿಕರ ಮುಗ್ಧತೆಯಯನ್ನು 'ದಡ್ಡತನ'ವೆಂದು ವಿಡಂಬಿಸಲಾಗಿದೆ. ಇಂಡಿಯಾದ ಮೇಲುಸ್ತರದ ಈ ಬಗೆಯ ಸಾಂಸ್ಕೃತಿಕ ವಿದ್ರೋಹದ ಇತಿಹಾಸವನ್ನು ನರಿ ಮತ್ತು ಕಾಗೆ ಎಂಬ ಜಾನಪದ ಕತೆ ಸೂಕ್ಷ್ಮವಾಗಿ ಹೇಳಿಬಿಡುತ್ತದೆ.

ಇಲ್ಲಿ ಕಾಗೆ ತನ್ನ ಸ್ವಂತ ಪರಿಶ್ರಮದಿಂದ ಸಂಪಾದಿಸಿ ತಂದ ಮಾಂಸದ ತುಣುಕನ್ನು ಕಂಡ ನರಿ ಅದನ್ನು ಲಪಟಾಯಿಸಲು ಹೂಡಿದ ತಂತ್ರವನ್ನು ನಮ್ಮ ಸಾಂಸ್ಕೃತಿಕ ಇತಿಹಾಸ ಮನಸಾರೆ ಹೊಗಳಿದೆ. ನರಿಯು ತನ್ನ ಬುದ್ಧಿಶಕ್ತಿ, ಜಾಣತನದಿಂದ ಒಂದಿಷ್ಟೂ ಕಷ್ಟಪಡದೆ ಅನ್ನ ಸಂಪಾದಿಸಿದುದಕ್ಕಾಗಿ ನರಿ ಈ ಹೊಗಳಿಕೆಗೆ ಪಾತ್ರವಾಗಿದೆ. ತೀರ ಇತ್ತೀಚಿನ ದಿನಗಳವರೆಗೂ ಇದೇ ತರಹದ 'ಭಾವ'ವನ್ನು ಈ ಕತೆಯಲ್ಲಿ ನೋಡಲಾಗುತ್ತಿತ್ತು. ಅಂದರೆ ಮತ್ತೊಬ್ಬನ ಅನ್ನವನ್ನು ಕಸಿದುಕೊಳ್ಳುವ ನರಿಯ ವಿದ್ರೋಹವನ್ನು ಕುತಂತ್ರವೆಂದು ಕರೆಯಲಾಗದ ನಮ್ಮ ಸಾಂಸ್ಕೃತಿಕ ದಾರಿದ್ರ್ಯಕ್ಕೆ ಏನೆನ್ನಬೇಕು ? ಹಾಗೆ ನೋಡಿದರೆ ಈ ಕತೆ ಇಡೀ ಭರತ ಖಂಡದ ಸಾವಿರಾರು ವರ್ಷಗಳ ಉದ್ದಕ್ಕೂ ನಡೆದ ಈ ಬಗೆಯ ವಿದ್ರೋಹದ ಸತ್ಯವನ್ನು ಸೂಕ್ಷ್ಮವಾಗಿ ಹೇಳುತ್ತಿರಬಹುದು ಅಲ್ಲವೇ ? ತನ್ನ ಅನ್ನವನ್ನು ಕಳೆದುಕೊಂಡು ಪೆಚ್ಚಾದ ಕಾಗೆ ಅದೇ ಕೊರಗಿನೊಂದಿಗೆ ಮತ್ತೆ ಅನ್ನ ಸಂಪಾದನೆಗೆ ದುಡಿಯಬೇಕು. ಅದಕ್ಕೆ ಬೇರೆ ದಾರಿಯಿಲ್ಲ. ಅದಕ್ಕೆ ನರಿಯ ಬಗ್ಗೆ ಸಿಟ್ಟಾಗಲೀ, ಅಸಹ್ಯವಾಗಲೀ ಉಂಟಾಗುವುದಿಲ್ಲ. ಅಥವಾ ಒಂದು ಪಕ್ಷ ಕಾಗೆಗೆ ಪ್ರತಿರೋಧ ಭಾವ ಉಂಟಾದರೂ ನರಿಯನ್ನು ಏನೂ ಮಾಡಲಿಕ್ಕಾಗುವುದಿಲ್ಲ. ಇಂತಹ ಅಸಹಾಯಕತೆಯಲ್ಲಿ ಬದುಕುತ್ತಿರುವ ಶ್ರಮಿಕವರ್ಗ ನಿರಂತರವಾದ ಈ ಶೋಷಣೆಗೆ ಬಲಿಯಾಗುತ್ತ ಬಂದಿದೆ. ನರಿಗೆ ಈ ಬಗ್ಗೆ ಪಶ್ಚಾತ್ತಾಪವಿಲ್ಲ. ಹಾಗೆ ಕೊರಗುವ 'ಸಂಸ್ಕಾರ'ವೂ ಈ ವರ್ಗಕ್ಕಿಲ್ಲ. ಆದುದರಿಂದ ಈ ಇಡೀ ಕತೆ ನಿರ್ದೇಶಿಸುವ ತಾತ್ವಿಕತೆ ವಾಸ್ತವವಾಗಿ ಕಾಗೆಯ ಪರವಾಗಿರಬೇಕಿತ್ತು, ಕಾಗೆಯ ಸ್ವಭಾವ ಶ್ರೇಷ್ಠಮಟ್ಟದ ಸಂಸ್ಕಾರ ಎನಿಸಬೇಕಿತ್ತು. ಆದರೆ ಇದಕ್ಕೆ ವಿರುದ್ಧವಾದ ದಿಕ್ಕಿನಲ್ಲಿ ಅದನ್ನು ವ್ಯಾಖ್ಯಾನಿಸಲಾಗಿದೆ. ಆದ್ದರಿಂದ ಇಂಥ ವ್ಯಾಖ್ಯಾನಗಳ ಕುರಿತಾಗಿ ಗುಣಾತ್ಮಕ ಸಂಶಯಗಳು ಹುಟ್ಟದೇ ಹೋದರೆ ನಾವು ನಿಜ ಸಂಸ್ಕೃತಿಗಳ ಶೋಧನೆಯಲ್ಲಿ ತಪ್ಪು ಹೆಜ್ಜೆಗಳನ್ನಿಟ್ಟಂತಾಗುತ್ತದೆ. ಹಾಗಾಗಿ ನಾವು ನೋಡಬೇಕಾದುದು ಕಾಗೆಯ ಸ್ವಭಾವ, ವರ್ತನೆಗಳಲ್ಲಿನ ಯೋಗ್ಯ ನಡವಳಿಕೆಯ ಸಂಸ್ಕೃತಿ ರೂಪವನ್ನೇ ಹೊರತು ನರಿಯ ನಯಗಾರಿಕೆಯನ್ನಲ್ಲ. ಶ್ರಮಮೂಲ ಸಂಸ್ಕೃತಿ ಎಂದೂ ತೋರಿಕೆಗಾಗಿ ನಯವನ್ನು ಪ್ರದರ್ಶಿಸಿಲ್ಲ. ಅಂಥದು ಶ್ರೇಷ್ಠವೆಂದೂ ನಂಬಿಲ್ಲ. ಒರಟಾದರೂ ಮುಗ್ಧವಾದ, ಸಮುದಾಯ ಪರವಾದ ಮೌಲಿಕ ಬದುಕನ್ನು ತನ್ನ ಸಂಸ್ಕೃತಿ ರೂಪಗಳಲ್ಲಿ ಉಳಿಸಿಕೊಂಡಿರುವಾಗ ಇದು ಕನಿಷ್ಠ ಹೇಗಾಗುತ್ತದೆ ? ಕಾಗೆ ಮತ್ತು ಕೋಗಿಲೆಯ ಸಂಬಂಧದಲ್ಲಿ ಮಾತನಾಡುವಾಗಲೂ ಕಾಗೆಯನ್ನು ಹೀಗಳೆದು ಮಾತನಾಡುವ ರೂಢಿಯಿದೆ. ತನ್ನ ಮರಿಗಳನ್ನು ತಾನು ಸಾಕಲಾಗದ, ಸಾಂಸಾರಿಕ ಬದ್ಧತೆಯನ್ನೇ ತೋರದ ಕೋಗಿಲೆ ತನಗಿರುವ 'ದನಿ'ಯ ಕಾರಣಕ್ಕೆ ಸುಂದರವೂ,

ಶ್ರೇಷ್ಠವೂ ಆಗಿಬಿಟ್ಟಿದೆ. ಆದರೆ ಹೆರವರ ಮಕ್ಕಳಿಗೆ ಗುಟುಕು ನೀರು ಕೊಟ್ಟು ಕಾಪಾಡುವ, ತನ್ನ ಮರಿಗಳೇ ಎಂದು ಭಾವಿಸುವ, ಅವುಗಳಿಗಾಗಿ ದುಡಿಯುವ ಕಾಗೆ ರೂಢಿಯಲ್ಲಿ ಬಯ್ಗುಳವಾಗಿದೆ. ಹೀಗೆಯೇ ಕಂಡವರಿಗಾಗಿ ದುಡಿಯುವ ಮತ್ತು ಹಾಗೆಂದು ಭಾವಿಸದ ಶ್ರಮಿಕರ ಜಾತಿಗಳೆಲ್ಲ ನಮ್ಮ ಸಮಾಜದಲ್ಲಿ ಬಯ್ಗುಳಗಳೇ ಆಗಿವೆ. ಹೀಗಿರುವಾಗ ನಮ್ಮ ಸಂಸ್ಕೃತಿ ನಿರೂಪಣಕಾರರು ಮಾಡುವ ವ್ಯಾಖ್ಯಾನದಲ್ಲಿ 'ಶ್ರೇಷ್ಠ-ಕನಿಷ್ಠ'ದ ಕಲ್ಪನೆಗಳು ಎಷ್ಟರಮಟ್ಟಿಗೆ ಸರಿ ? ಚಿಂತಿಸಬೇಕಾಗಿದೆ. ಅಗುಳು ಅನ್ನ ಕಂಡರೂ ತನ್ನ ಬಳಗವನ್ನೆಲ್ಲಾ ಕರೆಯುವ 'ಕಾಗೆ'ಯ ಕುರಿತು ದುಡಿಯುವ ಸಮುದಾಯದಲ್ಲಿ ಮೆಚ್ಚುಗೆಯಿದೆ. ಅದು ಶ್ರಮಿಕರು ತಮ್ಮನ್ನು ತಾವು ಗುರುತಿಸಿಕೊಂಡ ಪರಿಣಾಮವೇ ಆಗಿದೆ.

ಈ ಚಿಂತನೆಗೆ ಪೂರಕವಾದ 'ಪುಣ್ಯಕೋಟಿ'ಯ ಕತೆಯನ್ನು ನೋಡಬಹುದು. ಈ ಕತೆಯ ವಿಚಾರದಲ್ಲಿ ಕೂಡ ಅಕ್ಷರ ಕಲಿತವರು ಹರಡಿರುವ ಪ್ರಚಾರ ಮತ್ತು ಮಾಡಿರುವ ನೀತಿ ಪುಣ್ಯಕೋಟಿಯ ಪರವಾದುದೇ ಆಗಿದೆ. ಇಂಥ ಜನಪದ ಕತೆಗಳು ಸೂಚಿಸುವ ಸೂಕ್ಷ್ಮವನ್ನು ಹೊಸಕಿ ಹಾಕಿ ತಮ್ಮ ಪರವಾದ ಸ್ವಾರ್ಥ ಮೆರೆಯುವಂತೆ ವ್ಯಾಖ್ಯಾನ ಮಾಡಲಾಗಿದೆ. 'ಅಕ್ಷರ'ವನ್ನೂ ಸ್ವಾರ್ಥಕ್ಕೆ, ಅನ್ಯಾಯಕ್ಕೆ, ಅಸಮಾನತೆಗೆ ಬೇಕಾದ ಹಾಗೆ ವ್ಯಾಖ್ಯಾನ ಮಾಡಲು ಬಳಸಿಕೊಂಡಿರುವುದರಲ್ಲಿ ಭಾರತೀಯರೇ ಮೊದಲಿಗರು. 'ಪುಣ್ಯಕೋಟಿ' ಕತೆಯಲ್ಲಿ ಸತ್ಯ ಮತ್ತು ಹಿಂಸೆ ಮುಖಾಮುಖಿಯಾದಂತೆ ಸತ್ಯದ ಇನ್ನೊಂದು ಮುಖವಾದ 'ಅಹಿಂಸೆ'ಯೇ ಗೆಲ್ಲುತ್ತದೆ. ಅಹಿಂಸೆ ಗೆಲ್ಲುತ್ತದೆ ಎಂದು ಪೂರ್ತಿ ಸಂಭ್ರಮಪಡುವಂತೆಯೂ ಇಲ್ಲ. ಯಾಕೆಂದರೆ ಹುಲಿ ತನ್ನ ಪ್ರಾಣವನ್ನು ನೀಗುತ್ತದೆ. ಹೀಗೆ ತನ್ನನ್ನೂ ಕೊಂದು ತಿನ್ನಲು ಬಂದ ಹುಲಿಯೇ ಪ್ರಾಣ ಕಳೆದುಕೊಂಡ ಬಗ್ಗೆ ಪುಣ್ಯಕೋಟಿಗೆ ವಿಷಾದವಿದ್ದಂತಿಲ್ಲ. ಕತೆಯಲ್ಲಿ ಪುಣ್ಯಕೋಟಿಯು ನಡವಳಿಕೆಯನ್ನು ತೀವ್ರವಾಗಿ ಮೆಚ್ಚಬಹುದಾದ ಅಂಶವಿದ್ದೇ ಇದೆ. ಆದರೆ ಆ ಬಗೆಯ ವ್ಯಾಖ್ಯಾನವಿದೆಯಲ್ಲಾ ಅದು ಏಕಮುಖವಾಗಿದೆ. 'ಸತ್ಯ ವಾಕ್ಯಕೆ ತಪ್ಪಿ ನಡೆದರೆ ಮೆಚ್ಚನಾ ಪರಮಾತ್ಮನು' ಎಂದು ಹುಲಿಯಿಂದ ತಾತ್ಕಾಲಿಕ ಅನುಮತಿಯನ್ನು ಪಡೆದು ಬಂದ ಪುಣ್ಯಕೋಟಿ ತನ್ನ ಕರುವಿಗೆ ಹಾಲು ಕುಡಿಸಿ ಅತ್ತು ಕರೆದು, ಬಂಧು-ಬಳಗಕ್ಕೆಲ್ಲಾ 'ಹಿಂದೆ ಬಂದರೆ ಒದೆಯಬೇಡಿ, ಮುಂದೆ ಬಂದರೆ ಹಾಯಬೇಡಿ' ಎನ್ನುವುದೆಲ್ಲಾ ಸಹಜವಾದ ತಾಯ್ತನದ ಮಮತೆಯನ್ನು ಸೂಚಿಸುತ್ತದೆ, ನಿಜ. ಆದರೆ ಅದರ ಈ ನಡವಳಿಕೆಯಲ್ಲಿ ಸತ್ಯದ ರೂಪವೇ ಆದ ಸಾವಿಗಂಜದ ಧೀರೋದಾತ್ತತೆ ಕಂಡು ಬರುವುದಿಲ್ಲ. ಪರಂಪರಾಗತ ವ್ಯಾಖ್ಯಾನ ಇದನ್ನು ಗಮನಿಸುವುದಿಲ್ಲ. ಅಲ್ಲದೆ ಹುಲಿಯ ನಡವಳಿಕೆಯ ಕುರಿತು ಈ ವ್ಯಾಖ್ಯಾನ ಜಾಣ ಮೌನವನ್ನು ಪ್ರದರ್ಶಿಸುತ್ತದೆ. ಈ ಎರಡೂ ಪ್ರಾಣಿಗಳ ವರ್ತನೆಯಲ್ಲಿ ಪುಣ್ಯಕೋಟಿಯು ಮೇಲುಗೈಯಾದರೆ ಹುಲಿ ಕನಿಷ್ಠ ಮೌಲ್ಯಮಾಪನಕ್ಕೂ ಒಳಗೊಳ್ಳುವುದಿಲ್ಲ. ಈ 'ನಿರ್ಲಕ್ಷ್ಯ' ಸತ್ಯವನ್ನು ಕೊಂಡಾಡುವ ಭರದಲ್ಲಿ ಆಕಸ್ಮಿಕವಾಗಿ ಮರೆತು ಹೋದದ್ದರ ಪರಿಣಾಮ ಎನ್ನಿಸುವುದಿಲ್ಲ. ಇಲ್ಲಿ ಸಾತ್ವಿಕ-ತಾಮಸಗಳ ತೋರಿಕೆಯ ಚರ್ಚೆಯಾಗಿ ಅಂತಿಮವಾಗಿ ಸಾತ್ವಿಕತೆಯನ್ನು ಎತ್ತಿ ಹಿಡಿಯಲಾಗಿದೆ.

ಆದರೆ 'ತಾಮಸ'ದಲ್ಲಿರುವ ಸಾತ್ವಿಕತೆಯನ್ನು ಗುರುತಿಸುವ ಹೊಣೆಗಾರಿಕೆಯೂ ಇಂಥ ವ್ಯಾಖ್ಯಾನ-ಕ್ಕಿರಬೇಕಿತ್ತೆಂಬ ಅಪೇಕ್ಷೆ ತಪ್ಪೇನಲ್ಲ. ಹುಲಿ ಹೇಳಿ ಕೇಳಿ ಮಾಂಸಾಹಾರಿ. ತನ್ನ ಆಹಾರಕ್ಕಾಗಿ ಮತ್ತೊಂದು ಪ್ರಾಣಿಯನ್ನು ಕೊಂದೇ ಅದು ತಿನ್ನಬೇಕು. ಕೊಲ್ಲುವುದು ಅದರ ಧರ್ಮ. ಹೀಗಿರುವಾಗ, ಅಪರೂಪಕ್ಕಾಗಿಯೂ

ಹುಲ್ಲು ತಿನ್ನದ ಹುಲಿಗೆ ಪುಣ್ಯಕೋಟಿ ಕಂಡ ತಕ್ಷಣ 'ಇಂದೆನಗೆ ಆಹಾರ ಸಿಕ್ಕಿತು' ಎಂದು ಸಂಭ್ರಮಪಡುವುದು ಅಸಹಜವೇನಲ್ಲ. ಆದರೆ ಪುಣ್ಯಕೋಟಿಯು ಮನವಿಯನ್ನು ಒಮ್ಮೆ ಸಂಶಯಿಸಿ ಮತ್ತೊಮ್ಮೆ ನಂಬಿ ಕಳಿಸಿಕೊಡುತ್ತದಲ್ಲಾ ಅದರ ನಡವಳಿಕೆಯನ್ನು ಕುರಿತು ನಮ್ಮ ವ್ಯಾಖ್ಯಾನಕಾರರಿಗೇನೂ ಅನಿಸುವುದಿಲ್ಲ. ಮುಂದೆ ಪುಣ್ಯಕೋಟಿ ಹಿಂತಿರುಗಿ ಬಂದ ನಂತರವಂತೂ ಹುಲಿಗೆ ಆಶ್ಚರ್ಯ, ಆಘಾತ ಒಟ್ಟಿಗೇ ಆಗುತ್ತದೆ. ಕತೆ ಕೂಡ ಇಲ್ಲಿನ ಒಂದು ಸಂದರ್ಭದಲ್ಲಿ ಓದುಗರನ್ನು ಕತ್ತಲಲ್ಲಿಡುತ್ತದೆ. ಭಾಷೆ ಕೊಟ್ಟು ಬಂದ ಪುಣ್ಯಕೋಟಿ ತನ್ನ ಕರು, ಬಂಧು-ಬಳಗದವರೊಂದಿಗೆ ರೋದಿಸುವುದರ ಚಿತ್ರವಿದೆಯೇ ಹೊರತು ಈ ಕಡೆ ಸಿಕ್ಕ ಆಹಾರವನ್ನು ತಿನ್ನದೇ ಕಳಿಸಿಕೊಟ್ಟ ಹುಲಿ ಏನು ಚಡಪಡಿಸುತ್ತಿದೆಯೇ, ಪುಣ್ಯಕೋಟಿ ಬರುತ್ತದೆಂಬ ವಿಶ್ವಾಸ ಅಥವಾ ಬರಲಾರದೆಂಬ ಆತಂಕದಲ್ಲಿ ಕಾಯುತ್ತಿದೆಯೇ ಇತ್ಯಾದಿ ವಿವರಗಳಿಲ್ಲ. ಅಂತೂ ಪುಣ್ಯಕೋಟಿ ತಿರುಗಿ ಬಂತು. ಹುಲಿ ಇವಳನ್ನು ತಿನ್ನಲು ನಿರಾಕರಿಸುತ್ತದೆ, ಮಾತ್ರವಲ್ಲ ಸಂಕಟಪಡುತ್ತಿದೆ. ಅದರ ಮನಸ್ಸಿನಲ್ಲಿ ಸಂಘರ್ಷವೇರ್ಪಟ್ಟಿದೆ. ಇಂಥ ಎಷ್ಟೋ ಪ್ರಾಣಿಗಳನ್ನು ತಿಂದಿರಬಹುದಾದ ಅದಕ್ಕೆ ಎಂದೂ ಇಂತಹ 'ಸಂಕಟ' ಒದಗಿಲ್ಲ. ಮಾಂಸಾಹಾರ ತಾಮಸಗುಣವನ್ನು ಮಾತ್ರ ಹುಟ್ಟಿಸುವುದಿಲ್ಲ ಎನ್ನುವಂತೆ ಹುಲಿಯ ಮನಸ್ಸಿನಲ್ಲಿ 'ವಿವೇಕ' ಜಾಗೃತವಾಗುತ್ತದೆ. 'ಎನ್ನ ಒಡಹುಟ್ಟಕ್ಕ ನೀನು' ಎಂದು 'ಒಂದು ರಕ್ತ'ದ ಬಗ್ಗೆ ಮಾತನಾಡುತ್ತದೆ. ತಮ್ಮಿಬ್ಬರದು ಒಂದೇ ರಕ್ತದ ಕುಟುಂಬವಾದ್ದರಿಂದ 'ನಿನ್ನ ಕೊಂದು ನಾನೇನ ಪಡೆವೆನು ?' ಎನ್ನುತ್ತದೆ. ಕೊಂದು ಪಡೆಯಲಾರದ್ದನ್ನು ಕೊಲ್ಲದೆ ಪಡೆಯುತ್ತದೆ. ಪುಣ್ಯಕೋಟಿ ಪ್ರತಿಪಾದಿಸಿದ 'ಸತ್ಯ' ಹುಲಿಯಲ್ಲಿ 'ಅಹಿಂಸೆ'ಯಾಗಿ ರೂಪತಾಳುತ್ತದೆ. 'ಸತ್ಯ'ಕ್ಕಾಗಿ ಪುಣ್ಯಕೋಟಿ ಕರುಳ ಸಂಬಂಧವನ್ನು ದಾಟಿದರೆ ಹುಲಿ 'ಅಹಿಂಸೆ'ಗಾಗಿ ತನ್ನ ಧರ್ಮವನ್ನೇ ದಾಟುತ್ತದೆ. ಅಥವಾ ಮೀರುತ್ತದೆ. ಹುಲಿಯ ಮೀರುವಿಕೆಯಲ್ಲಿ ಕಾಣುವ 'ಮಾನವೀಯ ಗುಣ' ಉದಾತ್ತವಾದುದು ಎನಿಸುತ್ತದೆ. ಅದು ಕೊಲ್ಲದೆ, ಎಂದರೆ ತಪ್ಪು ಮಾಡದೇ ಪಡುವ ಪಶ್ಚಾತ್ತಾಪದಿಂದ ಹುಟ್ಟಿದ ಗುಣ. ತಪ್ಪು ಮಾಡುವ ಮೊದಲೇ ಮಾಡಿಬಿಡುತ್ತಿದ್ದೆನಲ್ಲಾ ಎಂಬ ಅಳುಕಿನಿಂದ ಹುಟ್ಟಿದ ಗುಣ. ಈ ವಿವೇಕವನ್ನು ರೂಢಿಗತ ವ್ಯಾಖ್ಯಾನ ಗುರುತಿಸಲಾರದೆ ಹೋಗಿದೆ. ಈ ತರ್ಕದ ಹಿನ್ನೆಲೆಯಲ್ಲಿ 'ಹುಲಿ' ಪುಣ್ಯಕೋಟಿಗಿಂತ ಗುಲಗಂಜಿ ತೂಕದಷ್ಟಾದರೂ ಹೆಚ್ಚು ಎಂದು ಮನವರಿಕೆಯಾಗುವುದಿಲ್ಲವೇ ? ಹಾಗೆ ನೋಡಿದರೆ ಸಸ್ಯಾಹಾರ-ಮಾಂಸಾಹಾರಗಳು ಉಂಟು ಮಾಡುವ ಸಾಮಾಜಿಕ ವಿವಾದವನ್ನು ಇಲ್ಲಿ ತಳುಕು ಹಾಕಿ ಬಿಡಬಹುದು. ಇಲ್ಲಿನ ಉದ್ದೇಶ ಅದಾಗಿಲ್ಲ. ಇಂಡಿಯಾದ ರೂಢಿಗತ ವ್ಯಾಖ್ಯಾನಗಳ ಮಿತಿಯನ್ನು ಗುರುತಿಸುತ್ತ 'ಸಂಸ್ಕೃತಿ'ಯ ವಿಚಾರದಲ್ಲಿ ಯಾವುದು ತಳಮುಟ್ಟಿದ್ದು, ಯಾವುದು ತೋರಿಕೆಯದು ಎಂದು ಕಂಡುಕೊಳ್ಳುವ ಪ್ರಯತ್ನ ಮಾತ್ರ ಇದಾಗಿದೆ.

ದುಡಿಯುವ ವರ್ಗದ ಸಾಂಸ್ಕೃತಿಕ ಸಂಪತ್ತು ಈ ಬಗೆಯ ವಿವೇಕ ಮತ್ತು ಸಂಸ್ಕಾರ. ಇದನ್ನು ಬಿಟ್ಟು ಕೇವಲ ಅವರ ಆಚರಣೆಗಳ ಹೊರನೆಲೆಗಳನ್ನು ಮಾತ್ರ ಕಂಡು ವ್ಯಾಖ್ಯಾನಿಸುವವರಿಗೆ ಅವರ ಆಹಾರ, ನಡೆನುಡಿ ಇತ್ಯಾದಿಗಳೆಲ್ಲಾ ಒರಟಾಗಿ, ಕಡಿಮೆ ದರ್ಜೆಯದಾಗಿ ಕಾಣುತ್ತದೆ. ನಮ್ಮ ದೇಶದ ಅಕ್ಷರ ಲೋಕ ಮಾಡಿರುವುದು ಇದನ್ನೇ. ಹಾಗಾಗಿ 'ಸಂಸ್ಕೃತಿ'ಯ ಪುನರ್‌ವ್ಯಾಖ್ಯಾನದ ಮೂಲಕವೇ ಸಂಸ್ಕೃತಿಯ ಪುನರ್‌ರಚನೆ ಮಾಡಬೇಕಾಗಿದೆ. ಅದಕ್ಕೆ ಇತಿಹಾಸದ ಸೂಕ್ಷ್ಮಗಳ, ಸಮಕಾಲೀನ ಸ್ಥಿತ್ಯಂತರಗಳ ಅಧ್ಯಯನದ ಅಗತ್ಯವಿದೆ.

ಪ್ರಭುತ್ವ ಮಾಡಿರುವ ಅನೇಕ ಬಗೆಯ ಅನಾಹುತಗಳಿಂದಾಗಿ ಇನ್ನೂ ಬೆಳಕು ಕಾಣದ ನೂರಾರು ಸಂಸ್ಕೃತಿ ರೂಪಗಳಿವೆ. ಪ್ರಭುತ್ವದ ತಿಕ್ಕಲುತನ, ಅಸಹ್ಯ ಹುಟ್ಟಿಸುವ ಧಾರ್ಮಿಕ ಪರಿಸರದಿಂದಾಗಿ ಈ ರೂಪಗಳು ನಲುಗಿಹೋಗಿವೆ. ಬಹುರೂಪೀ ಸಂಸ್ಕೃತಿಯ ಈ ನೆಲ ಈ ಕಾರಣದಿಂದಾಗಿಯೇ ತಾಳಿಕೊಂಡು ಬಂದಿದೆ ಎನ್ನುವುದೇ ಮಹತ್ವದ ಸಂಗತಿಯಾಗಿದೆ.

ಈ ಹಿನ್ನೆಲೆಯಿಂದ ಕರ್ನಾಟಕದ ಪಿಂಜಾರರ ಜೀವನ ವಿಧಾನಗಳನ್ನು ಅರಿಯಲು ಸಹಾಯವಾಗುತ್ತದೆ. ಪಿಂಜಾರರು ಹಿಂದೆ ಹೇಳಿದಂತೆ ಅಲ್ಪ ಸಂಖ್ಯಾತರಲ್ಲಿಯೇ ಅಲ್ಪ ಸಂಖ್ಯಾತರಾಗಿರುವುದರಿಂದ ಅವರ ಸ್ಥಿತಿ-ಗತಿಗಳು ಅಧ್ಯಯನ ಯೋಗ್ಯವಾಗಿವೆ. ಭಾರತದ ಉದ್ದಗಲಕ್ಕೂ ಬೇರೆ ಬೇರೆ ಹೆಸರಿನಲ್ಲಿ ಇರುವ ಪಿಂಜಾರರು ಆಯಾ ಪ್ರಾದೇಶಿಕ ಭಾಷೆಗಳನ್ನಾಡುವವರಾಗಿದ್ದಾರೆ. 'ಅಲ್ಪ ಸಂಖ್ಯಾತರು' ಎನ್ನುವುದು ರಾಜಕೀಯ ಪರಿಭಾಷೆಯಾಗಿರುವುದರಿಂದ ಈ ಅಧ್ಯಯನಕ್ಕೆ ಇನ್ನಷ್ಟು ಮಹತ್ವವಿದೆ. ಧಾರ್ಮಿಕ ಅಲ್ಪಸಂಖ್ಯಾತರಾದರೂ ಆಚರಣೆ ಮತ್ತು ಸಂವೇದನೆಗಳ ನೆಲೆಯಲ್ಲಿ ತೀರ ಭಿನ್ನ ಮನೋಧರ್ಮದವರಾಗಿರುವ ಪಿಂಜಾರರ ಸಂಸ್ಕೃತಿಯ ಗ್ರಹಿಕೆ ವಿಶಿಷ್ಟವಾದುದು.

ಈ ಸಂಪ್ರಬಂಧದಲ್ಲಿ ಕರ್ನಾಟಕದ ಪಿಂಜಾರರನ್ನು ಕುರಿತಾದ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆಯಾದರೂ ಅವರು ಹೆಚ್ಚಾಗಿ ವಾಸಿಸಿರುವ ದಾವಣಗೆರೆ ಜಿಲ್ಲೆಯನ್ನು ಮಾದರಿಯಾಗಿಟ್ಟುಕೊಳ್ಳಲಾಗಿದೆ. ಬಹುಪಾಲು ಉತ್ತರ ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲೂ ದಟ್ಟವಾಗಿರುವ ಪಿಂಜಾರರು ಉತ್ತಮ ಕರ್ನಾಟಕ ಪ್ರತಿನಿಧಿಸಬಹುದಾದ ಎಲ್ಲಾ ಬಗೆಯ ಸಾಂಸ್ಕೃತಿಕ ವೈಶಿಷ್ಟ್ಯಗಳಲ್ಲಿ ಬೆರೆತು ಹೋದವರಾಗಿದ್ದಾರೆ. ಇವರ ಅಧ್ಯಯನಕ್ಕೆ ಭಾರತದ ಇತಿಹಾಸ ಸೇರಿದಂತೆ ಸ್ವಾತಂತ್ರ್ಯೋತ್ತರದ ಅನೇಕ ಘಟನೆಗಳು ಮಾಹಿತಿ ಒದಗಿಸಬಲ್ಲವಾದುದರಿಂದ ಇದು ಒಂದರ್ಥದಲ್ಲಿ ಅವರ ರಾಜಕೀಯ-ಸಾಮಾಜಿಕ ಅಧ್ಯಯನವೂ ಆಗಿದೆ.

ಪಿಂಜಾರರ ಅಧ್ಯಯನದ ಸೂಕ್ಷ್ಮ ಮುಖವೆಂದರೆ ಅವರು ಇಸ್ಲಾಂ ಧರ್ಮದವರಾಗಿರುವುದು. ಕರ್ನಾಟಕದ ಸಂದರ್ಭದಲ್ಲಿ 'ಇಸ್ಲಾಂ'ನ್ನು ನೋಡುವುದೆಂದರೆ ಅದರ ಇತಿಹಾಸ, ಅನುಯಾಯಿಗಳು, ಅವರ ಆಚರಣೆ, ಭಾಷೆ ಮೊದಲಾದವುಗಳ ನೆರಳಿನಲ್ಲಿ ಸಮಕಾಲೀನವಾಗಿ ಅದು ಎದುರಿಸುತ್ತಿರುವ ಹತ್ತಾರು ಬಗೆಯ ಅಪಮಾನರೂಪದ ಆರೋಪ ಗಳನ್ನು ಅಧ್ಯಯನ ಮಾಡುವುದೆಂದೇ ಅರ್ಥ.

ಇಂಡಿಯಾದ ಇತಿಹಾಸದಲ್ಲಿ ಇಸ್ಲಾಂ ಪ್ರವೇಶಿಸಿದ ಸಂದರ್ಭದಿಂದ ಶುರುವಾಗಿ ಈ ಕ್ಷಣದವರೆಗೆ ಅದು ಅನುಭವಿಸುತ್ತಿರುವ ವಿವಿಧ ಬಗೆಯ ಆರೋಪಗಳು-ಆತಂಕಗಳು ಈ ದೇಶವನ್ನು ಶತಮಾನಗಳ ಕಾಲ ಮುಸ್ಲಿಮರು ಆಳಿದ್ದರೇ ಎನ್ನುವಂತಹ ಅನುಮಾನವನ್ನು ಹುಟ್ಟಿಸುವಷ್ಟು ಭಯಾನಕವಾಗಿವೆ. ವರ್ತಮಾನದಲ್ಲಿ ಅದು ಅಷ್ಟು ವಿಕೃತವಾಗಿ ವ್ಯಾಖ್ಯಾನಗೊಳ್ಳುತ್ತಿದೆ. ಇದರ ಕಾರಣ ಹಾಗೂ ಪರಿಹಾರಗಳನ್ನು ಕಂಡುಕೊಳ್ಳುವ ಪ್ರಯತ್ನ ತಕ್ಕ ಪ್ರಮಾಣದಲ್ಲಿ ನಡೆಯದಿರುವುದು ಇನ್ನಷ್ಟು ಆತಂಕಕ್ಕೆ ಕಾರಣವಾಗಿದೆ. ರಾಜಕೀಯ ಹಾಗೂ ಆರ್ಥಿಕ ಹಿತಾಸಕ್ತಿಗಳಿಂದಾಗಿ ಭಾರತವನ್ನು ಪ್ರವೇಶಿಸಿದ ಅರಬ್ಬರು ಕ್ರಮೇಣ ಇಲ್ಲಿನ

ಸಾಮಾಜಿಕ ರಚನೆಯ ದೋಷಗಳ ಪರಿಣಾಮವಾಗಿ ಧಾರ್ಮಿಕವಾಗಿಯೂ ತಳವೂರಲಾರಂಭಿಸಿದ್ದು ಇತಿಹಾಸ. ಆದರೆ ಅದು ತಲ್ಲಣ ಹುಟ್ಟಿಸಿದ್ದು ಅಸಮಾನತೆಯನ್ನೇ ನೀತಿಯನ್ನಾಗಿ ಮಾಡಿಕೊಂಡ ವೈದಿಕ ಪರಿಸರದಲ್ಲಿ. ಧರ್ಮದ ಎಲ್ಲ ಬಗೆಯ ಪೋಷಕ ಸಂಗತಿಗಳನ್ನು 'ಅಸಮಾನತೆ'ಯನ್ನು ಮುಂದುವರಿಸಿಕೊಂಡು ಬರಲು ಬಳಸಿಕೊಂಡ ವೈದಿಕರು ಮುಸ್ಲಿಮರ ಆಳ್ವಿಕೆಯ ಸಂದರ್ಭವನ್ನು ಕೂಡ ಅದೇ ಉದ್ದೇಶಕ್ಕಾಗಿ ಬಳಸಿಕೊಂಡರಲ್ಲ, ಅದು ಇಂಡಿಯಾದ ಸಾಂಸ್ಕೃತಿಕ ರಾಜಕಾರಣ ಹಾಗೂ ವಿದ್ರೋಹದ ಪ್ರತೀಕವಾಗಿದೆ. ಯಾವತ್ತೂ ಆಳುವ ವರ್ಗದ ಹಿತಾಸಕ್ತಿಯನ್ನು ನೆಚ್ಚಿಕೊಂಡೇ ಬದುಕಿದ ವೈದಿಕರು ತಮ್ಮ ಧಾರ್ಮಿಕ ಒಳರಚನೆಯ ದೌರ್ಬಲ್ಯಗಳನ್ನು ಅನ್ಯ ಧರ್ಮೀಯರಿಗೆ ತೆರೆದಿಟ್ಟ ಬಗ್ಗೆ ಪಶ್ಚಾತ್ತಾಪಪಟ್ಟ ಉದಾಹರಣೆಗಳಿಲ್ಲ. ಬದಲಾಗಿ ಎಲ್ಲ ಬಗೆಯ ಆಳರಸರಿಗೆ ವಿಧೇಯರಾಗಿದ್ದುಕೊಂಡೇ ರಾಜಗುರುವಿನ ಪೋಷಾಕಿನಲ್ಲಿ ಮೆರೆದವರು ಅವರು.

ಹೀಗಿರುವಾಗ ಪರಕೀಯವಾದ ಧರ್ಮವೊಂದು ಭಾರತದ ಬೇರೆ ಬೇರೆ ನೆಲೆಗಳಿಗೆ ಚಾಚಿಕೊಳ್ಳುತ್ತಿರುವ ಸಂದರ್ಭದಲ್ಲಿ ನಿರಂತರ ನೈಚ್ಯಾನುಸಂಧಾನದಲ್ಲೇ ಬದುಕಿದ ಇಲ್ಲಿನ ಕೆಳವರ್ಗ 'ಇಸ್ಲಾಂ'ನ್ನು ಆಸಕ್ತಿಯಿಂದ ನೋಡಿರುವುದು ಸಾಧ್ಯವಿದೆ. ಇಂಥ ಸಾಧ್ಯತೆಗೆ ಆಸರೆ ನೀಡಿದವರೂ ವೈದಿಕರೇ. ಅಸ್ಪೃಶ್ಯತೆಯನ್ನು ಶ್ರದ್ಧಾಪೂರ್ವಕವಾಗಿ ನಿರ್ವಹಿಸಿಕೊಂಡು ಬಂದ ವೈದಿಕರಿಗೆ ಅಸ್ಪೃಶ್ಯರಾದಿಯಾಗಿ ಶೂದ್ರರೆಲ್ಲಾ ಅನ್ಯಧರ್ಮಕ್ಕೆ ಸೇರ್ಪಡೆಯಾಗುವುದರಿಂದ ತಮ್ಮ ಧರ್ಮ 'ಸ್ವಚ್ಛ'ವಾಗಿ ಉಳಿಯುತ್ತದೆ. ಅಷ್ಟೇ ಅಲ್ಲ, ಅವರು ಅನುಭವಿಸುತ್ತಿದ್ದ 'ಆಸ್ತಿ'ಗೆ ತಾವೇ ಒಂದರ್ಥದಲ್ಲಿ ಉತ್ತರಾಧಿಕಾರಿಗಳಾಗಿ ಉಳಿಯಬಹುದೆಂಬ ಆಸೆಯೂ ಇದ್ದೀತು!

ಕರ್ನಾಟಕದ ಪಿಂಜಾರರ ಅಧ್ಯಯನಕ್ಕೆ ಈ ಎಲ್ಲಾ ಬಗೆಯ ಹಿನ್ನೆಲೆಯನ್ನಿಟ್ಟುಕೊಳ್ಳಲಾಗಿದೆ. ಈ ಅಧ್ಯಯನದಲ್ಲಿ ಸಂಸ್ಕೃತಿಯ ಬಗೆಗಿನ ಚಿಂತೆಗಳು, ಇತಿಹಾಸ ಮತ್ತು ವರ್ತಮಾನಗಳ ಮುಖಾಮುಖಿಯನ್ನು ಅಪೇಕ್ಷಿಸುತ್ತದೆಯಾದುದರಿಂದ ಸಹಜವಾಗಿಯೇ ಈ ಉದ್ದೇಶ ಅಂತಹ ವ್ಯಾಪ್ತಿಯನ್ನು ಪಡೆದುಕೊಳ್ಳುತ್ತದೆ.

## ೧.೨ ಪಿಂಜಾರರ ಕುರಿತು ಇದುವರೆಗೆ ನಡೆದ ಅಧ್ಯಯನದ ಸಮೀಕ್ಷೆ:

ಪಿಂಜಾರರ ಸಂಸ್ಕೃತಿಯ ಮೂಲಶೋಧನೆ, ಅವರ ಆಚರಣೆ ಮತ್ತು ನಂಬಿಕೆಗಳ ವಿವರಣೆ, ಅವರ ಒಟ್ಟಾರೆ ಸಂಸ್ಕೃತಿ ಒಳಗೊಳ್ಳುವ ಚಾರಿತ್ರಿಕ, ಸಾಮಾಜಿಕ ಪ್ರಭಾವ ಪ್ರೇರಣೆಗಳು ಮತ್ತು ಆಯಾಮಗಳ ಚರ್ಚೆ ನಡೆಸುವುದು ಅ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ ಎಂದು ಸ್ಪಷ್ಟಪಡಿಸಲಾಗಿದೆ. ಈ ಹಿನ್ನೆಲೆಯಲ್ಲಿ ಪಿಂಜಾರರನ್ನು ಕುರಿತು ನಡೆದಿರುವ ಅಧ್ಯಯನದ ಸಮೀಕ್ಷೆಗೆ ಹೊರಟರೆ ನಿರಾಶೆಯ ನಡುವೆಯೂ ಕೆಲವೊಂದು ಕುತೂಹಲಕರ ಸಂಗತಿಗಳು ಕಂಡು ಬರುತ್ತದೆ.

ಪಿಂಜಾರರನ್ನು ಕುರಿತ ಕೆಲವು ವಿವರವಾದ ಮಾಹಿತಿಗಳನ್ನು ಸಂಗ್ರಹಿಸುವ ದೃಷ್ಟಿಯಿಂದ ಮೈಸೂರು ಗೆಜೆಟಿಯರ್‌ನ ಪುಟಗಳನ್ನು ತಿರುವಿದರೆ ಅಲ್ಲಿ ಕಾಣುವುದಿಷ್ಟು :

“The Pinjari, as their name indicates, are cleaners of cotton. They do not intermarry with other Muhammadans, who as a rule have no intercourse with them. The Pinjari were to a great extent Afghans, Mahratas and jats in Origin, disbanded from the service of the Moghul empire, but became known as a tribe of free boasters who ravaged India on a grand scale, with large armies and gave rise to many wars. They were finally suppressed in Central India in 1917 in the time of Marquis of Hastings. They are now settled down in the persuit of peaceful occupations, in agriculture and government service of various kinds”.2

ಮೈಸೂರು ಗೆಜೆಟಿಯರ್ ಸಂಪಾದಕರು ಪಿಂಜಾರರ ಸಾಂಸ್ಕೃತಿಕ ಚಿತ್ರಣವನ್ನು ಕೊಡದಿದ್ದರೂ ಅವರ ಮೂಲವನ್ನು ಕುರಿತಾಗಿ ಸ್ಪಷ್ಟ ಮಾಹಿತಿಯನ್ನು ನೀಡುತ್ತಾರೆ. ಮೊದಲನೆಯದಾಗಿ ಪಿಂಜಾರರು ಅವರ ಹೆಸರೇ ಸೂಚಿಸುವಂತೆ ಹತ್ತಿಯನ್ನು ಸ್ವಚ್ಛಗೊಳಿಸಿ ಅದರಿಂದ ಹಾಸಿಗೆ, ದಿಂಬು ತಯಾರು ಮಾಡುವ ಕಾಯಕದವರು ಎನ್ನುವುದು. ವಿಚಿತ್ರವೆಂದರೆ ಈ ವೃತ್ತಿಯವರಾದ ಪಿಂಜಾರರು ಅದಕ್ಕೂ ಮೊದಲು ಆಫ್ಘನ್ನರೋ, ಜಾಟರೋ ಆಗಿದ್ದರೆನ್ನುವುದು ಹಾಗೂ ಮೊಗಲ್ ಸಾಮ್ರಾಜ್ಯದಲ್ಲಿ ಕೆಲಸಕ್ಕಿದ್ದ ಇವರನ್ನು ತೆಗೆದುಹಾಕಿದ ನಂತರ ಇಂಡಿಯಾದ ಮೇಲೆ ದಾಳಿ ಮಾಡಿ ಅನೇಕ ಯುದ್ಧಗಳಿಗೆ ಕಾರಣರಾದರು ಎನ್ನುವುದು ಪಿಂಜಾರರು ಉತ್ತರದ ಮೂಲದವರೆಂದು ಸ್ಪಷ್ಟಪಡಿಸುತ್ತದೆ.

ಇನ್ನು ಗೆಜೆಟಿಯರ್‌ನ ಸಂಪಾದಕರು ಹೇಳುವ ಮತ್ತೊಂದು ಮಾತು ಪಿಂಜಾರರ ಸಾಂಸ್ಕೃತಿಕ-ಸಾಮಾಜಿಕ ಬದುಕನ್ನು ಕುರಿತದ್ದಾಗಿದೆ. ಅದೆಂದರೆ ಪಿಂಜಾರರು ಇತರ ಮುಹಮ್ಮದೀಯರ ಜೊತೆಗೆ ವೈವಾಹಿಕ ಸಂಬಂಧವನ್ನು ಬೆಳೆಸುವುದಿಲ್ಲ ಎನ್ನುವುದು. ಪಿಂಜಾರರ ಸಾಮಾಜಿಕ ನೆಲೆಯನ್ನು ಅಧ್ಯಯನ ಮಾಡುವ ದೃಷ್ಟಿಯಿಂದ ಇದು ಮಹತ್ವದ ವಿಚಾರವಾಗಿದೆ.

ಮೈಸೂರು ಗೆಜೆಟಿಯರ್‌ನಲ್ಲಿ ಸಿಗುವ ಮಾಹಿತಿಗಳು ಪಿಂಜಾರರ ಅಧ್ಯಯನಕ್ಕೆ ಪೂರಕವಾಗಿವೆ ಮತ್ತು ಅವರ ಕುರಿತಾದ ಪ್ರಥಮ ಮಾಹಿತಿಗಳೂ ಆಗಿವೆ.

ಎರಡನೆಯದಾಗಿ ಪಿಂಜಾರರ ಬಗ್ಗೆ ಇನ್ನಷ್ಟು ಮಾಹಿತಿಗಳು ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಿಸಿರುವ **‘The Mysore Tribes and Castes’** ನ ಸಂಪುಟದಲ್ಲಿ ದೊರಕುತ್ತದೆ.

“Among the Pinjaris there are both Hindus and Musalmans. The former mostly belongs to the districts of the Bombay Presidency and have six exogamous clans. The later are found chiefly in Shimoga district, as also in Bangalore and Mysore. The marriage customs of Hindu Pinjaris are mostly like those of the Kunbis and

Brahmans are their Purohits. Polygamy and widow marriage are current among them ; but polyandry is unknown. They have their caste panchayats. They follow the Hindu law of inheritance. Their Gods are Khandoba Devi and Bhairav. The heriditary occupation of the caste is cotton clearing some are cultivation and others day labourers. Musalman Pinjaris are said to have been converted by Aurangzeb. Some among them assume the title of sheik, Pathan or sayyid after their names. Both men and women dress like Hindus and marry among themselves. They are sunnis of the Hanafi school. They avoid eating beef. They respect and obey the Khazi and engage him to register their marriages. They card cotton clearing it to stiff matresses. Quilts and pillows, Many have left their craft owing to the decline of handspinning" 3

ಪಿಂಜಾರರ ಕುರಿತಾಗಿ **'The Mysore Tribes and Castes'**ನ ಸಂಪಾದಕರು ಈ ಕೆಳಗಿನ ಕೆಲವು ಮುಖ್ಯ ಸಂಗತಿಗಳನ್ನು ಹೇಳುತ್ತಾರೆ.

1. ಪಿಂಜಾರರು ಹಿಂದೂ ಮತ್ತು ಮುಸಲ್ಮಾನ ಧರ್ಮಗಳಲ್ಲಿ ಕಾಣಬರುತ್ತಾರೆ.
2. ಪಿಂಜಾರರು ಔರಂಗಜೇಬನಿಂದ ಮತಾಂತರಕ್ಕೊಳಗಾದವರು.
3. ಮುಸಲ್ಮಾನ ಪಿಂಜಾರರ ಉಡುಗೆ-ತೊಡುಗೆ ಹಿಂದೂಗಳ ರೀತಿಯದೇ ಆಗಿದೆ. ಮತ್ತು ಅವರ ವೈವಾಹಿಕ ಸಂಬಂಧಗಳು ಅವರಲ್ಲಿಯೇ ಜರುಗುತ್ತವೆ. ಅವರು ದನದ ಮಾಂಸವನ್ನು ಬಳಸುವುದಿಲ್ಲ.
4. ಮುಸಲ್ಮಾನ ಪಿಂಜಾರರಿಗೆ ಖಾಜಿ ಅಥವಾ ಮುಲ್ಲಾನೇ ಪುರೋಹಿತನಾಗಿರುತ್ತಾನೆ.
5. ವೃತ್ತಿಯಲ್ಲಿ ಪಿಂಜಾರರು ಹಾಸಿಗೆ ದಿಂಬು ತಯಾರಿಸುವವರಾಗಿದ್ದಾರೆ.

**The Mysore Tribes and Castes** ನ ಸಂಪಾದಕರು ತಿಳಿಸುವ ಈ ಸಂಗತಿಗಳಲ್ಲಿ ಪಿಂಜಾರರ ಸಾಮಾಜಿಕ-ಸಾಂಸ್ಕೃತಿಕ ಬದುಕನ್ನು ಹತ್ತಿರದಿಂದ ಗ್ರಹಿಸಿದ ಪರಿಶ್ರಮ ಕಂಡುಬರುತ್ತದೆ. ಇಲ್ಲಿನ ಒಂದು ವಿಶಿಷ್ಟ ಮಾಹಿತಿ ಎಂದರೆ ಪಿಂಜಾರರು ಹಿಂದೂ ಹಾಗೂ ಮುಸಲ್ಮಾನ ಧರ್ಮಗಳಲ್ಲಿ ಕಂಡು ಬರುತ್ತಾರೆ ಎನ್ನುವುದು. ಈ ಕುರಿತು ಭಿನ್ನ ಅಭಿಪ್ರಾಯಗಳಿರಬಹುದಾದ್ದರಿಂದ ಮುಂದೆ ಇದನ್ನು ಚರ್ಚೆಗೆ ತೆಗೆದುಕೊಳ್ಳಲಾಗುತ್ತದೆ.

**The Mysore Tribes and Castes** ನ ಸಂಪಾದಕರು ಗುರುತಿಸುವ ಪಿಂಜಾರರ ಉಡುಗೆ-ತೊಡುಗೆ, ಆಹಾರ ಮತ್ತು ಆಚರಣೆಗಳಿಗೆ ಸಂಬಂಧಿಸಿದ ಸಂಗತಿಯಿಂದ ಒಂದು ವಿಷಯವಂತೂ ಸ್ಪಷ್ಟವಾಗುತ್ತದೆ. ಕರ್ನಾಟಕದ ಸಂಸ್ಕೃತಿಯ ಅಧ್ಯಯನದ ಸಂದರ್ಭದಲ್ಲಿ ಪಿಂಜಾರರು ಹಿಂದೂ-ಮುಸ್ಲಿಂ ಧರ್ಮಗಳ ನಡುವಿನ

ಬಾಂಧವ್ಯದ ಭಾವನಾತ್ಮಕ ಬೆಸುಗೆಯಂತಿದ್ದಾರೆ ಎನ್ನುವುದು. ಈ ಪರಿಯ ಸಂಸ್ಕೃತಿಯ ವಿವರಗಳಿರುವ ಪಿಂಜಾರರ ಕುರಿತಾಗಿ ಸಾಕಷ್ಟು ಅಧ್ಯಯನ ಯಾಕೆ ಸಾಧ್ಯವಾಗಿಲ್ಲ ? ಎನ್ನುವುದು ಯೋಚಿಸಬೇಕಾದುದು. ಇದಕ್ಕೆ ಇಂಡಿಯಾದ ಸಾಂಸ್ಕೃತಿಕ ರಾಜಕೀಯದ ಸ್ವರೂಪದಲ್ಲಿ ಕಾರಣಗಳನ್ನು ಕಂಡುಕೊಳ್ಳಬಹುದು.

ಮೇಲಿನ ಎರಡು ಅಧ್ಯಯನಗಳ ಹೊರತಾಗಿ ಪಿಂಜಾರರ ಕುರಿತ ವಿಸ್ತಾರವಾದ ಮಾಹಿತಿ ನಮಗೆ ದೊರೆಯುವ ಮೂರನೆಯ ಆಕರವೆಂದರೆ **Edgar Thurston** ರಚಿಸಿರುವ **Castes and Tribes of Southern India** ದ ಎರಡನೆಯ ಸಂಪುಟ. **Thurston** ಕೊಡುವ ವಿವರಗಳು ಆಂಧ್ರಪ್ರದೇಶದಲ್ಲಿನ 'ದೂದೆಕುಲ' ಜನಾಂಗವನ್ನು ಕುರಿತಾದವು. ತೆಲುಗು ಭಾಷೆಯಲ್ಲಿ 'ದೂದೆ' ಎಂದರೆ 'ಹತ್ತಿ' ಎಂದೂ, 'ಎಕುಲ' ಎಂದರೆ 'ಸ್ವಚ್ಛಗೊಳಿಸುವುದು' ಎಂದು ಅರ್ಥವಿದೆ. ಅದು ಕನ್ನಡದಲ್ಲಿ 'ಪಿಂಜಾರ' ಎಂದೂ, ತಮಿಳಿನಲ್ಲಿ 'ಪಿಂಜಾರಿ', 'ಪಂಜುಕೊಟ್ಟಿ' ಎಂದೂ ಆಯಾ ರಾಜ್ಯದ ಭಾಷೆಯ ರೂಪವನ್ನು ಪಡೆದುಕೊಂಡಿದೆ. **Thurston** ಅವರ ಅಧ್ಯಯನ ವೈಜ್ಞಾನಿಕವಾದ, ಸಂಶೋಧನಾತ್ಮಕ ಶಿಸ್ತನ್ನು ಒಳಗೊಂಡಿದ್ದು ಕರ್ನಾಟಕದ ಪಿಂಜಾರರ ಸಾಂಸ್ಕೃತಿಕ ಸ್ವರೂಪದ ನಿಜಲಕ್ಷಣಗಳನ್ನು ವಿವರಿಸುತ್ತದೆಯಾದ್ದರಿಂದ ಅವರ ಮಾತುಗಳನ್ನು ಇಲ್ಲಿ ಯಥಾವತ್ತಾಗಿ ಬಳಸಿಕೊಳ್ಳಲಾಗಿದೆ.

**DEDEKULA - The Dukekulas are described by Mr. H.A. Stuart [1] as "Muhammadans who have taken to the trade of cotton-cleaning (dude-cotton ; ekula-to clean). By the Tamils they are called Pinjari or Panjukotti, which have the same significance. Though Muhammadans they have adopted or retained many of the customs of the Hindus around them, tying a tali to the bride at marriage, being very ignorant of the Muhammadan religion, and even joining the Hindu worship as far as allowable. Circumcision is, however, invariable, and they are much given to the worship of Muhammadan saints. In dress they resemble the Hindus and often shave off the beared, but do not leave a single lock of hair upon the head, as most Hindus do. Over three hundred Hindus have returned their caste either Dedukula or Pinjari, but these are probably members of other castes, who call themselves Dedekula as they are engaged in cotton cleaning".**

**The Dudekulas are described by Mr. W. Francis [2] as a muhammadan caste of cotton cleaners and rope and tape makers. They are either converts to Islam or the progeny of Unions between musalmans and the womens of the country con-**

1 - Manual of the North arcot district ; Madras Census Report, 1891.
2 - Madras census Report, 1901

sequently they generally speak the Dravidian languages - either canarese or Telugu-bt some of them speak Hindustani also. There Customs are a mixture of those of the Musalmans and the Hindus. Inheritance is apprently according to Muhammadan law.

They pray in mosques and circumcise their boys and yet some of them observe the Hindu festivals. They worship their tools at Bakrid and not at the Dasara. They raise the azan or Muhammadan call to prayers at sunset, and they pray at the tombs of Musalman Saints". In the Vizagapatnam district, The Dudekulas are described as beating cotton, and blowing horns.

For the following note on the Dudekulas of the ceded Districts, I am indebted to Mr. Haji Khaja Hussain. They claim Bava Faqrud-din pir of Penukonda in the Anatapur District as their Patron saint. Large numbers of Muhammadans, including Dedekulas collect at the annual festival (mela) at his shrine and after their homage in the shape of a fathiha. This meaning opener, is the name of the first chapter the Koran which is repeated when prayers are offered for the souls of the departed. For this ceremony a pilau, made of flesh, rice and ghee (clarified butter) is prepared, and the Khazi repeats the chapter and offers the food to the soul of the deceased saint or relation.

The story of Faqrud-din pir is as follows. He was born in A.H. 564 (About A.D. 1122) and was king of Seistan in persia. One day while he was administering justice, a merchant brought some horses before him for sale. His attention was diverted, and he became for a time absorbed in contemplation of the beauty of one of the horses. Awakening from his reverie, He blamed himself for allowing his thoughts to wander when he was engaged in the most sacred of his duties as a king. He summoned a meeting of all the learned moulvis in his kingdom, and enqired of them what was the penalty for his conduct. They unanimously decreed that he should abdicate. Accordingly he placed his brother on the throne, and becoming a dervish, came to India and wondered about in the jungles. Eventually

he arrived at Trichinopoly and there met the celebrated saint Tabri-Alam, whose disciple he became. After his admission into holy orders, he was told to travel about and plant his miswak wherever he halted and regard the place where it sprouted as his permanent residence. The miswak or tooth-brush is a piece of the root of the Pitu tree (Salvadora Persica), which is used by Muhammadans and especially Fakris, for cleaning the teeth. When Bava Faqrud-din arrived at Penukonda hill, he as usual, planted the Miswak, which sprouted. He accordingly decided to make this spot his permanent abode. But there was close by an important Hindu temple, and the idea of a Muhammadan settling close to it enraged the Hindus, who asked him to leave. He not only refused to do so, but allowed his disciples, of whom a number had collected, to slaughter a sacred bull belonging to the temple. The Hindus accordingly decided to kill Faqrud-din and his disciples. The Raja collected an armed force and demanded the restoration of the bull. Faqrud-din ordered one of his disciples to bring before him the skin, feet and fail of the animal which had been preserved, striking the skin with his staff, he exclaimed, "Rise, oh I bull at the Command of God". The animal immediately rose in a complete state of restoration and would not leave the presence of his preserver. Alarmed at this miracle, the Hindus brandished their swords and spears and were about to fall on the Muhammadans, when a dust-storm arose and blinded them. In their confusion they began to slay each other, and left the spot in dismay. The Raja then resolved to kill the Muhammadans by poisoning them. He prepared some cakes mixed with Poison and sent them to faqrud-din for distribution among his disciples. The saint, though he knew that the cakes were poisoned, partook thereof of himself, as also did his disciples, without any evil effect. A few days afterwards the Raja was attacked with colic, and his case was given up by the court Physician as hopeless. As a lost resort, he was taken before Faqrud-din, who offered him one of the poisoned cakes, which cured hum. Falling at his feet , the Raja begged for pardon and offered the village of Penukonda to Faqrud-din as a Jaghir (annuity). This offer was declined, and the saint asked that the temple

should be converted into a mosque. The Raja granteds the request, and it is said that large numbers of Hindus embraced the Muhammadan religion, and were the ancestors of the Dudekulas.

The Dudekulas, like the Hindus, like to prossess some visible symbol for worship and they enroll great personages who have died among the number of those at whose graves they worship, so essential is this grave worship that, if a place is without one, a grave is erected in the name of some saint. Such a thing has happened in recent times in Banganapalle. A Fakir, named Allah Baksh, died at Kurnool. A Dudekula of the Banganapalle state visited his grave, took away a lump of earth from the ground near it, and burried at in a village ten miles from Banganapalle. A shrine was erected over it in the name of the saint, and has become very famous for the miracles which are performed at it. An annual festival is held which is attended by large numbers of Muhammadans and Dudekulas.

Some Dudekulas have names which, though at first sight they seem to be Hindu, are really Muhammadan. For example, Kumbannah is a curruption of Kamal Sahib. aand Sakali, which in Telugu means a washerman, seems to be an altered form of Sheik Ali. Though Dudekulas say that they are Muhammadans of the Sheik sect, the name sheik is only occasionally used as a prefix, e.s., Sheik Hussain or Sheik Ali. Names of Males are Hussain Sa, Fakir Sa and Khasim Sa. Sa is an abbreviated form of Sahib. One old Dudekula stated that the title Sahib was intended for pukka (genuine) Muhammadans and that the Dudekulas could not lay claim to the title in its entirety. Instead of Sa, Bhai, meaning brother, is sometimes used as a Suffix to the name e.s., Ghudu Bhai. Ghudu, meaning ash-heap, is an opprobrious name given to children of those whose off spring have died young, in the hope of securing long life to them. The child is taken, immediately after birth, to an ash-heap, where some of the ashes are sprinkled over it. Some Dudekulas adopt the Hindu termination appa (father), anna (brother) or gadu e.s., Pullanna, Naganna, Yerkalappa, Hussaingadu, Hussainappa, Typical names of

females are Roshamma, Jamalamma and Madaramma. They have dropped the title Bibi or Bi and adopted the Hindu title amma (mother).

The ceremony of naming a child is generally performed on the sixth day after its birth. The choice of a name is entrusted to an elderly female member of the family. In some cases, the name of a deceased ancestor-who lived to an advanced age is taken. If a child dies prematurely, there is a Superstitious Prejudice against it name, which is avoided by the family. Very frequently a father and son, and sometimes two or three brothers, have the same name. In such a case prefixes are added to their names as a means of distinguising them, e.s., Pedda (big), Nadpi (middle), Chinna (little). Sometimes two names are assumed by an individual, one a Hindu name for everyday use, the other Muhammadan for ceremonial occasions.

The Dukekulas depend for the performance of their ceremonies largely on the Khazi, by whom even the killing of a fowl for domestic purposes has to be carried out. The Dudekula, like other Muhammadans, is averse to taking animal life without due religious rites, and the zabh, or killing of an animal for food, is an important matter. One who is about to do so should first make vazu (ablution), by cleaning his teeth and washing his mouth, hands, face, forearms, head and feet. He should then face the west, and an assistant holds the animal to be slaughtered upside down and facing west. Water is poured into its mouth, and the words Bismilla hi Aila hu Akbar ultered. The operator then cut the throat, taking care that the jugular veins are divided. In remote villages, where a khazi is not available, the Dudekulas keep a sacrificial knife, which has been sanctified by the khazi repeating over it the same words from the Koran as are used when an animal is slaughtered.

The first words which a Muhammadan child should hear are those of the azan, are call to prayer, which are ultered in its ear immediately after birth. This ceremony is observed by those Dudekulas who live in towns or big villages, or

can affrod the services of a Khazi. It is noted by Mr. Francis that the Dudekulas raise the azan at Sunset. A few, who have been through a course of religious instruction at a Madrasa (school), may be able to do this. A Muhammadan is supposed to raise the azan five times daily viz., before sunrise, between noon and 3 p.m., between 4 and 6 p.m., at sunset and between 8 p.m and midnight.

At the naming of an infant on the sixth day, the Dudekulas do not like other Muhammadans, perform the aguiga ceremony, which consists of shaving the child's head and sacrificing a he-goat. Children are circumcised before the tenth year. On such occasions he Muhammadans generally invite their friends, and distribute sweets and Pan-Supari (betel leaf and areca nuts). The Dudekulas simply send for a barber, Hindu or Muhammadan who performs the operation in the presence of a khazi, iif one happens to be available, when a girl reaches puberty, the Dudekulas invite their friends to a feast. Other Muhammadans, on the contrary, keep the fact a secret.

At the betrothal ceremony, when sweets and pan supari are taken by the future bridegroom and his party to the house of the girl whom he seeks in marriage the female members of both families and the girl herself are present. This fact shws the absence of the Muhammadan gosha system among Dudekulas. A Muhammadan wedding lasts over five or six days, where as the ceremonies are among the Dudekulas, completed within twenty-four hours. On the night preceeding the nikka day, a pilau is prepared and a feast is held at the bridegrooms house. On the following morning, when it is still dark, the bridegroom, accompanies by his relations, starts on horseback in procession, with beating of drums and letling off of fireworks. The procession arrives at the bride's house before Sunrise. The Khazi is sent for, and the Mahr is settled. This is a nominal gift settled on the wife before marriage by the bridegroom on the death of a husband, a widow has priority of claim on his property to the promised amount of the Mahr. Two male witnesses are sent t the bride, to obtain her assent to the union, and to the

amount of the mahr. The Khazi being an orthodox Muhammadan, treats the Dudekula bride as strictly gosha for time being and therefore select two of her near relatives as witness. The lutcha (marriage badge), consisting of a single or double strings of beads, is brought in a cup filled with Sandal paste.

The Khazi chants the marriage service and sends the lutcha into the bride with his blessings. It is tied round her neck by the female relations of the bride-groom, and the marriage rites are over.

The usual Mahammadan form of greeting among Muhammadans is the familiar "Peace be wit you", "And with you be peace". When a Dudekula greets a Muhammadan, he simply bows and with members of his own community, uses a Telugu form of Salutation, e.s., niku'mokkutamu.

The Dudekulas, male and female, dress exactly like Hindus, but a rule, the men do not shave their beard.

Disputes and social questions affecting the community, are settled by a Khazi.

With the increase in cotton mills, and decline of the indigenous hand-weaving industry, the demand for cotton cleaning labour has diminished, and some Dudekulas have of necessity, taken to agriculture. Land-owners are very scare among them, but some are abkari (Liquor) contractors, village school masters, and quack doctors in the Ceded districts, the cotton cleaning industry is solely confined to the Dudekulas.

The Synonyms of Dudekulas, Ladaf and Nurbash, recorded at times of census, are curruptions of Nadaf (a cotton dresser) and Nurbaf (weaving) 4.

ಈ ಅಧ್ಯಯನದಲ್ಲಿ ಥರ್ಸ್ಟನ್ ಅವರು ಕೊಡುವ ವಿವರಗಳು ಪಿಂಜಾರರ ಸಾಮಾಜಿಕ-ಸಾಂಸ್ಕೃತಿಕ ನಿಜ ನೆಲೆಗಳನ್ನು ಪ್ರತಿನಿಧಿಸುವಂತಿವೆ. ಪಿಂಜಾರರ ಮೂಲವನ್ನು ಕುರಿತಂತೆ ಥರ್ಸ್ಟನ್ ಅವರಿಗೂ ಸ್ಪಷ್ಟತೆ ಇದೆ. ಅಂದರೆ ಪಿಂಜಾರರು ಹಿಂದೂ ಸಮುದಾಯದಿಂದ ಮತಾಂತರಗೊಂಡವರೆಂಬ ಬಗ್ಗೆ ಥರ್ಸ್ಟನ್ ಅವರಿಗೆ ಅಭಿಪ್ರಾಯ ಭೇದವಿಲ್ಲ. ಇಷ್ಟಾಗಿಯೂ ಪಿಂಜಾರರ ಮೂಲಾಶ್ರಮದ ನಿರ್ದಿಷ್ಟ ನೆಲೆ ಯಾವುದೆಂಬ ಬಗ್ಗೆ ಅಸ್ಪಷ್ಟತೆ ಇದ್ದೇ ಇದೆ. ಈ ಕುರಿತ ಚರ್ಚೆ ಕೂಡ ಪಿಂಜಾರರ ಅಧ್ಯಯನದ ಸಂದರ್ಭದಲ್ಲಿ ಅನಿವಾರ್ಯವಾಗಿರುವುದರಿಂದ ಪಿಂಜಾರರ ಆಚರಣೆ ಮತ್ತು ಅವುಗಳ ವಿಶ್ಲೇಷಣೆಯ ಸಂದರ್ಭದಲ್ಲಿ ಪಿಂಜಾರರ ನಿರ್ದಿಷ್ಟ ಮೂಲವನ್ನು ಹುಡುಕುವ ಪ್ರಯತ್ನ ಮಾಡಲಾಗುವುದು.

ಪಿಂಜಾರರಿಗೆ ಸಂಬಂಧಿಸಿದಂತೆ ಮತ್ತೊಂದು ಮುಖ್ಯವಾದ ಅಧ್ಯಯನವೆಂದರೆ ಡಾ।। ಮಂಜುನಾಥ ಬೇವಿನಕಟ್ಟಿ ಅವರ 'ಸುಪ್ಪತ್ತಿಗೆಯ ಹಾದಿಯಲ್ಲಿ' ಕೃತಿ. ಪಿಂಜಾರರ ಸಾಂಸ್ಕೃತಿಕ ವಿವರಗಳನ್ನು ತುಂಬ ಆಸ್ಥೆಯಿಂದ ಕಲೆಹಾಕಿರುವ ಲೇಖಕರು ಅವರ ಸಾಮಾಜಿಕ ಸ್ಥಾನ-ಮಾನಗಳ ಕುರಿತಾದ ವಿಶ್ಲೇಷಣೆಯನ್ನು ನಡೆಸಿದ್ದಾರೆ. ಈ ಅಧ್ಯಯನದಲ್ಲಿ ಈ ಕೃತಿಯನ್ನು ಒಂದು ಮುಖ್ಯ ಆಕರವಾಗಿಟ್ಟುಕೊಳ್ಳಲಾಗಿದೆ.

ಕೊನೆಯದಾಗಿ ದಾದಾಪೀರ್. ಬಿ.ಸಿ. ಅವರು ಬರೆದಿರುವ 'ಪಿಂಜಾರರ ಸಂಸ್ಕೃತಿ' ಕೃತಿ - ಪಿಂಜಾರ ಜನಾಂಗವನ್ನು ಕುರಿತಾದ ಅಧಿಕೃತ ಮಾಹಿತಿಗಳನ್ನು ಒದಗಿಸುವ ಜೊತೆಗೆ ಪಿಂಜಾರ ಸಮುದಾಯದ ಎಲ್ಲಾ ಮುಖಗಳನ್ನು ಸವಿವರವಾಗಿ ಚರ್ಚಿಸಿದೆ. ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಕಟಿಸಿರುವ 'ಉಪಸಂಸ್ಕೃತಿ' ಮಾಲೆಯಲ್ಲಿ 'ಪಿಂಜಾರರ ಸಂಸ್ಕೃತಿ'ಯೂ ಒಂದು. ಕರ್ನಾಟಕದ ಸಂದರ್ಭದಲ್ಲಿ ಸಂಸ್ಕೃತಿ ಅಧ್ಯಯನಕ್ಕೆ ಹೊಸ ಬಗೆಯ ರೂಪು-ರೇಷೆಗಳನ್ನು ಹಾಕಿಕೊಟ್ಟು ಈ ಉಪ ಸಂಸ್ಕೃತಿಗಳ ಚಿಂತನೆ ಭಾರತದ ಸಾಂಸ್ಕೃತಿಕ ರಾಜಕಾರಣದ ವಿದ್ರೋಹವನ್ನು ತೆರೆದಿಟ್ಟಿತು. ಆ ಹಿನ್ನೆಲೆಯಲ್ಲಿ ಪಿಂಜಾರರನ್ನು ಕುರಿತಾದ ಚಿಂತನೆಗೆ ಕೂಡ ಮಹತ್ವ ಬಂದುದರಿಂದ ಸಂಸ್ಕೃತಿ ಅಧ್ಯಯನ ಹಿಂದೂ ಸಮುದಾಯದ ನಿರ್ಲಕ್ಷಿತ ಸಂಸ್ಕೃತಿ ರೂಪಗಳ ನೆಲೆಗೆ ಮಾತ್ರ ಸೀಮಿತಗೊಳ್ಳದೆ ಇಂಡಿಯಾದ ಎಲ್ಲಾ ಧಾರ್ಮಿಕ ಬುಡಕಟ್ಟುಗಳ ಅಧ್ಯಯನದ ವ್ಯಾಪ್ತಿಯನ್ನು ಪಡೆಯಿತು. ಈ ಎಲ್ಲ ಕಾರಣದಿಂದಾಗಿ 'ಪಿಂಜಾರರ ಸಂಸ್ಕೃತಿ' ಕೃತಿ ಕ್ಷೇತ್ರಕಾರ್ಯ, ಸಾಹಿತ್ಯ ಸಂಪಾದನೆ, ವಿಶ್ಲೇಷಣೆ ಮೊದಲಾದ ಸಂಶೋಧನೆಯ ಪರಿಶ್ರಮದಿಂದ ರಚಿತವಾಗಿದ್ದು, ಈ ಸಂದರ್ಭದಲ್ಲಿ ಈ ಕೃತಿಯನ್ನು ಕೂಡ ಆಕರ ಗ್ರಂಥವೆಂದು ಪರಿಗಣಿಸಲಾಗಿದೆ. ಇನ್ನುಳಿದಂತೆ ಪತ್ರಿಕಾ ಬರಹಗಳನ್ನು ಗಮನಿಸಲಾಗಿದೆ.

ಪಿಂಜಾರರ ಕುರಿತು ಈವರೆಗೆ ನಡೆದ ಅಧ್ಯಯನದ ಸಮೀಕ್ಷೆ ಇದಾಗಿದ್ದು ಸಮಕಾಲೀನ ಸಾಂಸ್ಕೃತಿಕ ಪರಿಸರದಲ್ಲಿ ವಿಚಿತ್ರ ತಳಮಳ ಮತ್ತು ಗೊಂದಲದಲ್ಲಿ ಬದುಕುತ್ತಿರುವ ಪಿಂಜಾರರನ್ನು ಮತ್ತಷ್ಟು ವಿಶೇಷ ಕುತೂಹಲದಿಂದ ಅಧ್ಯಯನ ಮಾಡುವುದು ಸದ್ಯದ ಉದ್ದೇಶವಾಗಿದೆ.

## ೧.೩ ಅಧ್ಯಯನಕ್ಕಾಗಿ ಕೈಗೊಂಡ ವಿಧಾನಗಳು

ಜನಾಂಗಗಳ ಅಧ್ಯಯನದ ಸಂದರ್ಭದಲ್ಲಿ ಬಹಳ ಮುಖ್ಯವಾಗಿ ಕೈಗೊಳ್ಳುವ ಕ್ಷೇತ್ರಕಾರ್ಯದಿಂದ ಆ ಜನಾಂಗದ ಒಟ್ಟಾರೆ ಸಾಂಸ್ಕೃತಿಕ ಗ್ರಹಿಕೆಗಳನ್ನು ತಿಳಿದುಕೊಳ್ಳುವುದು ಸಾಧ್ಯವಾಗುತ್ತದೆ. ಪಿಂಜಾರರ ಅಧ್ಯಯನವನ್ನು ಈ ಬಗೆಯ ವ್ಯಾಪಕ ಕ್ಷೇತ್ರ ಕಾರ್ಯದಲ್ಲಿ ತೊಡಗಿಸಿಕೊಂಡೇ ಆರಂಭಿಸಲಾಗಿದೆ.

ಕ್ಷೇತ್ರ ಕಾರ್ಯದಲ್ಲಿ ಮುಖ್ಯವಾಗಿ ಎರಡು ರೀತಿಯ ವಿಧಾನಗಳನ್ನು ಅನುಸರಿಸಲಾಗಿದೆ.

1. ಪಿಂಜಾರರು ದಟ್ಟವಾಗಿ ವಾಸಿಸುವ ಹಳ್ಳಿಗಳನ್ನು ಆಯ್ಕೆ ಮಾಡಿಕೊಂಡು ಅಲ್ಲಿಗೆ ಭೇಟಿ ಕೊಡುವುದು - ಒಂದನೆಯ ವಿಧಾನ.

ಈ ವಿಧಾನದಲ್ಲಿ ಪಿಂಜಾರರ ಮೂಲ, ಕಸುಬು, ಆಚರಣೆ, ನಂಬಿಕೆ, ಇತಿಹಾಸ, ಅವರ ಸಾಮಾಜಿಕ-ಆರ್ಥಿಕ ಸ್ಥಿತಿಗತಿಗಳು, ಸಮಕಾಲೀನ ಸಂದರ್ಭದಲ್ಲಿ ಅವರು ಎದುರಿಸುತ್ತಿರುವ ಸವಾಲುಗಳು, ಅವರ ಬದುಕಿನಲ್ಲಿ ಒಟ್ಟಾರೆ ಅನುಭವಿಸುತ್ತಿರುವ ಸ್ಥಿತ್ಯಂತರಗಳು, ಇತರೆ ಸಮುದಾಯದವರೊಂದಿಗಿನ ಸಂಬಂಧಗಳು - ಮೊದಲಾದ ವಿವರಗಳನ್ನು ಸಾಧ್ಯವಾದಷ್ಟು ವಯಸ್ಸಾದವರ ಜೊತೆ ಚರ್ಚೆ, ಸಂವಾದ, ಪ್ರಶ್ನಾವಳಿ ನಡೆಸುವ ಮೂಲಕ ತಿಳಿದುಕೊಳ್ಳಲು ಯತ್ನಿಸುವುದು.

ಜನನ, ಮುಂಜಿ, ಮದುವೆ, ಸೀಮಂತ, ಹೆರಿಗೆ, ನಾಮಕರಣದಿಂದ ಹಿಡಿದು ಸಾವಿನವರೆಗಿನ ಜೀವನಾವರ್ತನಗಳ ಸಂದರ್ಭದಲ್ಲೆಲ್ಲಾ ಹಾಜರಾಗಿ ಆ ವಿವರಗಳನ್ನು ತಿಳಿಯುವ, ಟಿಪ್ಪಣಿ ಮಾಡಿಕೊಳ್ಳುವ ಮೂಲಕ ಪಿಂಜಾರರ ಸಾಂಸ್ಕೃತಿಕ ಬದುಕಿನ ಸ್ವರೂಪವನ್ನು ಅಧ್ಯಯನ ಮಾಡಲಾಗಿದೆ. ಕೆಲವು ವಿಶಿಷ್ಟ ಹಬ್ಬ, ಆಚರಣೆಗಳ ಸಂದರ್ಭದಲ್ಲಿ ಕೂಡ ಪಿಂಜಾರರ ಜೊತೆಗಿದ್ದುಕೊಂಡು ವಿವರಗಳನ್ನು ಸಂಗ್ರಹಿಸಿಟ್ಟುಕೊಳ್ಳಲಾಗಿದೆ ಮತ್ತು ಅಗತ್ಯವಿದ್ದ ಕಡೆ ಛಾಯಾಚಿತ್ರಗಳನ್ನು ತೆಗೆದಿಟ್ಟುಕೊಳ್ಳಲಾಗಿದೆ.

ಈ ವಿಧಾನದಿಂದಾಗಿ ಪಿಂಜಾರರ ಭಾಷೆ, ಆಚರಣೆಗಳ ಹಿಂದಿನ ಪ್ರಭಾವಗಳು ಮತ್ತು ನಂಬಿಕೆಗಳು ಪರಂಪರಾಗತ ಬದುಕಿಗೆ ಅನೇಕ ಹೊಸ ರೂಪ-ಸ್ಪರ್ಶಗಳನ್ನುಂಟು ಮಾಡಿರುವ ಆಧುನಿಕ ಪ್ರೇರಣೆಗಳು, ಬದಲಾಗುತ್ತಿರುವ ಸಾಮಾಜಿಕ ಪರಿಸರದಲ್ಲಿ ಇಂಥ ಜನಾಂಗಗಳು ಹೇಗೆ ತಮ್ಮ ಸಂಸ್ಕೃತಿಯ ನಿಜನೆಲೆಗಳನ್ನು ಉಳಿಸಿಕೊಳ್ಳುತ್ತವೆ ? ಅದಕ್ಕಾಗಿ ಎಂಥ ಪ್ರತಿಸಂಸ್ಕೃತಿಯನ್ನು ಕಟ್ಟಿಕೊಳ್ಳುತ್ತವೆ ? ಎಂಬ ಬಗ್ಗೆ ವಿಸ್ತಾರವಾಗಿ ತಿಳಿದುಕೊಳ್ಳುವುದು ಸಾಧ್ಯವಾಗಿದೆ.

2) ಪಿಂಜಾರ ಜನಾಂಗದಲ್ಲಿನ ಸಾಹಿತ್ಯಕ ವಿವರಗಳ ಮೂಲಕ ಅವರ ಸಂವೇದನಗಳ ಮೂಲವನ್ನು ಗ್ರಹಿಸುವುದು ಎರಡನೆಯ ವಿಧಾನ.

ಜನಾಂಗಿಕ ಅಧ್ಯಯನದಲ್ಲಿ ಈ ವಿಧಾನ ಹೆಚ್ಚು ಪರಿಣಾಮಕಾರಿಯಾದುದು. ಪಿಂಜಾರರಲ್ಲಿರುವ ಕಥೆ, ಲಾವಣಿ, ಗಾದೆ, ಒಗಟು ಮೊದಲಾದ ಪ್ರಕಾರಗಳಲ್ಲಿ ಅವರ ಆಳದ ಸಂವೇದನೆಗಳನ್ನು ಗುರುತಿಸುವುದು ಸಾಧ್ಯ. ಅವರ ಬಡತನ, ದೈವದ ಕುರಿತಾದ ಗ್ರಹಿಕೆಗಳು, ಆಧುನಿಕತೆ ಉಂಟು ಮಾಡಿದ ಅನೇಕ ರೀತಿಯ ಪಲ್ಲಟಗಳನ್ನು ಅಧ್ಯಯನದ ಸಂದರ್ಭದಲ್ಲಿ ಕಂಡುಕೊಳ್ಳಬಹುದು.

ಈ ವಿಧಾನದಲ್ಲಿ ಸಾಹಿತ್ಯ ಸಂಗ್ರಹಣೆಯ ಜೊತೆಗೆ ಪಿಂಜಾರರನ್ನು ಪ್ರತಿನಿಧಿಸಬಲ್ಲಂತಹ ಅನೇಕರ ಸಂದರ್ಶನವನ್ನು ನಡೆಸಲಾಗಿದೆ. ಇವರಲ್ಲಿ ಪ್ರಜ್ಞಾವಂತರೆನಿಸಿಕೊಂಡವರನ್ನು ಆಯ್ಕೆ ಮಾಡಿ ಪಿಂಜಾರರ ಸ್ಥಿತಿ-ಗತಿಗಳನ್ನು ತಿಳಿದುಕೊಳ್ಳಲು ಪ್ರಯತ್ನಿಸಲಾಗಿದೆ. ಹಾಗೆಯೇ ಪಿಂಜಾರರನ್ನು ಕುರಿತಂತೆ ಇತರೆ ಸಮುದಾಯದವರ ಅಭಿಪ್ರಾಯವನ್ನು ಸಂಗ್ರಹಿಸುವ ಕೆಲಸವನ್ನು ಈ ವಿಧಾನದಲ್ಲಿ ಅಳವಡಿಸಿಕೊಳ್ಳಲಾಗಿದೆ.

ಹೀಗೆ ವ್ಯಾಪಕ ಕ್ಷೇತ್ರ ಕಾರ್ಯ ಮತ್ತು ಸಾಹಿತ್ಯ ಸಂಗ್ರಹಣೆಯ ಮೂಲಕ ಪಿಂಜಾರರ ಸಾಂಸ್ಕೃತಿಕ ಬದುಕಿನ ವಿಶ್ಲೇಷಣೆಗೆ ಸಹಾಯಕವಾಗಬಲ್ಲ ವಿವರಗಳನ್ನು ಪಡೆದುಕೊಳ್ಳಲಾಗಿದೆ.

## ೧.೪ ಅಧ್ಯಯನದ ರೂಪು-ರೇಷೆಗಳು

'ಕರ್ನಾಟಕದ ಪಿಂಜಾರರು' ಎಂಬ ಶೀರ್ಷಿಕೆಯಡಿ ಕೈಗೆತ್ತಿಕೊಂಡಿರುವ ಈ ಅಧ್ಯಯನದ ರೂಪು-ರೇಷೆಗಳನ್ನು ಕುರಿತು ಹೇಳುವುದು ಇಲ್ಲಿನ ಉದ್ದೇಶವಾಗಿದೆ.

ಪಿಂಜಾರ ಜನಾಂಗದ ಅಧ್ಯಯನಕ್ಕೆ ಇರುವ ಮೂಲಭೂತವಾದ ಉದ್ದೇಶ ಕರ್ನಾಟಕ ಹಾಗೂ ಉಳಿದಂತೆ ಒಟ್ಟು ಭಾರತದ ಸಂದರ್ಭದಲ್ಲಿ ಹುಸಿ ಸಂಸ್ಕೃತಿಗಳ ಆಡಂಬರ, ವೈಭವೀಕರಣಗಳ ನಡುವೆ ನಿಜಸಂಸ್ಕೃತಿಗಳ ಹುಡುಕಾಟ ಅನಿವಾರ್ಯವಾಗಿರುವುದು ಮತ್ತು ಶತಮಾನಗಳಿಂದ ಈ ಬಗೆಯ ಶ್ರಮಮೂಲ ಸಂಸ್ಕೃತಿ ವಿಶ್ಲೇಷಣೆಯನ್ನು ಜಾಣತನದಿಂದ ನಿರ್ಲಕ್ಷಿಸಿರುವುದು. ಭಾರತದಂತಹ ಸಾಮಾಜಿಕ ವಾತಾವರಣದಲ್ಲಿ 'ಶ್ರಮ' ಎನ್ನುವುದು ಕನಿಷ್ಠ ಮೌಲ್ಯದ ಸರಕಾಗಿ 'ಬುದಿ' ಶ್ರೇಷ್ಠತೆಯ ಸಂಕೇತವಾಗಿ ಬಿಂಬಿತವಾಗಿರುವುದರಿಂದ ಈ ಬಗೆಯ ಒಣತಾತ್ವಿಕತೆಗೆ ಜಾತಿ ವ್ಯವಸ್ಥೆಯ ಅಂಗೀಕಾರ ಕೂಡ ಸಿಕ್ಕುಬಿಟ್ಟಿದೆ. ಇಂತಹ ನೂರಾರು ಸಂಸ್ಕೃತಿಗಳ ನಿಜನೆಲೆಗಳನ್ನು ಗುರುತಿಸುವುದಕ್ಕೆ ಅಗತ್ಯವಾದ ತಾತ್ವಿಕತೆಯನ್ನು ರೂಪಿಸುವುದು ಕೂಡ ಇಂದಿನ ಜರೂರಾಗಿದೆ.

ಹೀಗೆ ನಿರ್ಲಕ್ಷಿತ ಸಂಸ್ಕೃತಿಗಳ ಶೋಧನೆಯ ಜೊತೆಗೆ ಬಹುರೂಪೀ ಸಂಸ್ಕೃತಿಗಳ ನೆಲದಲ್ಲಿ ಏಕರೂಪೀ ಸಂಸ್ಕೃತಿಯನ್ನು ಪಟ್ಟಭದ್ರರು ರಾಜಕೀಯ ಅಧಿಕಾರದಿಂದ ಹೇರುತ್ತಿರುವ ಅನಪೇಕ್ಷಿತ ಬಲಾತ್ಕಾರವನ್ನು ಪ್ರತಿರೋಧಿಸಬೇಕಾಗಿದೆ. ಈ ಪ್ರತಿರೋಧ ತಾತ್ವಿಕ ಮಟ್ಟದಲ್ಲಿ ಜಡವಾಗದಂತೆ ಸಾವಿರಾರು ವರ್ಷಗಳ ಅದರ ನಿರಂತರ ಗತಿಶೀಲತೆಯನ್ನು ಕಾಣಿಸುತ್ತಲೇ ಕಾಪಾಡಿಕೊಳ್ಳಬೇಕಾಗಿದೆ.

ಪಿಂಜಾರರ ಅಧ್ಯಯನ ಆಗಬೇಕಾದಷ್ಟು ಪ್ರಮಾಣದಲ್ಲಿ ನಡೆದಿಲ್ಲ ಎನ್ನುವುದು ಈ ಅಧ್ಯಯನಕ್ಕಿರುವ ಮತ್ತೊಂದು ಸಮರ್ಥನೆಯಾಗಿದೆ. ಶತಮಾನಗಳ ಕಾಲ ಈ ನೆಲದಲ್ಲಿ ಒಟ್ಟಿಗೆ ಜೀವಿಸಿರುವ ಹಿಂದೂ-ಮುಸ್ಲಿಮರ ನಡುವಿನ ಸಂಬಂಧಗಳ ಪ್ರತಿರೂಪದಂತಿರುವ ಪಿಂಜಾರರು ಎರಡೂ ಧರ್ಮಗಳ ಸಂಗಮವಾಗಿದ್ದಾರೆ. ಇಂತಹ ಅಪರೂಪದ ಸಂಸ್ಕೃತಿಯ ಕುರಿತಾಗಿ ಈವರೆಗೆ ಸ್ವತಃ ಈ ಜನಾಂಗದವರಾಗಲೀ, ಇತರರಾಗಲೀ ಅಷ್ಟಾಗಿ ಆಸ್ಥೆ ವಹಿಸದಿರುವುದು ಮಾತ್ರ ವಿಚಿತ್ರವಾಗಿದೆ.

ಪಿಂಜಾರರು ವಾಸಿಸುವ ಪ್ರದೇಶ ವಿಸ್ತಾರವಾಗಿರುವುದರಿಂದ ಇಡೀ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಚದುರಿದಂತೆ, ವಿಶೇಷವಾಗಿ ಉತ್ತರ ಕರ್ನಾಟಕದ ಅನೇಕ ಜಿಲ್ಲೆಗಳಲ್ಲಿ ಹೆಚ್ಚಾಗಿ ಅವರು ಕಂಡು ಬರುವುದರಿಂದ ಅಧ್ಯಯನದ ಅನೂಕೂಲಕ್ಕೆ ತಕ್ಕಂತೆ ಕೆಲವು ಊರುಗಳನ್ನು ಮಾತ್ರ ಪ್ರಾತಿನಿಧಿಕವಾಗಿ ಆಯ್ಕೆ ಮಾಡಿಕೊಂಡು ಅಧ್ಯಯನ ಮಾಡಲಾಗಿದೆ. ಈ ಅಧ್ಯಯನ ಸ್ವಯಂ ಪರಿಪೂರ್ಣವೆಂದೂ, ಇಲ್ಲಿನ ವಿಶ್ಲೇಷಣೆಯೇ ಆತ್ಯಂತಿಕವೆಂದೂ ಖಂಡಿತಾ ಭಾವಿಸಬೇಕಿಲ್ಲ. ಒಂದು ಜನಾಂಗದ ಸಾಂಸ್ಕೃತಿಕ ಪರಿವೇಷವನ್ನು ಪ್ರವೇಶಿಸಲು ಅಗತ್ಯವಾದ ಪ್ರಾಥಮಿಕ ನೆಲೆಗಳನ್ನೂ, ವಿವರಗಳನ್ನೂ ಸಾಧ್ಯವಾದಷ್ಟು ಪ್ರಾಮಾಣಿಕವಾಗಿ ಈ ಅಧ್ಯಯನ ಒದಗಿಸಬಲ್ಲದು ಎಂದು ಮಾತ್ರ ವಿಶ್ವಾಸದಿಂದ ಹೇಳಬಹುದಾಗಿದೆ.



---

*ಅಡಿಟಿಪ್ಪಣಿಗಳು:*

1 : ಬಸವರಾಜ ಮೂಲಿಮನಿ ಅವರ ಲೇಖನ, ಸಂಯುಕ್ತ ಕರ್ನಾಟಕ : ಸಾಪ್ತಾಹಿಕ ಸೌರಭ, ದಿನಾಂಕ 3-6-2001

2 : Mysore Gazetter-Vol-2, Page No. 340, Ed. C. Hayavadanarao

3 : The Mysore Tribes and Castes, Vol-IV, Page No. 396, UOM, Mysore 1931. Editors : H.V. Nanjundaiah, L.K. Anathakrishna Iyer

4 : Caste and Tribes of Southern India - By Edgar Thurston, Vol-II, Page No. 195-202

ಅಧ್ಯಾಯ - ೨

# ಪಿಂಜಾರರ ಮೂಲ

## ೨.೧ ಪದನಿಷ್ಪತ್ತಿ

'ಪಿಂಜಾರ' ಎನ್ನುವುದು ಅಪ್ಪಟ ಕನ್ನಡದ ಶಬ್ದ. ಕಮ್ಮಾರ, ಚಮ್ಮಾರ ಎನ್ನುವ ಹಾಗೆಯೇ ಈ ಪದ ಕೂಡ ಜನಾಂಗವೊಂದು ಸಾಂಪ್ರದಾಯಿಕವಾಗಿ ನಿರ್ವಹಿಸಿಕೊಂಡು ಬಂದ ವೃತ್ತಿಯ ಹಿನ್ನೆಲೆಯಲ್ಲಿ ರೂಪುಗೊಂಡಿರುವಂತಹದು. ಕನ್ನಡದ 'ಪಿಂಜು' ಎನ್ನುವ ಕ್ರಿಯಾಪದ ಇದು. 'ಪಿಂಜು' ಎಂಬುದಕ್ಕೆ ಈ ಕೆಳಗಿನ ಅರ್ಥಗಳನ್ನು ಕೊಡಲಾಗಿದೆ.

೧. (ಕ್ರಿ) (ಹತ್ತಿಯನ್ನು ಬಿಡಿಸುವಂತೆ) ಹಿಂಜು ; ಚೊಕ್ಕಟಮಾಡು

೨. ವಿಭಾಗಿಸು, ಬೇರೆ ಮಾಡು.

೩. ಬಟ್ಟೆಯಲ್ಲಿ ಎಳೆಗಳು ದೂರವಾಗು ; ಹಿಸಿ.

೪. (ನಾ) ಹೀಚುಗಾಯಿ ; ಮಿಡಿ।

ಇಲ್ಲಿನ ಮೊದಲ ಮೂರು ಅರ್ಥಗಳು ಹತ್ತಿಗೆ ಸಂಬಂಧಪಟ್ಟವುಗಳಾಗಿವೆ. ಕಮ್ಮಾರನಿಗೆ ''ಕಬ್ಬಿಣ', ಚಮ್ಮಾರನಿಗೆ 'ಚರ್ಮ' ಇದ್ದ ಹಾಗೆ ಪಿಂಜಾರನಿಗೆ 'ಹತ್ತಿ' ಮೂಲ ಕಚ್ಚಾವಸ್ತು. ಕಮ್ಮಾರ ಕಬ್ಬಿಣವನ್ನು ಕಾಯಿಸಿ ವಿವಿಧ ಆಕಾರಗಳನ್ನು ಕೊಡುವ ಹಾಗೆ ಪಿಂಜಾರ ಹತ್ತಿಯನ್ನು ಹಿಂಜಿ ಆದಕ್ಕೆ ಆಕಾರಗಳನ್ನು ನೀಡುತ್ತಾನೆ.

ಕರ್ನಾಟಕದಲ್ಲಿ ಪಿಂಜಾರರು 'ಪಿಂಜಾರ', ನದಾಫ (ಲದಾಫ) ಎಂಬ ಹೆಸರುಗಳಲ್ಲಿ ಗುರುತಿಸಿಕೊಂಡರೆ ಆಂಧ್ರಪ್ರದೇಶದಲ್ಲಿ 'ದೂದೇಕುಲ', ತಮಿಳುನಾಡಿನಲ್ಲಿ 'ಪಿಂಜಾರಿ', 'ಪಂಜುಕೊಟ್ಟಿ' ಎಂಬ ಹೆಸರುಗಳಲ್ಲಿ ಕಂಡುಬರುತ್ತಾರೆ. ಈ ಎಲ್ಲ ಹೆಸರುಗಳ ಅರ್ಥವೂ ಒಂದೇ ಆಗಿದೆ. ಪಿಂಜಾರ ಎನ್ನುವುದಕ್ಕೆ 'ಹತ್ತಿಯನ್ನು ಹಿಂಜುವವನು'2 ಎಂದೇ ಅರ್ಥವಿದೆ. ಆಂಧ್ರಪ್ರದೇಶದಲ್ಲಿ ಈ ಜನಾಂಗವನ್ನು 'ದೂದೇಕುಲ' ಎಂದು ಕರೆಯುವುದರಿಂದ ಈ ಪದದ ಅರ್ಥ ಕೂಡ ಅದೇ ಆಗಿದೆ - ಎನ್ನುವುದು ಥರ್ಸ್‌ಟನ್ ಅವರು ಕೊಡುವ ವಿವರಗಳಿಂದ ತಿಳಿಯುತ್ತದೆ. (**Dude-Cotton ; Ekula - to clean**). ಹಾಗೆಯೇ ಥರ್ಸ್‌ಟನ್ ಅವರೇ ನೀಡುವ ವಿವರಗಳಲ್ಲಿ ಪಿಂಜಾರರಿಗೆ ಇರುವ ಪರ್ಯಾಯ ಪದಗಳು ಮತ್ತು ಅವುಗಳ ಅರ್ಥ ಕೂಡ ಒಂದೇ ಆಗಿದೆ. ಪಿಂಜಾರರನ್ನು **Ladaf** ಮತ್ತು **Nurbash** ಎಂಬ ಹೆಸರುಗಳಲ್ಲಿ ಜನಗಣತಿಯ ಸಂದರ್ಭದಲ್ಲಿ ದಾಖಲು ಮಾಡಿರುವುದನ್ನು ಥರ್ಸ್‌ಟನ್ ಗುರುತಿಸುತ್ತಾರೆ. **'Nadaf'** ಎಂದರೆ **'a cotton dresser'** ಎಂದೂ, **'Nurbaf'** ಎಂದರೆ

'**Weaving**' ಎಂದೂ ಅವರೇ ಅರ್ಥವನ್ನು ಕೊಡುತ್ತಾರೆ. 'ನ' ಕನ್ನಡ ವರ್ಣಮಾಲೆಯ ಅನುನಾಸಿಕಗಳಲ್ಲಿ ಒಂದು. ಕೇಶಿರಾಜ ಕೆಲವೊಮ್ಮೆ ಯ, ವ, ಲಗಳು ಕೂಡ ಅನುನಾಸಿಕದ ಕಾರ್ಯವನ್ನು ಉಚ್ಛಾರಣೆಯ ಸಂದರ್ಭದಲ್ಲಿ ನಿರ್ವಹಿಸುತ್ತವೆ ಎಂದು ಹೇಳುವುದನ್ನು ಇಲ್ಲಿ ನೆನಪಿಸಿಕೊಂಡರೆ 'ನದಾಫ್' ಎನ್ನುವುದು 'ಲದಾಫ್' ಎಂದಾಗುವುದರ ಸ್ವರೂಪ ತಿಳಿಯುತ್ತದೆ.

'ಪಿಂಜಾರ' ಎಂಬ ಪದ ನಿಷ್ಪತ್ತಿಯಿಂದಲೇ ಈ ಜನಾಂಗದವರ ವೃತ್ತಿಯ ಸ್ವರೂಪ ತಿಳಿಯುವಂತಿದೆ. ಬೀಜದಿಂದ ಬೇರ್ಪಡಿಸಿದ ಹತ್ತಿಯನ್ನು ಗೋಣಿ ಚೀಲದಲ್ಲಿ ತುಂಬಿಕೊಂಡು ತಲೆಮೇಲೆ ಹೊತ್ತು ಹೊರಡುವ ಪಿಂಜಾರರು ಊರೂರುಗಳನ್ನು ಅಲೆಯುತ್ತಾ ಹಾಸಿಗೆ, ದಿಂಬು ರಿಪೇರಿ ಎಂದು ಕೂಗುತ್ತಾ ಸಾಗುತ್ತಾರೆ. ಹಳೆಯ ಹಾಸಿಗೆಯನ್ನು ರಿಪೇರಿ ಮಾಡುವುದು, ಅಂದರೆ ಹಾಸಿಗೆ ಬಟ್ಟೆ ಹರಿದಿದ್ದರೆ ಅದರೊಳಗಿನ ಹತ್ತಿಯನ್ನು ತೆಗೆದು ಮತ್ತೆ ಅದನ್ನು ಸಂಸ್ಕರಿಸಿ, ಅದು ಸಾಕಾಗದಿದ್ದರೆ ಮತ್ತಷ್ಟು ಹತ್ತಿಯನ್ನು ಸೇರಿಸಿ ತುಂಬಿ ಹೊಸಬಟ್ಟೆ ಹಾಕಿ ಹೊಲಿದು ಕೊಡುವುದು ಮತ್ತು ಕೆಲವೊಮ್ಮೆ ಹೊಸದಾಗಿಯೇ ಹಾಸಿಗೆ ತಯಾರಿಸಿಕೊಡುವುದು ಪಿಂಜಾರರ ನಿತ್ಯದ ಕೆಲಸ. ಹೀಗೆ ಈ ಕೆಲಸಕ್ಕಾಗಿ ಇವರು ಊರೂರಿನ ಕೇರಿಕೇರಿಗಳನ್ನು ತಿರುತಿರುಗಿ ಕೂಗಿ ಕೂಗಿ ಹೊರಟರೆ ಯಾರೊ ಕೆಲವರು ಆರ್ಥಿಕವಾಗಿ ಶಕ್ತಿ ಇದ್ದವರು 'ಹಾಸಿಗೆ' ಹಾಕಿಸಿಕೊಳ್ಳುತ್ತಾರೆ. ದಿನಕ್ಕೆ ಒಂದು ಹೊಸ ಹಾಸಿಗೆಯ ವ್ಯಾಪಾರ ಅಥವಾ ಒಂದೆರಡು ಹಳೆಯ ಹಾಸಿಗೆಗಳ ರಿಪೇರಿ ಸಿಕ್ಕರೂ ಪಿಂಜಾರರು ತೃಪ್ತಿಪಟ್ಟುಕೊಳ್ಳುತ್ತಾರೆ. ಯಾಕೆಂದರೆ ಇವರ ಜೀವನಕ್ರಮದಲ್ಲಿ ಭವಿಷ್ಯದ ಚಿಂತನೆಗಳಾಗಲೀ ಯೋಜನೆಗಳಾಗಲೀ ಇಲ್ಲ. ವರ್ತಮಾನವೇ ಇವರ ಬದುಕು. ಇವತ್ತು, ಈ ಹೊತ್ತು ಬದುಕಿದರೆ ಸಾಕು. ನಾಳೆ ಎಂತೋ ಹೇಗೋ ಬಲ್ಲವರಾರು ? ಹುಟ್ಟಿಸಿದ ದೇವರು ಹುಲ್ಲು ಮೇಯಿಸುವುದಿಲ್ಲ - ಎನ್ನುವಂತಹ ಆಶಾವಾದ.

### ೨.೨ ಪಿಂಜಾರರು

ಈ ಮೇಲೆ ಮತ್ತು ಈ ಹಿಂದೆ ತಿಳಿಸಿದ ವಿವರಗಳಿಂದ ಪಿಂಜಾರರ ಕುರಿತಾದ ಸ್ಪಷ್ಟ ಚಿತ್ರವೊಂದನ್ನು ರೂಪಿಸಿಕೊಳ್ಳುವ ಅಗತ್ಯವಿದೆ. ಇವರ ಕಸುಬು ಮತ್ತು ಅದರಿಂದ ತಿಳಿಯಬಹುದಾದ ಇವರ ಸಾಮಾಜಿಕ, ಆರ್ಥಿಕ ಜೀವನದ ಕೆಲವು ಮುಖಗಳನ್ನು ಗುರುತಿಸುವ ಜೊತೆಗೆ ಇವರ ಒಟ್ಟು ಜೀವನಕ್ರಮಕ್ಕೆ ಹಿನ್ನೆಲೆಯಾಗಿರುವ ಇತಿಹಾಸವನ್ನು ತಿಳಿಯುವ ಕುತೂಹಲಕರ ಯತ್ನ ಮಾಡಬಹುದಾಗಿದೆ.

ಪಿಂಜಾರರನ್ನು **Microscopic Minority** ಎಂದು ಗುರುತಿಸಲಾಗುತ್ತವೆ ಎಂದು ಹಿಂದೆ ಸ್ಪಷ್ಟಪಡಿಸಲಾಗಿದೆ. ಭಾರತದ ಸಂದರ್ಭದಲ್ಲಿ ಈ '**Minority**' ಎಂಬ ಪದ ಸೃಷ್ಟಿಸಿರುವ ಗೊಂದಲ ಮತ್ತು ಅಸಹನೆಗಳೇನೇ ಇರಲಿ ಇದು ಒಂದು 'ರಾಜಕೀಯ ಪರಿಭಾಷೆ' ಎನ್ನುವುದು ಮಾತ್ರ ನಿಜ. ಈ ಪರಿಭಾಷೆಯನ್ನು ಅರ್ಥಮಾಡಿಕೊಳ್ಳಲು ಭಾರತದ ರಾಜಕೀಯ, ಸಾಮಾಜಿಕ ಇತಿಹಾಸದ ಕುರಿತಾಗಿ ಚಿಂತಿಸುವುದು ಅಗತ್ಯವಾಗಿದೆ.

ಕರ್ನಾಟಕದ ಮಟ್ಟಿಗೆ ಮಹ್ಮದೀಯರ ಇತಿಹಾಸ ೮೦೦ ವರ್ಷಗಳಷ್ಟು ಹಳೆಯದಾದುದು 3 ರಾಜಕೀಯ ಇತಿಹಾಸದಲ್ಲಿ ಸರ್ವಾಧಿಕಾರಿಗಳು, ನಿರಂಕುಶ ಪ್ರಭುಗಳು ತಮ್ಮ ರಾಜ್ಯ ವಿಸ್ತರಣೆಯ ಆಕಾಂಕ್ಷೆಯಲ್ಲಿ ಅನೇಕ ಬಗೆಯ ತಂತ್ರ, ಆಮಿಷ, ಕೊನೆಗೆ ಬಲಾತ್ಕಾರದ ಮೂಲಕ ಜನಸಮುದಾಯದ ಬದುಕಿನ ನೆಮ್ಮದಿಯನ್ನು ನಾಶಮಾಡಿದವರೆಂದೇ ಹೇಳಬೇಕು. ಇದು ಪರಸ್ಪರರ ನಡುವೆ ಯುದ್ಧ, ರಕ್ತಪಾತ, ಸುಲಿಗೆ, ಮೋಸ, ತಂತ್ರ - ಪ್ರತಿತಂತ್ರಗಳ ನಿರಂತರ ಪ್ರಯತ್ನದಲ್ಲಿ ಯಾವ ಧರ್ಮದವರೇ ಆಗಿರಲಿ, ಅವರು 'ಪ್ರಭು'ಗಳಾಗಿ ಮೆರೆದವರು ಜನಸಾಮಾನ್ಯರ ಬೆವರಿನಲ್ಲಿ ಮೈತೊಳೆದವರ ಇತಿಹಾಸ. ಸರ್ವಾಧಿಕಾರಿಯೊಬ್ಬನಿಗೆ ತನ್ನ ಧರ್ಮಕ್ಕಿಂತ ಮಿಗಿಲಾದುದು ರಾಜ್ಯದಾಹ. ಇದರೊಂದಿಗೆ ಧರ್ಮಮದವೂ ಸೇರಿಕೊಂಡಿತೆಂದರೆ ಅಲ್ಲಿನ ಆಡಳಿತ ಕ್ರೌರ್ಯದ ತಾರಕ ಸ್ಥಿತಿ ತಲುಪಿತೆಂದೇ ಅರ್ಥ. ಭಾರತವನ್ನಾಳಿದ ಅನೇಕ ಬಗೆಯ ರಾಜರುಗಳು ಹಾಗೆ ನಡೆದುಕೊಂಡದ್ದಿದೆ. ಆದುದರಿಂದ ಮಹ್ಮದೀಯ ರಾಜರುಗಳ ಆಡಳಿತದ ಸಂದರ್ಭದಲ್ಲಾದ ಅವಘಡಗಳಿಗೆಲ್ಲಾ ಮಹ್ಮದೀಯರು ಕಾರಣ ಎನ್ನುವಂತಹ ಇತಿಹಾಸದ ವಿಶ್ಲೇಷಣೆ ಅಪಾಯಕಾರಿಯಾದುದು. ಎಲ್ಲ ಧರ್ಮಗಳ ಹಾಗೆ ಮಹ್ಮದೀಯ ರಾಜರ ಕೆಂಗಣ್ಣಿಗೆ ಗುರಿಯಾದ ಸಾಮಾನ್ಯ ಮಹ್ಮದೀಯರಿರುವುದೂ ಸಾಧ್ಯ. ಆದ್ದರಿಂದ ಮಹ್ಮದೀಯರ ಇತಿಹಾಸವನ್ನು ಓದುವಾಗ ಮುಸಲ್ಮಾನರೆಲ್ಲಾ ಒಂದೇ ಎನ್ನುವಂತಹ ಹೋಲ್‌ಸೇಲ್ ಗ್ರಹಿಕೆಯಿಂದ ಮುಕ್ತರಾಗಿರಬೇಕಾಗುತ್ತದೆ.

ಇನ್ನು ಈ ಮಹ್ಮದೀಯ ರಾಜರುಗಳ ಆಗಮನದ ನಂತರದ ಕರ್ನಾಟಕದ ರಾಜಕೀಯ, ಸಾಮಾಜಿಕ ಚಿತ್ರಣ ಕುತೂಹಲಕರವಾಗಿದೆ. ಯಾಕೆಂದರೆ ಅದುವರೆಗೂ ಸಣ್ಣಪುಟ್ಟ ಪ್ರಾಂತ್ಯಗಳನ್ನು ಆಳಿಕೊಂಡಿದ್ದ, ಹಿಂದೂ ರಾಜರುಗಳಲ್ಲಿ ಪರಸ್ಪರ ದ್ವೇಷ, ಹಗೆತನಗಳಿದ್ದರೂ ಅದು ಅನ್ಯಧರ್ಮೀಯನ ಬಗೆಗಿರಬಹುದಾದಷ್ಟು ತೀವ್ರತರವಾಗಿರಲಿಲ್ಲ. ಅದು ಕೇವಲ ರಾಜ್ಯಾಕಾಂಕ್ಷೆಯ ಮಟ್ಟಿಗೆ ಸೀಮಿತವಾಗಿದ್ದು ಅವರ ನಡುವೆ ಏರ್ಪಡಬಹುದಾದ ಸಂಧಾನ ಅಥವಾ ಯುದ್ಧಗಳಲ್ಲಿ ವ್ಯಕ್ತಗೊಂಡು ಪರ್ಯವಸಾನಗೊಳ್ಳುತ್ತಿತ್ತು. ಆದರೆ ಮಹ್ಮದೀಯರ ಅದರಲ್ಲೂ ಮಹ್ಮದ್ ಗಝನಿಯಿಂದಾದ ಸೋಮನಾಥ ದೇವಾಲಯದ ಮೇಲಿನ ದಾಳಿ ಹಿಂದೂ ಮತಧರ್ಮದ ನಂಬಿಕೆಗೆ ಅತಿದೊಡ್ಡ ಆಘಾತವನ್ನು ನೀಡಿತಲ್ಲದೇ ಧರ್ಮ ಮತ್ತು ರಾಜಕಾರಣದ ಸಂಬಂಧವನ್ನು ಗಟ್ಟಿಗೊಳಿಸಿಬಿಟ್ಟಿತು. ಇದು ಇನ್ನೂ ಮುಂದುವರಿದು ಅನ್ಯಧರ್ಮಕ್ಕೆ ಸೇರಿದ ಸಾಮ್ರಾಟರ ರಾಜಕೀಯ ದಾಳಿಗಳನ್ನೆಲ್ಲಾ ಮತೀಯ ದಾಳಿಗಳೇ ಎಂಬಂತಹ ಪ್ರಲೋಭನೆಯನ್ನುಂಟು ಮಾಡಿತು. ಇದಕ್ಕೆ ಪೂರಕವೆಂಬಂತೆ ಮಹ್ಮದೀಯ ರಾಜರುಗಳ ರಾಜಕೀಯ ದಾಳಿಗಳಲ್ಲಿ ಮತೀಯ ಆಸಕ್ತಿಗಳು ಸೇರಿಕೊಂಡಿದ್ದವು ಎನ್ನುವುದನ್ನು ಮರೆಯುವಂತಿಲ್ಲ. ಹೀಗಾಗಿ ಸ್ಥಳೀಯವಾದ ಹಿಂದೂ ರಾಜರು ಶತಮಾನಗಳ ಕಾಲದ ಚಾತುರ್ವರ್ಣಗಳ ನೀತಿಯನುಸಾರವೇ ಆಡಳಿತ ನಡೆಸುತ್ತಿದ್ದಾಗ್ಯೂ ಈ ಬಗೆಗಿನ ಅಸಮಾಧಾನಕ್ಕಿಂತ ಅನ್ಯಧರ್ಮೀಯರ ದಾಳಿಗಳಿಗೆ ಪ್ರತ್ಯುತ್ತರ ನೀಡಬೇಕಾದ ಅಗತ್ಯವನ್ನು ಕಂಡುಕೊಂಡರು.

'ಮಲ್ಲಿಕಾಫರ್ ೧೩೧೨-೧೩ರಲ್ಲಿ ಕನ್ಯಾಕುಮಾರಿಯವರೆಗೂ ನಡೆಸಿದಂಥ ಭಯಂಕರ ದಾಳಿ ಇದೆಯಲ್ಲಾ ಆ ಸಂದರ್ಭದಲ್ಲಿ ದಿಕ್ಕೆಟ್ಟ ಹಿಂದೂ ದೊರೆಗಳು ವಿಜಯನಗರವನ್ನು ಕಟ್ಟಿಕೊಂಡದ್ದನ್ನು ನಾವು ನೆನಪು ಮಾಡಿಕೊಳ್ಳಬೇಕು. ೧೩೩೬ರ ಹೊತ್ತಿಗೇ ವಿಜಯನಗರ ಸ್ಥಾಪನೆಯಾಯಿತು. ಅಂದರೆ ಅಷ್ಟು ಹೊತ್ತಿಗಾಗಲೇ ಹಿಂದೂ ಸಂಘಟನೆಯ ಅಗತ್ಯ ಮತ್ತು ಅನಿವಾರ್ಯತೆಯನ್ನು ಆ ಕಾಲದ ಹಿಂದೂ ದೊರೆಗಳು ಗುರುತಿಸಿಕೊಂಡಿದ್ದರು. ಮಲ್ಲಿಕಾಫರನ ದಾಳಿ ನಡೆದ ಕಾಲು ಶತಮಾನದ ಒಳಗೇ ವಿಜಯನಗರದ ಸಾಮ್ರಾಜ್ಯ ಸ್ಥಾಪನೆಯಾಯಿತು ಎನ್ನುವುದನ್ನು ನಾವು ಗಮನಿಸಬೇಕು. ಆ ವಿಜಯನಗರವು ಹಿಂದೂ ಸಂಸ್ಕೃತಿಯನ್ನು ರಕ್ಷಿಸಿಕೊಳ್ಳುವ ಮತ್ತು ಅದಕ್ಕೆ ಒಂದು ಹೊಸ ಚೈತನ್ಯವನ್ನು ಕೂಡಿಸಿಕೊಳ್ಳುವ ಗುರಿಯುಳ್ಳ ಒಂದು ಸಾಮ್ರಾಜ್ಯವಾಯಿತು. ಅದೂ ಅಲ್ಲದೆ ವಿಜಯನಗರದ ಸಾಮ್ರಾಜ್ಯದ ಕಾಲದುದ್ದಕ್ಕೂ ಅದರ ಸುತ್ತಮುತ್ತ ಐದು ಬಹಮನೀ ರಾಜ್ಯಗಳಿದ್ದುದನ್ನು ಅಂದರೆ ಮಹಮ್ಮದೀಯ ರಾಜ್ಯಗಳಿದ್ದುದನ್ನು ಅವು ನಿರಂತರವಾಗಿ ವಿಜಯನಗರದೊಡನೆ ಕಾದಾಡುತ್ತ ಬಂದದ್ದನ್ನೂ ನಾವು ನೋಡುತ್ತೇವೆ' 4

ಪ್ರಾಯಶಃ ಕರ್ನಾಟಕದ ಇತಿಹಾಸದಲ್ಲಿ ಹೀಗೆ ಅನ್ಯಧರ್ಮೀಯರ ವಿರುದ್ಧ ಸಂಘಟನಾತ್ಮಕ ಹೋರಾಟ ನಡೆದದ್ದು ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ನಂತರವೇ ಇರಬೇಕು. ಅಂದರೆ ಯುದ್ಧ ಮತ್ತು ದಂಗೆಗಳ ಮೂಲಕವೇ ರಾಜ್ಯ ವಿಸ್ತರಣೆಯನ್ನು ಮಾಡುತ್ತಿದ್ದ ರಾಜರಲ್ಲಿ ಕೇವಲ ರಾಜಕೀಯಕ್ಕಿಂತ ಹೊರತಾದ ಭಾವನಾತ್ಮಕವಾದ ಪ್ರಲೋಭನೆಯನ್ನುಂಟುಮಾಡಬಹುದಾದ ಅನ್ಯಧರ್ಮೀಯರ ಆಗಮನ ಮತ್ತು ಆಕ್ರಮಣಗಳು ಅಂತಹದೊಂದು ಅವಶ್ಯಕತೆಯನ್ನು ಹುಟ್ಟುಹಾಕಿದವು. ಮುಖ್ಯವಾಗಿ ಮಹಮ್ಮದೀಯ ರಾಜರುಗಳಲ್ಲಿ ಕೆಲವರು ತಮ್ಮ ಸೈನ್ಯ ಬಲವನ್ನು ಹೆಚ್ಚಿಸಿಕೊಳ್ಳುವ ಸ್ಪಷ್ಟ ಉದ್ದೇಶಗಳಿಗಾಗಿ ಮತಾಂತರದಂತಹ ಕೆಲಸಕ್ಕೂ ಕೈ ಹಾಕಿದ್ದು ಇದೆಯಲ್ಲಾ ಅದು ಹಿಂದೂ ರಾಜರ 'ಸಂಘಟನೆ'ಗೆ ಕಾರಣವಾಗಿರಬೇಕು. ಈ ಸಂದರ್ಭದಲ್ಲಾದ ಮತಾಂತರಗಳಿಗೆ ನಿಖರವಾಗಿ ಇಂಥದ್ದೇ ಉದ್ದೇಶಗಳಿದ್ದವು ಎಂದು ಹೇಳುವ ಐತಿಹಾಸಿಕ ಆಧಾರಗಳಿಲ್ಲವಾದರೂ ಇಂಡಿಯಾದ ಧರ್ಮರಾಜಕಾರಣದ ವಿದ್ರೋಹದ ಇತಿಹಾಸವನ್ನು ಕುರಿತು ಆಲೋಚಿಸಬಲ್ಲವರಿಗೆ ಕೆಲವು ಕಾರಣಗಳು ಹೊಳೆಯದಿರಲಾರವು.

ಮಹಮ್ಮದೀಯರ ಆಗಮನದಿಂದ ಅಂದಿನ ಭಾರತೀಯ ಬದುಕಿನಲ್ಲಿ ಮುಖ್ಯವಾಗಿ ಯಾವ ವರ್ಗದಲ್ಲಿ ತಳಮಳ ಉಂಟಾಯಿತು ? ಎನ್ನುವುದು ಕುತೂಹಲಕರವಾಗಿದೆ. ಯಾಕೆಂದರೆ ರಾಜಸತ್ತೆಯ ದೀರ್ಘ ಪರಂಪರೆಯಲ್ಲಿ ನಲುಗಿಹೋದ ಭಾರತದ ಸಾಮಾನ್ಯರ ಪಾಲಿಗೆ ಮಹಮ್ಮದೀಯ ರಾಜನೂ ಒಂದೇ, ಹಿಂದೂ ರಾಜನೂ ಒಂದೇ ಆಗಿದ್ದನಲ್ಲವೇ ? ಯಾವ ಧರ್ಮದ ರಾಜನ ದರ್ಬಾರಿನಲ್ಲಿ ಸಾಮಾನ್ಯನೊಬ್ಬ ಪಂಡಿತನಾಗಿದ್ದ ? ದಿವಾನನಾಗಿದ್ದ ? ರಾಜಗುರುವಾಗಿದ್ದ ಉದಾಹರಣೆಗಳು ಸಿಗುತ್ತವೆ ? ಅವನಿಗೆ ತಾನು ವೈಯಕ್ತಿಕವಾಗಿ ಪಡೆದಿರಬಹುದಾದ ಧಾರ್ಮಿಕ ನಂಬಿಕೆಗಳಿಗಿಂತ ತನ್ನ ಮತ್ತು ತನ್ನವರ ಹೊಟ್ಟೆ

ಹೊರೆಯುವ ಸಲುವಾಗಿ ಅನಿವಾರ್ಯವಾಗಿ ಅನುಭವಿಸಬೇಕಾಗಿರುವ ಸ್ವಾಮಿ ನಿಷ್ಠೆಯೇ ಮುಖ್ಯವಾಗಿರಲಾರದೇ? ಈ 'ಸ್ವಾಮಿ ನಿಷ್ಠೆ'ಯು ಆರ್ಥಿಕ ಹಾಗೂ ಸಾಮಾಜಿಕ ಭದ್ರತೆಯನ್ನು ಒದಗಿಸುವಂತಹ ಸಂದರ್ಭದಲ್ಲಿ ಪಕ್ಷಾಂತರಕ್ಕೊಳಗಾಗಿರಲಾರದೇ ? ಈ ಅನುಮಾನಗಳಿಗೆ ಉತ್ತರ ಕಂಡುಕೊಳ್ಳುವುದು ಸಾಧ್ಯವಾದರೆ ಮಹಮ್ಮದೀಯರ ಆಗಮನದ ನಂತರದಲ್ಲಿ ಭಾರತೀಯ ಮನಸ್ಸು ತಳಮಳಗೊಂಡಿದ್ದರೆ ಅದು ಅಂದಿನ ಸಮಾಜದ ನಿರ್ದಿಷ್ಟ ವರ್ಗವೊಂದರಲ್ಲಿ ಮಾತ್ರ ಎನ್ನುವುದು ಸ್ಪಷ್ಟವಾಗುತ್ತದೆ. ಅದು ನಿಸ್ಸಂಶಯವಾಗಿ ಪುರೋಹಿತಶಾಹಿ ವರ್ಗ.

ಚರಿತ್ರೆಯಲ್ಲಿ ದಾಖಲಾಗದ ಈ ಬಗೆಯ ಅನುಮಾನಗಳನ್ನು ಇನ್ನಷ್ಟು ವಿಸ್ತಾರವಾಗಿ ನೋಡುವ ಅಗತ್ಯವಿದೆ. ಭಾರತಕ್ಕೆ ಒಟ್ಟು ಜನಸಮುದಾಯದ ನೆಲೆಯಲ್ಲಿ ಅಕ್ಷರದ ಇತಿಹಾಸವಿಲ್ಲ. ಸಾಕ್ಷರ ಸಂಪತ್ತನ್ನು ಅದು ಯಾಕೆ ಪುರೋಹಿತಶಾಹಿ ತನ್ನ ಸ್ವಂತದ ಆಸ್ತಿಯೆಂಬಂತೆ ಗುಟ್ಟಾಗಿ ನಿರ್ವಹಿಸಿಕೊಂಡು ಬಂದಿತು ಎನ್ನುವುದಕ್ಕೆ ಭಾರತೀಯ ಸಾಮಾಜಿಕ ಇತಿಹಾಸದಲ್ಲೇ ಉತ್ತರ ದೊರಕುತ್ತದೆ. ಯಾಕೆಂದರೆ 'ಸಮಾಜ'ದ ಇತರೆ ಮುಖಗಳಾದ ಆರ್ಥಿಕ ರಾಜಕೀಯ ಬದುಕಿಗೆ ಅಗತ್ಯವಾದ ನೀತಿ-ನಿಯಮಗಳನ್ನು ರೂಪಿಸುವ, ಆ ಮೂಲಕ ಸಮಾಜದ ಮೇಲೆ ಒಟ್ಟಾರೆ ನಿಯಂತ್ರಣವನ್ನು ಸ್ಥಾಪಿಸಿ ಸ್ವಾರ್ಥ ಸಾಧಿಸಿಕೊಳ್ಳುವ ಜಾಣತನವನ್ನು 'ಅಕ್ಷರ'ದೊಳಗೆ ಅಡಗಿಸಿಕೊಂಡ ಪುರೋಹಿತಶಾಹಿಯ ಈ ಬಗೆಯ ವಿದ್ರೋಹ ಇದೆಯಲ್ಲಾ, ಇದು ಭಾರತದ ಸಾಮಾನ್ಯನನ್ನು ನಿರಂತರವಾಗಿ ಶೋಷಣೆ ಮಾಡುತ್ತಲೇ ಬಂದುದರ ಚರಿತ್ರೆಯಾಗಿದೆ. ಇಲ್ಲೆಲ್ಲಾ 'ಸಾಮಾನ್ಯ' ಎಂದು ಬಳಸುತ್ತಿರುವ ಪದ ಸಮಾಜದ ಬಹುಸಂಖ್ಯಾತರೇ ಆದ ಕೆಳ-ಮಧ್ಯಮ ವರ್ಗದವರನ್ನು ಕುರಿತದ್ದು. ವರ್ಣಾಶ್ರಮ ವ್ಯವಸ್ಥೆಯಲ್ಲಿ ಮೇಲು ನೆಲೆಯಲ್ಲಿ ನಿಂತ ಅತ್ಯಲ್ಪ ಸಂಖ್ಯಾತರ, ಪುರೋಹಿತರ ಈ ಬಗೆಯ ಜಾಣತನದಿಂದಾಗಿ ಅಕ್ಷರ ಎನ್ನುವುದು ದುಡಿಯುವರ ಹತ್ತಿರ ಸುಳಿಯಲಾರದ 'ಗಗನಕುಸುಮ'ವಾಗಿಯೇ ಉಳಿಯುವಂತಾಯಿತು.

'ಅಕ್ಷರಕ್ಕೂ ಪಾವಿತ್ರ್ಯಕ್ಕೂ ಸಂಬಂಧ ಕಲ್ಪಿಸಿಕೊಂಡು ಬಂದುದು ಅಕ್ಷರ ಸಂಸ್ಕೃತಿ ಸಾರ್ವತ್ರಿಕವಾಗದಂತೆ ನೋಡಿಕೊಳ್ಳುವ ವರ್ಣಾಶ್ರಮ ವ್ಯವಸ್ಥೆಯ ಮೇಲು ನೆಲೆಯುವರ ಹುನ್ನಾರಗಳಲ್ಲಿ ಒಂದಾಯಿತು. ಸಂಸ್ಕೃತ ದೇವಭಾಷೆ, ಅದನ್ನು ಅಪವಿತ್ರಗೊಳಿಸುವಂತಿಲ್ಲ. ಕೆಳವರ್ಣ, ಕೆಳಜಾತಿಗಳವರು ವರ್ಣಾಶ್ರಮವನ್ನು ಸೃಷ್ಟಿಸಿದ 'ದೇವರ' ದೃಷ್ಟಿಯಲ್ಲಿಯೆ ಪವಿತ್ರರಲ್ಲ. ಆದ್ದರಿಂದ ಅವರು ಆ ಭಾಷೆಯನ್ನು ಕಲಿಯುವಂತಿಲ್ಲ. ಕಲಿಯುವುದೇ ಪಾಪ, ಪಾತಕ. ಒಂದೊಮ್ಮೆ ಕಲಿತರೂ ಸಂಸ್ಕೃತ ಭಾಷೆಯನ್ನು ಉಚ್ಚರಿಸುವುದಕ್ಕೆ ಕೆಳವರ್ಣ ಕೆಳಜಾತಿಗಳವರ ನಾಲಗೆ ಸರಿಯಾಗಿ ತಿರುಗುವುದಿಲ್ಲ; ತಪ್ಪಾಗಿ ಉಚ್ಚಾರಣೆ ಮಾಡಿದರೆ ಪಾಪ ಉಂಟಾಗುತ್ತದೆ - ಎಂಬಂಥ ಪಾಪ ಪುಣ್ಯಗಳ ಬೆದರುಗೊಂಬೆಗಳನ್ನು, ಮೂಢನಂಬಿಕೆಗಳನ್ನು ಸೃಷ್ಟಿಸಲಾಯಿತು. ಇದರಿಂದ ಸಂಸ್ಕೃತವನ್ನು ಆ ಮೂಲಕ ಅಕ್ಷರವನ್ನು ಕಲಿಯಬೇಕೆಂಬ ಅಪೇಕ್ಷೆಯೊ, ಪ್ರೇರಣೆಯೊ ಬಹುಸಂಖ್ಯಾತರಲ್ಲಿ ಹುಟ್ಟುವುದಕ್ಕೂ ಸಾಧ್ಯವಾಗದಂತಾಯಿತು. ವರ್ಣಾಶ್ರಮ ವ್ಯವಸ್ಥೆಯ ಮೇಲು ನೆಲೆಯಲ್ಲಿರುವ ಅಲ್ಪ

ಸಂಖ್ಯಾತರಿಗೆ ಮಾತ್ರ ಅಕ್ಷರಜ್ಞಾನ, ವಿದ್ಯಾಭ್ಯಾಸ ಎಂಬ ತತ್ವ, ನಂಬಿಕೆ ಸ್ಥಿರವಾಗುವಂತಾಯಿತು. ಲಿಖಿತ ದಾಖಲೆಗಳಲ್ಲಿ ಸಿಗುವ ಜ್ಞಾನ ಬಹುಸಂಖ್ಯಾತರಿಗೆ ನಿಗೂಢವಾಗಿಯೆ ಉಳಿದ ವಸ್ತುವಾಯಿತು. ವರ್ಣವ್ಯವಸ್ಥೆಯ ಮೇಲು ನೆಲೆಯವರಲ್ಲಿಯೂ ಜ್ಞಾನದ ವಿಷಯದಲ್ಲಿ ನಿಗೂಢತೆಯನ್ನು ಉಳಿಸಿಕೊಂಡು ಬರುವ ಪದ್ಧತಿಯೂ ಬೆಳೆದು ಬಂದಿತು. ಶಿಷ್ಯನಿಗೆ ಕೂಡ ತಾನು ಬಲ್ಲ ಎಲ್ಲ ವಿದ್ಯೆಗಳನ್ನೂ, ಜ್ಞಾನಗಳನ್ನೂ ಹೇಳಿಕೊಡಬಾರದು, ತಿಳಿಸಬಾರದು ಎಂಬ ಸಂಪ್ರದಾಯ ಬೆಳೆಯಿತು.

ರಾಜ್ಯ ಆಳುವ ಪ್ರಭುಗಳು ಇಲ್ಲವೆ ಕ್ಷತ್ರಿಯರು ಹಾಗೂ ಪುರೋಹಿತ ವರ್ಗದವರ ಸಂಬಂಧದಲ್ಲಿ ಧಾರ್ಮಿಕ ವಿಷಯಗಳಿಗೆ ಮಾತ್ರವಲ್ಲ, ಆಡಳಿತ ವ್ಯವಸ್ಥೆಯ ನೌಕರಶಾಹಿ ವರ್ಗದ ಸಂಬಂಧವೂ ಏರ್ಪಡುವಂತಾಯಿತು. ಕೆಳಜಾತಿ ಜನವರ್ಗಗಳ ಮೇಲೆ ಧಾರ್ಮಿಕ ವಿಷಯಗಳಲ್ಲಿ ಮಾತ್ರವಲ್ಲ ಆಡಳಿತದಲ್ಲಿಯೂ ಹಿಡಿತ ಇಟ್ಟುಕೊಳ್ಳುವಂತಾದ್ದರಿಂದ ಅಕ್ಷರ ಸಂಸ್ಕೃತಿಯೊಂದಿಗೆ ಕೂಡಿಕೊಳ್ಳುವ ಅವಕಾಶವೇ ಉಂಟಾಗದಂಥ ಶಾಪಗ್ರಸ್ತ ಸ್ಥಿತಿ ಬಹುಸಂಖ್ಯಾತರಾದ ಕೆಳಜಾತಿ, ಜನವರ್ಗಗಳ ಜನರಿಗೆ ಶಾಶ್ವತವಾಗಿ ಉಳಿದು ಬರುವಂತಾಯಿತು.

ವರ್ಣ ವ್ಯವಸ್ಥೆಯ ಮೇಲು ನೆಲೆಯಲ್ಲಿ ಇದ್ದವರು ಯಾಕೆ ಅಕ್ಷರ ಸಂಸ್ಕೃತಿಯನ್ನು ಏಕಸ್ವಾಮ್ಯದ ವಸ್ತುವನ್ನಾಗಿ, ಬಚ್ಚಿಡುವ ವಸ್ತುವನ್ನಾಗಿ ಮಾಡಿದರು ? ಈ ಪ್ರಶ್ನೆಗೆ ಒಂದೇ ಒಂದು ಉತ್ತರ, ಒಂದೇ ಒಂದು ಕಾರಣ ಇರಲಾರದು. ಹಿಂದಿನ ಕಾಲದಲ್ಲಿ ಈ ದೇಶದ ರಾಜ್ಯವ್ಯವಸ್ಥೆ ಅಥವಾ ರಾಜಕೀಯ ಪರಿಸ್ಥಿತಿಯಲ್ಲಿ ಯುದ್ಧ ಅನಿವಾರ್ಯವಾಗಿದ್ದಂತಹ ಸ್ಥಿತಿ ಇತ್ತು. ಹಲವಾರು ರಾಜ್ಯಗಳು, ರಾಜ ರಾಜರಲ್ಲಿ ವೈಮನಸ್ಯ ಪೈಪೋಟಿ, ಹೆಚ್ಚಿನ ಬಲಉಳ್ಳ ರಾಜನಿಗೆ ಮಹಾರಾಜನಾಗುವ, ಚಕ್ರವರ್ತಿಯಾಗುವ, ಸಾಮ್ರಾಟನಾಗುವ ಮಹತ್ವಾಕಾಂಕ್ಷೆ ಇತ್ಯಾದಿ ಕಾರಣಗಳಿಂದಾಗಿ ಸದಾ ಯುದ್ಧ ಸಿದ್ಧತೆಯಲ್ಲಿ ಇರಬೇಕಾಗಿತ್ತು. ಅಂದರೆ ಸಾಯುವುದಕ್ಕೆ ಸಿದ್ಧವಾಗುವಂಥ ಜನಬೇಕೆ ಆಗಿತ್ತು. ವೀರವನ್ನು, ಪರಾಕ್ರಮವನ್ನು ಒಂದು ಮೌಲ್ಯ ಎಂದು ಮಾಡಿದರು ; ಬಹಳ ಮಹತ್ವದ ಮೌಲ್ಯ ಎಂದು ಕೊಂಡಾಡಿದರು. ಅಕ್ಷರ ಜ್ಞಾನ ಉಳ್ಳವರು, ಮೇಲು ಜಾತಿ ಜನವರ್ಗಗಳವರು ಪರಮ ಪುರುಷಾರ್ಥವಾದ ಮೋಕ್ಷ ಪಡೆಯಬೇಕಾದರೆ ಅವರಿಗೆ ಜ್ಞಾನ ಮಾರ್ಗವೂ ಇತ್ತು. ಕೆಳಜಾತಿ ಜನವರ್ಗಗಳವರಿಗೆ ಆ ಮಾರ್ಗ ಇರಲಿಲ್ಲ. ಅವರಿಗೆ ಇದ್ದ ಪರ್ಯಾಯ ಮಾರ್ಗಗಳಲ್ಲಿ ಯುದ್ಧ ಮಾರ್ಗವೂ ಒಂದು ಎಂಬಂತೆ ಮಾಡಲಾಯಿತು. 5

ಇಂಥ ಹಿನ್ನೆಲೆಯಿರುವ ಭಾರತದ ಆಳುವ ವರ್ಗ (ಪರೋಹಿತಶಾಹಿ, ರಾಜಶಾಹಿ ಮತ್ತು ನೌಕರಶಾಹಿ) ಸಹಜವಾಗಿ ಮಹಮ್ಮದೀಯರ ಆಗಮನದಿಂದ ತಳಮಳಕ್ಕೀಡಾಗಿರಬೇಕು. ಮಹಮ್ಮದೀಯರ ಆಗಮನದ ನಂತರದಿಂದ ಬ್ರಿಟೀಷರ ಆಗಮನದವರೆಗಿನ ಭಾರತದ ಚರಿತ್ರೆಯನ್ನು ಗಮನಿಸಿದರೆ 'ಧರ್ಮ'ವನ್ನು ರಾಜಕಾರಣದೊಂದಿಗೆ ಗಟ್ಟಿಯಾಗಿ ತುರುಕಿದ ಚಿತ್ರ ಕಂಡುಬರುತ್ತದೆ. ಅಂದರೆ ಧಾರ್ಮಿಕ ಭಾವೋದ್ರೇಕದ ಮೂಲಕ ಮಾತ್ರವೇ ತಮ್ಮ ಪರಂಪರಾಗತ ಸುಖ-ಭೋಗದ

ಪದವಿಗಳನ್ನು ಕಾಪಾಡಿಕೊಳ್ಳುವುದು ಸಾಧ್ಯವಿತ್ತು. ಈ ಪದವಿಗಳನ್ನು ಹಾಗೆ ಉಳಿಸಿಕೊಳ್ಳಲು ಕಾರಣವಾದ ಮುಗ್ಧ ಜನಸಮುದಾಯ ಮುಹಮ್ಮದೀಯರ ನಾನಾ ಬಗೆಯ ಆಮಿಷಗಳಿಗೆ ಬಲಿಯಾಗಬಾರದೆಂದೇ ಈ ವರ್ಗ ಅಪೇಕ್ಷಿಸಿದ್ದಿರಬೇಕು. ಇದರ ಜೊತೆಗೆ 'ಸ್ವಾಮಿ ನಿಷ್ಠೆ'ಯನ್ನು ಒಂದು ಮೌಲ್ಯವೆಂಬಂತೆ ಬಿಂಬಿಸಿರುವ ಈ ವರ್ಣವ್ಯವಸ್ಥೆಯ ನಿರ್ಮಾಪಕರು ಅದನ್ನು ಅನಕ್ಷರಸ್ಥ ಜನಸಮುದಾಯದ ಕರ್ತವ್ಯವನ್ನಾಗಿ ಮಾತ್ರ ರೂಪಿಸಿರುವ ವಿಚಿತ್ರ ಕೂಡ ನಡೆದಿದೆ. ಈ ಪರಿಣಾಮವಾಗಿ 'ಸ್ವಾಮಿ ನಿಷ್ಠೆ' ಎನ್ನುವುದು ಪುರೋಹಿತಶಾಹಿಗೆ ಎಂದೂ ಕಾಡಿದಂತಿಲ್ಲ ಮತ್ತು ಆಳುವ ಯಾವ ರಾಜ ಬಂದರೂ ಅವರ ಸುಖ ಸಂಪತ್ತಿಗೆ ಧಕ್ಕೆಯಾಗಿಲ್ಲ. ಅವರ ಅಧಿಕಾರಕ್ಕೆ ಚ್ಯುತಿಯೊದಗಿಲ್ಲ. 'ಯಾವುದೇ ರಾಜ ಬರಲಿ, ಯಾವುದೇ ರಾಜ ಹೋಗಲಿ, ರಾಜ್ಯದ ಆಡಳಿತ ನಡೆಸಿಕೊಂಡು ಹೋಗುವ ನೌಕರ ಶಾಹಿಯ ಭಾಗಗಳಾಗಿ ಧಾರ್ಮಿಕ ಆಚರಣೆಗಳ ಹಕ್ಕುದಾರರಾಗಿ ಅಕ್ಷರ ಬಲ್ಲವರಾದ ವರ್ಣವ್ಯವಸ್ಥೆಯ ಮೇಲಿನ ನೆಲೆಯವರು ಇದ್ದೇ ಇರುತ್ತಾರೆ ಎಂಬಂಥ ಸ್ಥಿತಿ ಭಾರತ ದೇಶದ ಚರಿತ್ರೆಯ ಉದ್ದಕ್ಕೂ ನಡೆದುಕೊಂಡು ಬಂದಿದೆ' 6

ಮುಹಮ್ಮದೀಯ ರಾಜರುಗಳ ಅಪಾರವಾದ ಸೈನ್ಯ ನಡೆಸಿದ ದಾಳಿಯಿಂದ ಕಂಗೆಟ್ಟು ಹಿಂದೂ, ಪುರೋಹಿತಶಾಹಿ ಪದವಿ ನಾಶದ ಭಯದಲ್ಲಿ ಅನುಭವಿಸಿದ ತಳಮಳದಿಂದಾಗಿ ಅನುಸರಿಸಿದ ಮಾರ್ಗ ಹೊಂದಾಣಿಕೆಯದೇ ವಿನಾಃ ನೇರ ಸಂಘರ್ಷದ್ದಾಗಿರಲಿಲ್ಲ. ಸಶಸ್ತ್ರ ಹಿಂಸೆಯ ಎದುರು 'ಅಭಿಮಾನ' ಸೋತು ಶರಣಾಗುತ್ತದೆ ಮಾತ್ರವಲ್ಲ, ಜೀವ ಉಳಿಸಿಕೊಳ್ಳುವ ಎಚ್ಚರದ ದಾರಿಯನ್ನು ಆಯ್ಕೆ ಮಾಡಿಕೊಳ್ಳುತ್ತದೆ. ಇನ್ನೂ ಮುಂದುವರೆದು 'ಬಲ'ವನ್ನು ಹಾಡಿ ಹೊಗಳುತ್ತ ತನ್ನದೇ ಸಮುದಾಯದ ದೌರ್ಬಲ್ಯಗಳನ್ನು ಪರಿಚಯಿಸುತ್ತ ತಾನು ಮಾತ್ರ ಬದುಕುವ ಭಂಡತನವನ್ನು ಪ್ರದರ್ಶಿಸುತ್ತದೆ. ರಾಜಗುರುವಿನ ಮರ್ಯಾದೆ ಸಿಗುತ್ತದೆಂದಾದರೆ ಯಾವ ರಾಜನಾದರೇನು ? ಈ ಪುರೋಹಿತಶಾಹಿ ಹೀಗೆ ಅನೇಕ ಮುಹಮ್ಮದೀಯ ರಾಜರುಗಳ, ಅನಂತರ ಬ್ರಿಟೀಷರ ಆಡಳಿತದ ಸಂದರ್ಭದಲ್ಲಿ ಕೂಡ ಆ ಬಗೆಯ ಪದವಿಯನ್ನು ಅನುಭವಿಸಿದ ಉದಾಹರಣೆಗಳಿಲ್ಲವೇ ?

ಭಾರತೀಯ ಬದುಕಿನ ಪುರೋಹಿತಶಾಹಿ ನಿರ್ಮಾಣದ ವರ್ಣಾಶ್ರಮ ವ್ಯವಸ್ಥೆಯಲ್ಲಿ ಅನಕ್ಷರಸ್ಥ ಸಮುದಾಯದ ತಲ್ಲಣಗಳಿಗೆ 'ಆಕೃತಿ'ಯೇ ಇಲ್ಲದ ಹಾಗೆ ನೋಡಿಕೊಂಡ ಕ್ರೌರ್ಯದ ಪರಿಣಾಮವಾಗಿ ಅದರ ವಿರುದ್ಧ ಹುಟ್ಟಿದ ಬೌದ್ಧ, ಜೈನ ಧರ್ಮಗಳ ತಾತ್ವಿಕತೆ ಅನೇಕ ಕೆಳವರ್ಗದವರಿಗೆ ಆಕರ್ಷಣೆಯಾಗಿತ್ತೆನ್ನುವುದರಲ್ಲಿ ಸಂಶಯವಿಲ್ಲ. ಆದರೆ, ಕ್ರಮೇಣ ಬೌದ್ಧ, ಜೈನಧರ್ಮದ ನೆಲೆಗಳು ಹಿಂದೂ ಧಾರ್ಮಿಕ ನೆಲೆಗಿಂತ ಭಿನ್ನವಲ್ಲ ಎಂಬಂತೆ ಅಥವಾ ಹಿಂದೂ ಧಾರ್ಮಿಕ ಪ್ರಭಾವ ವಲಯದಿಂದಲೇ ರೂಪುಗೊಂಡಿರುವಂತಹವು ಎಂಬಂತೆ ಆ ಧರ್ಮಗಳ ಮೇಲೆ ವ್ಯವಸ್ಥಿತ ಉಪೇಕ್ಷೆಯನ್ನು ತೋರುತ್ತ ಬರಲಾಯಿತು. ಕೆಳಜಾತಿಯವನ ನೆಲೆಯಲ್ಲಿ ಬದಲಾವಣೆಯಾಗದೆ ನಿರಂತರ ಅಪಮಾನ ಮತ್ತು ಶೋಷಣೆಯಲ್ಲಿ ಅವನ ಬದುಕು ಜಡಗೊಂಡಿತು.

ಇಂಥ ಸಂದರ್ಭದಲ್ಲಿ ಮುಹಮ್ಮದೀಯ ರಾಜರು ನಡೆಸಿದ ರಾಜಕೀಯ ಸ್ವರೂಪದ ದಾಳಿಗಳು ಬರುಬರುತ್ತಾ ಮತೀಯ ಸ್ವರೂಪವನ್ನು ಪಡೆದುಕೊಳ್ಳುವ ಹೊತ್ತಿಗಾಗಲೇ ಕರ್ನಾಟಕದ ಮಟ್ಟಿಗೆ ವೀರಶೈವ ಚಳುವಳಿ ರೂಪಿಸಿದ ಸಾಮಾಜಿಕ ಸಮಾನತೆಯ ನೆಲೆಗಟ್ಟು ವೈದಿಕರ ತಾತ್ವಿಕ ನೆಲೆಗಳನ್ನು ಬಲವಾಗಿ ನಿರಾಕರಿಸಿತ್ತು. ಆ ಕಾರಣಕ್ಕಾಗಿ ಕೆಳವರ್ಗಗಳಿಗೆ ದನಿಯಾದ ಈ ಚಳುವಳಿ ಅಕ್ಷರ ಸಂಸ್ಕೃತಿಯನ್ನು ವಿಸ್ತರಿಸುವ ಮಹತ್ವದ ಕೆಲಸಕ್ಕೆ ಕೈ ಹಾಕಿಯಾಗಿತ್ತು. ಬಸವಣ್ಣನವರ ನೇತೃತ್ವದಲ್ಲಿ ನಡೆದ ಈ ಚಳುವಳಿ ಮನುಷ್ಯನ ನಡುವಿನ ಅವಮಾನಕರವೂ ಅಸಹಜವೂ ಆದ ಗೋಡೆಗಳನ್ನು ಕೆಡವಿ ಮನುಷ್ಯ ಪ್ರೀತಿಯ ಸಾಮಾಜಿಕ ವಾತಾವರಣ ನಿರ್ಮಾಣದ ಪ್ರಾಮಾಣಿಕ ಪ್ರಯತ್ನವನ್ನು ಆತ್ಮಶೋಧನೆಯ ನಿಷ್ಠುರ ಮಾರ್ಗದಲ್ಲಿ ತೋರಿಸಿಕೊಟ್ಟಿತು. ಆಕಾಶದಾಚೆ ಎಲ್ಲೋ ದೇವರ ಲೋಕವಿದೆ ಎಂದು ನಂಬಿಸಿದ ವೈದಿಕರ ಮಾತುಗಳು ಅಪ್ಪಟ ಸುಳ್ಳಾಗಿ ದೇವರು ಮನುಷ್ಯನ ಎದೆಯಲ್ಲೇ ಇರುವ, ದೇವರು ಮಾನವನೇ ಆಗಿರುವ, ದೇವರು ಮನುಷ್ಯರ ಜೊತೆಯಲ್ಲೇ ಬದುಕಿರುವ ಅಪೂರ್ವ ಸಾಧ್ಯತೆ ಈ ಚಳುವಳಿಯಿಂದಾಗಿ ಸಾಧ್ಯವಾಯಿತು. ದೇವರು ಧರ್ಮದಂತಹ ಸಂಗತಿಗಳು ವೈದಿಕರ ಕಾಲದಲ್ಲಿ ಕೆಲವೇ ಜನರಿಗೆ ಸೀಮಿತವಾಗಿದ್ದು, ವೀರಶೈವರ ಕಾಲದಲ್ಲಿ ಎಲ್ಲ ಬಗೆಯ ಜನರ ಹತ್ತಿರವೂ ದೇವರ ಕರುಣೆ ಪ್ರೀತಿ ಅಕ್ಷರಗಳು ಸುಳಿದಾಡತೊಡಗಿದವು. ಮಾತು ಬಾರದೇ ಇದ್ದ ಜನ ಮಾತನಾಡತೊಡಗಿದರು, ಬರೆಯತೊಡಗಿದರು. ವೈದಿಕರು ವ್ಯವಸ್ಥಿತವಾಗಿ ದೂರ ಇಟ್ಟಿದ್ದ ಹೆಣ್ಣು ಮಕ್ಕಳು, ಅಸ್ಪೃಶ್ಯರು ಸಮಾಜದ ಮುಖ್ಯ ಪ್ರವಾಹದಲ್ಲಿ ಸೇರಿದರು. ಸಮಾಜಕ್ಕೆ ಹೊಸದನಿಯನ್ನು, ಹೊಸ ಅನುಭವವನ್ನು ಪರಿಚಯ ಮಾಡತೊಡಗಿದರು. ಮಾನವ ನಿರ್ಮಿತವಾದ ಜಾತಿ, ಮಡಿಮೈಲಿಗೆಯ ಗಡಿಗೆರೆಗಳನ್ನು ದಾಟಿ ಮನುಷ್ಯನಿಗೆ ಹತ್ತಿರವಾಗುವ ಮೂಲಕ ವೀರಶೈವ ಚಳುವಳಿ ಸಾಮೂಹಿಕ ಆಂದೋಲನೇ ಆಗಿ ವೈದಿಕ ಮೂಲಭೂತವಾದಿಗಳ ಎದೆಯಲ್ಲಿ ತಲ್ಲಣ ಹುಟ್ಟಿಸತೊಡಗಿತು. ವೀರಶೈವ ಚಳುವಳಿಯ ಈ ಬಗೆಯ ತಾತ್ವಿಕ ಆಂದೋಲನದ ಆಶಯವನ್ನು ಅತ್ಯಂತ ಎಚ್ಚರದಿಂದ ಗಮನಿಸುತ್ತಿದ್ದಿರಬಹುದಾದ ವೈದಿಕ ಮನಸ್ಸು ಅಪೂರ್ವವಾದ ತಳಮಳವನ್ನು ಅನುಭವಿಸಿರಬಹುದೇ ಎನ್ನುವುದು ಕುತೂಹಲಕರವಾದ ವಿಷಯ. ಬೌದ್ಧರ ವಿರುದ್ಧ ವ್ಯವಸ್ಥಿತ ಹಲ್ಲೆ ನಡೆಸಿ, ಈ ನೆಲದಿಂದಲೇ ಅದನ್ನು ಗಡಿಪಾರು ಮಾಡುವಲ್ಲಿ ಯಶಸ್ವಿಯಾದ ವೈದಿಕರು ವೀರಶೈವರ ಈ ಆತ್ಮಶೋಧನೆಯ ಮತ್ತು ಸಮೂಹನಿಷ್ಠ ಪ್ರಯತ್ನಗಳಿಂದ ದಿಕ್ಕೆಟ್ಟಿದ್ದರೆ ಆಶ್ಚರ್ಯವಿಲ್ಲ. ಅದರಲ್ಲೂ ವೀರಶೈವ ಚಳುವಳಿ ಪಡೆದ ವ್ಯಾಪಕ ಜನಮನ್ನಣೆ ಮತ್ತು ಅದು ಹೆಣ್ಣು ಮಕ್ಕಳು, ಅಸ್ಪೃಶ್ಯರವರೆಗೂ ತನ್ನ ಕಾರ್ಯ ಚಟುವಟಿಕೆಯನ್ನು ವಿಸ್ತರಿಸಿಕೊಂಡಾಗಲಂತೂ ಶತಮಾನಗಳ ಕಾಲದಿಂದ ಅಚಲವಾಗಿ ಅನುಭವಿಸುತ್ತ ಬಂದ ತಮ್ಮ ಗೌರವದ ಸ್ಥಾನಮಾನಗಳನ್ನು ಕಳೆದುಕೊಳ್ಳುವ ಭಯದಲ್ಲಿ ತತ್ತರಿಸಿರಬಹುದಾದ ವೈದಿಕ ಮನಸ್ಸು ಒಳಗೊಳಗೇ ವೀರಶೈವರನ್ನು ಬಗ್ಗುಬಡಿಯುವ ಕಾರ್ಯತಂತ್ರವನ್ನು ರೂಪಿಸಿತ್ತೇ ಅನ್ನುವ ಆತಂಕ ವೀರಶೈವ ಚಳುವಳಿಯ ಒಟ್ಟಾರೆ ಸೋಲನ್ನು ಅರ್ಥಮಾಡಿಕೊಂಡರೆ ಸ್ಪಷ್ಟವಾಗುತ್ತದೆ. ಹೆಣ್ಣುಮಕ್ಕಳು ಮತ್ತು ಅಸ್ಪೃಶ್ಯರಿಗೆ ದನಿಕೊಟ್ಟು ಭಾರತೀಯ

ಇತಿಹಾಸದಲ್ಲಿ ಅಪರಿಚಿತವಾಗಿದ್ದ ಸಂವೇದನೆಗಳು ಮೊಟ್ಟಮೊದಲ ಬಾರಿಗೆ ದಾಖಲಾಗುವಂತೆ ಮಾಡಿದ ವೀರಶೈವರ ಆಂದೋಲನ ಹೊಸ ಸಂಸ್ಕೃತಿಯೊಂದರ ನಿರ್ಮಾಣದ ಕಲ್ಪನೆಗೆ ರೂಪುಕೊಡುತ್ತಿದ್ದಂತೆಯೇ ವೈದಿಕ ಮನಸ್ಸು ಪ್ರತಿ ಸಂಸ್ಕೃತಿ ನಿರ್ಮಾಣದ ಭೀತಿಯನ್ನು ಅನುಭವಿಸಿರಲಿಕ್ಕೂ ಸಾಕು.

ವೈದಿಕ ಮನಸ್ಸಿನ ಇಂತಹ ಚಾರಿತ್ರಿಕ ತಳಮಳವನ್ನು ನಾವು ಭಕ್ತಿ ಪಂಥದ ಸಂದರ್ಭದಲ್ಲಾದ ಸಾಹಿತ್ಯ ರಚನೆಯಲ್ಲಿ ಸೂಕ್ಷ್ಮವಾಗಿ ಗುರುತಿಸುವುದು ಸಾಧ್ಯವಿದೆ. ವೈದಿಕರ ಅಭೇದ್ಯ ಸೃಷ್ಟಿಯಾದ ಜಾತಿವ್ಯವಸ್ಥೆಯನ್ನು ಬುಡಮಟ್ಟ ಅಲ್ಲಾಡಿಸಹೊರಟಿದ್ದ ವೀರಶೈವ ಚಳುವಳಿಯು ನಿಶ್ಚಿತ ಸಾಧನೆಯ ಘಟ್ಟವನ್ನು ತಲುಪುತ್ತಿದ್ದಂತೆಯೇ ಮುಸ್ಲಿಮರ ಆಕ್ರಮಣಕ್ಕೆ ಭಾರತ ಒಳಗಾಯಿತು. ಮುಸ್ಲಿಮರ ಆಕ್ರಮಣ ಎಂದೂ ಇಲ್ಲದ ಆಂತಕದಲ್ಲಿದ್ದ ವೈದಿಕರ ಪಾಲಿಗೆ ವರವಾಯಿತು. ಮೊದಲೇ ತಮ್ಮ ಧರ್ಮರಕ್ಷಣೆಗಾಗಿ ಒಳಗೊಳಗೆ ತಂತ್ರಗಳನ್ನು ರೂಪಿಸುತ್ತಿದ್ದವರು ಮುಸ್ಲಿಮರ ಆಕ್ರಮಣದ ನೆವದಲ್ಲಿ ಹಿಂದೂ ಧರ್ಮದ ಪುನರ್ ಸಂಸ್ಥಾಪನೆಯ ಅಗತ್ಯವನ್ನು ಆವೇಶಭರಿತವಾಗಿ ಪ್ರತಿಪಾದಿಸುತ್ತಾ 'ಹಿಂದೂ' ಕಲ್ಪನೆಯಲ್ಲಿ ಜನರನ್ನು ಸಂಘಟಿಸಲು ತೊಡಗಿದರೆನ್ನಬಹುದು. ಇದರ ಸಾಕಾರರೂಪವೇ ವಿದ್ಯಾರಣ್ಯರ ಕೂಸಾದ ವಿಜಯನಗರದ ಸ್ಥಾಪನೆ. ವೈದಿಕರ ತಳಮಳವನ್ನು ಸೂಕ್ಷ್ಮವಾಗಿ ಗ್ರಹಿಸಬಲ್ಲವರಿಗೆ ವಿಜಯನಗರದ ಸ್ಥಾಪನೆ ಕೇವಲ ಸಾಮ್ರಾಜ್ಯವೊಂದರ ಅಗತ್ಯದ ಉದ್ದೇಶದಿಂದ ಕೂಡಿತ್ತು ಎಂದೆನಿಸುವುದು ಸಾಧ್ಯವಿಲ್ಲ. ಅಲ್ಲದೆ 'ಹಿಂದೂ' ಕಲ್ಪನೆಯಲ್ಲಿ ಜನಸಾಮಾನ್ಯರನ್ನು ಸಂಘಟಿಸುವುದು ಸುಲಭವೂ ಆಗಿದ್ದುದರಿಂದ ಮತ್ತು ಒಬ್ಬ ಅಸ್ಪೃಶ್ಯ ಕೂಡ ತನ್ನೆಲ್ಲ ಬಗೆಯ ಅವಮಾನಗಳನ್ನು ಬದಿಗಿಟ್ಟು ಮುಸ್ಲಿಮರನ್ನು ಎದುರಿಸುವ ಸಂದರ್ಭದಲ್ಲಿ ತಾನೂ 'ಹಿಂದೂ' ಎಂಬ ಉದ್ರೇಕದ ಭಾವನೆಯಿಂದಲೇ ಮುಂದಾಗುವುದರಿಂದ ವೈದಿಕರಿಗೆ ಏಕಕಾಲದಲ್ಲಿ ಎರಡು ಉದ್ದೇಶಗಳನ್ನು ಈಡೇರಿಸಿಕೊಳ್ಳುವುದು ಮುಸ್ಲಿಮರ ಆಕ್ರಮಣದಿಂದ ಸಲೀಸಾಯಿತು. ಅಂದರೆ ಮುಸ್ಲಿಮರನ್ನು ತಾವು ಅನೂಚಾನವಾಗಿ ಕಾಪಾಡಿಕೊಂಡು ಬಂದ ಸೇವಕವರ್ಗದಿಂದಲೇ ಎದುರಿಸುವುದು, ಆ ಮೂಲಕ ತಮ್ಮ ಪಾರಂಪಾರಿಕ ಸ್ಥಾನಮಾನಗಳನ್ನು ಪುನರ್ ಸಂಪಾದಿಸುವುದು ಅಥವಾ ಮುಂದುವರೆಸಿಕೊಂಡು ಹೋಗುವುದು ವೈದಿಕರ ಆಳದ ಉದ್ದೇಶಗಳಾಗಿರುವುದು ಸಾಧ್ಯವಿದೆ. ಈ ಪ್ರಯತ್ನ ನಿಸ್ಸಂದೇಹವಾಗಿಯೂ ಜಾತಿಪದ್ಧತಿಯನ್ನು, ಅಸ್ಪೃಶ್ಯತೆಯನ್ನು ಎಂದಿನ ಉಗ್ರನಿಷ್ಠೆಯಿಂದಲೇ ಕಾಪಾಡಿಕೊಂಡು ಹೋಗುವ ವೈದಿಕರ ದೂರಾಲೋಚನೆಯಲ್ಲಿರುವ ವಿಕೃತ ಲಕ್ಷಣವಾಗಿದೆ.

ಪಿಂಜಾರರ ಸಾಮಾಜಿಕ ನೆಲೆಯನ್ನು ಈ ಎಲ್ಲ ಬಗೆಯ ತಳಮಳಗಳ ನಡುವೆ ಕಂಡುಕೊಳ್ಳಬೇಕಾದ ಅನಿವಾರ್ಯತೆಯಿದೆ. ಸಾವಿರಾರು ವರ್ಷಗಳ ಪುರೋಹಿತಶಾಹೀ ವ್ಯವಸ್ಥೆಯೊಳಗೆ ಕ್ರಿಮಿ-ಕೀಟಗಳಂತೆ ಬದುಕಿದ ಶೂದ್ರರು ಮತ್ತು ಮಹಮ್ಮದೀಯ ರಾಜರುಗಳ ಆಗಮನದ ನಂತರ ಸ್ವತಃ ಪುರೋಹಿತಶಾಹಿ

ವರ್ಗಗಳು ಅನುಭವಿಸಿದ ತಳಮಳ ಹಾಗೂ ಕಂಡುಕೊಂಡ ಪರಿಹಾರಗಳನ್ನು ಪಿಂಜಾರರ ಸಾಮಾಜಿಕ ನೆಲೆಯನ್ನು ಸ್ಪಷ್ಟಪಡಿಸಿಬಿಡುತ್ತದೆ. ಇದು ಒಟ್ಟು ಸಮುದಾಯವೇ ಬೇರೆ ಬೇರೆ ಕಾರಣಗಳಿಗಾಗಿ ಹತಾಶೆಯನ್ನು ಅನುಭವಿಸಿದ ಕಾಲವಾಗಿತ್ತು. ಆಧ್ಯಾತ್ಮಿಕ ಹಾಗೂ ಧಾರ್ಮಿಕ ನೆಲೆಗಳ ನೀತಿ ನಿರೂಪಣೆಗಳ ಮೂಲಕವೇ ಸಮಾಜವನ್ನು ನಿಯಂತ್ರಿಸುತ್ತಿದ್ದ ದೀರ್ಘಾವಧಿ ಪರಂಪರೆ ಅದೇ ಕಾರಣಕ್ಕೆ ಸಡಿಲಗೊಳ್ಳುತ್ತಿದ್ದ ಕಾಲ ಅದು. ಎಲ್ಲಾ ವರ್ಗಗಳ ತೀರ ಲೌಕಿಕ ಎನಿಸುವಂತಹ ನೆಮ್ಮದಿಗಾಗಿ ಸಾಮಾಜಿಕ ಸುಧಾರಣೆಯ ಕಾರ್ಯಕ್ರಮಗಳಿಗಾಗಿ ಹಾತೊರೆಯುತ್ತಿದ್ದಂತಹ ಕಾಲ ಅದು. ಇದರ ಹೊರತಾಗಿ ಎಲ್ಲ ಬಗೆಯ ಲೌಕಿಕ ಬಂಧನಗಳನ್ನು ಮೀರಿ ಮನುಷ್ಯ ಮತ್ತು ದೈವದ ನಡುವಿನ ಸಂಬಂಧವನ್ನು ಮಾನವೀಯತೆಯ ಅನಂತ ಪ್ರೇಮದ ನೆಲೆಯಲ್ಲಿ ಸಾಕ್ಷಾತ್ಕರಿಸಿಕೊಳ್ಳುವ, ಲೌಕಿಕ ಬದುಕಿನ ನಶ್ವರತೆಯನ್ನು ಸಾರುತ್ತಲೇ ಆ ಬದುಕಿನ ಗೂಢಾತಿಗೂಢಗಳನ್ನು ಅನ್ವೇಷಿಸುವ ಪ್ರಯತ್ನದ ಸೂಫಿಗಳು ಹುಟ್ಟಿಕೊಂಡ ಕಾಲ ಅದು. ಹಾಗಾಗಿ ಇಸ್ಲಾಂನ ಆಗಮನ ಏಕಕಾಲಕ್ಕೆ ಅನೇಕ ಸ್ತರಗಳಲ್ಲಿ ಅನೇಕ ಬಗೆಯ ತಳಮಳಗಳಿಗೆ ಕಾರಣವಾಯಿತು.

ಭಾರತದಲ್ಲಿ ಬೌದ್ಧ ಕ್ರಾಂತಿಯನ್ನು ಸೋಲಿಸಲಾಗಿಲ್ಲ. ಅದರ ಆಂತರಿಕ ದೌರ್ಬಲ್ಯಗಳಿಂದಾಗಿ ಅದು ತಪ್ಪುದಾರಿಯಲ್ಲಿ ನಡೆಯಿತು. ಸಾಮಾಜಿಕ ಶಕ್ತಿಗಳು ಕ್ರಾಂತಿಯನ್ನು ವಿಜಯದತ್ತ ಕೊಂಡೊಯ್ಯುವಷ್ಟು ಪ್ರೌಢವಾಗಿರಲಿಲ್ಲ. ತತ್ಪರಿಣಾಮವಾಗಿ ಬೌದ್ಧ ಧರ್ಮದ ಪತನದ ಬಳಿಕ ದೇಶವು ಇನ್ನಷ್ಟು ಆರ್ಥಿಕ ದುಸ್ಥಿತಿಯನ್ನು ತಲುಪಿತು. ಮಾತ್ರವಲ್ಲ, ರಾಜಕೀಯ ದಮನ, ಬೌದ್ಧಿಕ ಅರಾಜಕತೆ ಮತ್ತು ಆಧ್ಯಾತ್ಮಿಕ ಗೊಂದಲ ಹೆಚ್ಚಿತು. ಪ್ರಾಯೋಗಿಕವಾಗಿ ಸಂಪೂರ್ಣ ಸಮಾಜವೇ ಅವನತಿ ಹಾಗೂ ವಿಚ್ಛಿದ್ರತೆಯ ಪ್ರಕ್ರಿಯೆಗೆ ಒಳಗಾಗಿತ್ತು.

ಈ ಕಾರಣದಿಂದಾಗಿಯೇ ಕೇವಲ ಶೋಷಿತ ಸಮುದಾಯ ಮಾತ್ರವಲ್ಲ, ಮೇಲ್ವರ್ಗ ಕೂಡ ಇಸ್ಲಾಮಿನ ಧ್ವಜದ ಹಿಂದೆ ನಡೆಯಿತು. ಶೋಷಿತ ಸಮುದಾಯಕ್ಕೆ ರಾಜಕೀಯ ಸ್ವಾತಂತ್ರ್ಯವಲ್ಲದಿದ್ದರೂ ಸಾಮಾಜಿಕ ಸಮಾನತೆಯ ಭರವಸೆಯನ್ನು ಇಸ್ಲಾಂ ನೀಡಿತು. ಮೇಲ್ವರ್ಗವೂ ಸ್ವಹಿತಸಾಧನೆಯ ಉದ್ದೇಶವಿಲ್ಲದೆ ವಿದೇಶಿ ಆಕ್ರಮಣಕಾರ ಸೇನೆಗೆ ನಿಂತಿತು. ಇದರರ್ಥ ಸ್ಪಷ್ಟವಿದೆ - ಇಡೀ ಜನ ಸಮುದಾಯ ಹತಾಶೆಯ ಸ್ಥಿತಿಯಲ್ಲಿತ್ತು, ಮೇಲ್ವರ್ಗವಂತೂ ಪೂರ್ಣವಾಗಿ ಕಳೆಗುಂದಿದ ಸ್ಥಿತಿಯಲ್ಲಿತ್ತು.

ಭಾರತದಲ್ಲಿ ಇಸ್ಲಾಮಿನ ಪ್ರಸಾರದ ಕುರಿತು, ಪುರಾತನ ಹಿಂದೂ ಸಂಸ್ಕೃತಿಯ ಕಟ್ಟಾ ಬೆಂಬಲಿಗನಾಗಿದ್ದ, ಇಸ್ಲಾಮಿನ ಬಗ್ಗೆ ಎಳ್ಳಷ್ಟು ಸಹಾನುಭೂತಿ ಹೊಂದಿರದ ಹ್ಯಾವೆಲ್ ಈ ರೀತಿ ಬರೆಯುತ್ತಾನೆ, ಇಸ್ಲಾಮನ್ನು ಅನುಸರಿಸಿದವರು ಕುರಾನ್‌ನ ಆಳ್ವಿಕೆ ಇರುವ ನ್ಯಾಯಾಲಯಗಳಲ್ಲಿ ಮುಸಲ್ಮಾನ ಪ್ರಜೆಗಿರುವ ಎಲ್ಲಾ ಹಕ್ಕುಗಳನ್ನು ಹೊಂದಿದರು. ಈ ರೀತಿಯ ಪರಮತಾವಲಂಬನೆ ಹಿಂದೂಗಳಲ್ಲಿನ ಕೆಳಜಾತಿಗಳಲ್ಲಿ, ಅದರಲ್ಲೂ ಮುಖ್ಯವಾಗಿ ಬ್ರಾಹ್ಮಣ್ಯದ ಕಟ್ಟಳೆಗಳಿಂದ ಶೋಷಣೆಗೊಳಗಾಗಿದ್ದ ಅಪವಿತ್ರ ವರ್ಗಗಳಲ್ಲಿ ಬಹಳ ಪರಿಣಾಮಕಾರಿಯಾಯಿತು (ಆರ್ಯನ್ ರೂಲ್ ಇನ್ ಇಂಡಿಯಾ).

'ಇದು ಬ್ರಾಹ್ಮಣ್ಯದ ಕಟ್ಟಳೆಗಳ ಪರಿಪೂರ್ಣತೆಯಲ್ಲಿ, ದೃಢ ನಂಬಿಕೆಯಿದ್ದ ವ್ಯಕ್ತಿಯೊಬ್ಬನ ಶ್ಲಾಘನೆಯ ಮಾತುಗಳು ಖಂಡಿತಾ ಅಲ್ಲ. ಮುಹಮ್ಮದೀಯರ ಆಕ್ರಮಣದ ವೇಳೆ ಭಾರತೀಯ ಜನಸ್ತೋಮಕ್ಕೆ ಬ್ರಾಹ್ಮಣ್ಯದ ಸಂಪ್ರದಾಯಗಳು ನಿಯಂತ್ರಿಸುತ್ತಿದ್ದ ಹಿಂದೂ ಕಾನೂನು ಕಟ್ಟಳೆಗಳಿಗೆ ನಿಷ್ಠರಾಗಿರಲು ಯಾವುದೇ ಕಾರಣಗಳೂ ಇರಲಿಲ್ಲ. ಬದಲಾಗಿ ಹೆಚ್ಚು ಸಮಾನತೆಯ ಕಾನೂನುಗಳಿದ್ದ, ವಿಜೇತ ಹಿಂದೂ ಪ್ರತಿಗಾಮಿಗಳ ಹಿಂಸೆಯಿಂದ ರಕ್ಷಣೆ ನೀಡುತ್ತಿದ್ದ ಇಸ್ಲಾಮಿನ ಪರಂಪರೆಯನ್ನು ಒಪ್ಪಿಕೊಳ್ಳಲು ಅವರು ಸಿದ್ಧರಾಗಿಯೇ ಇದ್ದರು. 'ಭಾರತದಲ್ಲಿ ಇಸ್ಲಾಮಿಗೆ ಅತ್ಯಂತ ಹೆಚ್ಚು ಮತಾಂತರವಾಗಲು ಇಸ್ಲಾಮಿನ ತತ್ವಶಾಸ್ತ್ರ ಕಾರಣವಾಗಿರಲಿಲ್ಲ. ಬದಲಾಗಿ ಸಾಮಾಜಿಕ ಕಾರ್ಯಕ್ರಮಗಳೇ ಕಾರಣ'...... ಪ್ರವಾದಿಯ ಸಾಮಾಜಿಕ ಕಾರ್ಯಕ್ರಮಗಳು ಪ್ರತಿಯೊಬ್ಬ ಇಸ್ಲಾಂ ವಿಶ್ವಾಸಿಗೂ ಸಮಾನ ಆಧ್ಯಾತ್ಮಿಕ ಸ್ಥಾನಮಾನಗಳನ್ನು ನೀಡಿದವು. ಇವು ಇಸ್ಲಾಮನ್ನು ಒಂದು ರಾಜಕೀಯ ಹಾಗೂ ಸಾಮಾಜಿಕ ತತ್ವವಾಗಿಸಿ ಸಾಮ್ರಾಜ್ಯವಾದಿ ಗುರಿಯನ್ನು ಒದಗಿಸಿತು. ಜಗತ್ತನ್ನು ಇದ್ದಂತೆಯೇ ಸ್ವೀಕರಿಸಿ ಸಂತೋಷ ಹೊಂದುವ ಸಾಮಾನ್ಯ ಮಾನವೀಯತೆಯುಳ್ಳ ಜೀವನದ ನಿಯಮವೇ ಇಸ್ಲಾಂ. ಉತ್ತರ ಭಾರತದಲ್ಲಿ ಬೌದ್ಧ ಕ್ರಾಂತಿ ಹಾಗೂ ಸಂಪ್ರದಾಯವಾದಿ ಬ್ರಾಹ್ಮಣ್ಯದ ಸಂಘರ್ಷ ನಡೆಯುತ್ತಿದ್ದ ಕಾಲಘಟ್ಟದಲ್ಲಿ ಇಸ್ಲಾಂ ತನ್ನ ರಾಜಕೀಯ ಬಲದ ಉನ್ನತ ಶೃಂಗವನ್ನು ತಲುಪಿತು'7 (ಆರ್ಯನ್ ರೂಲ್ ಇನ್ ಇಂಡಿಯಾ).

ಇಸ್ಲಾಂ ಸ್ವೀಕರಿಸುವುದರಿಂದ ದತ್ತವಾಗಬಹುದಾದ ಸಾಮಾಜಿಕ ಸಮಾನತೆ ಮತಾಂತರಕ್ಕಿರುವ ಬಹುಮುಖ್ಯವಾದ ಕಾರಣವಾಗಿದೆ. ಸಮಾನತೆಯಿಂದ ದೂರವುಳಿದು ಸಾವಿರಾರು ವರ್ಷಗಳ ಅಪಮಾನದಲ್ಲಿ ಬದುಕುತ್ತಾ ಬಂದ ಜನಾಂಗಗಳು ಇಸ್ಲಾಂ ಸ್ವೀಕಾರವನ್ನು ಬಿಡುಗಡೆಯ ಸಂಕೇತವೆಂದು ಭಾವಿಸಿರಲಿಕ್ಕೂ ಸಾಕು. ಸಾಮ್ರಾಜ್ಯಶಾಹಿಗಳಾಗಿ ಭಾರತವನ್ನು ಪ್ರವೇಶಿಸಿದ ಮುಹಮ್ಮದೀಯ ಪ್ರಭುಗಳು ಧರ್ಮ ಪ್ರಸಾರದ ವಿಷಯದಲ್ಲಿ ಯಾವ ಪ್ರಮಾಣದ ಶ್ರದ್ಧೆಯನ್ನು ಪ್ರಕಟಿಸುತ್ತಿದ್ದರು ಎಂದು ಹೇಳಲು ಬರುವುದಿಲ್ಲ. ಎಲ್ಲ ಸಂದರ್ಭದಲ್ಲಿಯೂ ಆಳುವವನ ರಿಸ್ಕ್ ಇದೆಯಲ್ಲಾ, ಅದು ತನ್ನ ಪದವಿಗೆ ಒದಗುವ ಅಡ್ಡಿ ಆತಂಕಗಳಲ್ಲಿಯೇ ಅದನ್ನು ಉಳಿಸಿಕೊಳ್ಳುವ ದಾರಿಗಳ ಕುರಿತಾಗಿ ಕ್ರಿಯಾಶೀಲವಾಗಿರುತ್ತದೆ. ಅದಕ್ಕೆ ಮಾನವೀಯ ಸಂವೇದನೆಗಳ ತುಡಿತ-ಮಿಡಿತಗಳಾಗಲೀ, ಆಧ್ಯಾತ್ಮಿಕ ಆಶಯಗಳಾಗಲೀ ಆ ಪ್ರಮಾಣದಲ್ಲಿ ಕಾಡುವುದಿಲ್ಲ.

ಸಾಮ್ರಾಜ್ಯಶಾಹೀ ಪರಂಪರೆಯಲ್ಲಿ ನಿರಂತರ ಯುದ್ಧವೇ ನೀತಿ. ಯುದ್ಧಕ್ಕೆ ಅವಶ್ಯಕವಾದ ಸೇನೆಯನ್ನು ಸದಾ ಸನ್ನದ್ಧವಾಗಿ ಇಡಬೇಕಾದ ಪ್ರಭುತ್ವ ತನ್ನ ರಾಜ್ಯಾಧಿಕಾರದ ಅಸ್ತಿತ್ವವನ್ನು ಸೈನ್ಯದ ಮೂಲಕವೇ ಕಾಪಾಡಿಕೊಳ್ಳುತ್ತಿತ್ತು. ರಾಜ್ಯಾಧಿಕಾರ ನಿರ್ವಹಣೆಯಲ್ಲಿ ಮತ್ತು ವಿಸ್ತರಣೆಯಲ್ಲಿ ಮುಖ್ಯ ಜವಾಬ್ದಾರಿ ಹೊತ್ತು, ಆ ನಿಷ್ಠೆಗಾಗಿ ಪ್ರಾಣ ಕಳೆದುಕೊಳ್ಳಲೂ ತಯಾರಿದ್ದ ಸೈನಿಕರಿಗೆ ಅಗತ್ಯವಿದ್ದ ಎಲ್ಲಾ ಬಗೆಯ ಆರ್ಥಿಕ, ಸಾಮಾಜಿಕ ಪರಂಪರೆಯಲ್ಲಿ 'ಧರ್ಮ' ಎನ್ನುವುದು ಪ್ರಭುತ್ವದ ಪ್ಪ

ಸಮಾನವಾದುದಾಗಿತ್ತೇ ? ಅಥವಾ ಧರ್ಮದ ಸೋಗು ಹಾಕಿ ಸಾಮಾಜಿಕ ಬದುಕಿಗೆ ಕಟ್ಟಳೆಗಳ ಬೇಲಿ ಹಾಕಲಾಗಿತ್ತೇ ? ಧರ್ಮವನ್ನು ಬೆದರುಬೊಂಬೆಯ ಹಾಗೆ ನಿಲ್ಲಿಸಿ ಸಮುದಾಯದಲ್ಲಿ ಭಯವನ್ನು ತುಂಬಲಾಗಿತ್ತೇ? ಎಂದು ಆಲೋಚಿಸಿದರೆ ಭಾರತೀಯ ಇತಿಹಾಸ ಧರ್ಮವನ್ನು ರಾಜಕಾರಣದ ಉದ್ದೇಶಗಳಿಗೆ ಬಳಸಿಕೊಂಡದ್ದು ತಿಳಿಯುತ್ತದೆ. ಮತ್ತು ಧರ್ಮದ ರಚನೆಯ ಒಳಗೇ ರಾಜಕೀಯ ಹಿತಾಸಕ್ತಿಗಳ ಸಂರಚನೆಯಿರುವುದು ಕಂಡು ಬರುತ್ತದೆ.

ಧರ್ಮ ಮತ್ತು ರಾಜಕಾರಣದ ಈ ಸ್ವರೂಪವೇ ಭಾರತದಲ್ಲಿ ಮಹಮ್ಮದೀಯ ರಾಜರುಗಳು ಮತಾಂತರಕ್ಕೆ ಕೈಹಾಕಲು ಕಾರಣವಾಗಿದೆ. ಮಹಮ್ಮದೀಯ ರಾಜರುಗಳ ಆಡಳಿತದ ಸಂದರ್ಭದಲ್ಲಿ ಉಂಟಾದ ಮತಾಂತರವನ್ನು ನಮ್ಮ ಇತಿಹಾಸಕಾರರು ವಿಶ್ಲೇಷಿಸುವ ರೀತಿ ಅಪಾಯಕಾರಿಯಾದುದು. ಅದರಲ್ಲೂ ಸ್ವಾತಂತ್ರ್ಯ ನಂತರದ ದಿನಗಳಲ್ಲಿ ಈ ಮತಾಂತರವನ್ನು ಕುರಿತಂತೆ ನಡೆಯುವ ವಾದ-ವಿವಾದಗಳು ನೇರವಾಗಿ ಮಹಮ್ಮದೀಯ ರಾಜರನ್ನು ಗುರಿಯಾಗಿಸಿಕೊಂಡಿರುತ್ತವೆ. ಅಲ್ಲದೆ ಆ ನೆವದಲ್ಲಿ ಇಡೀ ಮಹಮ್ಮದೀಯ ಜನ ಸಮುದಾಯವನ್ನು ತೀವ್ರವಾದ ಸಂಶಯದಿಂದ ನೋಡಲಾಗುತ್ತಿದೆ.

ಹಿಂದಿನ ಸಮೀಕ್ಷೆ ಮತ್ತು ಈವರೆಗಿನ ಅಧ್ಯಯನದಿಂದ ತಿಳಿದುಬರುವಂತೆ ಮಹಮ್ಮದೀಯ ರಾಜರ, ಕೆಲವರ ಆಡಳಿತಾವಧಿಯಲ್ಲಿ ನಡೆದಿರಬಹುದಾದ ಮತಾಂತರಕ್ಕೆ ಒಳಗಾದವರು ಯಾರು ? ಎನ್ನುವುದು ಸ್ಪಷ್ಟವಾಗಿರುವ ವಿಚಾರವಾಗಿದೆ. ಅಂದರೆ ಹಿಂದೂ ಧರ್ಮದ ವರ್ಣವ್ಯವಸ್ಥೆಯಲ್ಲಿ ನಲುಗಿಹೋದ ಕಟ್ಟಕಡೆಯ ಜನಸಮುದಾಯ ಮತಾಂತರಕ್ಕೆ ಆಸಕ್ತಿ ತೋರಿಸಿರುವುದು ಸಹಜವಾಗಿದೆ. ಜೊತೆಗೆ ಪ್ರಭುತ್ವ ಒದಗಿಸುವ ಸೌಲಭ್ಯ, ತೋರಿಸುವ ಆಮಿಷಗಳೂ ಪ್ರೇರಣೆಯನ್ನು ನೀಡಿರುವುದು ಸಾಧ್ಯವಿದೆ. ಮುಖ್ಯವಾಗಿ ಇಸ್ಲಾಂ ಧರ್ಮಕ್ಕೆ ಮತಾಂತರವಾಗಲು ಆಗ ಇದ್ದಿರಬಹುದಾದ ಪ್ರೇರಣೆಯನ್ನು ಗುರುತಿಸಬಹುದು.

ಮುಖ್ಯವಾಗಿ ಮಲ್ಲಿಕಾಫರನ ಅಜೇಯ ಹಾಗೂ ಭಯಂಕರ ದಾಳಿಯ ಸಂದರ್ಭ ಹಾಗೂ ಮೊಗಲರ ದೊರೆಗಳಾದ ಅಕ್ಬರ್ ಮತ್ತು ಔರಂಗಜೇಬರ ಆಡಳಿತದ ಸಮಯದಲ್ಲಿ ಮತಾಂತರವಾದ ಮಾಹಿತಿಗಳು ದೊರೆಯುತ್ತವೆ. ಕರ್ನಾಟಕದ ಸಂದರ್ಭದಲ್ಲಿ ಟಿಪ್ಪುಸುಲ್ತಾನನ ಕಾಲದಲ್ಲಿ ಹಾಗೂ ಬಿಜಾಪುರದ ಸುಲ್ತಾನ ರಣದುಲ್ಲಾಖಾನನ ಕಾಲದಲ್ಲಿ ಮತಾಂತರ ನಡೆದುದಾಗಿ ಅನೇಕ ಪಿಂಜಾರರೇ ಹೇಳುತ್ತಾರೆ. ಈ ಮಾಹಿತಿ, ಹೇಳಿಕೆಗಳನ್ನು ಒಪ್ಪಬಹುದಾದರೂ ಮಹಮ್ಮದೀಯ ರಾಜರ ಆಡಳಿತಕ್ಕೆ ಮತಾಂತರದ ಆಸಕ್ತಿ ಹೇಗೆ ಉಂಟಾಯಿತು ? ಎಂದು ಯೋಚಿಸಬೇಕಾಗಿದೆ. ಇಸ್ಲಾಂನ ಕೆಲ ಮತಾಂಧ ಮನಸ್ಸು ಮತ್ತು ವೈದಿಕ ಪ್ರಣೀತವಾದ ಹಿಂದೂ ಧಾರ್ಮಿಕ ರಚನೆಯಲ್ಲಿನ ಮನುಷ್ಯ ವಿರೋಧಿ ಚಿಂತನೆಗಳು ಸೇರಿ ಮತಾಂತರಕ್ಕೆ ಪ್ರೇರಣೆಯನ್ನೊದಗಿಸಿದಂತಿದೆ.

ಪಿಂಜಾರರು ಮಹಮ್ಮದೀಯ ಆಳರಸರ ಅವಧಿಯಲ್ಲಿ ಇಸ್ಲಾಂ ಧರ್ಮಕ್ಕೆ ಮತಾಂತರಗೊಂಡವರು ಎನ್ನುವುದು ನಿರ್ವಿವಾದದ ಸಂಗತಿ. ಧಾರ್ಮಿಕ ಮತಾಂತರಕ್ಕಿರಬಹುದಾದ ರಾಜಕೀಯ ಉದ್ದೇಶಗಳನ್ನು ತಿಳಿಯುವ ಪ್ರಯತ್ನವನ್ನು ಈವರೆಗೆ ಮಾಡಲಾಗಿದೆ. ಪಿಂಜಾರರು ಮತಾಂತರಗೊಂಡದ್ದು ನಿರ್ದಿಷ್ಟವಾಗಿ ಯಾವಾಗ? ಅದಕ್ಕೂ ಮೊದಲು ಅವರ ಜನಾಂಗದ ಹೆಸರು ಏನಾಗಿತ್ತು ? ಅವರ ಸಾಮಾಜಿಕ ಬದುಕಿನ ಸ್ವರೂಪ ಹೇಗಿತ್ತು? ಹಿಂದೂ ಧಾರ್ಮಿಕ ರಚನೆಯ ತಳಭಾಗದಲ್ಲಿದ್ದ ನೂರಾರು ಜನಾಂಗಗಳಲ್ಲಿ ನಿರ್ದಿಷ್ಟವಾಗಿ ಯಾವ ಜನಾಂಗದಿಂದ ಸಿಡಿದು ಇಸ್ಲಾಂ ಧರ್ಮಕ್ಕೆ ಮತಾಂತರಗೊಂಡರು? ಇತ್ಯಾದಿ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಲು ಪ್ರಯತ್ನಿಸುತ್ತಾ ಹೋದಂತೆ ನಿರಾಶೆಯೇ ಕಾಣುತ್ತದೆ.

ಪಿಂಜಾರ ಜನಾಂಗದಲ್ಲಿ ಅವರ ಇತಿಹಾಸವನ್ನು ಕುರಿತಂತೆ ಅಸ್ಪಷ್ಟತೆಯಿದೆ. ಅವರಲ್ಲಿ ಇರುವ ಇತಿಹಾಸದ ಅರಿವಿನ ಕೊರತೆಯೇ ಆ ಜನಾಂಗದ ಅಧ್ಯಯನಕ್ಕೆ ಕೆಲವು ಮಿತಿಗಳನ್ನು ತಂದೊಡ್ಡುತ್ತದೆ. ಪಿಂಜಾರರಿಗೆ ತಮ್ಮ ಬಗ್ಗೆಯೇ ತಮಗಿರುವ ಅಜ್ಞಾನಕ್ಕೆ ಬಹುಶಃ ಅವರ ಸಾಮಾಜಿಕ ಆರ್ಥಿಕ ಬದುಕಿನ ರೀತಿಯೇ ಕಾರಣವಾಗಿದೆ. ಹಾಸಿಗೆ, ದಿಂಬು ರಿಪೇರಿಗಾಗಿ ತಲೆಮೇಲೆ ಹತ್ತಿ ಚೀಲಹೊತ್ತು, ಊರೂರು ಅಲೆಯುತ್ತಾ ಜೀವನ ಮಾಡುವ ಜನಾಂಗವೊಂದು ಸಹಜವಾಗಿ ತನ್ನ ದಿನನಿತ್ಯದ ಅಗತ್ಯಗಳನ್ನು ಪೂರೈಸಿಕೊಳ್ಳುವ ಪ್ರಯತ್ನದಲ್ಲಿರುತ್ತದೆ. ಇತಿಹಾಸವನ್ನು ಸ್ಪಷ್ಟವಾಗಿ ಕಟ್ಟಿಕೊಳ್ಳಲಾಗದ ಇಂಥ ಜನಾಂಗಗಳು ಭವಿಷ್ಯವನ್ನು ರೂಪಿಸಿಕೊಳ್ಳಲಾರದೆ ಒದ್ದಾಡುತ್ತಿರುತ್ತವೆ. ಹೀಗಾಗಿ ಪಿಂಜಾರರು ತಮಗೆ ಅರಿವಿಲ್ಲದೆಯೋ ಏನೋ ನಿರ್ದಿಷ್ಟ ಧಾರ್ಮಿಕ ಅವಲಂಬನೆಗೆ ಒಳಗಾಗದೇ 'ದ್ವಿ ಸಂಸ್ಕೃತಿ' **(Dual-Culture)** ಯ ಪ್ರತೀಕವಾಗಿ ಉಳಿದಿದ್ದಾರೆ.

ಪಿಂಜಾರರ ದ್ವಿ-ಸಂಸ್ಕೃತಿಯ ಲಕ್ಷಣಗಳನ್ನು ಇಲ್ಲಿ ಗುರುತಿಸುವ ಪ್ರಯತ್ನವನ್ನು ಮಾಡಬಹುದು. 'ಪಿಂಜಾರರು ವರ್ಷದಲ್ಲಿ ಬರುವ ಎಲ್ಲ ಹಬ್ಬಗಳನ್ನು ಉತ್ಸಾಹದಿಂದ ಆಚರಿಸುತ್ತಾರೆ ನಾಯಕನ ಹಟ್ಟಿಯ ತಿಪ್ಪೇಸ್ವಾಮಿಯಿಂದ ಹಿಡಿದು ಎಲ್ಲಮ್ಮ, ಚೌಡಮ್ಮ, ಧರ್ಮಸ್ಥಳದ ಮಂಜುನಾಥ, ಶಿರಡಿ ಸಾಯಿಬಾಬಾ, ಬಾಬು ಬುಡನ್‌ಗಿರಿಯ ದಾದಾ ಕಲಂದರ್, ಹೊನ್ನೂರಲಿ, ಬಸವಣ್ಣ, ಈಶ್ವರ, ಹನುಮಂತ ಎಲ್ಲ ದೇವರಿಗೂ ಪಿಂಜಾರರು ನಡೆದುಕೊಳ್ಳುತ್ತಾರೆ. ಇವತ್ತಿಗೂ ಅನೇಕ ಪಿಂಜಾರರ ಮನೆದೇವರು ಎಲ್ಲಮ್ಮ. ಪ್ರತಿ ಮಂಗಳವಾರ, ಶುಕ್ರವಾರದ ದಿನ ಎಲ್ಲಮ್ಮನಿಗೆ ಎಡೆಯಿಟ್ಟು ಕಾಯಿ ಒಡೆದು ಬರುವ ಪದ್ಧತಿಯಿದೆ. ಪಿಂಜಾರರಲ್ಲಿ ಪುರೋಹಿತರ ಬಗ್ಗೆ ವಿಶೇಷ ಗೌರವವಿದೆ. ಸಾಮಾನ್ಯವಾಗಿ ಊರ ಹೊರಗೇ ಇರುವ ಎಲ್ಲಮ್ಮ, ಚೌಡಮ್ಮರಂತಹ ದೇವತೆಗಳಿಗೆ ತಾವೇ ಎಣ್ಣೆ ಬಿಟ್ಟು ದೀಪಹಚ್ಚಿ, ಊದಿನಕಡ್ಡಿ ಬೆಳಗುತ್ತಾರೆ. ಪ್ರದಕ್ಷಿಣೆ ಹಾಕಿ ಅಡ್ಡ ಬೀಳುತ್ತಾರೆ. ಊರ ಒಳಗಿರುವ ಬಸವಣ್ಣ, ಈಶ್ವರ ಮುಂತಾದ ದೇವರುಗಳಿಗೆ ಪೂಜೆ ಮಾಡಿಕೊಡುವಂತೆ ಅರ್ಚಕನಿಗೆ ಬೇಡಿಕೊಳ್ಳುತ್ತಾರೆ. ಯುಗಾದಿ, ದೀಪಾವಳಿ, ಬಸವನ ಹಬ್ಬಗಳನ್ನು ಆಸಕ್ತಿಯಿಂದ ಆಚರಿಸುತ್ತಾರೆ. ಊರಿನ ಲಿಂಗಾಯ್ತರು, ನಾಯಕರು (ತಳವಾರರು) ಮತ್ತು ಕುರುಬರೊಂದಿಗೆ ಹೆಚ್ಚಾಗಿ ಬೆರೆಯುತ್ತಾರೆ. ಅತ್ಯಂತ ಆಪ್ತವಾಗಿ ಬೀಗ, ಅಳಿಮಯ್ಯ, ಮಾವ, ಅತ್ತೆ,

ಸಣ್ಣಪ್ಪ-ದೊಡ್ಡಪ್ಪ ಎಂದು ಕರೆದು ಮಾತನಾಡುವ ಈ ಜನಾಂಗದವರೆಲ್ಲ ಪಿಂಜಾರರನ್ನು 'ಅಡ್ಡ ಪಿಂಜಾರರು' ಎಂದು ತಮಾಷೆ ಮಾಡುವುದೂ ಉಂಟು. ಊರೊಳಗಿನ ದೇವರ ಗುಡಿಯಲ್ಲಿ (ಬಸವಣ್ಣ, ಈಶ್ವರ ಇತ್ಯಾದಿ ದೇವರ ಗರ್ಭಸ್ಥಾನಕ್ಕೆ) ಪಿಂಜಾರರು ಪ್ರವೇಶ ಮಾಡುವುದಿಲ್ಲ. ಇವರೊಂದಿಗೆ ಬೆರೆಯುವ ಜನಾಂಗದವರ ಮನೆಯ ಅಡಿಗೆ ಕೋಣೆ, ದೇವರ ಕೋಣೆಗೂ ಪಿಂಜಾರರಿಗೆ ಪ್ರವೇಶ ನಿಷಿದ್ಧ. ಆದರೆ ದೇವರ ಉತ್ಸವದಲ್ಲಿ ಪಲ್ಲಕ್ಕಿಯನ್ನು ಹೊತ್ತು ಕುಣಿಯುತ್ತಾರೆ. ಕಾಯಿ ಒಡೆಯುತ್ತಾರೆ. ಶ್ರಾವಣ ಮಾಸದಲ್ಲಿ ಪುರಾಣ ಓದಿಸುತ್ತಾರೆ. ಭರತ ಹುಣ್ಣಿಮೆಯಲ್ಲಿ ದೇವರಿಗೆ ಹರಕೆ ಹೊತ್ತು ಬಿತ್ತನೆ ಬೀಜ ಹಿಡಿಯುತ್ತಾರೆ. ಮದುವೆ-ಮುಂಜಿ ಮುಂತಾದ ಶಾಸ್ತ್ರ ಕೇಳುತ್ತಾರೆ. ತಿರುಪತಿಗೆ, ಮಂಜುನಾಥನಿಗೆ ಹಣ ಕಳಿಸುತ್ತಾರೆ. ಮಠಾಧಿಪತಿಗಳಿಗೆ ಅಡ್ಡ ಬೀಳುತ್ತಾರೆ. ಶಿವರಾತ್ರಿಯ ಜಾಗರಣೆಯಲ್ಲಿ ಶಿವಭಜನೆ ಮಾಡುತ್ತಾರೆ, ಕುತೂಹಲದ ಸಂಗತಿ ಎಂದರೆ ಹಿಂದೂ ಸಾಂಸ್ಕೃತಿಕ ಆಚರಣೆಯಲ್ಲಿ ಅತ್ಯಂತ ಸಹಜವಾಗಿ ಗುರುತಿಸಿಕೊಳ್ಳುವ ಪಿಂಜಾರರು ಇಸ್ಲಾಂನ ಧಾರ್ಮಿಕ ಆಚರಣೆಗಳ ಬಗ್ಗೆ ಉದಾಸೀನರಾಗಿರುವುದು. ರಂಜಾನ್, ಬಕ್ರೀದ್ ಹಬ್ಬಗಳಲ್ಲಿ ಶಾವಿಗೆ ಹುಗ್ಗಿ ಮಾಡಿ ಉಂಡು ಸಾಮೂಹಿಕ ನಮಾಜಿಗೆ ಕೆಲವರು ಹೋಗುತ್ತಾರೆ. ವರ್ಷದಲ್ಲಿ ಈ ಎರಡು ದಿನಗಳನ್ನು ಬಿಟ್ಟರೆ ಪಿಂಜಾರರು ಉಳಿದ ದಿನಗಳಲ್ಲಿ ನಮಾಜು ಮಾಡುವುದು ಕಡಿಮೆ. ಮುಖ್ಯವಾಗಿ ನಮಾಜು ಇವರಿಗೆ ಬರುವುದಿಲ್ಲ. ಸಾಮೂಹಿಕ ಪ್ರಾರ್ಥನೆಯ ಆ ದಿನಗಳಲ್ಲಿ ತನ್ನ ಮುಂದಿನವರು ಮಾಡುವ ಹಾಗೆ ನಮಾಜನ್ನು ಅನುಕರಿಸುತ್ತಾರಷ್ಟೆ. ಮುಲ್ಲಾ ಪಿಂಜಾರರ ಧಾರ್ಮಿಕ ಗುರು. ಈತನಿಲ್ಲದೆ ಮುಂಜಿ, ಮದುವೆಗಳನ್ನು ಪಿಂಜಾರರು ನಡೆಸುವುದಿಲ್ಲ. ಮುಸ್ಲಿಂ ಹಬ್ಬಗಳಂದು 'ಅಡಿಗೆ'ಯನ್ನು 'ಓದಿಕೆ' ಮಾಡಿಸದೆ ಊಟ ಮಾಡುವುದಿಲ್ಲ. ಎಲ್ಲಿದ್ದರೂ ಮುಲ್ಲಾನನ್ನು ಹುಡುಕಿ ಕರೆದುಕೊಂಡು ಬಂದು 'ಓದಿಕೆ' ಮಾಡಿಸುತ್ತಾರೆ. ಕೋಳಿ ಕುರಿಯನ್ನು ಮುಲ್ಲಾನಿಂದಲೇ ಹಲಾಲ್ ಮಾಡಿಸುತ್ತಾರೆ. ದಿನಕ್ಕೆ ಐದು ಬಾರಿ ನಮಾಜ್ ಮಾಡುವುದು ಪಿಂಜಾರರ ಜಾಯಮಾನದಲ್ಲೇ ಇಲ್ಲ. ರಂಜಾನ್, ಬಕ್ರೀದ್, ದಿನಗಳಂದು ಮಾಡುವ ಸಾಮೂಹಿಕ ಪ್ರಾರ್ಥನೆಯಲ್ಲಿ ತಮ್ಮ ಮುಂದಿನವರು ಎದ್ದರೆ ಏಳುವುದು, ಬಗ್ಗಿದರೆ ಬಗ್ಗುವುದು, ಕುಂತರೆ ಕೂರುವುದು ಮಾಡುತ್ತಾರೆ. ಅವತ್ತು ಕೂಡ ಎಲ್ಲರೂ ನಮಾಜು ಮಾಡುವುದಿಲ್ಲ. ಹೊಲಮನೆ ಕೆಲಸದಲ್ಲಿ ಕೆಲವರು ತೊಡಗಿದರೆ ಮತ್ತೆ ಕೆಲವರು ಇಸ್ಪೀಟಾಡುವುದು, ಹೆಡ್ ಆಡುವುದು, ಕುಡಿಯುವುದರಲ್ಲಿ ತೊಡಗಿರುತ್ತಾರೆ. ನಮಾಜು, ಓದಿಕೆ, ಮದುವೆ ಮುಂತಾದ ಸಮಯದಲ್ಲಿ ಮುಲ್ಲಾ ಏನು ಹೇಳುತ್ತಾನೆಂಬುದರ ಕನಿಷ್ಠ ಕಲ್ಪನೆಯೂ ಪಿಂಜಾರರಿಗಿರುವುದಿಲ್ಲ. ಆದರೂ ಮುಲ್ಲಾನ ಉಪಸ್ಥಿತಿಯಿಲ್ಲದೆ ಪಿಂಜಾರರ ಮುಖ್ಯ ಕಾರ್ಯಗಳಾವುವೂ ನಡೆಯುವುದಿಲ್ಲ.

ಈ ಮೊದಲಾದ ಕಾರಣಗಳಿಂದಾಗಿ ಪಿಂಜಾರರು ಮಹಮ್ಮದೀಯ ಅರಸರ ಆಡಳಿತ ಅವಧಿಯಲ್ಲಿ ಧಾರ್ಮಿಕ ಮತಾಂತರಕ್ಕೆ ಒಳಗಾಗಿರಬೇಕೆಂದು ನಂಬಬಹುದಾಗಿದೆ. ಇತಿಹಾಸದ ಮತಾಂಧ ಅರಸರ ಕಾಲಘಟ್ಟದಲ್ಲಿ ನಡೆದುಹೋದ ಈ ಬಗೆಯ ಮತಾಂತರಗಳಿಗೆ ಮುಖ್ಯವಾದ ಪ್ರೇರಣೆಗಳು ಏನಿರಬಹುದು? ಎಂದು ಯೋಚಿಸಿದರೆ ಅವು ಸ್ಪಷ್ಟವಾಗಿ ಕಣ್ಣಿಗೆ ರಾಚುತ್ತವೆ.

ಅವು ಮುಖ್ಯವಾಗಿ, ೧. ಆಳರಸರ ದಮನಕಾರಿ ನೀತಿ ಹಾಗೂ ಬಲಾತ್ಕಾರ.

೨. ಹಿಂದೂ ಧಾರ್ಮಿಕ ರಚನೆಯಲ್ಲಿನ ಅಸಮಾನತೆಯ ನೆಲೆ.

೩. ಇಸ್ಲಾಂ ಧಾರ್ಮಿಕ ಪ್ರಚಾರ ಮತ್ತು ಸಾಮಾಜಿಕ ಕಾರ್ಯಕ್ರಮಗಳು.

ಇಂಡಿಯಾದ ಇತಿಹಾಸದಲ್ಲಿ ಯಾವ ರಾಜನ ಸಂದರ್ಭದಲ್ಲಿ ಸಾಮಾನ್ಯ ಜನಸಮುದಾಯದ ಬದುಕು ದಮನ ಮತ್ತು ಬಲಾತ್ಕಾರಗಳಿಂದ ಹೊರತಾಗಿತ್ತು ? ಹಾಗೆ ನೋಡಿದರೆ ನಾನಾ ಕಾರಣಗಳಿಗಾಗಿ ಹೆಚ್ಚು ಕಡಿಮೆ ಎಲ್ಲರೂ ಸಾಮಾನ್ಯರನ್ನೂ ದರ್ಪದಿಂದಲೇ ಆಳಿದ್ದಾರೆ. ಇದು ಪ್ರಭುತ್ವದ ಲಕ್ಷಣವೂ ಹೌದು. ಹಲವು ಹತ್ತು ಖಂಡ-ಉಪಖಂಡಗಳಲ್ಲಿ, ಪ್ರಾಂತಗಳಲ್ಲಿ ಹರಿದು ಹಂಚಿಹೋಗಿದ್ದ ಭಾರತವನ್ನು ಅಷ್ಟೇ ಅಸಂಖ್ಯ ಒಳ-ಹೊರಗಿನ ರಾಜರು, ಸಾಮಂತರು ಆಳಿದ್ದಾರೆ. ಅವರವರ ಸಾಮ್ರಾಜ್ಯದ ರಕ್ಷಣೆಗಾಗಿ ಮತ್ತು ವಿಸ್ತರಣೆಗಾಗಿ ಅನೇಕ ಬಗೆಯ ಹೋರಾಟ, ಸಂಚು, ರಕ್ತಪಾತಗಳಾಗಿವೆ. ಆಯಾ ರಾಜನ ಬಗೆಗೆ ನಿಷ್ಠೆ ತೋರುವ ಅಪಾರ ಸಾಮಾನ್ಯ ಜನತೆ ಅವರಿಗಾಗಿ ತ್ಯಾಗ ಬಲಿದಾನಗಳನ್ನು ನೀಡಿದೆ. ಶತ್ರುವಿನ ವಿರುದ್ಧ ಪ್ರಕಟಿಸುವ ಪರಾಕ್ರಮ ಮತ್ತು ಆಳರಸನ ಪರವಾದ ನಿಷ್ಠೆಗಳೇ ಮೌಲ್ಯಗಳಾಗಿದ್ದ ಉದ್ದನೆಯ ಇತಿಹಾಸದಲ್ಲಿ ಸಾಮಾನ್ಯ ಸೈನಿಕನ ನೆಲೆಯಿಂದ ಈ ಮೌಲ್ಯಗಳನ್ನು ವಿಶ್ಲೇಷಿಸುವುದು ಸಾಧ್ಯವಿರಲಿಲ್ಲ. ಇದಕ್ಕೆ ಅಂದಿನ ಧಾರ್ಮಿಕ ರಾಜಕಾರಣ ಅವಕಾಶ ನೀಡಿರಲಿಲ್ಲ. ಹಿಂದೂ ಧಾರ್ಮಿಕ ವ್ಯವಸ್ಥೆಯಲ್ಲಿನ ಅಸಮಾನತೆ ವ್ಯಕ್ತಿ ಮತ್ತು ಸಮುದಾಯವನ್ನು ಏಕಕಾಲಕ್ಕೆ ಅಪಮಾನಿಸುತ್ತಿದ್ದುದರಿಂದ ಇಸ್ಲಾಂನ ಧಾರ್ಮಿಕ ಪ್ರಚಾರ ಈ ಸಮುದಾಯಗಳಿಗೆ ಬಿಡುಗಡೆಯೆಂಬಂತೆ ಕಂಡಿರುವುದಕ್ಕೆ ಸಾಧ್ಯವಿದೆ. ಆದರೆ ಮೂಲಭೂತವಾಗಿ ನಿರಂಕುಶಾಧಿಕಾರವಿದೆಯಲ್ಲಾ ಅದು ಧರ್ಮವನ್ನೂ ಹತ್ತಿಕ್ಕಿ ತೋಳ್ಬಲಗಳ ಮೂಲಕವೇ ರಾಜ್ಯಾಧಿಕಾರವನ್ನು ಕಬಳಿಸಲು ಅವಶ್ಯಕವಾದ ತಂತ್ರಗಳನ್ನು ರೂಪಿಸುತ್ತದೆ. ಹಾಗಾಗಿಯೇ ಸಾಮ್ರಾಜ್ಯ ವಿಸ್ತರಣಾಕಾಂಕ್ಷಿಗಳಾದ ಕೆಲವು ಮಹಮ್ಮದೀಯ ರಾಜರು ತಮ್ಮ ಕಾರ್ಯಸಿದ್ಧಿಗೆ ಸುಲಭವಾದ ಧಾರ್ಮಿಕ ಮತಾಂತರದ ಹಾದಿಯನ್ನೇ ಅನುಸರಿಸಿದ್ದಾರೆ. ಇದು ಪ್ರಭುತ್ವದ ದಮನಕಾರಿ ಮನಸ್ಸು ಧಾರ್ಮಿಕ ವಲಯದಲ್ಲಿ ಹುಡುಕಿಕೊಂಡ ಸಲೀಸು ಸಂಭ್ರಮದ ಹಾದಿ. ಇದು ಇಂಡಿಯಾದ ಧರ್ಮರಾಜಕಾರಣ ರೂಪಿಸಿದ ಪಟ್ಟಭದ್ರ ಹಿತಾಸಕ್ತಿಗಳ ಪರವಾದ ತಂತ್ರವಾಗಿದ್ದು, ಸಾಮಾನ್ಯರ ಪಾಲಿಗೆ ಬಗೆದ ವಿದ್ರೋಹವೂ ಆಗಿದೆ.

ಅಂದರೆ ಸಾಮಾನ್ಯ ಜನಸಮುದಾಯದ ಸಂವೇದನೆಗಳನ್ನು ಗೌರವಿಸದ ಪ್ರಭುತ್ವ ಇಂಥ ಹತ್ತಾರು ಅವಘಡಗಳಿಗೆ ಕಾರಣವಾಗಿದೆ. ಪ್ರಭುತ್ವಕ್ಕೆ ಧರ್ಮ ಎನ್ನುವುದು ತನ್ನ ಲೌಕಿಕ ಆಕಾಂಕ್ಷೆಗಳ ಈಡೇರಿಕೆಗಿರುವ ಸಾಧನವಾಗಿ ಬಳಕೆಯಾಗಿದೆಯೇ ವಿನಾಃ ಧರ್ಮದ ಒಳತಿರುಳನ್ನು ಅರಿಯುವ ಗೊಡವೆಗೇ ಅದು ಹೋದಂತಿಲ್ಲ. ಹೀಗಾಗಿ ಬಲಾತ್ಕಾರದ ಧಾರ್ಮಿಕ ಮತಾಂತರ ಎಂದರೆ ಅದು ಕೇವಲ ಅರಸೊತ್ತಿಗೆಯ ಅವಶ್ಯಕತೆ ಮಾತ್ರವಾಗಿದೆ. ಪಿಂಜಾರರ ವಿಷಯದಲ್ಲಿ ಆಗಿರಬಹುದಾದ ಈ ಬಗೆಯ ಒತ್ತಾಯದ ಧಾರ್ಮಿಕ ಮತಾಂತರ ಅದೇ ಕಾರಣದಿಂದಾಗಿ ಸೋತಿದೆ. ಅಂದರೆ ರಾಜಕೀಯ ಉದ್ದೇಶಗಳಿಗೆ

ತತ್ಕಾಲಕ್ಕೆ ಆವಶ್ಯಕವೆನಿಸಿದ ಈ ಬಗೆಯ ಮತಾಂತರಗಳಿಂದ ಅನ್ಯಧರ್ಮದ ಆಕರ್ಷಣೆಯಿಂದುಂಟಾದ ಮತಾಂತರಗಳನ್ನು ಪ್ರತ್ಯೇಕಿಸಿ ನೋಡಬೇಕಾಗಿದೆ. ಪಿಂಜಾರರ ಸಾಂಸ್ಕೃತಿಕ ನೆಲೆಗಳನ್ನು ಗಮನಿಸಿದರೆ ರಾಜಕೀಯ ಕಾರಣಕ್ಕೆ ಮತಾಂತರಗೊಂಡವರು ತಮ್ಮ ಮೂಲಾಶ್ರಮದ ಸಾಂಸ್ಕೃತಿಕ ಸಂವೇದನೆಗಳನ್ನು ಎಚ್ಚರದಿಂದ ಕಾಪಾಡಿಕೊಂಡು ಬಂದದ್ದು ತಿಳಿಯುತ್ತದೆ.

ಧಾರ್ಮಿಕ ಮತಾಂತರಕ್ಕೆ, ಅದರಲ್ಲೂ ಹಿಂದೂ ಧಾರ್ಮಿಕ ಆವರಣದಲ್ಲಿ ಸಿಡಿದು ಇಸ್ಲಾಂನ ವಲಯಕ್ಕೆ ಬರುವುದೆಂದರೆ ಹಿಂದೂ ಧಾರ್ಮಿಕ ರಚನೆಯಲ್ಲಿರುವ ನೂರೆಂಟು ಜಾತಿ-ಉಪಜಾತಿಗಳ ನಡುವಿನ ಅಸಮಾನತೆಯ ಅನುಭವ ಬಹುಮುಖ್ಯ ಪ್ರೇರಣೆಗಳಲ್ಲಿ ಒಂದಾಗಿದೆ. ಹಿಂದೂ ವರ್ಣ ವ್ಯವಸ್ಥೆಯಲ್ಲಿ ಶೂದ್ರ ಸಮುದಾಯ ಉಳಿದ ಮೂರು ವರ್ಣಗಳಿಂದ ಅನುಭವಿಸುತ್ತಾ ಬಂದ ನೂರಾರು ವರ್ಷಗಳ ಅಪಮಾನ, ಶೋಷಣೆಯಿಂದಾಗಿ ಉಸಿರುಗಟ್ಟಿ, 'ನಮ್ಮ ಹಣೆ ಬರಹವೇ ಇಷ್ಟು' ಎಂದುಕೊಂಡು ಬದುಕಿತ್ತಲ್ಲಾ, ಆ ಬದುಕಿಗೆ ಇಸ್ಲಾಂನ ಆಗಮನ ಹರ್ಷದಾಯಕವೆನಿಸಿರಲು ಸಾಧ್ಯ. ನೂರಾರು ವರ್ಷಗಳಿಂದ ನಂಬಿಕೊಂಡು ಬಂದ ವೈದಿಕ ಪ್ರಣೀತ ಮೌಲ್ಯಗಳು ಸುಳ್ಳು ಎಂಬುದು ಅನ್ಯಮತವೊಂದರ ಪ್ರಚಾರ ವೈಖರಿಯಿಂದ ತಿಳಿದಂತೆಲ್ಲಾ ಕೆಳವರ್ಗಗಳಿಗೆ ಕಾಣಿಸಿದ ಬೆಳಕಿನ ಕಿಂಡಿ ಒಂದೇ ಅದು ಮತಾಂತರಗೊಳ್ಳುವುದು. ಅಲ್ಲದೆ ಹಿಂದೂ ಧಾರ್ಮಿಕ ವ್ಯವಸ್ಥೆಯಲ್ಲಿ ಅನಕ್ಷರಸ್ಥರೂ ಆಗಿದ್ದ ಕೆಳಸಮುದಾಯಗಳು ಆಸಕ್ತವಾಗಿದ್ದು, ಲೌಕಿಕ ಬದುಕಿನಲ್ಲಿಯೇ ಆದುದರಿಂದ ಧಾರ್ಮಿಕ ಮತಾಂತರವೆನ್ನುವುದು ಕೆಲವರಿಗೆ ಲೌಕಿಕ ಸುಖ-ಸೌಲಭ್ಯಗಳನ್ನು ಪಡೆಯಲು ಇರುವ ನೆಪವಾಗಿರುವುದೂ ಸಾಧ್ಯವಿದೆ. ಇದಕ್ಕೆ ಸರಿಯಾಗಿ ಮಹಮ್ಮದೀಯ ಅರಸರು ಉದ್ಯೋಗದಂತಹ ಆಮಿಷಗಳನ್ನು ಒಡ್ಡಿರುವುದು ಸಾಧ್ಯವಿದೆ. ಅಂದರೆ ಸಮಾನತೆಯ ಆಕಾಂಕ್ಷೆಯ ಜೊತೆಗೆ ಹಣ, ಆಸ್ತಿ, ನೌಕರಿಯಂತಹ ಆಸೆಗಳೂ ಮತಾಂತರಕ್ಕೆ ಪ್ರೇರಣೆಯನ್ನೊದಗಿಸಿವೆ.

ಇಂಡಿಯಾಕ್ಕೆ ಪ್ರವೇಶವಾದ ಹೊಸತರಲ್ಲಿ ಇಸ್ಲಾಂನ ಮೌಲ್ಯಗಳು ಆಕರ್ಷಕವಾಗಿದ್ದವು ಮತ್ತು ಆ ಕಾರಣಕ್ಕೆ ಜಡಗಟ್ಟಿದ್ದ ಹಿಂದೂ ಧಾರ್ಮಿಕ ವಲಯದಲ್ಲಿ ಸಂಚಲನವುಂಟು ಮಾಡಿದವು. ಏಕದೇವತಾರಾಧನೆ ಮತ್ತು ಆ ದೇವರ ದೃಷ್ಟಿಯಲ್ಲಿ ಎಲ್ಲರೂ ಸಮಾನರು ಎಂಬ ಅಂಶವಿದೆಯಲ್ಲಾ ಅದು ಭಾರತದ ಸಂದರ್ಭದಲ್ಲಿ ಕ್ರಾಂತಿಕಾರಿಯಾದ ಆಲೋಚನೆ ಮತ್ತು ದೇವರ ಪ್ರಾರ್ಥನೆ ಕೂಡ ಸರಳವಾದುದಾಗಿತ್ತು. ಗಂಡು-ಹೆಣ್ಣು, ಮೇಲು-ಕೀಳು ಹೀಗೆ ಯಾವುದೇ ತಾರತಮ್ಯಗಳಿಲ್ಲದ ಇಸ್ಲಾಂನ ನಿಯಮಗಳು ಸಹಜವಾಗಿ ಕೆಳಸಮುದಾಯಗಳನ್ನು ಆಕರ್ಷಿಸಿರಲು ಸಾಧ್ಯ. ಇನ್ನೂ ಸ್ವಲ್ಪ ಸೂಕ್ಷ್ಮವಾಗಿ ನೋಡುವುದಾದರೆ ಹೆಣ್ಣಿನ ವಿಚಾರದಲ್ಲಿ ಹಿಂದೂ ಧಾರ್ಮಿಕ ದೃಷ್ಟಿಕೋನಕ್ಕಿಂತ ಭಿನ್ನವಾದ ನಿಲುವು ಇಸ್ಲಾಂನಲ್ಲಿದ್ದಂತೆ ಕಾಣುವುದರಿಂದ ವಿಶೇಷವಾಗಿ ಪುರುಷರು ಕೆಲವರಾದರೂ ಇಸ್ಲಾಂಗೆ ಯಾಕೆ ಹೋಗಬಾರದು ಎಂದು ಆಲೋಚಿಸಿರಬಹುದು. ಹಿಂದೂ ಪರಂಪರೆಯಲ್ಲಿ ಮೂರು ನಾಲ್ಕು ಹೆಂಡತಿಯರನ್ನು ನಿಭಾಯಿಸುವ ಪುರುಷನ ಪ್ರತಿಷ್ಠೆಗೇನೂ ಬರವಿಲ್ಲ. ಆದರೆ ಇಸ್ಲಾಂನಲ್ಲಿ ಒಬ್ಬ ಗಂಡ

ಐದು ಜನ ಪತ್ನಿಯರನ್ನು ನಿಯಮಬದ್ಧವಾಗಿಯೇ ಹೊಂದಬಹುದೆನ್ನುವ ಅವಕಾಶವಿದೆಯಲ್ಲಾ ಅದು ಮತಾಂತರದ ಸಮಯದಲ್ಲಿ ಆಸೆ ಹುಟ್ಟಿಸಿರಲಾರದೇ ? ಯೋಚಿಸಬೇಕಾಗಿದೆ. ಗಂಡು ಹೆಣ್ಣಿನ ವಿಚಾರದಲ್ಲಿದ್ದ ಧಾರ್ಮಿಕ ಕಟ್ಟು ಕಟ್ಟಳೆಗಳು ಕೂಡ ಮತಾಂತರಕ್ಕೆ ಪ್ರೇರಣೆಯಾಗಿರುವುದು ಸಾಧ್ಯವಿದೆ. ಏಕಪತ್ನಿತ್ವವನ್ನು ಹೊಂದಿದ್ದ ಹಿಂದೂ ಸಾಮಾಜಿಕ ನೀತಿಯಲ್ಲಿ ಅನೇಕ ಪತ್ನಿಯರನ್ನು ಹೊಂದಿರುವುದು ಸಾಮಾಜಿಕ ಪ್ರತಿಷ್ಠೆಯೂ ಆಗಿದ್ದ ನಿದರ್ಶನಗಳು ದೊರೆಯುತ್ತವೆ. ಹಿಂದೂ ಸಾಂಸ್ಕೃತಿಕ ಇತಿಹಾಸ ಅನೇಕ ಸಂಕೋಚಗಳ ನಡುವೆಯೂ ಅತ್ಯಂತ ವ್ಯಕ್ತಿನಿಷ್ಠವಾದ ಈ ಬಗೆಯ ಮೌಲ್ಯಗಳನ್ನು ಒಳಗೊಂಡಿರುವುದು ಕುತೂಹಲಕರವಾದುದು. ಆದರೂ ಒಬ್ಬರಿಗಿಂತ ಹೆಚ್ಚು ಹೆಂಡತಿಯರನ್ನು ಹೊಂದುವುದರಿಂದ ಸಾಮಾಜಿಕ ಅಪಮಾನಕ್ಕೆ ತಾತ್ಸಾರಕ್ಕೆ ಗುರಿಯಾಗುತ್ತಿದ್ದವರಿಗೆ ಆ ಕಾಲದಲ್ಲಿ ಧಾರ್ಮಿಕ ಸಂದಿಗ್ಧವನ್ನು ಉಂಟು ಮಾಡುತ್ತಿದ್ದಿರಬೇಕು. ಒಬ್ಬರಿಗಿಂತ ಅಧಿಕ ಹೆಂಗಸರನ್ನು ಹೊಂದುವ ಆಳದ ಬಯಕೆಯ ಕೆಲವು ಗಂಡಸರಾದರೂ ಈ ಬಗೆಯ ಮಾನಸಿಕ ಇಕ್ಕಟ್ಟನ್ನು ಅನುಭವಿಸಿರಬೇಕು. ಅಲ್ಲದೆ ಇಸ್ಲಾಂನಲ್ಲಿ ಒಬ್ಬರಿಗಿಂತ ಹೆಚ್ಚು ಜನ ಹೆಂಡತಿಯರನ್ನು ಅಧಿಕೃತವಾಗಿಯೇ ಹೊಂದಲು ಅವಕಾಶವಿತ್ತು. ಹೆಚ್ಚು ಜನ ಹೆಂಡತಿಯರ ಗಂಡನಾಗುವುದು ಸಾಮಾಜಿಕ ಪ್ರತಿಷ್ಠೆ ಮಾತ್ರವಾಗಿರದೆ ಗಂಡಸುತನದ ಸಂಕೇತವೂ ಆಗಿದ್ದಿತೆನ್ನುವುದನ್ನು ಮರೆಯುವಂತಿಲ್ಲ. ಈ ಬಗೆಯ ಆಕಾಂಕ್ಷೆ ಕೆಲವರನ್ನಾದರೂ ಮತಾಂತರಕ್ಕೆ ಪ್ರೇರೇಪಿಸಿರಲಾರದೇ ? ಆಲೋಚಿಸಬೇಕಾಗಿದೆ.

ಪಿಂಜಾರರು ಮತಾಂತರಗೊಂಡವರು ಎಂಬುದನ್ನು ನಿರ್ವಿವಾದವಾಗಿ ಒಪ್ಪಿಕೊಳ್ಳುತ್ತಾ ಪಿಂಜಾರರ ಕುರಿತು ಇನ್ನಷ್ಟು ಮಾಹಿತಿಗಳನ್ನು ತಿಳಿದುಕೊಳ್ಳಲು ಪ್ರಯತ್ನಿಸಬಹುದಾಗಿದೆ. ಇದುವರೆಗೂ ನಡೆಸಿದ ಅಧ್ಯಯನ, ಚರ್ಚೆ ಮತಾಂತರದ ಮಗ್ಗಲುಗಳನ್ನು ಅರಿಯುವಲ್ಲಿ ಸಹಾಯಕವಾಗಿದೆ ಎಂದು ಭಾವಿಸಿ ಪಿಂಜಾರರ ಮೂಲವನ್ನು ಕುರಿತಾಗಿ ಇನ್ನು ಮುಂದೆ ಚಿಂತಿಸಬಹುದಾಗಿದೆ.

ಪಿಂಜಾರರು ಕರ್ನಾಟಕದ ಉತ್ತರದ ಜಿಲ್ಲೆಗಳಲ್ಲಿ ದಟ್ಟವಾಗಿ ವಾಸವಾಗಿರುವುದನ್ನು ಕಾಣಬಹುದು. ಬಹುಶಃ ಇದಕ್ಕೆ ಎರಡು ಕಾರಣಗಳಿವೆ. ೧) ಪಿಂಜಾರರು ಮೂಲತಃ ಆಂಧ್ರಪ್ರದೇಶಕ್ಕೆ ಸೇರಿದ 'ದೂದೇಕುಲ' ಜನಾಂಗದವರಾಗಿರುವುದು. ಉತ್ತರ ಕರ್ನಾಟಕ, ಹೈದರಾಬಾದ್ ಕರ್ನಾಟಕ ಎಂದು ಕರೆಸಿಕೊಳ್ಳುವ ಜಿಲ್ಲೆಗಳು ಆಂಧ್ರಪ್ರದೇಶಕ್ಕೆ ಅಂಟಿಕೊಂಡಂತಿರುವ ಗಡಿಜಿಲ್ಲೆಗಳು ಎಂಬುದನ್ನು ಇಲ್ಲಿ ನೆನೆಯಬೇಕು. ಎಡ್ಗರ್ ಥರ್ಸ್ಟನ್ ಕೂಡ ಪಿಂಜಾರರನ್ನು ಆಂಧ್ರದ ಮೂಲದವರು ಎಂದು ಗುರುತಿಸುವುದನ್ನು ಹಿಂದಿನ ಸಮೀಕ್ಷೆಯಲ್ಲಿ ನೋಡಿದ್ದೇವೆ. ೨) ಪಿಂಜಾರರ ಮೂಲ ಕಸುಬಾದ ಹಾಸಿಗೆ ತಯಾರಿಸುವುದಕ್ಕೆ ಅಗತ್ಯವಾದ ಹತ್ತಿಯನ್ನು ಈ ಭಾಗದಲ್ಲಿ ಹೆಚ್ಚಾಗಿ ಬೆಳೆಯುವುದು.

ಪಿಂಜಾರರ ಮಾತೃ ಭಾಷೆ ಕನ್ನಡ. ಅವರ ಎಲ್ಲ ವ್ಯವಹಾರಗಳೂ ಕನ್ನಡದಲ್ಲಿ ನಡೆಯುತ್ತವೆ. ಅವರ ಸಂವೇದನೆಗಳು ಹಿಂದೂ ಮೂಲದವು. ಮತಾಂತರಗೊಂಡ ಕಾರಣಕ್ಕೆ ಅವರ ಹೆಸರುಗಳು ಬದಲಾಗಿವೆಯೇ ಹೊರತು ಸಂಬಂಧ ಸೂಚಕ ಪದಗಳಲ್ಲಿ ವ್ಯತ್ಯಾಸವಾಗಿಲ್ಲ. ಉದಾಹರಣೆಗೆ

ಬುಡೇನ್‌ಸಾಬ್ ಎನ್ನುವ ಹೆಸರು ವಯಸ್ಸಿಗೆ ತಕ್ಕಂತೆ ಬುಡ್ಡ, ಬುಡ್ಡಣ್ಣ, ಬುಡ್ಡಪ್ಪ, ಬುಡ್ಡಜ್ಜ ಎಂದೇ ಸಂಬೋಧನೆಯಾಗುತ್ತದೆ. ನೂರ್‌ಜಹಾನ್ ಎನ್ನುವ ಹೆಸರೂ ಕೂಡ ನೂರಿ, ನೂರಕ್ಕ, ನೂರವ್ವ, ನೂರಜ್ಜಿ ಎಂದೇ ಬಳಕೆಯಾಗುತ್ತದೆ. ಅಪ್ಪ-ಅವ್ವ, ಅಣ್ಣ-ತಮ್ಮ, ಅತ್ತೆ-ಮಾವ, ಅಕ್ಕ-ತಂಗಿ, ಸಣ್ಣಪ್ಪ-ದೊಡ್ಡಪ್ಪ ಎನ್ನುವ ರೂಪಗಳೇ ಪಿಂಜಾರರಲ್ಲಿ ನಿತ್ಯ ಬಳಕೆಯಾಗುತ್ತವೆ. ಕನ್ನಡ ಭಾಷೆಯ ಉಚ್ಚಾರಣೆಯಿಂದಾಗಲೀ ಅವರ ಉಡುಗೆ-ತೊಡುಗೆಯಿಂದಾಗಲೀ ಅವರನ್ನು ಮುಸ್ಲಿಮರೆಂದು ಗುರುತಿಸಲು ಸಾಧ್ಯವಾಗುವುದಿಲ್ಲ. ಭಾಷೆಗೆ ಸಂಬಂಧಿಸಿದ ವಿವರಗಳು ಬೇರೊಂದು ಅಧ್ಯಾಯದಲ್ಲಿ ಬರುವುದರಿಂದ ಇಲ್ಲಿ ಅದನ್ನು ವಿಸ್ತರಿಸಲು ಹೋಗುವುದಿಲ್ಲ.

ಪಿಂಜಾರರ ಸಾಮಾಜಿಕ ಜೀವನದ ಸಕಲ ವಿವರಗಳು ಸಲ್ಲುವುದು ಹಿಂದೂ ಸಮುದಾಯದವರಲ್ಲಿಯೇ. ಮದುವೆಯಂತಹ ಸಂಬಂಧಗಳನ್ನು ಹೊರತುಪಡಿಸಿದರೆ ಉಳಿದೆಲ್ಲ ಭಾವನಾತ್ಮಕ ಸಂಬಂಧಗಳು, ಸಾವು, ತಿಥಿಯಂತಹ ಆಚರಣೆಗಳಲ್ಲಿ ಕೂಡ ಹಿಂದೂ ಸಮುದಾಯಗಳ ಪಾಲ್ಗೊಳ್ಳುವಿಕೆ ಇಲ್ಲದೆ ನಡೆಯುವುದಿಲ್ಲ. ಇಂತಹದೊಂದು ಜನಾಂಗ ಕರ್ನಾಟಕ ಹಾಗೂ ಭಾರತದ ಧರ್ಮರಾಜಕಾರಣದ ವಿದ್ರೋಹದ ಪರಿಣಾಮವಾಗಿ ಈವರೆಗೆ ನಿರ್ಲಕ್ಷ್ಯಕ್ಕೊಳಗಾದದ್ದೂ ಅಲ್ಲದೇ ಸಮಕಾಲೀನವಾದ ಧಾರ್ಮಿಕ ಮೂಲಭೂತವಾದ ಸೃಷ್ಟಿಸಿರುವ ತಲ್ಲಣದಿಂದಾಗಿ ತನ್ನ ನಿಜರೂಪವನ್ನೇ ಕಳೆದುಕೊಳ್ಳುವ ಅಪಾಯದಲ್ಲಿದೆ.

ಪಿಂಜಾರರ ಮೂಲ ಯಾವುದು ? ಅವರ ಮತಾಂತರಕ್ಕೆ ಇದ್ದಿರಬಹುದಾದ ಒತ್ತಡಗಳೇನು? ಮುಂತಾದ ಅನುಮಾನಗಳಿಗೆ ಉತ್ತರ ಹುಡುಕುವ ಪ್ರಯತ್ನಕ್ಕೆ ಅವರ ಸಾಮಾಜಿಕ ಸಾಂಸ್ಕೃತಿಕ ಜೀವನದ ಒಳ ವಿವರಗಳಿಗೆ ಹೋಗಬೇಕು. ಅಷ್ಟಾದರೂ ಮಹ್ಮದೀಯ ಅರಸರಲ್ಲಿ ನಿರ್ದಿಷ್ಟವಾಗಿ ಯಾವ ರಾಜನಿಂದ ಮತಾಂತರಕ್ಕೆ ಒಳಗಾದರು? ಹೀಗೆ ಮತಾಂತರಕ್ಕೆ ಒಳಗಾಗುವ ಮೊದಲೇ 'ಪಿಂಜಾರ' ಎಂದು ಕರೆಸಿಕೊಳ್ಳುವ ಜನಾಂಗ ಒಂದಿತ್ತೇ? ಎಂಬ ಅನುಮಾನಗಳಿಗೆ ಸ್ಪಷ್ಟ ಉತ್ತರ ಸಿಗುವುದಿಲ್ಲ. ಯಾಕೆಂದರೆ ಇತಿಹಾಸದಲ್ಲಿ ನಡೆದುಹೋದ ಮತಾಂತರದ ಪ್ರಕ್ರಿಯೆ ಏಕಕಾಲಕ್ಕೆ ಸಂಭವಿಸಿ ನಂತರ ನಿಂತುಹೋದದ್ದಲ್ಲ. ಅಲ್ಲದೆ ಯಾವುದೋ ನಿರ್ದಿಷ್ಟ ಕಾಲಘಟ್ಟದಲ್ಲಿ ಮಾತ್ರ ಸಂಭವಿಸಿದ್ದಲ್ಲ. ಅನ್ಯಮತಕ್ಕೆ ಸೇರಿದ ರಾಜರು ಮತ್ತು ಅವರ ವಂಶಪಾರಂಪರ್ಯದ ಆಳ್ವಿಕೆಯಲ್ಲಿ ದೀರ್ಘವಾಗಿ ಅಲ್ಲಲ್ಲಿ ಆಗಾಗ್ಗೆ ಸಂಭವಿಸಿರುವ ಧಾರ್ಮಿಕ ಮತಾಂತರ ಪ್ರಕಟಪಡಿಸಿದ ಆಶಯಗಳೇ ಬೇರೆ. ಹಾಗೆ ಮತಾಂತರಕ್ಕೊಳಗಾದ ಜನಾಂಗಗಳು ತೋರಿದ ಆಶಯಗಳೇ ಬೇರೆ ಎಂಬುದು ಅನಂತರದ ಇತಿಹಾಸವಾಗಿದೆ.

ಹಿಂದಿನ ಸಮೀಕ್ಷೆಯೊಂದರಲ್ಲಿ 'ಹಿಂದೂ ಪಿಂಜಾರ'ರೂ ಇದ್ದಾರೆ ಎನ್ನುವ ಸಂಗತಿ ತಿಳಿದು ಬರುತ್ತದೆ. ಸದ್ಯ ಕರ್ನಾಟಕದಲ್ಲಿ ಅಂತಹ ಜನಾಂಗ ಹಿಂದೂ ಸಮುದಾಯದಲ್ಲಿ ಕಂಡು ಬರುವುದಿಲ್ಲ. ಈ ಸಮೀಕ್ಷೆಯ ಮಾಹಿತಿಯನ್ನು ಒಪ್ಪುವುದಾದರೆ ಮತಾಂತರಕ್ಕೆ ಕೇವಲ ಪಿಂಜಾರರು ಮಾತ್ರ ಒಳಗಾದರೇ? ಎನ್ನುವ ಪ್ರಶ್ನೆ

ಉದ್ಭವಿಸುತ್ತದೆ. ಪಿಂಜಾರರು ಎಂದು ಗುರುತಿಸಿಕೊಳ್ಳುತ್ತಿದ್ದ ಈ ಜನಾಂಗದ ಮೂಲ ಹೆಸರು ಬೇರೆಯದೇ ಇದ್ದಿರಬಹುದೇ? ಮತಾಂತರಕ್ಕೆ ಒಳಗಾದ ನಂತರ ಕಸುಬಿನ ಮೂಲದ ಈ ಹೆಸರು ಬಂದಿರಬಹುದೇ? ತಮಿಳಿನಲ್ಲಿ ಪಂಜುಕೊಟ್ಟಿ, ತೆಲುಗಿನಲ್ಲಿ ದೂದೇಕುಲ, ಕನ್ನಡದಲ್ಲಿ ಪಿಂಜಾರರೆಂದು ಕರೆಸಿಕೊಳ್ಳುವುದನ್ನು ನೋಡಿದರೆ ಮೇಲಿನ ಅನುಮಾನಗಳು ಮತ್ತಷ್ಟು ದೃಢವಾಗುತ್ತವೆ.

ಮೇಲಿನ ಒಟ್ಟಾರೆ ಅಧ್ಯಯನದ ಫಲದಿಂದ ಪಿಂಜಾರರ ಜನಾಂಗವನ್ನು ಕುರಿತಂತೆ ಈ ಕೆಳಗಿನ ಮಾತುಗಳಲ್ಲಿ ನಿರ್ಣಯಕ್ಕೆ ಬರಬಹುದಾಗಿದೆ.

★ ಪಿಂಜಾರರು ಮಹಮ್ಮದೀಯ ಅರಸರ ಆಡಳಿತಾವಧಿಯಲ್ಲಿ ನಡೆದ ಬಲಾತ್ಕಾರ ಮತ್ತು ಸ್ವಯಂ-ಪ್ರೇರಣೆಯ ಮತಾಂತರಕ್ಕೆ ಒಳಗಾದವರು.

★ ಪಿಂಜಾರರ ಒಟ್ಟಾರೆ ಜೀವನ ವಿಧಾನವನ್ನು ಪ್ರಭಾವಿಸಿರುವ ಲಿಂಗಾಯತ, ನಾಯಕ, ಮರಾಠಿ, ಕುರುಬ ಮತ್ತು ಅಸ್ಪೃಶ್ಯ ಜನಾಂಗದ ನೆಲೆ ಪಿಂಜಾರರ ಮೂಲವಾಗಿದೆ. ಅಂದರೆ ನಿಸ್ಸಂಶಯವಾಗಿಯೂ ಹಿಂದೂ ಶೂದ್ರ ಸಮುದಾಯದ ನೆಲೆ.

★ ಮಹಮ್ಮದೀಯ ಅರಸ, ಮುಖ್ಯವಾಗಿ ಔರಂಗಜೇಬನ ಆಡಳಿತಾವಧಿ ಮತ್ತು ಟಿಪ್ಪುವಿನ ಆಡಳಿತ ಕಾಲದ ಮತಾಂತರವನ್ನು ಪಿಂಜಾರರ ಭಾವಕೋಶ ನೆನೆಯುವುದರಿಂದ ಈ ಜನಾಂಗದ ಇತಿಹಾಸ ಮೂರು ಶತಮಾನಕ್ಕಿಂತ ಹಿಂದೆ ಹೋಗುವುದಿಲ್ಲ.

★ ಪಿಂಜಾರರ ಸಾಂಸ್ಕೃತಿಕ ವೈಶಿಷ್ಟ್ಯ ದ್ವಿ-ಸಂಸ್ಕೃತಿ (**Dual Culture**) ರೂಪದ್ದಾಗಿದೆ.

ಈ ಮೇಲಿನ ಅಭಿಪ್ರಾಯಗಳು ಅಂತಿಮ ಎಂದೇನೂ ಭಾವಿಸಬೇಕಿಲ್ಲ. ಸಮಕಾಲೀನ ಸಾಂಸ್ಕೃತಿಕ ಅಧ್ಯಯನಗಳು ಇತಿಹಾಸವನ್ನು ಅದರ ಎಲ್ಲ ಸೂಕ್ಷ್ಮಗಳೊಂದಿಗೆ ಪುನರ್ ರಚಿಸುತ್ತಿವೆ. ಆದುದರಿಂದ ಚರಿತ್ರೆಯಲ್ಲಿ ಆಗಿ ಹೋದದ್ದನ್ನು 'ಇದಮಿತ್ಥಂ' ಎಂದು ಪ್ರತಿಪಾದಿಸುವುದು ಅವಿವೇಕವಾಗುತ್ತದೆ.

## ೨.೩ ಪಿಂಜಾರರ ಭೌಗೋಳಿಕ ಪರಿಸರ ಮತ್ತು ಜನಸಂಖ್ಯೆ

ಪಿಂಜಾರರು ವಾಸಿಸುವ ಪರಿಸರಕ್ಕೂ ಅವರ ಕಸುಬಿಗೂ ಸಂಬಂಧವಿದೆ. ಅವರ ಕಸುಬಿಗೆ ಅತ್ಯಗತ್ಯವಾದ ಕಚ್ಚಾವಸ್ತು ಹತ್ತಿ. ಹತ್ತಿ ಬೆಳೆಯುವ ಒಣಭೂಮಿ ಬೇಸಾಯವೇ ಅಧಿಕವಾಗಿರುವ ಪ್ರದೇಶಗಳಲ್ಲಿ ಸಹಜವಾಗಿ ಪಿಂಜಾರರು ಹೆಚ್ಚಾಗಿ ವಾಸವಿದ್ದಾರೆ. ಹತ್ತಿಯನ್ನು ಸಾಮಾನ್ಯವಾಗಿ ಮಳೆ ಆಧಾರಿತ ಹೊಲಗಳಲ್ಲಿ, ಅಂದರೆ ಬಯಲು ಪ್ರದೇಶಗಳಲ್ಲಿ ಹೆಚ್ಚು ಬೆಳೆಯಲಾಗುತ್ತದೆ. ಪಿಂಜಾರರು ತಮ್ಮ ವೃತ್ತಿಗೆ ಅಗತ್ಯವಾದ ಹತ್ತಿಯನ್ನು ನೇರವಾಗಿ ರೈತರಿಂದಾಗಲೀ, ವ್ಯಾಪಾರಸ್ಥರಿಂದಾಗಲೀ ಕೊಳ್ಳುವುದಿಲ್ಲ. ಇವರ ಗಿರಾಕಿಗಳೆಂದರೆ ಬಿಡಿಬಿಡಿಯಾಗಿ ಕೆ.ಜಿ. ಗಟ್ಟಲೇ ತೂಕಕ್ಕಾಗಿ ಮಾರುವ ಬಾಯಿ ಚಪಲದ ಮನೆಗಳ್ಳರು. ಅಂತಹವರಿಂದ ಕಡಿಮೆ ಹಣಕ್ಕೆ ಹತ್ತಿ ಸಿಗುತ್ತದೆನ್ನುವುದು ಇದಕ್ಕೆ ಕಾರಣವಾಗಿದೆ.

ಹೀಗೆ ಖರೀದಿಸಿ ಸಂಗ್ರಹಿಸಿದ ಹತ್ತಿಯನ್ನು ಕೈಮುಗ್ಗದಿಂದ ಸಂಸ್ಕರಿಸುತ್ತಾರೆ. ಆಧುನಿಕತೆಯಿಂದ ಕೈಮುಗ್ಗಗಳು ಮೂಲೆ ಸೇರಿದ್ದು ಜಿನ್ನಿಂಗ್ ಫ್ಯಾಕ್ಟರಿಯಿಂದ ಹತ್ತಿ ಅರಳೆಯನ್ನು ಕೊಂಡು ತರುವುದು ಪಿಂಜಾರರಿಗೆ ಈಗ ಅನಿವಾರ್ಯವಾಗಿದೆ.

ಈ ಹಣದಿಂದ ಹಾಸಿಗೆ, ದಿಂಬಿನ ಬಟ್ಟೆಯನ್ನು ಖರೀದಿಸಿ ಪಿಂಜಾರರು ತಮ್ಮ ಕಾಯಕ ಶುರು ಮಾಡುತ್ತಾರೆ. ಪಿಂಜಾರರ ಕಾಯಕದ ಬಗ್ಗೆ ಅಧ್ಯಯನವೊಂದು ಹೀಗೆ ಹೇಳುತ್ತದೆ. 'ಕಪ್ಪುಗಡ್ಡದ ಜಂಜಾಟವಿಲ್ಲದೆ ಜುಬ್ಬ ಪೈಜಾಮ ಹಾಕದ ಪಿಂಜಾರ ಪುರುಷರನ್ನು ಕಾಣಬಹುದು. ಇವರು ಕಮಾನಿನ ಒಂದು ತುದಿಯಲ್ಲಿ ಅಗಲವಾದ ನುಣುಪು ಹಲಗೆಯ ತುಂಡೊಂದನ್ನು ಜೋಡಿಸುವರು. ಅದರ ಹೊರತುದಿಯಿಂದ ಹಿಡಿದು ಕಮಾನಿನ ಮತ್ತೊಂದು ಚಿತ್ರಾಕಾರದ ತುದಿಯವರೆಗೆ ಹುರಿಯಾಗಿ ಹೊಸೆದ ತೊಗಲಿನ ದಾರ ಬಿಗಿಯುವರು. ಕಮಾನಿನ ಮಧ್ಯದಲ್ಲಿ ತೊಗಲಿನ ಬೆಲ್ಟ್ ಪಟ್ಟಿಯನ್ನು ಸುತ್ತಿ ಹತ್ತಿ ಹೊಡೆಯುವಾಗ ನೆಲದಲ್ಲಿ ಹಾಕಿದ ಹತ್ತಿಗೆ ದಾರ ತಗಲುವಂತೆ ಜೋಡಿಸಿದ ಕಮಾನು ಮತ್ತು ಕೊಡತಿಯನ್ನು ಹೆಗಲ ಮೇಲೆ ಹೊತ್ತು ಕಾಲ್ನಡಿಗೆಯಲ್ಲೇ ಹತ್ತೂರು ಸುತ್ತುವ ಪಿಂಜಾರರನ್ನು ಕಾಣಬಹುದು'.

'ಬೆಸ್ಕಿ ಕೊಡತಿಯನ್ನು ಹೊತ್ತವರು ಊರು ತಲುಪುತ್ತಿದ್ದಂತೆಯೇ ಹನುಮಪ್ಪನ ಗುಡಿಯೋ, ಬಸವಣ್ಣನ ಪೋಳಿ ಕಟ್ಟೆಯ ಮೇಲೋ ಠಿಕಾಣಿ ಹೂಡಿ ಊರ ಓಣಿಯ ಗಾದಿ ಹಾಕುವುದಾಗಿ ಸಾರುತ್ತಾರೆ. ಗಾದಿ ಬೇಕಾದವರು ಹತ್ತಿಯ ಗಂಟು, ಅರಿವೆ ಹೊತ್ತುಕೊಂಡು ಬರುತ್ತಾರೆ. ಹಣದ ಮಾತುಕತೆ ಮುಗಿಸಿ ಗಾದಿ ತಯಾರು ಮಾಡಲು ಹೇಳುತ್ತಾರೆ'.

'ಗಂಟಿನಿಂದ ಹತ್ತಿಯನ್ನು ಸುರುವಿದ ಪಿಂಜಾರ ಕಮಾನು ಕಟ್ಟಿ, ಕೊಡತಿಯಿಂದ ಹೊಡೆದು, ಹತ್ತಿಯನ್ನು ಎಳೆಎಳೆಯಾಗಿ ಮಾಡುತ್ತಾನೆ. ಪುಡಿಪುಡಿಯಾದ ಹತ್ತಿಯನ್ನು ಒಂದುಗೂಡಿಸುವಷ್ಟರಲ್ಲಿ ಧೂಳು ಆವರಿಸುತ್ತದೆ. ಕಾಟಾಚಾರಕ್ಕಾಗಿ ಮೂಗು ಬಾಯಿಗೆ ಬಟ್ಟೆ ಬಿಗಿದುಕೊಂಡು ಹತ್ತಿಯನ್ನು ಮೂರು ಬಾಯಿ ಹೊಲಿದು, ಗಾದಿ, ದಿಂಬು ಬಟ್ಟೆಗಳಲ್ಲಿ ತುಂಬಿ ನಾಲ್ಕನೆಯ ಬಾಯಿಯನ್ನು ಬಂದ್ ಮಾಡಿ, ಕೋಲಿನಿಂದ ಬಡಿದು ಸಮಗೊಳಿಸಿ ದಾರದಿಂದ ಚುಟಿಕೆ ಗಂಟು ಹಾಕಿ ದಿಂಬು ಸಿದ್ಧ ಮಾಡುವುದರಲ್ಲಿ ಸಫಲರಾಗುತ್ತಾರೆ'[8]

ಪಿಂಜಾರರು ತಮ್ಮ ಕಸುಬು ನಿರ್ವಹಿಸುವ ಈ ಚಿತ್ರ ಅವರ ನೆಲೆಗಳನ್ನು ಸೂಕ್ಷ್ಮವಾಗಿ ತಿಳಿಸುತ್ತದೆ. ಅಂದರೆ ಹತ್ತಿಯನ್ನು ಯಥೇಚ್ಛವಾಗಿ ಬೆಳೆಯುವ ಒಣ, ಬಯಲುಭೂಮಿಯ ಪ್ರದೇಶಗಳಲ್ಲಿ ಇವರು ಪ್ರಧಾನವಾಗಿ ಕಂಡುಬರುತ್ತಾರೆ. ಹಾಗಾಗಿ ಉತ್ತರ ಕರ್ನಾಟಕದ ಬಹುತೇಕ ಜಿಲ್ಲೆಗಳಲ್ಲಿ ಇವರ ನೆಲೆಗಳಿವೆ. ಬೀದರ್, ಗುಲಬರ್ಗಾ, ರಾಯಚೂರು, ಕೊಪ್ಪಳ, ಬಳ್ಳಾರಿ, ಚಿತ್ರದುರ್ಗ, ದಾವಣಗೆರೆ, ಹಾವೇರಿ, ಗದಗ, ಧಾರವಾಡ, ಬಾಗಲಕೋಟೆ, ಬಿಜಾಪುರ, ಬೆಳಗಾಂ ಜಿಲ್ಲೆಗಳಲ್ಲಿ ಇವರ ವಾಸ ಹೆಚ್ಚಾಗಿದೆ. ಔರಂಗಜೇಬನ ಕಾಲದಲ್ಲಿ ಆಯಿತು ಎನ್ನಲಾದ ಧಾರ್ಮಿಕ ಮತಾಂತರದ ನಂತರ ಉತ್ತರದಿಂದ ದಕ್ಷಿಣಕ್ಕೆ

ವಲಸೆ ಬಂದವರಲ್ಲಿ ಪಿಂಜಾರರೂ ಸೇರಿರಬಹುದು. ಅಲ್ಲದೆ ಹಿಂದಿನ ಸಮೀಕ್ಷೆಗಳು ತಿಳಿಸಿದ ಹಾಗೆ ಪಿಂಜಾರರ ಪೂರ್ವಿಕರು ಬೊಂಬಾಯಿ ಪ್ರಾಂತ್ಯದವರು ಹಾಗೂ ಆಂಧ್ರದ ದೂದೇಕುಲ ಜನಾಂಗದ ಸಾಮುದಾಯಿಕ ಸ್ವರೂಪವುಳ್ಳವರು ಎನ್ನುವುದು ಅವರ ನೆಲೆಗಳಿಂದ ಕಂಡುಬರುತ್ತದೆ. ಮೇಲೆ ತಿಳಿಸಿದ ಅನೇಕ ಜಿಲ್ಲೆಗಳಲ್ಲಿ ಅಲ್ಲದೆ ದಕ್ಷಿಣದ ಮೈಸೂರು, ಮಂಡ್ಯ, ಹಾಸನ, ಶಿವಮೊಗ್ಗದಂತಹ ಮಲೆನಾಡಿನ ಪ್ರದೇಶಗಳಲ್ಲಿ ಕೂಡ ವಿರಳವಾಗಿ ಬಂದು ನೆಲೆಸಿದ್ದಾರೆ. ಇವರೆಲ್ಲಾ ಉತ್ತರ ಕರ್ನಾಟಕ ಮತ್ತು ಆಂಧ್ರದ ಕಡೆಯಿಂದಲೇ ಬಂದು ಇಲ್ಲಿ ನೆಲೆಯೂರಿದವರು ಮತ್ತು ಬೇರೆ ಬೇರೆ ವೃತ್ತಿಯನ್ನಾಶ್ರಯಿಸಿದವರು.

ಪಿಂಜಾರರು ಈ ವೃತ್ತಿಯನ್ನು ವಂಶಪಾರಂಪರ್ಯವಾಗಿ ಮುಂದುವರೆಸಿಕೊಂಡು ಬರುವುದೇ ಅವರ ಆರ್ಥಿಕ ಸ್ಥಿತಿ ಜಡಗೊಳ್ಳಲು ಕಾರಣವಾಗಿದೆ. ಆಧುನಿಕ ಕೈಗಾರಿಕೀಕರಣದ ಪರಿಣಾಮವಾಗಿ ಎಲ್ಲಾ ಬಗೆಯ ಕರಕುಶಲ, ಗೃಹ ಕೈಗಾರಿಕೆಗಳು ನಾಶವಾಗುತ್ತಿರುವ ಹಿನ್ನೆಲೆಯಲ್ಲಿ ಪಿಂಜಾರರ ಈ ಹಾಸಿಗೆ ಮಾಡುವ ಕಸುಬು ಕೂಡ ಲಾಭದಾಯಕವಾಗಿಲ್ಲ. ಸ್ವಂತ ಬಂಡವಾಳ ಹೂಡಿ ಇದನ್ನೇ ಲಾಭದಾಯಕ ಉದ್ಯಮವನ್ನಾಗಿ ಮಾಡಿಕೊಳ್ಳಬಹುದಾದ ಸ್ಥಿತಿವಂತಿಕೆ ಕರ್ನಾಟಕದ ಯಾವ ಪಿಂಜಾರನಿಗೂ ಇಲ್ಲ. ಪಿಂಜಾರರ ಇಂಥ ಸ್ಥಿತಿ ಕೂಡ ಒಟ್ಟಾರೆ ಒಂದು ಜನಾಂಗವೇ ನಿರ್ಲಕ್ಷ್ಯಕ್ಕೊಳಗಾದ ಸಂಗತಿಯನ್ನು ತಿಳಿಸುತ್ತದೆ. ನಮ್ಮ ಸಾಮಾಜಿಕ ಸಂದರ್ಭದಲ್ಲಿ ಮತಾಂತರಕ್ಕೆ ಇರಬಹುದಾದ ಎಲ್ಲಾ ಬಗೆಯ ಒತ್ತಡಗಳನ್ನು ಮೀರಿ, ಧರ್ಮಮೂಲವಾದ ಭಾವನಾತ್ಮಕ ನಿಯಂತ್ರಣದಲ್ಲಿಯೇ, ಮತಾಂತರಗೊಂಡ ಜನಾಂಗಗಳು ತಮ್ಮ ಎಂದಿನ ದಾರಿದ್ರ್ಯ, ಅಸಹಾಯಕತೆಯನ್ನು ಉಳಿಸಿಕೊಂಡಿವೆ ಎನ್ನುವುದಕ್ಕೆ ಪಿಂಜಾರ ಜನಾಂಗವೇ ಸ್ಪಷ್ಟ ಉದಾಹರಣೆಯಾಗಿದೆ. ಅಂದರೆ ಮತಾಂತರದ ಮೂಲ ಉದ್ದೇಶಗಳೇ ಚಾರಿತ್ರಿಕ, ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ಒಳ-ಹೊರ ಒತ್ತಡಗಳಿದ್ದಾಗ್ಯೂ, ಈಡೇರದಂತಹ ಸಂಕೀರ್ಣ ಗೊಂದಲದಲ್ಲಿ ಮತಾಂತರಗೊಂಡ ಜನಾಂಗಗಳು ತಮ್ಮ ಮೂಲಜಾತಿಯ ಸರ್ವರೀತಿಯ ಅವಮಾನದ ನೆಲೆಗಳನ್ನು ವಿಸ್ತರಿಸಿಕೊಳ್ಳುತ್ತಲೇ ಇರುವುದು ನಿರಂತರವಾಗಿಬಿಟ್ಟಿದೆ. ಇತಿಹಾಸದ ಯಾವುದೋ ಒಂದು ಘಟ್ಟದಲ್ಲಿ ಸಂಭವಿಸಿರುವ ಈ ಮತಾಂತರದ ಪ್ರಕ್ರಿಯೆ (ಅದರಲ್ಲೂ ಹಿಂದೂ ಧರ್ಮದಿಂದ ಇನ್ನಿತರೆ ಧರ್ಮಗಳಿಗೆ ಮತಾಂತರಗೊಳ್ಳುವ ಸಂದರ್ಭದಲ್ಲಿ)ಯಲ್ಲಿ ಗುರುತಿಸಿಕೊಳ್ಳುವ ಜನಾಂಗಗಳು ಮುಖ್ಯವಾಗಿ ತಮ್ಮನ್ನು ಕೀಳರಿಮೆಯಿಂದ, ಶೋಷಣೆ, ಕ್ರೌರ್ಯ, ಅವಮಾನಗಳಿಂದ ಬಿಡಿಸಿಕೊಳ್ಳುವ ಆಶಯವನ್ನು ಒಳಗೊಂಡಿರುತ್ತವೆ. ಇಂಡಿಯಾದ ಸಾಮಾಜಿಕ ಇತಿಹಾಸದಲ್ಲಿ, ಅದರಲ್ಲೂ ಪಿಂಜಾರರ ಸಂದರ್ಭದಲ್ಲಿ ಈ ಮೂಲಭೂತ ಆಶಯವೇ ಮರೆಯಾಗಿ ಮತ್ತೊಂದು ಬಗೆಯ ಕೀಳರಿಮೆಯನ್ನು ಅನುಭವಿಸಬೇಕಾದಂಥ ಪರಿಸ್ಥಿತಿ ನಿರ್ಮಾಣವಾಗಿದೆ. ಹೀಗಾಗಿ, ಒಂದು ಜನಾಂಗದ ಒಟ್ಟಾರೆ ಬದುಕನ್ನು ಧಾರ್ಮಿಕ ಹಿತಾಸಕ್ತಿಗಳು ನಿರ್ದೇಶಿಸುವಷ್ಟೇ ಪ್ರಬಲವಾಗಿ ಅಲ್ಲಿನ ಆರ್ಥಿಕ ಸ್ಥಿತಿಗತಿಗಳೂ ನಿಯಂತ್ರಿಸುವುದರಿಂದ ಪಿಂಜಾರರು ತಮ್ಮ ವೃತ್ತಿಗೆ ಅಂಟಿಕೊಳ್ಳಲಾಗದಂತಹ ಗೊಂದಲದಲ್ಲಿ ತಮಗೆ ಸಾಧ್ಯವಾದ ಇನ್ನಿತರೆ ಉಪಕಸುಬುಗಳನ್ನು ಆಶ್ರಯಿಸುವುದು ಅನಿವಾರ್ಯವಾಗಿದೆ. ಆಧುನಿಕ

ಕೈಗಾರಿಕೆಗಳು ಬಂದ ನಂತರವಂತೂ ಪಿಂಜಾರರು ತಮ್ಮ ಮೂಲವೃತ್ತಿಯನ್ನು ಮುಂದುವರಿಸಿಕೊಂಡು ಬದುಕಲಾಗದೆ, ಸ್ವಂತ ಬಂಡವಾಳವಾಗಲೀ, ಸರ್ಕಾರದ ಅನುದಾನವಾಗಲೀ ಇಲ್ಲದೆ ಹೊಟ್ಟೆಪಾಡಿಗೆ ಕೂಲಿ-ನಾಲಿ ಮಾಡುವುದು, ಕಲಾಯ ಮಾಡುವ, ಕೂದಲು ಮಾರುವ, ಕೊಂಬು ಹೆರೆಯುವ, ಬಡಗಿತನ, ಕಮ್ಮಾರಿಕೆ ಮುಂತಾದ ಸಣ್ಣ ಪುಟ್ಟ ಕಸುಬುಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು ಕರ್ನಾಟಕ ರಾಜ್ಯಾದ್ಯಂತ ಚದುರಿಹೋಗಿದ್ದಾರೆ.

ಪಿಂಜಾರರ ಆಹಾರ ಪದ್ಧತಿಯನ್ನು ಇಲ್ಲಿಯೇ ಸ್ವಲ್ಪ ಮಟ್ಟಿಗೆ ಗಮನಿಸಿದರೆ ಅವರ ಭೌಗೋಳಿಕತೆಗೆ ಒಂದು ಬಗೆಯ ಅಥೆಂಟಿಸಿಟಿ ದೊರೆಯುತ್ತದೆ. ಪಿಂಜಾರರ ವಾಸದ ನೆಲೆಗಳಲ್ಲಿ ಪ್ರಧಾನವಾದ ಬೆಳೆ ಎಂದರೆ ಜೋಳ. ಇವರ ಮುಖ್ಯ ಆಹಾರವೂ ಕೂಡ ಜೋಳದ ರೊಟ್ಟಿ. ಉಳಿದಂತೆ ಕುರುಸಾಣಿ, ತೊಗರಿ, ಹಲಸಂದಿ, ಅವರೆ, ಮೊದಲಾದ ಬೆಳೆಗಳು ಇಲ್ಲಿ ಹೇರಳ. ಹಸಿಮೆಣಸಿನಕಾಯಿ ಮತ್ತು ಒಣ ಮೆಣಸಿನಕಾಯಿ ಚಟ್ನಿಯೊಂದಿಗೆ ಕೆನೆಮೊಸರು ಕಲೆಸಿಕೊಂಡು ರೊಟ್ಟಿ ತಿನ್ನಲು ಕೂತರೆಂದರೆ ದೇವರಿಗೂ ಹೊಟ್ಟೆ ಕಿಚ್ಚಾಗಬಹುದು. ರಾಗಿ ಮತ್ತು ಅಕ್ಕಿ ಇವರ ನಿತ್ಯದ ಆಹಾರವಲ್ಲ. ನವಣೆ ಅಕ್ಕಿ ಅನ್ನ ಇವರಿಗೆ ಪ್ರಿಯವಾದುದು. ಸೂರ್ಯಕಾಂತಿ, ಶೇಂಗಾ, ಉಳ್ಳಗಡ್ಡಿಯಂತಹ ವಾಣಿಜ್ಯ ಬೆಳೆಗಳು ಇಲ್ಲಿ ಅಪಾರ. ಇಂತಹ ವಾತಾವರಣದಲ್ಲಿ ಬದುಕುವ ಪಿಂಜಾರರು ಕೆಲವರು ಸಣ್ಣಪುಟ್ಟ ಹಿಡುವಳಿದಾರರೂ ಆಗಿದ್ದಾರೆ. ಈ ಅಧ್ಯಯನದ ಸಂದರ್ಭದಲ್ಲಿ ಗಮನಿಸಿದಂತೆ ಒಂಟಿ ಎತ್ತನ್ನು ಕಟ್ಟಿಕೊಂಡು ಪಿಂಜಾರರು ಅಗತ್ಯ ಬಿದ್ದಾಗಲೆಲ್ಲಾ ಮತ್ತೊಬ್ಬರ ಒಂಟಿ ಎತ್ತನ್ನು 'ಮುಯ್ಯಿ' ಪಡೆದು ಜಿರಾತಿನ ಕೆಲಸಗಳನ್ನು ಮಾಡಿಕೊಳ್ಳುತ್ತಾರೆ. ಕಾಡಿನ ದಟ್ಟ ಹಸಿರಿಲ್ಲದ, ಗುಡ್ಡಬೆಟ್ಟಗಳಿಂದ ಧುಮ್ಮಿಕ್ಕುವ ಝರಿ-ಜಲಪಾತಗಳಿಲ್ಲದ ಒಣ ಪರಿಸರದಲ್ಲಿ ಧೂಳು ಸೇವಿಸುತ್ತಾ ಈ ಜನ ಬದುಕಲು ಎಷ್ಟೆಲ್ಲಾ ಹರಸಾಹಸ ಮಾಡುತ್ತಾರೆಂದು ನೋಡಿದರೆ 'ನರಕ' ಎನ್ನುವುದು ಇದೇ ಇರಬೇಕು ಎನಿಸುತ್ತದೆ.

ಪಿಂಜಾರರ ಜೀವನದ ನೆಲೆಗಳು ಹೀಗೆ ಬಯಲುಸೀಮೆಯ ಆವರಣದಲ್ಲಿ ಪ್ರಧಾನವಾಗಿ ಕಂಡು ಬರುತ್ತವಾದರೂ ಜೀವನದ ಭದ್ರತೆಯನ್ನು ಹುಡುಕಿಕೊಂಡು ಈಗಲೂ ಬೇರೆ ಬೇರೆ ನೆಲೆಗಳಿಗೆ ಅವರು ಸ್ಥಳಾಂತರಗೊಳ್ಳುವುದು ನಡೆದೇ ಇದೆ. ಅದರಲ್ಲೂ ಮುಸಲ್ಮಾನರ ಬಗ್ಗೆ ಹರಡಲಾಗುತ್ತಿರುವ ಕೋಮುದ್ವೇಷದ ಹಿನ್ನೆಲೆಯಲ್ಲಿ ಪಿಂಜಾರರು ಜೀವರಕ್ಷಣೆಗಾಗಿ ನಗರಗಳತ್ತ ವಲಸೆ ಹೊರಟಿರುವುದು ಕಂಡುಬರುತ್ತಿದೆ. ಅನೇಕರು ನಗರಕ್ಕೆ ಬಂದರೂ ತಮ್ಮ ಮೂಲ ಕಸುಬನ್ನು ತೊರೆಯದೆ ಅದರಲ್ಲೇ ಜೀವನ ನಿಭಾಯಿಸುತ್ತಿದ್ದಾರೆ.

ಪಿಂಜಾರರ ಜನಸಂಖ್ಯೆಯನ್ನು ತಿಳಿಯಲು ಎರಡು ಮುಖ್ಯ ತೊಡಕುಗಳಿವೆ.

೧. ಪಿಂಜಾರರು, ಅದರಲ್ಲೂ ಈಗೀಗ ತಮ್ಮನ್ನು ಅದೇ ಹೆಸರಿನಿಂದ ಗುರುತಿಸಿಕೊಳ್ಳದಿರುವುದು.

೨. ಪಿಂಜಾರರು ಸಂಘಟನೆಯಾಗದಿರುವುದು.

ಇಂಡಿಯಾದಂತಹ ಸಾಮಾಜಿಕ ವಾತಾವರಣದಲ್ಲಿ ಜಾತಿಗಳ ಮೂಲಕ ಗುರುತಿಸಿಕೊಂಡು ಅನೇಕ ಆರ್ಥಿಕ-ರಾಜಕೀಯ ಲಾಭಗಳನ್ನು ಪಡೆದುಕೊಳ್ಳುವುದು ಮೇಲ್ಜಾತಿಗಳ ಪಾಲಿಗೆ ವರವಾಗಿದೆ. ಆದರೆ ಅದೇ ಸಂದರ್ಭದಲ್ಲಿ ಇಲ್ಲಿನ ಅಪಾರ ಸಂಖ್ಯೆಯ ಕೆಳಜಾತಿಗಳು ತಮ್ಮ ಜಾತಿಗಳನ್ನು ಹೇಳಿಕೊಳ್ಳುವ, ಆ ಮೂಲಕ ಲಾಭಗಳನ್ನು ಪಡೆದುಕೊಳ್ಳುವ ಸಾಮಾಜಿಕ ಐಡೆಂಟಟಿಯನ್ನೇ ಹೊಂದಿಲ್ಲ. ಇಲ್ಲಿನ ಇತಿಹಾಸದುದ್ದಕ್ಕೂ ಅದು ನಡೆದುಬಂದಿದೆ. ಯಾಕೆಂದರೆ ಈ ಜಾತಿಸೂಚಕ ಹೆಸರು, ಪದಗಳಿಗೆ ಅಂಟಿಕೊಂಡಿರುವ ಅಪಮಾನದ, ಕೀಳರಿಮೆಯ ಭಾವನೆ ಈ ಜನಾಂಗಗಳನ್ನು ಹೀಗೆ ಸದಾ ಸಮಾಜದ ಕಡೆಯ ಸ್ಥಾನದಲ್ಲಿರುವಂತೆ ನೋಡಿಕೊಂಡಿದೆ. ಇದರ ಜೊತೆಗೆ ಹಾಗೆ ಜಾತಿ ಹೇಳಿಕೊಳ್ಳುವುದು ಕೂಡ ಉತ್ತಮ ನೈತಿಕತೆಯಲ್ಲ ಎನ್ನುವ ಸಂಸ್ಕಾರದ ನಡವಳಿಕೆಯೂ ಈ ಜನಾಂಗಗಳಿಗಿದೆ.

ಪಿಂಜಾರರಿಗೆ ತಾವು ಹಿಂದೂ ಧರ್ಮದಿಂದ ಮತಾಂತರಗೊಂಡವರೆಂಬ ಹಿನ್ನೆಲೆಯಲ್ಲಿ ವಿಷಾದವಾಗಲೀ, ಹೆಮ್ಮೆಯಾಗಲೀ ಇದ್ದಂತಿಲ್ಲ. ಆ ಬಗೆಗಿನ ನೆನಪುಗಳೂ ಅವರನ್ನು ಕಾಡುವುದಿಲ್ಲ. ಆದರೆ ಸಂವೇದನೆಗಳ ನೆಲೆಯಲ್ಲಿ ಅವರ ಆಚರಣೆಗಳಲ್ಲಿ ಆ ಕುರಿತಾದ ಸ್ತರಗಳನ್ನು ಗುರುತಿಸಬಹುದಾಗಿದೆ. ಧರ್ಮ ಎನ್ನುವುದು ಹೊಟ್ಟೆ ಹೊರೆಯುವುದರಷ್ಟು ತೀವ್ರವಾಗಿ ಕಾಡುವುದಿಲ್ಲ ಎನ್ನುವುದು ಪಿಂಜಾರರ ಬದುಕನ್ನು ಹತ್ತಿರದಿಂದ ನೋಡಿದರೆ ತಿಳಿಯುತ್ತದೆ. ವಿಚಿತ್ರವೆಂದರೆ ಹೀಗೆ ಮತಾಂತರಗೊಂಡ ಕಾರಣಕ್ಕೋ ಏನೋ ಹಿಂದೂ ಮತ್ತು ಮುಸಲ್ಮಾನರಿಬ್ಬರಿಂದಲೂ ಪಿಂಜಾರರು ತಾತ್ಸಾರಕ್ಕೊಳಗಾಗುತ್ತಿದ್ದಾರೆ. ಭಾವನಾತ್ಮಕ ಸಂಬಂಧಗಳ ಹಿನ್ನೆಲೆಯಲ್ಲಿ ಹಿಂದೂ ಧರ್ಮದ ಹಿಂದುಳಿದ ಸಮುದಾಯದ ಜೊತೆಗಿರುವ ಪಿಂಜಾರರು ಮುಸಲ್ಮಾನರ ಜೊತೆ ವ್ಯಾವಹಾರಿಕವಾಗಿ ಮಾತ್ರ ವರ್ತಿಸುತ್ತಾರೆ.

ಇದೆಲ್ಲದರ ಹಿನ್ನೆಲೆಯಲ್ಲಿ ಪಿಂಜಾರರು ತಮ್ಮನ್ನು ಅದೇ ಹೆಸರಿನಿಂದ ಗುರುತಿಸಿಕೊಳ್ಳುವ ಮತ್ತು ಗುರುತಿಸಿಕೊಳ್ಳದಿರುವ ಎರಡೂ ರೀತಿಯನ್ನು ಗಮನಿಸಬಹುದಾಗಿದೆ. ಇದಕ್ಕೆ ಬಹುಮುಖ್ಯವಾದ ತೊಡಕು ಎಂದರೆ ಪಿಂಜಾರರ ಭಾಷೆ. ಪಿಂಜಾರರ ತಾಯಿನುಡಿ ಕನ್ನಡ. ಇವರು ಆಡುವ ಭಾಷೆಯನ್ನು ಕೇಳಿ ಯಾರೂ ಇವರ ಜಾತಿಯನ್ನು ಕಂಡುಹಿಡಿಯಲಾಗುವುದಿಲ್ಲ. ವಿಶೇಷವಾಗಿ ಕರ್ನಾಟಕದ ಸಂದರ್ಭದಲ್ಲಿ ಮುಸಲ್ಮಾನರ ಭಾಷೆ ಉರ್ದು ಎಂಬ ನಂಬಿಕೆಯಿದೆ. ವಿಚಿತ್ರವೆಂದರೆ ಮುಸಲ್ಮಾನರೂ ಹಾಗೆ ತಿಳಿದುಕೊಂಡಿದ್ದಾರೆ. ಪಿಂಜಾರರು ಧಾರ್ಮಿಕವಾಗಿ ಇಸ್ಲಾಂನ್ನು ಅನುಸರಿಸಿದರೂ ಅವರ ಒಟ್ಟು ಸಂವೇದನೆಯ ಭಾಷೆ ಕನ್ನಡವೇ ಆಗಿದೆ. ಇವರ ಭಾಷೆಯನ್ನು, ನಡವಳಿಕೆಯನ್ನು ಗಮನಿಸಿದ ಹಿಂದೂ ಬಾಂಧವರು 'ನೀವು ಮುಸಲ್ಮಾನರ ಧರ್ಮದಲ್ಲಿ ಹುಟ್ಟಬಾರದಿತ್ತು' ಎಂದು ಕನಿಕರಿಸುತ್ತಾರೆ. ಹಾಗೆಯೇ ಮುಸಲ್ಮಾನರಾದವರು ಪಿಂಜಾರರ ಭಾಷೆ ಕೇಳಿದ ಕೂಡಲೇ 'ನೀವು ನದಾಫರೇನು?' ಎಂದು ಪ್ರಶ್ನಿಸುತ್ತಾರೆ. ಪಿಂಜಾರರನ್ನು 'ಮುಸಲ್ಮಾನರು' ಎಂದು ಗುರುತಿಸಲು ಸಾಧ್ಯವಾಗುವುದು ಬಹುಪಾಲು ಅವರ ಹೆಸರುಗಳನ್ನು ಕೇಳಿದಾಗ ಮತ್ತು ಮದುವೆ, ಮುಂಜಿ, ಸಾವು ಮೊದಲಾದ ಆಚರಣೆಗಳ

ಸಮಯದಲ್ಲಿ ಮಾತ್ರ. ಹಿಂದೂ-ಮುಸಲ್ಮಾನರಿಬ್ಬರೂ ತಮ್ಮ ಬಗೆಗೆ ಕೇಳುವ ಪ್ರಶ್ನೆಗಳಿಗಾಗಲೀ, ಅವರ ಅಣಕಗಳಿಗಾಗಲೀ ತಲೆಕೆಡಿಸಿಕೊಳ್ಳದ ಪಿಂಜಾರರು ಮುಸಲ್ಮಾನರು ತಮ್ಮನ್ನು ಅವಮಾನಿಸುವುದನ್ನು ಕಂಡು ಒಳಗೊಳಗೆ ಕ್ರೋಧಗೊಳ್ಳುತ್ತಾರೆ. ಮುಸಲ್ಮಾನರ ಬಗೆಗಿನ ತಿರಸ್ಕಾರಕ್ಕೆ ತಮಗೆ ನಮಾಜು, ಉರ್ದು ಬರುವುದಿಲ್ಲವಲ್ಲ ಎಂದು ಕೊರಗುತ್ತಾರೆ. ಅವುಗಳನ್ನು ಕಲಿಯಲು ಪುರುಸೊತ್ತಿಲ್ಲದಂತಹ ಜೀವನದ ಜಂಜಾಟಗಳಲ್ಲಿ ಮುಳುಗಿದವರೇ ಹೆಚ್ಚು.

ಹೀಗಾಗಿ 'ಪಿಂಜಾರರು' ಎಂದು ಹೇಳಿಕೊಳ್ಳುವುದಕ್ಕೂ ಮುಜುಗರಪಟ್ಟುಕೊಳ್ಳುವ, ಕೀಳರಿಮೆಯಿಂದ ನರಳುವ, ಮನಸ್ಸುಗಳ ನಡುವೆ ಧೈರ್ಯವಾಗಿ ಮುಲಾಜಿಲ್ಲದೆ ಹೇಳಿಕೊಂಡು ಬದುಕುವ ಪರಿಸರವೂ ಈ ಜನಾಂಗದಲ್ಲಿದೆ. ಅದರಲ್ಲೂ ಉತ್ತರ ಕರ್ನಾಟಕದ ಬಹುಪಾಲು ಜಿಲ್ಲೆಗಳಲ್ಲಿರುವ ಪಿಂಜಾರರು ಮಾತ್ರ ತುಂಬಾ ಸಲುಗೆ ಮತ್ತು ಪ್ರೀತಿಯಿಂದಲೇ 'ಪಿಂಜಾರರು' ಎಂದು ಹೇಳಿಕೊಳ್ಳುತ್ತಾರೆ. ಹಾಗೂ ತಮ್ಮ ಹೆಸರಿನ ಜೊತೆಗೆ ಪಿಂಜಾರ, ನದಾಫ ಎಂದೂ ಸೇರಿಸಿಕೊಂಡಿರುತ್ತಾರೆ.

ಕೇವಲ ೧೦-೨೦ ವರ್ಷಗಳ ಹಿಂದೆ ಪಿಂಜಾರರಿಗೆ ಧಾರ್ಮಿಕವಾಗಿ 'ಅನ್ಯ'ತೆಯ ಭಾವನೆ ಕಾಡಿರಲಿಲ್ಲ. ಹಾಗೂ ಮುಸಲ್ಮಾನರಿಗೆ ಮಾತ್ರ ಮೀಸಲಾಗಿದ್ದ ಸಾಮಾಜಿಕ ಅಭದ್ರತೆಯೂ ಅವರನ್ನು ಕಂಗೆಡಿಸಿರಲಿಲ್ಲ. ಯಾಕೆಂದರೆ ಅವರು ಹೆಚ್ಚು ಕಡಿಮೆ ಹಿಂದೂಗಳ ಒಳಗಿನ ಪಂಗಡವೊಂದರಂತೆ 'ಒಳಗಿನವರಾಗಿ' ಇದ್ದುಬಿಟ್ಟಿದ್ದರು. ಹಾಗಾಗಿ ಅವರಿಗೆ ಧಾರ್ಮಿಕವಾಗಿ ಪ್ರಧಾನ ಧರ್ಮವೊಂದರ ಆವರಣದಲ್ಲಿ ಗುರುತಿಸಿಕೊಳ್ಳುವ ಅವಶ್ಯಕತೆಯೇ ಇರಲಿಲ್ಲ. ಮತ್ತು ಮುಸಲ್ಮಾನರಿಂದ ಪೂರ್ಣವಾಗಿ ಪ್ರಭಾವಿತರಾಗದೇ ಕೇವಲ ತಾಂತ್ರಿಕ ಆಚರಣೆಗಳ ಮಟ್ಟಿಗೆ ಮಾತ್ರ ಅವರನ್ನು ಆಶ್ರಯಿಸಿದ್ದರು. ಉಳಿದಂತೆ ಎಲ್ಲ ಭಾವನಾತ್ಮಕ ಒಡನಾಟ-ವ್ಯವಹಾರಗಳು ಹಿಂದೂಗಳ ನಡುವೆಯೇ ಜೀವ ಪಡೆಯುತ್ತಿದ್ದವು.

ಆದರೆ ಇತ್ತೀಚಿನ ೧೦-೧೫ ವರ್ಷಗಳು ಪಿಂಜಾರ ಜನಾಂಗದ ಪಾಲಿಗೆ ತೀರ ಆತಂಕದ ದಿನಗಳಾಗಿದೆ. ಹಳ್ಳಿಗಳಲ್ಲಿ ಕೂಡ ಕೋಮುವಾದಿಗಳು ಕ್ರಿಯಾಶೀಲವಾಗಿರುವ ಈ ದಿನಗಳಲ್ಲಿ ಪಿಂಜಾರರು ಜೀವರಕ್ಷಣೆ ಮತ್ತು ಸಾಂವಿಧಾನಿಕ ಭದ್ರತೆಯನ್ನು ಅರಸಿ ನಗರಗಳತ್ತ ಬರುತ್ತಿದ್ದಾರೆ. ತಾವು ಎಲ್ಲಾದರೂ ಸಲ್ಲಲೇಬೇಕೆಂಬಂತೆ ಇಸ್ಲಾಂನ ಆಚರಣೆಗಳತ್ತ ಹೆಚ್ಚು ಆಕರ್ಷಿತರಾಗುತ್ತಿದ್ದಾರೆ. ಪಿಂಜಾರರು ಎಂದು ಹೇಳದೆ ಮುಸ್ಲಿಮರು ಎಂದೇ ಹೇಳುತ್ತಿದ್ದಾರೆ. ವಿಷದ ಗಾಳಿಯಂತೆ ಹರಡುತ್ತಿರುವ ಕೋಮುವಾದ ಪಿಂಜಾರರಂತಹ ಉಭಯ ಸಂಸ್ಕೃತಿ ರೂಪಗಳನ್ನು ಉಸಿರುಗಟ್ಟಿಸುತ್ತಿದೆ. ರಾಜ್ಯಾಧಿಕಾರದ ಆಕಾಂಕ್ಷೆಯಲ್ಲಿ ಕೆಲವು ಕೋಮುವಾದೀ ಸಂಘಟನೆಗಳು ಪ್ರಭುತ್ವ ಮತ್ತು ಅಧಿಕಾರಶಾಹಿಯ ಜಂಟಿ ಕಾರ್ಯಾಚರಣೆಯಲ್ಲಿ ವ್ಯವಸ್ಥಿತವಾದ ಕೋಮುಗಲಭೆಯನ್ನು ಪ್ರಾಯೋಜಿಸುತ್ತಿವೆ. ಇದಕ್ಕೆ ಹಿಂದೂ-ಮುಸ್ಲಿಂ ಅಮಾಯಕ ಯುವ ಸಮುದಾಯಗಳಲ್ಲಿ 'ಹಿಂಸೆ'ಯನ್ನು ಸ್ವಾಭಿಮಾನ ಎಂಬಂತೆ ವೈಭವೀಕರಿಸುತ್ತಿರುವುದು ಆತಂಕಕಾರಿಯಾಗಿದೆ.

ಈ ಎಲ್ಲಾ ಕಾರಣಗಳಿಂದಾಗಿ ಪಿಂಜಾರರು ತಮ್ಮನ್ನು ಅದೇ ಹೆಸರಿನಿಂದ ಕರೆದುಕೊಳ್ಳುವುದು ಕಡಿಮೆಯಾಗುತ್ತಿದೆ. ಇಲ್ಲಿರುವ ಮತ್ತೂ ಒಂದು ತೊಡಕು ಎಂದರೆ ಜನಗಣತಿ ಮತ್ತು ಮಕ್ಕಳ ಶಾಲಾ ಪ್ರವೇಶಾತಿಯ ಸಂದರ್ಭದಲ್ಲಿ ಅಯಾಚಿತವಾಗಿ ನಡೆದುಹೋಗುವ ಪ್ರಮಾದ. ಈ ಎರಡೂ ಪ್ರಕ್ರಿಯೆಗಳಲ್ಲಿ ಸಹಜವಾಗಿ ಹಿಂದೂ ಶಿಕ್ಷಕರು, ಅಧಿಕಾರಿಗಳು ಸಹಜವಾಗಿ ಕ್ರಿಯಾಶೀಲರಾಗಿರುತ್ತಾರೆ. ಪಿಂಜಾರರು ಈ ಸಂದರ್ಭದಲ್ಲಿ ಹೆಸರು ಹೇಳುವಾಗ ಜಾತಿಯನ್ನು ಸೇರಿಸಿಯೇ ಹೇಳಬೇಕೆನ್ನುವ ತಿಳುವಳಿಕೆಯುಳ್ಳವರಾಗಿರುವುದು ಕಡಿಮೆ. ಒಂದೊಮ್ಮೆ ಹೆಸರಿನ ಒಂದು ಭಾಗವಾಗಿ ಪಿಂಜಾರ ಅಥವಾ ನದಾಫ ಬಂದಾಗಲೂ ಜಾತಿಯ ಪ್ರತ್ಯೇಕ ಕಾಲಂನಲ್ಲಿ ಬರೆದುಕೊಳ್ಳುವವರು ಸಂಬಂಧಪಟ್ಟವರನ್ನು ವಿಚಾರಿಸದೇ ಸ್ವಂತ ತಿಳುವಳಿಕೆಯಿಂದ 'ಮುಸ್ಲಿಂ' ಎಂದು ಬರೆದುಬಿಡುವುದು ರೂಢಿಯಾಗಿದೆ. ಉದಾಹರಣೆಗೆ 'ಬಸವರಾಜ' ಧರ್ಮದಲ್ಲಿ ಹಿಂದೂ ಆಗಿಬಿಡುತ್ತಾನಾದರೂ, ಆತನಿಗೊಂದು ಪ್ರತ್ಯೇಕ ಜಾತಿಯ ಹಿನ್ನೆಲೆಯಿರುವುದರಿಂದ ಅದನ್ನು ಕೇಳಿ ಬರೆದುಕೊಳ್ಳಲಾಗುತ್ತದೆ. ಆದರೆ 'ಬುಡೇನ್‌ಸಾಬ್' ಧರ್ಮದಲ್ಲಿ ಜಾತಿಯಲ್ಲಿ ಎರಡೂ ಕಡೆ ಮುಸ್ಲಿಮನೇ ಆಗಿಬಿಡುತ್ತಾನೆ. ಯಾಕೆಂದರೆ 'ಬುಡೇನ್‌ಸಾಬ್'ನ ಧರ್ಮವನ್ನಾಗಲೀ, ಜಾತಿಯನ್ನಾಗಲೀ ಕೇಳಿ ತಿಳಿದುಕೊಳ್ಳುವ ಪರಿಪಾಟವೇ ಇಲ್ಲ. ಈ ಬಗೆಯ ಮನೋಧರ್ಮ ಬೆಳೆದಿರುವುದಕ್ಕೆ ಬಹುಶಃ ಇಸ್ಲಾಂನಲ್ಲಿ ಜಾತಿಪದ್ಧತಿ ಇಲ್ಲದಿರುವುದೇ ಕಾರಣವಾಗಿದೆ ಅಥವಾ ಹಾಗಂತ ನಂಬಿಸಲಾಗಿದೆ. ಆದರೆ ವಾಸ್ತವವಾಗಿ ಇಸ್ಲಾಂನಲ್ಲಿ ಹತ್ತಾರು ಪಂಗಡಗಳಿವೆ. ಅವುಗಳ ನಡುವೆಯೂ ಸಾಮರಸ್ಯದ ಕೊರತೆಯಿದೆ. ಆಯಾ ಪಂಗಡಗಳು ತಂತಮ್ಮನ್ನು ಶ್ರೇಷ್ಠ ಎಂದುಕೊಂಡಿರುವುದರಿಂದ ಆಚರಣೆಯಲ್ಲಿ ಭೇದಗಳಿವೆ. ಆದರೆ 'ಅಲ್ಲಾ'ನಲ್ಲಿನ ಪರಮನಿಷ್ಠೆಯ ಕಾರಣಕ್ಕೆ ಅಲ್ಲಿ ಏಕರೂಪತೆ ಕಂಡುಬರುತ್ತದೆ ಅಷ್ಟೆ. ಪಿಂಜಾರರ ವಿಷಯದಲ್ಲಿಯಂತೂ ಸಾಂಪ್ರದಾಯಿಕ ಮುಸ್ಲಿಮರಿಗೆ ವಿಚಿತ್ರವಾದ ಅಸಡ್ಡೆಯಿದೆ. ಅಸ್ಪೃಶ್ಯತೆಯೊಂದನ್ನು ಹೊರತುಪಡಿಸಿದರೆ ಹಿಂದೂ ಧಾರ್ಮಿಕ ಪರಿಸರದ ತಳ ಸಮುದಾಯಗಳು ಅನುಭವಿಸುವ ಇತರೆ ಎಲ್ಲ ಅವಮಾನಗಳನ್ನು ಪಿಂಜಾರರು ಅನುಭವಿಸುತ್ತಾರೆ. ಆದುದರಿಂದ ಕೇವಲ ಹೆಸರಿನ ಕಾರಣಕ್ಕಾಗಿ ಪಿಂಜಾರರು, 'ಮುಸ್ಲಿಮ'ರೆಂದೇ ದಾಖಲಾಗಿ ಬಿಡುವ ಅಪಾಯದಲ್ಲಿ ಆ ಹೆಸರಿನ ಜನಾಂಗವೊಂದು ಅಜ್ಞಾತವಾಗಿ, ಅದರ ವಿಶಿಷ್ಟ ಸಂಸ್ಕೃತಿ ರೂಪ ನಿರ್ಲಕ್ಷಿತವಾಗಿ ಹೋಗಿದೆ. ಸಾಂವಿಧಾನಿಕ ಸವಲತ್ತುಗಳನ್ನು ಪಡೆಯುವ ಹಿನ್ನೆಲೆಯಲ್ಲಿ ಜಾತಿಯ ಹೆಸರು ದಾಖಲಾಗುವಂತೆ ಎಚ್ಚರವಹಿಸುವ 'ಪ್ರಜ್ಞೆ' ಪಿಂಜಾರರಲ್ಲಿ ಮೂಡುತ್ತಿದೆಯಾದರೂ ಅದು ಸಂಘಟನಾತ್ಮಕ ಪ್ರಯತ್ನವಾಗಿ ಕಾರ್ಯಗತವಾಗುತ್ತಿಲ್ಲ ಮತ್ತು ಪ್ರಭುತ್ವ ಹಾಗೂ ಅಧಿಕಾರಶಾಹಿಯ ಅಧಿಕೃತ ದೃಢೀಕರಣಗಳು ಸಂಬಂಧಪಟ್ಟವರಿಗೆ ಲಭ್ಯವಾಗುತ್ತಿಲ್ಲ. ವ್ಯಕ್ತಿಯ ಹೆಸರಿನಿಂದ ಮಾತ್ರವೇ ಆ ವ್ಯಕ್ತಿಯ ಜಾತಿ, ಧರ್ಮವನ್ನು ಗುರುತಿಸುವ, ಆ ಮೂಲಕ ಆ ಜಾತಿ, ಧರ್ಮಗಳಿಗೆ ಅಂಟಿಕೊಂಡಂತಿರುವ ಅನುಮಾನದ, ಅಪಮಾನದ ಆರೋಪಗಳನ್ನು ಹೊರಿಸಿಬಿಡುವ ಜಾತಿಪದ್ಧತಿಯ ಕ್ರೌರ್ಯ ಇಲ್ಲಿನ ದಮನಿತ ಜನಾಂಗಗಳ ಪಾಲಿಗೆ ಮೂಗುದಾರವಾಗಿಬಿಟ್ಟಿದೆ.

ಪಿಂಜಾರರು ಸಂಘಟಿತರಾಗದೇ ಇರುವುದಕ್ಕೆ ಆ ಜನಾಂಗದ ಅಲೆಮಾರಿ ಗುಣ ಬಹುಮುಖ್ಯ ಕಾರಣ. ಇದರ ಜೊತೆಗೆ ಅವರ ಖಾಯಂ ಸಂಗಾತಿಯಾಗಿರುವ ಬಡತನ ಮತ್ತೊಂದು ಕಾರಣ. ಬಡತನದ ಮುಖಗಳೇ ಆಗಿರುವ ಅನಕ್ಷರತೆ ಮತ್ತು ಅನಾರೋಗ್ಯ ಪಿಂಜಾರರು ಗಳಿಸಿರುವ ಸಂಪತ್ತು. ನಮ್ಮ ದೇಶದ ಎಲ್ಲ ಹಿಂದುಳಿದವರ ಈ ಪರಿಯ ಬದುಕು ಅವರು ಸಂಘಟಿತರಾಗಲು ಇರುವ ಬಹುಮುಖ್ಯ ತೊಡಕು. ಮೇಲ್ಜಾತಿಗಳು ಭೂಮಿಯ ಒಡೆತನದ ಕಾರಣದಿಂದಾಗಿ ಸಾಮಾನ್ಯ ಹಾಗೂ ಧಾರ್ಮಿಕ ಶಿಕ್ಷಣ ಪಡೆದು ಜಾಗೃತರಾಗಿ ಸಂಘಟನೆಗೆ ಆದ್ಯತೆ ನೀಡುತ್ತವೆ. ಈ ಮೂಲಕ ರಾಜ್ಯಾಧಿಕಾರದ ಮೇಲೆ ಪ್ರಬಲವಾದ ಒತ್ತಡವನ್ನುಂಟು ಮಾಡುವಂತಹ ಜನಬಲದ ಪ್ರದರ್ಶನ ಮಾಡುತ್ತವೆ. ಕೆಳಜಾತಿಗಳು ಅಸಂಘಟಿತವಾಗಿರುವುದರ ಎಲ್ಲ ಲಾಭಗಳನ್ನು ಅವು ಪಡೆಯುತ್ತವೆ. ಹೀಗಾಗಿ ಪಿಂಜಾರರ ಸಂಘಟನೆಗಿರುವ ಮಹತ್ವವನ್ನು ಇಲ್ಲಿ ಸೂಚಿಸುತ್ತಾ ಸಂಘಟನೆಯ ಮೂಲಕವೇ ಆರ್ಥಿಕ-ಸಾಮಾಜಿಕ ಉನ್ನತಿಯನ್ನು, ರಾಜಕೀಯ ಪ್ರಾತಿನಿಧ್ಯವನ್ನು ಪಡೆಯುವುದು ಸಾಧ್ಯ ಮತ್ತು ಅದರಿಂದ ಮಾತ್ರವೇ ವಿಶಿಷ್ಟ ಸಾಂಸ್ಕೃತಿಕ ಭಿತ್ತಿಗಳನ್ನು ರಕ್ಷಿಸಿಕೊಳ್ಳುವ ಅರ್ಥಪೂರ್ಣ ಪ್ರಯತ್ನವನ್ನು ಮಾಡಬಹುದು ಎಂದು ಯೋಚಿಸಲು ಈ ಅಧ್ಯಯನ ಸಹಕಾರಿಯಾಗಬಹುದೆಂದು ನಂಬಲಾಗಿದೆ.

ವಿಶೇಷವೆಂದರೆ ಪಿಂಜಾರರಲ್ಲಿ ಧಾರ್ಮಿಕ ಶಿಕ್ಷಣ ಪಡೆಯುವವರ ಸಂಖ್ಯೆ ತುಂಬಾ ಕಡಿಮೆ. ಮುಸ್ಲಿಮರಲ್ಲಿ ಸಾಮಾನ್ಯ ಶಿಕ್ಷಣಕ್ಕಿಂತ ಧಾರ್ಮಿಕ ಶಿಕ್ಷಣಕ್ಕೇ ಆದ್ಯತೆ ಜಾಸ್ತಿ. ಪಿಂಜಾರರು ಸಾಮಾನ್ಯ ಶಿಕ್ಷಣವನ್ನು ಮುಂದುವರಿಸಲಾಗದೇ ಮತ್ತದೇ ಮೂಲ ಕಸುಬಿಗೆ ಹಿಂದಿರುಗುವವರು ಬಹಳ. ಆಧುನೀಕರಣದ ಫಲವಾಗಿ ಹಾಸಿಗೆ, ದಿಂಬು ತಯಾರಿಸುವ ಕೈಗಾರಿಕೆಗಳು ಉಳ್ಳವರ ಪಾಲಾಗಿವೆ. ಪಿಂಜಾರರ ಹಳೆಯ ರೀತಿಯ ಹಾಸಿಗೆ ತಯಾರಿಕೆಗೆ ಬೇಡಿಕೆ ಇಲ್ಲವಾದಂತೆ ಸಣ್ಣಪುಟ್ಟ ವ್ಯಾಪಾರ, ಕೈಕಸುಬುಗಳಲ್ಲಿ ತೊಡಗಿಸಿಕೊಂಡಿರುವುದರಿಂದ ಅವರು ಮತ್ತಷ್ಟು ಚದುರಿಹೋಗಿದ್ದಾರೆ. ಕಲಾಯ ಮಾಡುವುದು, ಕೂದಲು ಮಾರುವುದು, ಕೊಂಬು ಹೆರೆಯುವುದು, ಬಳೆ ವ್ಯಾಪಾರ, ಹಣ್ಣು ತರಕಾರಿ ಮಾರಾಟ, ಹಮಾಲಿ ಕೆಲಸ, ಕೂಲಿ-ನಾಲಿ ಮಾಡುವುದು, ಬಡಗಿತನ, ಕಮ್ಮಾರಿಕೆ, ಮೀನು ಹಿಡಿಯುವುದು, ಹಲ್ಲೆ ಕಟ್ಟುವುದು, ಹೀಗೆ ಹತ್ತು ಹಲವು ಕೆಲಸಗಳಲ್ಲಿ ತೊಡಗಿಸಿಕೊಂಡಿರುವ ಪಿಂಜಾರರು ಕರ್ನಾಟಕದಾದ್ಯಂತ ಹರಡಿಹೋಗಿದ್ದಾರೆ. ಉನ್ನತ ಹಾಗೂ ತಾಂತ್ರಿಕ ಶಿಕ್ಷಣ ಪಡೆದವರು ಇದೀಗ ವಿರಳವಾಗಿ ಕಂಡುಬರುತ್ತಾರೆ. ಆದರೆ ಅಕ್ಷರ ಲೋಕದ ಹೊರಗುಳಿದು ಹತ್ತಿ ಹಾಗೂ ಹಾಸಿಗೆ ಬಟ್ಟೆ ಇಟ್ಟುಕೊಂಡು ಸೈಕಲ್ ತುಳಿಯುತ್ತ ಊರೂರು ಅಲೆಯುವ ಪಿಂಜಾರರು ಮತ್ತವರ ಜೀವನದ ಸ್ವರೂಪವನ್ನು ವಿವರವಾಗಿ ತಿಳಿಯುವುದು ಈ ಅಧ್ಯಯನದ ಪ್ರಧಾನ ಉದ್ದೇಶವಾಗಿದೆ.

ಪಿಂಜಾರರ ವೈವಾಹಿಕ ಸಂಬಂಧ ಮುಸ್ಲಿಮರ ನಡುವೆ ನಡೆಯುವುದಿಲ್ಲ. ತಂತಮ್ಮೊಳಗೆ ಹೆಣ್ಣು ತಂದುಕೊಳ್ಳುವ ಪರಿಪಾಠವಿರುವ ಪಿಂಜಾರರ ವೈವಾಹಿಕ ವಿವಾಹದ ರೀತಿ-ರಿವಾಜುಗಳು ಮುಸ್ಲಿಮರಿಗಿಂತ ಭಿನ್ನವಾಗಿವೆ. ಪೌರೋಹಿತ್ಯ ಹಾಗೂ ನೊಂದಾವಣೆಯ ರೀತಿಗಳನ್ನು ಇಸ್ಲಾಂ ಧರ್ಮಾನುಸಾರವಾಗಿ

ನಡೆಸಿದರೂ ಮುಸ್ಲಿಮರಲ್ಲಿನ ಹಾಗೆ ಅಣ್ಣನ ಮಗಳು, ದೊಡ್ಡಪ್ಪ ಚಿಕ್ಕಪ್ಪನ ಮಕ್ಕಳನ್ನು ಮದುವೆಯಾಗುವ ಪರಿಪಾಠ ಪಿಂಜಾರರಲ್ಲಿಲ್ಲ. ಹಾಗೆಯೇ ಸ್ವಂತ ಅಕ್ಕನ ಮಗಳನ್ನು ಕೂಡ ತಂದುಕೊಳ್ಳುವುದಿಲ್ಲ. ಹಿಂದೂ ಮತ್ತು ಇಸ್ಲಾಂ ಎರಡೂ ಧರ್ಮದಿಂದ ತಮಗೆ ಬೇಕಾದದ್ದನ್ನು ಆಯ್ಕೆ ಮಾಡಿಕೊಂಡು ಆಚರಣೆಯಲ್ಲಿ ಉಳಿಸಿಕೊಂಡಿರುವ ಪಿಂಜಾರರು ಈ ಕಾರಣಕ್ಕಾಗಿಯೇ ಉಭಯ ಸಂಸ್ಕೃತಿಯ ಪ್ರತೀಕವಾಗಿದ್ದಾರೆ. ಪಿಂಜಾರರು ತಮ್ಮೊಳಗೇ ನಡೆಸಿಕೊಳ್ಳುವ ಮದುವೆಯಿಂದಾಗಿ ತಮ್ಮ ಬಂಧು-ಬಾಂಧವರು ಯಾವ ಊರಲ್ಲಿ ನೆಲೆಸಿದ್ದಾರೆ, ಎಷ್ಟು ಜನರಿದ್ದಾರೆ ಎಂದೆಲ್ಲಾ ಸ್ಥಳೀಯ ವಿವರಗಳನ್ನು ಕೊಡುತ್ತಾರೆ. ಹಾಗಾಗಿ ಈ ಜನಸಂಖ್ಯೆಯ ವಿವರಗಳು ಎಲ್ಲೂ ಕರಾರುವಕ್ಕಾಗಿ ಲಭ್ಯವಾಗುವುದಿಲ್ಲ. ಅಲ್ಲದೆ ಸರ್ಕಾರಿ ದಾಖಲೆಗಳಲ್ಲೂ ಕೂಡ ಈ ಹಿಂದೆ ತಿಳಿಸಿದಂತೆ ಪಿಂಜಾರರ ಜಾತಿ, ಜನಸಂಖ್ಯೆ, ಅವರಲ್ಲಿನ ಸಾಕ್ಷರತೆಯ ಪ್ರಮಾಣ, ಅವರ ಸಾಮಾಜಿಕ, ರಾಜಕೀಯ ಪ್ರಗತಿ ಇತ್ಯಾದಿ ವಿವರಗಳು ನಮೂದಾಗಿರುವುದಿಲ್ಲ. ಪಿಂಜಾರರ ಸಂಘಟನೆ ಅಸ್ತಿತ್ವಕ್ಕೆ ಬಂದ ನಂತರ ಉಂಟಾದ ಸಮಾವೇಶದಲ್ಲಿ ವ್ಯಕ್ತವಾದ ಅಭಿಪ್ರಾಯಗಳನ್ನು ಸಂಗ್ರಹಿಸಿ ಹೇಳುವುದಾದರೆ ಕರ್ನಾಟಕದಲ್ಲಿ ಪಿಂಜಾರರ ಅಂದಾಜು ಜನಸಂಖ್ಯೆ ಹತ್ತರಿಂದ ಹನ್ನೆರಡು ಲಕ್ಷದವರೆಗೆ ಇದೆ. ಪಿಂಜಾರರ ಸಂಘ ತಾನು ನೊಂದಾಯಿಸಿಕೊಂಡ ತನ್ನ ಸದಸ್ಯರ, ಅವರ ಮನೆತನದ ವಿವರಗಳನ್ನು ಗಮನಿಸಿದರೆ ಪಿಂಜಾರರು ಈ ಪ್ರಮಾಣದಲ್ಲಿದ್ದೂ ಹಿಂದುಳಿದಿರಲು ಕಾರಣಗಳನ್ನು ತಿಳಿಯಬಹುದಾಗಿದೆ.

## ೨.೪ ಪೌರಾಣಿಕ ಹಾಗೂ ಐತಿಹಾಸಿಕ ಹಿನ್ನೆಲೆ

ಪಿಂಜಾರರಿಗೆ ವಿಶಿಷ್ಟವಾದ ಪೌರಾಣಿಕ ಹಿನ್ನೆಲೆಯನ್ನು ಕೆದಕುತ್ತಾ ಹೋದಂತೆ ಅವರು ಕಲ್ಪನೆಯ ಪುರಾಣವೊಂದನ್ನು ಬಿಚ್ಚಿಡುತ್ತಾರೆ. ಈ ಬಗೆಗೆ ಯಾವುದೇ ಕೃತಿ ಲಭ್ಯವಿಲ್ಲದೇ ಹೋದರೂ ಜನ ಇದನ್ನು ನಂಬುವುದು ಕಂಡುಬರುತ್ತದೆ. ಅದು ಹೀಗಿದೆ ; 'ದೇವರು ಮನುಷ್ಯನನ್ನು ಸೃಷ್ಟಿಸಿದನಲ್ಲಾ ಅಂದಿನಿಂದ ಎಷ್ಟೋ ಕಾಲದವರೆಗೆ ಮನುಷ್ಯ ಬೆತ್ತಲಾಗಿದ್ದನಂತೆ. ಮನುಷ್ಯ ಕ್ರಮೇಣ 'ಮಾನ'ದ ಅರಿವು ಬಂದಾಗ ಮರಗಿಡಗಳ ಎಲೆ ಮತ್ತು ಸೊಪ್ಪಿನಿಂದ ತನ್ನ ಮರ್ಯಾದೆಯನ್ನು ಮುಚ್ಚಿಕೊಳ್ಳತೊಡಗಿದ. ಇದೂ ಅನೇಕ ಕಾಲದವರೆಗೆ ನಡೆಯಿತು. ಒಮ್ಮೆ ಮರಗಿಡಗಳ ಎಲೆ, ಸೊಪ್ಪು ಕೀಳುವಾಗ ಅದರಲ್ಲಿರುವ ನಾರಿನ ಲಕ್ಷಣವನ್ನು ಕಂಡು ಹಿಡಿದವನೇ ಪಿಂಜಾರ. ಅವನು ಆ ನಾರನ್ನು ಪ್ರತ್ಯೇಕಿಸಿ ಅದನ್ನು ಒತ್ತೊತ್ತಾಗಿ ಹಾಳೆಯಂತೆ, ಚೀಲದಂತೆ ಹೆಣೆದನಂತೆ. ಎಲೆ, ಸೊಪ್ಪನ್ನು ಸುತ್ತಿಕೊಳ್ಳುವುದಕ್ಕಿಂತ ಇದು ನಯವಾಗಿ ಕಂಡುಬಂದುದರಿಂದ 'ಮಾನ' ಮುಚ್ಚಿಕೊಳ್ಳಬಯಸಿದ ಎಲ್ಲರೂ ಈ ವಸ್ತುವಿಗಾಗಿ ಮೊರೆಯಿಟ್ಟರಂತೆ. ಹೀಗೆ ಮನುಷ್ಯನಿಗೆ ಮಾನ ತಂದುಕೊಟ್ಟವನು ಪಿಂಜಾರ. ಇದು ಮುಂದುವರಿದಂತೆ ನಿಸರ್ಗದ ಸಂಪನ್ಮೂಲಗಳನ್ನು ಬಳಸಿಕೊಂಡು ಎಲ್ಲ ಮನುಷ್ಯರಿಗೆ ಉಡುಗೆ-ತೊಡುಗೆಗಳನ್ನು ಹಾಸಲು ಹೊದೆಯಲು ದುಪ್ಪಡಿ, ಹಾಸಿಗೆಗಳನ್ನು ತಯಾರಿಸಿ 'ಸುಖ'ವಾಗಿರುವಂತೆ ಮಾಡಿದವರು ನಾವೇ' ಎಂದು

ಪಿಂಜಾರರು ಹೆಮ್ಮೆಯಿಂದ ಹೇಳುತ್ತಾರೆ. ಇದು ಕಲ್ಪನೆಯಿಂದ ಕೂಡಿದ್ದು ಎನ್ನುವುದರಲ್ಲಿ ಸಂದೇಹವಿಲ್ಲ. ಆದರೆ ಜನಾಂಗವೊಂದು ಇತಿಹಾಸದ ಪ್ರಜ್ಞೆಯನ್ನು ಕಟ್ಟಿಕೊಳ್ಳಲು ಹವಣಿಸುವುದು ಮಾತ್ರ ಕಂಡು ಬರುತ್ತದೆ.

ಪಿಂಜಾರರಿಗೆ ನದಾಫ್ ಅಥವಾ ಲದಾಫ್ ಎನ್ನುವ ಪರ್ಯಾಯವಾದ ಹೆಸರೂ ಕರ್ನಾಟಕದಲ್ಲಿದೆ. ಇದು ಯಾಕೆ ಮತ್ತು ಹೇಗೆ ಬಂದಿದೆ ಎಂದು ವಿಚಾರಿಸಿದಾಗ ಸಾಂಪ್ರದಾಯಿಕ ಯಜಮಾನರೊಬ್ಬರು ಈ ಕತೆ ಹೇಳಿದರು. ಮುಸ್ಲಿಮರ ಪವಿತ್ರ ಯಾತ್ರಾ ಸ್ಥಳವಾದ ಮೆಕ್ಕಾ ಪಟ್ಟಣದ ಹತ್ತಿರ ನದಾಫ್ ಎನ್ನುವ ಹಳ್ಳಿಯಿತ್ತು, ಈಗಲೂ ಇದೆ ಎಂದು ಹೇಳುತ್ತಾರೆ. (ಇತ್ತೀಚೆಗಿನ ಇರಾಕ್ ಮತ್ತು ಅಮೇರಿಕಾ ನಡುವಿನ ಯುದ್ಧದ ಸಂದರ್ಭದಲ್ಲಿ ಇರಾಕ್‌ನ 'ನಜಾಫ್' ಎಂಬ ಪಟ್ಟಣ ಪ್ರಚಾರದಲ್ಲಿತ್ತು. ಈ 'ನಜಾಫ್' ಎನ್ನುವುದು 'ನದಾಫ್' ಇರಬಹುದೇ?). ಈ ಹಳ್ಳಿ ನದಿಯ ದಡದ ಮೇಲಿದ್ದುದರಿಂದ ಆ ಹೆಸರು ಬಂದಿತ್ತು. ಅಲ್ಲಿನ ಜನರೆಲ್ಲಾ ರೈತರಾಗಿದ್ದರು. ಆದುದರಿಂದ ಅವರೆಲ್ಲಾ ದೇವರು, ನಮಾಜು ಮೊದಲಾದವುಗಳತ್ತ ಅಷ್ಟಾಗಿ ಗಮನಹರಿಸದೆ ತಮ್ಮ ನೆಲ-ಹೊಲದ ಕೆಲಸಗಳಲ್ಲಿ ನಿರತರಾಗಿದ್ದರು. ಪಕ್ಕದ ಮೆಕ್ಕಾ ಪಟ್ಟಣದ ಮುಸಲ್ಮಾನರು ಈ ಹಳ್ಳಿಯ ಜನರನ್ನು ನಮಾಜಿಗಾಗಿ ಮಸೀದಿಗೆ ಬರಲು ಒತ್ತಾಯಿಸುತ್ತಿದ್ದರು. ಈ ಜನರು ತಮ್ಮ ಕೆಲಸ ಕಾರ್ಯಗಳ ಬಾಹುಳ್ಯದಿಂದಾಗಿ ಮಸೀದಿಗೆ ಹೋಗುತ್ತಿರಲಿಲ್ಲ. ಮೆಕ್ಕಾದ ಮುಸಲ್ಮಾನರು ಈ ಜನರ ನಿರಾಸಕ್ತಿಯನ್ನು ಕಂಡು ಅವರನ್ನು ನದಾಫ್ ಎಂದು ಕರೆದರು. ಆ ಹೆಸರು ಹಾಗೇ ಉಳಿದುಕೊಂಡಿತು. ಕ್ರಮೇಣ ನಮಾಜಿಗಾಗಿ ಮುಸಲ್ಮಾನರ ಒತ್ತಡ ಹೆಚ್ಚಾದಂತೆ ಈ ಜನರು ಆ ಊರನ್ನೇ ತೊರೆದು ಅಲೆಮಾರಿಗಳಾಗಿ ಊರೂರು ತಿರುಗತೊಡಗಿದರು.

ಈ ಕತೆ ಕೂಡ ಕಲ್ಪಿತವಾದುದೇ ಆಗಿದೆ. ನದಾಫ್ ಎಂದರೆ **(Nadaf - a cotton dresser)** ಹತ್ತಿಯನ್ನು ಹಿಂಜಿ ಸ್ವಚ್ಛಗೊಳಿಸುವವನು ಎಂದು ಥರ್ಸ್‌ಟನ್ ಹೇಳಿರುವುದನ್ನು ಈಗಾಗಲೇ ನೋಡಿದ್ದೇವೆ. ಅಲ್ಲದೆ ಬಹುಪಾಲು ಜಾತಿಯ ಹೆಸರುಗಳು ಆ ಜನಾಂಗದವರು ಪ್ರಧಾನವಾಗಿ ನಿರ್ವಹಿಸುವ ಕಸುಬುದಾರಿಕೆಯಿಂದ ಬಂದವುಗಳಾಗಿವೆ. ಮತ್ತು ಸಮಾಜದಲ್ಲಿ ಈ ಕಸುಬುಗಳ ಉತ್ಪಾದನೆಯನ್ನು ವಿತರಿಸುವಲ್ಲಿ ನಿಭಾಯಿಸಲಾಗುವ ಯಜಮಾನಿಕೆಯ ಹಿನ್ನೆಲೆಯಲ್ಲಿಯೂ ಈ ಜಾತಿಗಳ ಹೆಸರುಗಳು ಬಳಕೆಯಾಗಿದೆ. ಆದುದರಿಂದ ಪಿಂಜಾರರಿಗೆ ನದಾಫ್ ಎನ್ನುವ ಹೆಸರು ಅವರ ಕಸುಬಿನಿಂದಲೇ ಬಂದದ್ದು ಎನ್ನುವುದೇ ವಾಸ್ತವವಾಗಿದೆ. ಆದರೆ ಮೇಲಿನ ಕಲ್ಪಿತ ಕತೆಯಲ್ಲಿ ಗಮನಿಸಬೇಕಾದ ಅಂಶವೆಂದರೆ ಧಾರ್ಮಿಕಾಚರಣೆಗಳಿಗೆ ಸಂಬಂಧಿಸಿದಂತೆ ಪಿಂಜಾರರು ತೋರುತ್ತಿರುವ ನಿರಾಸಕ್ತಿ ಮತ್ತು ಆ ಕಾರಣಕ್ಕಾಗಿ ಅವರು ಅನುಭವಿಸಬೇಕಾದ ಕಿರಿಕಿರಿಯಿಂದಾಗಿ ಅವರು ಊರನ್ನೇ ಬಿಡಬೇಕಾಯಿತು ಎನ್ನುವುದು. ಇದು ಪಿಂಜಾರರ ಸಾಮಾಜಿಕ ಜೀವನ ವಿಧಾನದ ಸ್ವರೂಪವನ್ನು ಸೂಕ್ಷ್ಮವಾಗಿ ತಿಳಿಸುತ್ತದೆ.

ಸ್ಪಷ್ಟ ಇತಿಹಾಸದ ಕಲ್ಪನೆಯಿಲ್ಲದ, ತನ್ನದೇ ಆದ ಪುರಾಣವಿಲ್ಲದ ಜನಾಂಗವೊಂದು ಅವೆರಡನ್ನು ಕಟ್ಟಿಕೊಳ್ಳಬಯಸುವ ಪ್ರಯತ್ನದಲ್ಲಿ ಹೇಗೆ ಕಪೋಲಕಲ್ಪಿತ ಕತೆಗಳಲ್ಲಿ ನಂಬಿಕೆಯಿಡುತ್ತದೆ ಎನ್ನುವುದಕ್ಕೆ

ಮೇಲಿನೆರಡು ಕತೆಗಳು ಸಾಕ್ಷಿಯಾಗಿವೆ. ಒಂದು ನಿರ್ದಿಷ್ಟ ಧರ್ಮದ ಪ್ರಭಾವವಿದ್ದಾಗಲೂ ಕಲ್ಪನೆಯ ಕತೆಗಳು ಹುಟ್ಟಿಕೊಳ್ಳುತ್ತವೆ. ಅದೇ ಅನಂತರ ಆ ಜನಾಂಗಗಳ ಇತಿಹಾಸವನ್ನು ಹೇಳುವ ಜಾನಪದ ಕಾವ್ಯಗಳೂ ಆಗಿ ಬಿಡುತ್ತವೆ ಮತ್ತು ಇಂಥ ಕಡೆ ಅತಿಮಾನುಷವಾದ ದೈವಸೃಷ್ಟಿಯಾಗಿ ಆ ಹಿನ್ನೆಲೆಯಲ್ಲಿ ಮನುಷ್ಯ ಹಾಗೂ ಆತನ ಮಿತಿಗಳನ್ನು ಹೇಳುವ ತಾತ್ವಿಕತೆಯೂ ನಿರ್ಮಾಣಗೊಳ್ಳುತ್ತದೆ. ಪಿಂಜಾರರ ವಿಷಯದಲ್ಲಿ ಇತಿಹಾಸ ಮತ್ತು ಧರ್ಮಗಳು ಅವರ ಜೀವನದ ನಿರಂತರತೆಯ ವಿಸಂಘಟನೆಗೆ ಕಾರಣವಾಗಿದೆ. ಅದರ ಪರಿಣಾಮವಾದ ಈ ಉಭಯಸಂಸ್ಕೃತಿಯ ಜನಾಂಗ ನಮ್ಮ ಕಣ್ಮುಂದಿದೆ.

ಪಿಂಜಾರರು ಹಿಂದೂ ಧರ್ಮದ ತಳಸಮುದಾಯಗಳಿಂದ ಮತಾಂತರಗೊಂಡವರೆಂಬುದು ಸ್ಪಷ್ಟವಾಗಿದೆ. ಇತಿಹಾಸದಲ್ಲಿ ಮತಾಂತರಕ್ಕೆ ಇದ್ದಿರಬಹುದಾದ ಕಾರಣಗಳನ್ನು ಹಿಂದೆ ವಿಶ್ಲೇಷಿಸಲಾಗಿದೆ. ಅಲ್ಲಾವುದ್ದೀನ್‌ನ ಸೇನಾಪತಿ ಮಲ್ಲಿಕಾಫರನ ದಂಡಯಾತ್ರೆಯಿಂದ ಶುರುವಾಗಿ ಮೊಗಲರ ದೊರೆಗಳಾದ ಅಕ್ಬರ್, ಔರಂಗಜೇಬ್ ಮತ್ತು ಕರ್ನಾಟಕದ ಟಿಪ್ಪುವಿನ ಆಡಳಿತದ ಸಂದರ್ಭದಲ್ಲಿಯೂ ಇಸ್ಲಾಂಗೆ ಮತಾಂತರಗೊಳಿಸಲಾದ ವಿವರಗಳು ದೊರೆಯುತ್ತವೆ. ಆದರೆ ಪಿಂಜಾರರು ಕೆಲವರು ಬಿಜಾಪುರದ ಸುಲ್ತಾನ ರಾಜಾರಣದುಲ್ಲಾಖಾನನ ಆಡಳಿತಾವಧಿಯಲ್ಲಿ ಮತಾಂತರಗೊಂಡವರು ಎಂದೂ ನಂಬುತ್ತಾರೆ. ಜೊತೆಗೆ ಹೈದರಾಲಿಯ ಕುರಿತಾಗಿರುವ ದಂತಕತೆಯೊಂದನ್ನು ಪಿಂಜಾರರು ನೆನಪಿಸಿಕೊಳ್ಳುತ್ತಾರೆ. ಈ ಕತೆ ಪಿಂಜಾರರ ಉಭಯ ಸಾಂಸ್ಕೃತಿಕ ಸ್ವರೂಪವನ್ನು ತಿಳಿಸುವಂತಿದೆ. ಅದು ಹೀಗಿದೆ ;

'ಹೈದರಾಲಿ ಮೈಸೂರಸರ ಮೆಚ್ಚಿನ ಪರಾಕ್ರಮಶಾಲಿ ಸೈನಿಕನಾಗಿದ್ದ. ಅವನ ಯುದ್ಧಕೌಶಲ ಮತ್ತು ಸೈನ್ಯದ ವಿಶಿಷ್ಟ ತರಬೇತಿಯಿಂದಾಗಿ ಆತ ಬಲುಬೇಗ ಪ್ರವರ್ಧಮಾನಕ್ಕೆ ಬಂದ. ಆತನಿಗೆ ಬಹಳ ಕಾಲ ಮಕ್ಕಳಾಗಲಿಲ್ಲ. ತಾನು ತುಂಬ ಶ್ರದ್ಧೆ, ಭಕ್ತಿಯಿಂದ ನಡೆದುಕೊಳ್ಳುತ್ತಿದ್ದ. ನಾಯಕನ ಹಟ್ಟಿಯ ತಿಪ್ಪೇಸ್ವಾಮಿ ದೇವರಿಗೆ ಹರಕೆ ಹೊತ್ತು ಮಕ್ಕಳಿಗಾಗಿ ಪ್ರಾರ್ಥಿಸಿದ. ಈ ಪ್ರಾರ್ಥನೆಯ ನಂತರ ಆತನಲ್ಲಿ ಸಂತಾನ ಪ್ರಾಪ್ತವಾಯಿತು. ಅದರ ಫಲವೇ ಟಿಪ್ಪು. ಸಂತಾನ ಪ್ರಾಪ್ತವಾದರೆ ದೇವರ ಹೆಸರನ್ನೇ ಇಡುತ್ತೇನೆಂದು ಹರಕೆ ಹೊತ್ತಿದ್ದ ಹೈದರಾಲಿ ಮಗನಿಗೆ 'ತಿಪ್ಪೇಸ್ವಾಮಿ' ಎಂದೇ ಹೆಸರಿಟ್ಟನಂತೆ. ತಿಪ್ಪೇಸ್ವಾಮಿ ಎನ್ನುವ ಹೆಸರು ಬರಬರುತ್ತಾ ಮುಸ್ಲಿಂ ಸಮುದಾಯದವರ ನಡುವೆ ಟಿಪ್ಪುಸಾಬಿ ಎಂದಾಯಿತು'.

ಇದು ಸ್ವಾರಸ್ಯಕರವಾಗಿದೆ. ಈ ಹೊತ್ತಿಗೂ ಟಿಪ್ಪು ಸಾಬ್ ಎಂಬ ಹೆಸರು ಪಿಂಜಾರರಲ್ಲಿ ಹೆಚ್ಚಾಗಿ ಕಂಡುಬರುವ ಹೆಸರಾಗಿದೆ. ಮತ್ತು ಹೈದರಾಲಿ, ಟಿಪ್ಪುವಿನ ಹಾಗೂ ನಾಯಕನಹಟ್ಟಿ ತಿಪ್ಪೇಸ್ವಾಮಿ ದೇವರ ಪ್ರಭಾವವಿರುವ ಚಿತ್ರದುರ್ಗ, ಚಳ್ಳಕೆರೆ, ಜಗಳೂರು, ದಾವಣಗೆರೆ ಮೊದಲಾದ ಆ ಸುತ್ತಲಿನ ಪ್ರದೇಶಗಳಲ್ಲಿ ಮಾತ್ರ ಈ ಹೆಸರು ಹೆಚ್ಚು ಜನಪ್ರಿಯವಾಗಿದೆ. ಹೈದರನ ನಂತರ ಟಿಪ್ಪು ಅಧಿಕಾರಕ್ಕೆ ಬಂದಾಗ ಆತನ ಹೆಸರು ಟಿಪ್ಪುಸುಲ್ತಾನ್ ಆಗಿದೆ. ಆತನ ಕಾಲದಲ್ಲಿ ಮತಾಂತರ ನಡೆಯಿತು, ಆತ ಹಿಂದೂ ಧರ್ಮದ ವಿರೋಧಿ, ದೇಶದ್ರೋಹಿ ಎಂದೆಲ್ಲಾ ಅಪಪ್ರಚಾರ ನಡೆಸಲಾಗುತ್ತಿರುವ ಈ ಹೊತ್ತಿನಲ್ಲಿ

ಟಿಪ್ಪುವಿನ ಹೆಸರು ಹೇಗೆ ಬಂತೆಂದು ಹೇಳುವ ಈ ಕತೆ ಕೇಳಿದರೆ ಹಾಗೆ ಆರೋಪ ಹೊರಿಸುವವರ ರಾಜಕೀಯ ಪ್ರೇರಿತವಾದ ವಿಚಾರಧಾರೆಯಲ್ಲಿ ಯಾವ ಬದಲಾವಣೆ ಕಾಣುತ್ತದೆಯೋ ಗೊತ್ತಿಲ್ಲ. ಆದರೆ ಕರ್ನಾಟಕದ ಸಂದರ್ಭದಲ್ಲಿ ಹಿಂದೂ-ಮುಸ್ಲಿಮರ ನಡುವಿನ ಭಾವೈಕ್ಯದ ಪ್ರತೀಕವಾಗಿರುವ ಟಿಪ್ಪು ಪಿಂಜಾರನಾಗಿದ್ದ ಎನ್ನುವ ತಿಳುವಳಿಕೆಯಂತೂ ಪಿಂಜಾರ ಜನಾಂಗದಲ್ಲಿದೆ.

ಪಿಂಜಾರರು ಮತಾಂತರಗೊಂಡಿರುವುದು ನಿಜವಾದರೂ ಹಿಂದೂ ಧರ್ಮದ ಯಾವ ನಿರ್ದಿಷ್ಟ ಜಾತಿಯಿಂದ ಬಂದವರು? ಅವರ ಪೂರ್ವಿಕರು ಯಾರು? ಎನ್ನುವುದು ಸ್ಪಷ್ಟವಾಗಿಲ್ಲ. ಮತಾಂತರಕ್ಕೆ ಮೊದಲೇ 'ಪಿಂಜಾರ' ಜನಾಂಗವೊಂದಿತ್ತೇ? ಹಿಂದಿನ ಸಮೀಕ್ಷೆಯಲ್ಲಿ ಹಿಂದೂ ಪಿಂಜಾರರು ಇದ್ದರು ಎನ್ನುವ ಸಂಗತಿ ತಿಳಿಯುತ್ತದೆ. ಆದರೆ ಈಗ ಹಿಂದೂ ಧರ್ಮದಲ್ಲಿ ಅಂಥದೊಂದು ಜನಾಂಗ ಇರುವುದು ಕಂಡು ಬರುವುದಿಲ್ಲ. ಸಮೀಕ್ಷೆ ತಿಳಿಸುವ ಮಾಹಿತಿಯನ್ನು ನಂಬುವುದಾದರೆ ಮತಾಂತರಕ್ಕೆ ಪಿಂಜಾರರು ಮಾತ್ರ. ಒಳಗಾದರೇ ಎನ್ನುವ ಪ್ರಶ್ನೆ ಹಾಗೇ ಉಳಿಯುತ್ತದೆ. ಹಾಗೂ ಪಿಂಜಾರರ ಪೂರ್ವಿಕರ ಬಗ್ಗೆ ಗೊಂದಲ ಇದ್ದೇ ಇದೆ. ಆದರೆ ಆಂಧ್ರರಾಜ್ಯಕ್ಕೆ ಹೊಂದಿಕೊಂಡಂತಿರುವ ಕರ್ನಾಟಕದ ಅನೇಕ ಊರುಗಳಲ್ಲಿ ತಮ್ಮ ಪೂರ್ವಿಕರು ಯಾರು ಎನ್ನುವ ಬಗ್ಗೆ ಕತೆಯೊಂದು ಚಾಲ್ತಿಯಲ್ಲಿದೆ. 'ಆಂಧ್ರಪ್ರದೇಶದ ಎಮ್ಮಿಗನೂರು ತಾಲ್ಲೂಕಿನಲ್ಲಿ ಬ್ರಹ್ಮಯ್ಯ ಎನ್ನುವ ಹೆಸರಿನ ಅನುಭಾವಿಯಿದ್ದನಂತೆ. ಈತ ಅನಾರೋಗ್ಯದ ಕಾರಣ ಒಮ್ಮೆ ವಾಂತಿ ಮಾಡಿಕೊಂಡನಂತೆ. ಇದನ್ನು ಕಂಡ ಅವನ ಶಿಷ್ಯ ಸಮುದಾಯ ಆ ವಾಂತಿಯನ್ನು ತೆಗೆದು ಸ್ವಚ್ಛಗೊಳಿಸಲು ಅರಿವೆ, ಪೊರಕೆ, ನೀರು ಹಿಡಿದುಕೊಂಡು ಅಲ್ಲಿಗೆ ಧಾವಿಸಿ ಬಂದರಂತೆ. ಬ್ರಹ್ಮಯ್ಯನಿಗೆ ಅದು ಯಾವ ಅವಧೂತ ಪ್ರಜ್ಞೆ ಜಾಗೃತವಾಯಿತೋ ಏನೋ ತನ್ನ ಶಿಷ್ಯರಿಗೆ ತಾನು ವಾಂತಿ ಮಾಡಿದ ಜಾಗವನ್ನು ನಾಲಿಗೆಯಿಂದ ತೊಳೆದು ಶುದ್ಧಗೊಳಿಸಲು ಸೂಚಿಸಿದನಂತೆ. ಶಿಷ್ಯರೆಲ್ಲಾ ಹಿಂಜರಿದು ಗುರುಗಳನ್ನು ಮಿಕಿಮಿಕಿ ನೋಡುತ್ತಿರುವಾಗ, ದೂದೇಕುಲದ ಸಿದ್ದಯ್ಯ ಎಂಬ ಶಿಷ್ಯ ತಕ್ಷಣ ಬಂದು ಹಿಂದು-ಮುಂದು ನೋಡದೇ ಗುರುವಿನ ಆಜ್ಞೆಯಂತೆ ಅವರು ವಾಂತಿ ಮಾಡಿದ ಜಾಗವನ್ನು ತನ್ನ ನಾಲಿಗೆಯಿಂದ ನೆಕ್ಕಿ ತೊಳೆದು ಶುದ್ಧಗೊಳಿಸಿದನಂತೆ. ಆ ಕ್ಷಣದಿಂದ ದೂದೇಕುಲದ ಸಿದ್ದಯ್ಯ ಗುರು ಬ್ರಹ್ಮಯ್ಯನ ಆಪ್ತ ಶಿಷ್ಯನಾದ. ಈ ಸಿದ್ದಯ್ಯನನ್ನು ಕಂಡರೆ ಗುರುವಿಗೆ ಎಷ್ಟು ಪ್ರೀತಿಯುಂಟಾಯಿತೆಂದರೆ ಬ್ರಹ್ಮಯ್ಯ ತಾನು ಪ್ರತಿನಿತ್ಯ ಎಲೆ ಅಡಿಕೆ ತಿನ್ನುವ ಅಭ್ಯಾಸವಿಟ್ಟುಕೊಂಡಿದ್ದು ಅದನ್ನು ಈ ದೂದೇಕುಲದ ಸಿದ್ದಯ್ಯ ಶುದ್ಧವಾದ ಎಲೆ, ಅಡಿಕೆ, ಸುಣ್ಣ, ಕಾಚ, ಕಸಕಸೆ, ಒಣಕೊಬರಿ, ಏಲಕ್ಕಿ, ಲವಂಗ ಮೊದಲಾದವುಗಳನ್ನು ಹವಣರಿತು ಹಾಕಿ ತಯಾರಿಸಿ ತನ್ನ ಬಾಯಲ್ಲಿ ಚೆನ್ನಾಗಿ ನುಣ್ಣಗಾಗುವಂತೆ ಅಗಿದು ನಂತರ ಗುರುಗಳಿಗೆ ಕೊಡುತ್ತಿದ್ದನಂತೆ. ಬ್ರಹ್ಮಯ್ಯ ಗುರು ಬದುಕಿರುವವರೆಗೂ ಸಿದ್ದಯ್ಯ ಈ ಸೇವೆ ಮಾಡಿ ಗುರುಗಳ ಮರಣಾನಂತರ ಅವರು ನಡೆಸುತ್ತಿದ್ದ ಅನುಭಾವ ದೇಗುಲಕ್ಕೆ ತಾನು ಗುರುವಾದನಂತೆ'. ಈತನೇ ನಮ್ಮ ಪೂರ್ವಿಕ ಎಂದು ಈ ಭಾಗದ ಪಿಂಜಾರರು ನಂಬುತ್ತಾರೆ. ಈಗಲೂ ಎಮ್ಮಿಗನೂರಿನ ತಾಲ್ಲೂಕಿನಲ್ಲಿ 'ಗುಡಿಕಲ್ಲು ಅಲ್ಲಿಪೀರುಸ್ವಾಮಿ ಮಠ' ಎಂಬ ಹೆಸರಿನಲ್ಲಿ ಆ ಆಶ್ರಮ ನಡೆಯುತ್ತಿದೆಯಂತೆ. ಎಲ್ಲ ಜನಾಂಗದವರು ಈ ಮಠಕ್ಕೆ ನಡೆದುಕೊಳ್ಳುತ್ತಾರೆ. ಈಗ ಅಲ್ಲಿನ ಗುರು ಖಾಜಾಹುಸೇನ್ ಎಂದೂ ಹೇಳುತ್ತಾರೆ.

ಶಿಶುನಾಳ ಶರೀಫರ ಬಗ್ಗೆ ಕೂಡ ಇಂತಹದ್ದೊಂದು ಕತೆಯಿದೆ. ಶರೀಫರು ತಮ್ಮ ಗುರು ಗೋವಿಂದಭಟ್ಟರು ಮಾಡಿಕೊಂಡ ವಾಂತಿಯನ್ನು ಬೊಗಸೆಯಲ್ಲಿ ಹಿಡಿದುಕೊಂಡು ಹಾಗೇ ಕುಡಿದು ಬಿಡುತ್ತಾರೆ. ಮತ್ತು ಈ ಕಾರಣಕ್ಕಾಗಿಯೇ ಗೋವಿಂದಭಟ್ಟರ ಪ್ರಿಯ ಶಿಷ್ಯರಾಗುತ್ತಾರೆ. ಕನ್ನಡ ಕಾವ್ಯದ ಸಂದರ್ಭದಲ್ಲಿ ಶಿಶುನಾಳರನ್ನು ಮೊಟ್ಟಮೊದಲ ಮುಸ್ಲಿಂ ಕವಿ ಎಂದು ಗುರುತಿಸಲಾಗುತ್ತದೆ. ಅವರ ಕಾವ್ಯದ ಅನುಭಾವಿಕ ಗುಣವನ್ನು ಮೆಚ್ಚಿಕೊಳ್ಳಲಾಗಿದೆ. ಮನುಷ್ಯ ಬದುಕಿನ ಕ್ಷಣಿಕತೆಯನ್ನು, ಅವನ ಮೋಹದ ಭ್ರಮೆಯನ್ನು ಸಂಕೇತ ಪ್ರತಿಮೆಗಳ ಮೂಲಕ ಶೋಧಿಸಿದ ಶಿಶುನಾಳರು ಅಮೂರ್ತವಾದ ಆಧ್ಯಾತ್ಮಿಕತೆಗೆ ಅಕ್ಷರದ ರೂಪ ಕೊಟ್ಟಿದ್ದಾರೆ. ಆದರೆ ಶರೀಫರು ಇಡೀ ಸಮಾಜ ಆಧುನಿಕತೆಗೆ ಹೊರಳಿಕೊಳ್ಳುತ್ತಿರುವ ಸಂದರ್ಭದಲ್ಲಿ ಸಾಮಾಜಿಕ ಅನಿಷ್ಟವೇ ಆದ, ಜಾತಿ ವ್ಯವಸ್ಥೆಯಲ್ಲಿ ಮನುಷ್ಯ ಕಳೆದುಹೋಗುತ್ತಿರುವ ಆಂತಕಕ್ಕಿಂತ ತೀರ ವ್ಯಕ್ತಿಗತವಾದ ಅನುಭಾವವೇ ಅಂತಿಮ ಎಂಬಂತೆ ಬರೆದರಲ್ಲಾ ಅದು ವಿಶಿಷ್ಟವಾಗಿದೆ. ಇದು ಚರ್ಚಾಸ್ಪದವಾಗಿರುವುದರಿಂದ ಪಿಂಜಾರರ ಸಂಘವು ಕನ್ನಡದಲ್ಲಿ ಮುಸ್ಲಿಂ ಕಾವ್ಯ ಮತ್ತು ಸಂವೇದನೆಯನ್ನು ಚರ್ಚಿಸುವಾಗಲೆಲ್ಲಾ ಶರೀಫರನ್ನು ಮುಖ್ಯವಾಗಿ ನೆನೆಯುತ್ತ ಭಾವಚಿತ್ರವನ್ನು ಮುಂದಿಟ್ಟುಕೊಳ್ಳುವುದರಿಂದ ಮುಂದೆ ಈ ಅಧ್ಯಯನದಲ್ಲಿ ಪ್ರತ್ಯೇಕವಾಗಿ ಈ ವಿಚಾರವನ್ನು ಪ್ರಸ್ತಾಪಿಸಲಾಗುವುದು.

ಈ ಅಧ್ಯಾಯದಲ್ಲಿ ಮುಖ್ಯವಾಗಿ ಪಿಂಜಾರರ ಮೂಲ, ಅವರ ಮತಾಂತರಕ್ಕಿರಬಹುದಾದ ಸಾಮಾಜಿಕ ಚಾರಿತ್ರಿಕ ಒತ್ತಡಗಳನ್ನು ಕುರಿತಂತೆ ಚರ್ಚಿಸಲಾಗಿದೆ. ಪಿಂಜಾರರ ಭೌಗೋಳಿಕ ಪರಿಸರ, ಅವರು ರೂಪಿಸಿಕೊಂಡಿರುವ ಪೌರಾಣಿಕ ಹಿನ್ನೆಲೆಯನ್ನು ವಿಶ್ಲೇಷಿಸಲಾಗಿದೆ. ಇದೆಲ್ಲದರ ಪರಿಣಾಮವಾಗಿ ಪಿಂಜಾರರ ಒಟ್ಟಾರೆ ಜೀವನ ವಿಧಾನವನ್ನು ಅಭ್ಯಸಿಸಲು ಅನುಕೂಲವಾಗಿದೆ. ಕರ್ನಾಟಕದ ಸಂದರ್ಭದಲ್ಲಿ ಪಿಂಜಾರ ಜನಾಂಗದ ಸಾಂಸ್ಕೃತಿಕ ಅಧ್ಯಯನಕ್ಕಿರುವ ಮಹತ್ವವೆಂದರೆ ಧರ್ಮ, ಜಾತಿಗಳ ಹೆಸರಿನಲ್ಲಿ ಅನ್ಯ ಜಾತಿ, ಧರ್ಮೀಯರ ಕುರಿತು ಹುಟ್ಟಿಸುತ್ತಿರುವ ಅನುಮಾನ, ಆತಂಕಗಳನ್ನು ಅರಿತುಕೊಳ್ಳುವುದು, ಮತ್ತು ಇಂಥದರ ವಿರುದ್ಧದ ಪರ್ಯಾಯವನ್ನು ಕಂಡುಕೊಳ್ಳುವುದು. ಪಿಂಜಾರರ ಜೀವನಕ್ರಮ ಅಂತಹ ಹುಸಿ ಧಾರ್ಮಿಕರ ಮನೋಭಾವವನ್ನು ಇಕ್ಕಟ್ಟಿಗೆ ಸಿಲುಕಿಸುತ್ತದೆ. ಮುಂದಿನ ಅಧ್ಯಾಯಗಳಲ್ಲಿ ಪಿಂಜಾರರ ಸಾಮಾಜಿಕ, ಆರ್ಥಿಕ, ರಾಜಕೀಯ ಜೀವನದ ವಿವರಗಳು ಮತ್ತು ಪಿಂಜಾರರಿಗೆ ವಿಶಿಷ್ಟವೆನಿಸುವ ಸಾಹಿತ್ಯದ ಅಧ್ಯಯನ ಮಾಡಲಾಗುತ್ತದೆ. ಆ ಅಧ್ಯಯನಕ್ಕೆ ಪೂರಕವಾಗಿ ಈವರೆಗಿನ ವಿಶ್ಲೇಷಣೆಯನ್ನು ನಡೆಸಲಾಗಿದೆ.



ಅಡಿಟಿಪ್ಪಣಿಗಳು:

1. ಸಂಕ್ಷಿಪ್ತ ಕನ್ನಡ ನಿಘಂಟು - ಕನ್ನಡ ಸಾಹಿತ್ಯ ಪರಿಷತ್ತು - 1977 ಪುಟ - 527
2. ಅದೇ
3. ನೋಡಿ, ಸಕಾಲಿಕ - ಜಿ.ಹೆಚ್. ನಾಯಕ, ಪುಟ-60
4. ನೋಡಿ, ಸಕಾಲಿಕ - ಜಿ.ಹೆಚ್. ನಾಯಕ, ಪುಟ-56
5. ಸಕಾಲಿಕ - ಜಿ.ಹೆಚ್. ನಾಯಕ, ಪುಟ-80-81-82, ಪ್ರಕಟಣೆ-1995
6. ಸಕಾಲಿಕ - ಜಿ.ಹೆಚ್. ನಾಯಕ, ಪುಟ-82, ಪ್ರಕಟಣೆ-1995
7. ಎಂ.ಎನ್.ರಾಯ್ ಅವರ ಇತಿಹಾಸ ಮತ್ತು ಇಸ್ಲಾಂ - ಅನುವಾದ : ಬಿ.ಎಂ. ಹನೀಫ್ - ಪುಟ 59-60-61, ಪ್ರಕಟಣೆ-1997
8. ಬಸವರಾಜ ಮೂಲಿಮನಿ ಅವರ ಲೇಖನ - 3-6-2001ರ ಸಂಯುಕ್ತ ಕರ್ನಾಟಕ, ಸಾಪ್ತಾಹಿಕ ಸೌರಭ, ಪುಟ-1

ಅಧ್ಯಾಯ-೩

# ಸಾಮಾಜಿಕ ಜೀವನ

## ೩.೧ ಪಿಂಜಾರರ ಸಾಮಾಜಿಕ ಶ್ರೇಣಿ ಮತ್ತು ಕೌಟುಂಬಿಕ ಪದ್ಧತಿ

ಒಂದು ವಿಶಾಲವಾದ ಅರ್ಥದಲ್ಲಿ ಮನುಷ್ಯರು ತಮ್ಮ ಜೀವನಾವಶ್ಯಕ ಸಂಗತಿಗಳಿಗಾಗಿ ಕೂಡಿ ಬಾಳುವುದನ್ನು ಸಮಾಜ ಎನ್ನುತ್ತೇವೆ. ಸಮಾಜ ಎನ್ನುವುದು ಸೀಮಿತ ಅರ್ಥದಲ್ಲಿ ಗುಂಪು ಅಥವಾ ಸಮೂಹ ಎಂದು ಕರೆಸಿಕೊಳ್ಳುತ್ತದೆ. ಸಮಾಜದ ಅಧ್ಯಯನದ ಸಂದರ್ಭದಲ್ಲಿ ಈ ಎರಡೂ ಅರ್ಥಗಳನ್ನೂ ಪರಿಗಣಿಸಲಾಗುತ್ತದೆ. ನೆಲದಲ್ಲಿ ನಿಂತು ಬಾನೆಡೆಗೆ ಕಣ್ಣಿಟ್ಟ ಮನುಷ್ಯನಿಗೆ ಅಲ್ಲಿ ಕಾಣುವ, ಕಾಣದಿರುವ ಗ್ರಹತಾರೆ ನೀಹಾರಿಕೆಗಳಿಂದ ಹಿಡಿದು ಭೂಮಿಯ ಒಳಹೊರಗಿನ ಘನ-ದ್ರವ-ಅನಿಲ ರೂಪದ ವಸ್ತು ವಿಷಯಗಳ ಬಗ್ಗೆ ಆತ ಅಂದುಕೊಂಡದ್ದೆಲ್ಲಾ ಸಮಾಜದಲ್ಲಿ ಸೇರುತ್ತದೆ. ಮನುಷ್ಯ ಬದುಕುತ್ತಿರುವ ಭೌಗೋಳಿಕ ಪರಿಸರವನ್ನು ಒಳಗೊಂಡು ಆತನ ಜೀವನ ವಿಧಾನದಲ್ಲಿ ಮುಖ್ಯವೆನಿಸುವ ಆರ್ಥಿಕ - ರಾಜಕೀಯ ಸ್ಥಿತಿಗತಿಗಳು, ನಂಬಿಕೆಗಳು, ಆಚಾರ-ವಿಚಾರಗಳು, ಕಥೆ-ಕಾವ್ಯ-ಕಲೆ-ಕ್ರೀಡೆಗಳು, ಅವನಿಗೆ ಹರ್ಷೋಲ್ಲಾಸಗಳನ್ನು, ದುಃಖ ದುಮ್ಮಾನಗಳನ್ನು ಉಂಟು ಮಾಡುವ ಸಕಲ ಸಂಗತಿಗಳೂ ಈ ಸಮಾಜದ ಅಧ್ಯಯನದಲ್ಲಿ ಬಂದುಬಿಡುತ್ತವೆ. ಈ ಕಾರಣದಿಂದಲೇ ಸಂಸ್ಕೃತಿ ಅಧ್ಯಯನಕ್ಕೆ ಸೀಮಿತತೆ ಬರುತ್ತದೆ. ಜೀವವಿಕಾಸದ ಹಾದಿಯಲ್ಲಿ ಅಗತ್ಯ ಹಾಗೂ ಅನುಕೂಲಗಳಿಗೆ ದಾಸನಾದ ಮನುಷ್ಯ ತನ್ನ, ತನ್ನವರ ನಡುವೆಯೇ ಗುಂಪುಗಳನ್ನು ಕಟ್ಟಿಕೊಂಡು ಜೀವಿಸತೊಡಗಿದ್ದು ಬಹುಶಃ ಆಸ್ತಿಯ ಪರಿಕಲ್ಪನೆ ಬಂದ ನಂತರವೇ ಇರಬೇಕು.

ಆಹಾರವನ್ನು ಬೇಯಿಸಿ ತಿನ್ನುವುದನ್ನು ಕಂಡುಕೊಂಡ ನಂತರದ ಮಾನವನ ಇತಿಹಾಸವಿದೆಯಲ್ಲಾ ಅದಕ್ಕೂ, ಆಸ್ತಿಯ ಪರಿಕಲ್ಪನೆ ಮನುಷ್ಯನನ್ನು ಒಡೆದ ಅಂದರೆ **Disassociate** ಮಾಡಿದ ಸಂದರ್ಭಕ್ಕೂ ಸಂಬಂಧವಿದೆ. ಇಡಿಯಾಗಿ, ಮನುಕುಲವೇ ಒಂದಾಗಿ, ಒಗ್ಗಟ್ಟಾಗಿ ಪರಸ್ಪರರಿಗಾಗಿ, ಒಂದು ಸಮುದಾಯವಾಗಿ, ಪ್ರಕೃತಿಯ ಭಾಗವಾಗಿ ಬದುಕುತ್ತಿದ್ದ ಮನುಷ್ಯ ಹಸಿವು ಮತ್ತು ಆಸ್ತಿಯ ನಡುವಿನ ಸಂಬಂಧದಿಂದಾಗಿ ಒಡೆದು ಬಿಡಿಬಿಡಿಯಾದ ಚರಿತ್ರೆಯೇ ಸಮಾಜದ ಅಧ್ಯಯನಕ್ಕೆ ಮೂಲವಾಗಿದೆ. ಈ ಸಮಾಜದ ಮುಂದುವರಿದ, ಉತ್ಪಾದನೆ ಮತ್ತು ವಿನಿಮಯದಂತಹ ಸೀಮಿತ ಆರ್ಥಿಕ ರೂಪವೇ ಕುಟುಂಬ. ಜನಾಂಗವೊಂದರ ಸಾಮಾಜಿಕ ಶ್ರೇಣಿ ಮತ್ತು ಕೌಟುಂಬಿಕ ಪದ್ಧತಿಗಳನ್ನು ಅಧ್ಯಯನ ಮಾಡುವಾಗ ಮನುಷ್ಯನ ಬುದ್ಧಿವಿಕಾಸ ಪೂರ್ವದ ಸ್ಥಿತಿಯನ್ನು ಕುರಿತು ಕೆಲಮಟ್ಟಿಗೆ ಚಿಂತಿಸುವುದು ಸೂಕ್ತ.

ಮನುಷ್ಯ ತನ್ನ ಜೈವಿಕ ರಚನೆಯ ಫಲವಾದ ಕೈಕಾಲು ಮತ್ತು ಕೆಲ ಇಂದ್ರಿಯಗಳನ್ನು ಯಾಂತ್ರಿಕವಾಗಿ ಬಳಸುವ ಮೂಲಕವೇ ಪ್ರಕೃತಿಯಲ್ಲಿ ಆಗುವುದನ್ನು ನೋಡುತ್ತಿದ್ದ, ಗ್ರಹಿಸುತ್ತಿದ್ದ, ಸ್ಪರ್ಶಿಸುತ್ತಿದ್ದ ಕ್ಷಣಗಳ ಆಚೆಗೆ ವಾಸ್ತವವಾಗಿ ಅದೇನು ಆಗುತ್ತದೆ ಎಂದು ತನಗೆ ತಾನೇ ಹೇಳಿಕೊಳ್ಳಲಾರದವನಾಗಿದ್ದ. ತಾನು ಒಂದು ಕಡೆಯಿಂದ ಮತ್ತೊಂದು ಕಡೆಗೆ ಚಲಿಸುತ್ತಿದ್ದರೂ ಅದನ್ನು ಚಲನೆ ಎಂದು ಕರೆಯಲು



ನಾಲಿಗೆ ಇದ್ದರೂ ಅದು ಹೊರಳುತ್ತಿರಲಿಲ್ಲ. ಯಾಕೆಂದರೆ ಅದಕ್ಕೆ ತಕ್ಕ ಶಾಬ್ದಿಕ ರೂಪವೇ ಅಂದು ಅಸ್ತಿತ್ವದಲ್ಲಿರಲಿಲ್ಲ. ಈ ಹಂತದಲ್ಲಿ ಮನುಷ್ಯನಿಗೂ ಇತರ ಪ್ರಾಣಿಗಳಿಗೂ ಮೂಲಭೂತವಾಗಿ ಅಂತಹ ವ್ಯತ್ಯಾಸವೇ ಇರಲಿಲ್ಲ. ಕ್ರಮೇಣ ಬುದ್ಧಿ ವಿಕಾಸವಾದಂತೆ ಮನುಷ್ಯನಿಗೆ ಸಂತೋಷ - ದುಃಖಗಳ ಅನುಭವವಾದಂತೆ ಆ ಕ್ಷಣಗಳಿಗೆ ತಕ್ಕಂತೆ ಕುಣಿದು ಕುಪ್ಪಳಿಸುವ, ಸಂಭ್ರಮವೋ, ಜೋರಾಗಿ ಕೂಗಿಕೊಂಡು ಅಳುವ, ಕಣ್ಣೀರಿಡುವ ಪ್ರತಿಕ್ರಿಯೆಯೋ ಸಾಧ್ಯವಾಗಿರಬೇಕು. ಮೊದಮೊದಲು ಇದು ಕೇವಲ ಆಂಗಿಕವಾದ ರೂಪದಲ್ಲಿ ವ್ಯಕ್ತವಾಗುತ್ತಿದ್ದರೂ ಕಾಲಕಳೆದಂತೆ ಮನುಷ್ಯನಿಗೆ ಭಾವಕೋಶ ಆರ್ದ್ರವಾಗುವ, ಸ್ಪಂದನಶೀಲವಾಗುವ ಅನುಭವ ವಲಯವೊಂದು ಗೋಚರವಾಗಿರಬೇಕು. ಈ ಸ್ಥಿತಿಯಲ್ಲೂ ಮನುಷ್ಯ ಇಡಿಯಾಗಿ ಬದುಕಿದನೆಂದೇ ತಿಳಿಯಬೇಕಾಗಿದೆ. ಬುದ್ಧಿ ವಿಕಾಸದ ಸುದೀರ್ಘ ಕಾಲದ ಪ್ರಕ್ರಿಯೆಯಲ್ಲಿ ಮನುಷ್ಯನ ನಾಲಗೆ ಕೇವಲ ರುಚಿಯ ಆಸ್ವಾದನೆಗೆಂಬಂತೆ ನಿರ್ದಿಷ್ಟವಾಗಿದ್ದುದನ್ನೂ ದಾಟಿ ಕೂಗುವ, ಹಾಡುವ, ಹೀಗೆ ಹಾಡುತ್ತಲೇ ಅನುಕರಿಸುತ್ತಲೇ ಮಾತನಾಡುವ, ತಾನಾಡುವ ಪ್ರತಿ ಮಾತಿಗೂ ನಿರ್ದಿಷ್ಟ ಅರ್ಥವನ್ನು ಗ್ರಹಿಸುವ ಅನಂತ ಸಾಧ್ಯತೆಯನ್ನು ಕಂಡುಕೊಂಡು ಬಿಟ್ಟಿತು. ಮಾತು ಹುಟ್ಟಿಕೊಳ್ಳುವ ಮೊದಲ ಮನುಷ್ಯನಿಗಿಂತ ಮಾತನಾಡುವುದನ್ನು ಕಲಿತವನು ಹೆಚ್ಚು ಪ್ರಬುದ್ಧ ಎಂದು ಮೊದಲ ನೋಟಕ್ಕೆ ಅನಿಸುತ್ತದೆ. ಆದರೆ ಮನುಷ್ಯನು ಈ ಬಗೆಯ ಪ್ರಗತಿಯಿಂದ ಮುಂದುವರಿದಂತೆ ಆತ ತನ್ನ ಕುಲಕ್ಕೆ ತಂದುಕೊಂಡ ಆತಂಕ - ಅಪಾಯಗಳನ್ನು ನೋಡಿದರೆ ಆ ಅಭಿಪ್ರಾಯದಲ್ಲಿ ಬದಲಾವಣೆ ಮಾಡಿಕೊಳ್ಳಬೇಕಾಗುತ್ತದೆ, ಇರಲಿ. ಮಾತು ಹುಟ್ಟಿಕೊಂಡಾಗ ಮತ್ತು ಅದರ ನಂತರದಲ್ಲಿ ಮನುಷ್ಯ-ಮನುಷ್ಯನ ನಡುವಿನ ಸಂಬಂಧಗಳು ಹೇಗಿದ್ದವು? ಈ ಇಡೀ ಕಾಲಘಟ್ಟದಲ್ಲಿ ಅಂದರೆ ಮಾತಿನ ನಂತರದ ದೀರ್ಘಾವಧಿಯಲ್ಲಿ ಹುಟ್ಟಿದ ಲಿಪಿಯ ಕಾಲದವರೆಗೆ ಮನುಷ್ಯನ ನಡುವಿನ ಸಂಬಂಧಗಳು, ವ್ಯವಹಾರಗಳು ಹೆಚ್ಚು ಭಾವನಾತ್ಮಕವಾಗಿದ್ದವು; ನಾಲಗೆಗೆ ನಿಷ್ಠವಾಗಿದ್ದವು; ಹೃದಯ ಸ್ಪಂದಿಯಾಗಿದ್ದವು. ಒಟ್ಟಾರೆಯಾಗಿ ಮಾನವೀಯವಾಗಿದ್ದವು. ವ್ಯವಹಾರಕ್ಕೋ, ಸಂಬಂಧಕ್ಕೋ ಒಮ್ಮೆ ಮಾತುಕೊಟ್ಟನೆಂದರೆ ಅದು ಆತನ ಜೀವನ್ಮರಣದ ಪ್ರಶ್ನೆಯಾಗಿರುತ್ತಿತ್ತು. ಪುಣ್ಯಕೋಟಿಯ ಕತೆಯನ್ನು ಈ ಹಿನ್ನೆಲೆಯಲ್ಲಿ ನೋಡಬೇಕು. ತ್ಯಾಗ, ನಿಸ್ವಾರ್ಥ, ಉಪಕಾರ, ವಚನಬದ್ಧತೆಯೇ ಅಂದಿನ ಮನುಷ್ಯನ ಮೌಲ್ಯಗಳಾಗಿದ್ದವು. ಇಂದು ನಾವು ಮಾತೆತ್ತಿದರೆ ಹೇಳುವ ಅಕ್ಷರಗಳು, ಆಧುನಿಕತೆ, ನಾಗರಿಕತೆ ಇತ್ಯಾದಿ ಯಾವುದೂ ಅಂದು ಇರಲಿಲ್ಲ. ಆದರೆ ಸಂಸ್ಕೃತಿ ಮತ್ತು ಸಂಸ್ಕಾರ ಎಂದು ನಾವು ಯಾವುದನ್ನು ಕರೆಯಬಹುದೋ ಅದು ಅಂದು ಅದರ ನಿಜಸ್ವರೂಪದಲ್ಲಿತ್ತು. ಮನುಷ್ಯ ಸಮಾಜದ ಪರಿಕಲ್ಪನೆಯೇ ಇದ್ದಿರದ ಆ ಹೊತ್ತಿನಲ್ಲಿ ಒಟ್ಟಾಗಿ ಒಂದಾಗಿ ಸಾಮರಸ್ಯದಿಂದ ಬದುಕಿದ ಆ ಮನುಷ್ಯನನ್ನು ನಾವು ಆಧುನಿಕ ಸಮಾಜದ ನಿರಂತರ ವಿಘಟನೆಯಲ್ಲಿ ಹುಡುಕಬೇಕಾಗಿದೆ. ಲಿಪಿ ಹುಟ್ಟಿಕೊಂಡ ಆ ಕ್ಷಣ ಆ ಮನುಷ್ಯ ಅನುಭವಿಸಿದ ಆತಂಕ ಸಹಜವಾದುದೇ ಆಗಿದೆ. ಯಾಕೆಂದರೆ ಲಿಪಿ ಅಮೂಲ್ಯ ಜೀವಗಳನ್ನಾಗಲೀ, ಅದು ಅಪೇಕ್ಷಿಸುವ ಮೌಲ್ಯಗಳನ್ನಾಗಲೀ ನಂಬುವುದಿಲ್ಲ, ನಾಲಗೆ ಸತ್ತು ಹೋಗುತ್ತದೆ ಎನ್ನುವ ಆತಂಕ ಆತನಿಗೆ ಕಾಡಿದ್ದಿದೆ. ಆದ್ದರಿಂದ ಒಂದರ್ಥದಲ್ಲಿ ಲಿಪಿಯ ಆವಿಷ್ಕಾರವೇ ಮನುಷ್ಯ ಸಂಸ್ಕೃತಿಯ ಸ್ವರೂಪವನ್ನು ಒಡೆಯುತ್ತಾ ಬಂದಿದೆ. ವಿಚಿತ್ರವೆಂದರೆ ಈ ಬಗೆಯ ಚಿಂತನೆ ಈಗ ಸಾಧ್ಯವಾಗಿರುವುದು ಲಿಪಿಯಿಂದಲೇ

ಎನ್ನುವುದನ್ನು ಗಮನಿಸಿದರೆ ಲಿಪಿಯ ಅನಂತ ಸಾಧ್ಯತೆಗಳ ಅರಿವಾಗುತ್ತದೆ. ಅದೇನೇ ಇರಲಿ, ಲಿಪಿ ಹುಟ್ಟಿಕೊಂಡು ಅದು ಅಕ್ಷರವಾಗಿ, ವಿದ್ಯೆಯ ಮಾಧ್ಯಮವಾಗಿ, ನಿಧಾನಕ್ಕೆ ಸಾಮಾಜಿಕ ನೀತಿ ನಿರೂಪಕನಾಗಿ ಅಂತಿಮವಾಗಿ ಸಾಂಸ್ಕೃತಿಕ ವಿದ್ರೋಹದ ಸಾಧನವಾಗಿಯೂ ಮನುಷ್ಯನ ಹಲವು ಬಗೆಯ ಏಳಿಗೆಯ ಮಂತ್ರವಾಗಿಯೂ ಬಳಕೆಯಾಗಿದೆ.

ಕುಟುಂಬ ಎಂದರೆ ಗಂಡ-ಹೆಂಡತಿ, ಮಕ್ಕಳು-ಮರಿಗಳು ಎಂಬ ಸೀಮಿತ ಅರ್ಥದ ಘಟಕ ಸಮಾಜದ ಪ್ರಾಥಮಿಕ ಸ್ವರೂಪದ್ದು. ಇಂಥ ಕುಟುಂಬಗಳು ಹತ್ತು-ಹಲವು ಸೇರಿ ಒಂದು ಸಮಾಜವಾಗಿದೆ. ಸಮಾಜದ ಈ ಬಗೆ ಕೂಡ ಹಿಂದೆ ಹೇಳಿದ ವಿಶಾಲಾರ್ಥದಲ್ಲಿ ಕೂಡಿಬಾಳುವ ರೂಪದ್ದು. ಆದರೆ ಲಿಪಿಯ ಆವಿಷ್ಕಾರದ ನಂತರ ಸಮಾಜ ಎನ್ನುವುದು ಪರಿಸರ, ಪ್ರಾದೇಶಿಕತೆ ಬಣ್ಣ, ಉಚ್ಚ-ನೀಚ ಇತ್ಯಾದಿಗಳ ನೆಲೆಯಲ್ಲಿ ಒಡೆದು ಸಂಕುಚಿತಾರ್ಥದ ಅನೇಕ ಸಮಾಜಗಳಾಗಿ ಹೋಯಿತು. ಇನ್ನೂ ಮುಂದೆ ಹೋಗಿ ಪ್ರಾಕೃತಿಕ ನಿಗೂಢಗಳನ್ನು ಅರಿಯಲು ಯತ್ನಿಸಿದಂತೆಲ್ಲಾ ಮನುಷ್ಯನಿಗೆ ವಿಸ್ಮಯ, ಕುತೂಹಲ ಮತ್ತು ಭಯಮಿಶ್ರಿತ ಭಾವನೆಗಳಿಂದಾಗಿ ಹುಟ್ಟಿಕೊಂಡ ದೇವರು-ದಿಂಡರು-ದೆವ್ವದ ಬಗೆಗಿನ ಕಲ್ಪನೆಗಳಿಂದ ಅನೇಕ ಸಮಾಜಗಳು ಜಾತಿ ಉಪಜಾತಿಗಳಾಗಿ ಛಿದ್ರಗೊಂಡು ಬಿಟ್ಟವು. ಹೀಗೆ ಮನುಷ್ಯ ಇಡಿಯಾಗಿದ್ದವನು ಬಿಡಿಯಾಗಿ ತನ್ನದೇ ಗುಂಪಿನ ರಕ್ಷಣೆಗೆ ಮುಂದಾದ ಕತೆಯೇ ಮನೆ-ಮಠ, ಆಸ್ತಿ-ಅಂತಸ್ತುಗಳ ಅಧ್ಯಯನವಾಗಿದೆ. ಒಟ್ಟು ಪ್ರಕೃತಿಯ ಭಾಗವಾಗಿದ್ದ ಮನುಷ್ಯ ಬರುಬರುತ್ತಾ ತನ್ನವರಿಗಾಗಿ, ತನ್ನ ರಕ್ತ ಸಂಬಂಧಿಗಳಿಗಾಗಿ ಅದೇ ಪ್ರಕೃತಿಯ ಪಾಲನ್ನು ಹಂಚಿಕೊಂಡು ಅದರ ಒಡೆಯನಾಗಬಯಸಿದ ಕತೆಯೇ ಸಮಾಜ-ಕುಟುಂಬಗಳ ಅಧ್ಯಯನ. ಎಂದೆಂದಿಗೂ ಪ್ರಕೃತಿಯ ದಾಸಾನುದಾಸನಾಗಿರಬೇಕಾದ ಮನುಷ್ಯ ತನ್ನ ಸ್ವಾರ್ಥಪರತೆಯ ಕಾರಣಕ್ಕಾಗಿ ಈ ಭೂಮಿಗೆ ಬೇಲಿ ಹಾಕಲಾರಂಭಿಸಿದ. ಗಾಳಿಗೆ ಗೋಡೆ ಕಟ್ಟಲಾರಂಭಿಸಿದ. ಬೆಳಕಿಗೆ ಕಿಟಕಿ-ಬಾಗಿಲುಗಳನ್ನು ಜೋಡಿಸಿದ. ನೀರಿಗೆ ಕಟ್ಟೆ ಕಟ್ಟಿದ. ಈ ಯಾವುದನ್ನೂ ಮಾಡದ ಆದಿಮಾನವ ಪ್ರಕೃತಿಯೊಂದಿಗೆ ಪ್ರತಿಸ್ಪಂದಿಸುತ್ತಾ ಸ್ವಚ್ಛಂದವಾಗಿ ಬದುಕುತ್ತಿದ್ದ. ಆದರೆ ನಾಗರಿಕ ಮಾನವ ಪ್ರಕೃತಿಯನ್ನು ತನಗಾಗಿ ಬಳಸಿಕೊಳ್ಳುವ ಪ್ರಯತ್ನದಲ್ಲಿ ಸ್ವಾತಂತ್ರ್ಯವನ್ನು ಕಳೆದುಕೊಂಡುದರ ಚರಿತ್ರೆಯೇ ಸಮಾಜ ಮತ್ತು ಕುಟುಂಬದ ಅಧ್ಯಯನ. ಈ ಹಿನ್ನೆಲೆಯಲ್ಲಿ ಪಿಂಜಾರ ಜನಾಂಗದ ಸಾಮಾಜಿಕ ಶ್ರೇಣಿ ಹಾಗೂ ಕೌಟುಂಬಿಕ ಅಧ್ಯಯನವನ್ನು ಮಾಡಬಹುದಾಗಿದೆ.

ಸಮಾಜ ಎನ್ನುವುದನ್ನು ಅದರ ಸೀಮಿತ ಅರ್ಥದಲ್ಲಿ, ಅಂದರೆ ಇಡೀ ಮಾನವ ಸಮುದಾಯದ ಒಟ್ಟಾರೆ ಸ್ವರೂಪದ ಹೊರತಾದ ಆರ್ಥಿಕ ಕಾರಣಕ್ಕಾಗಿ ಒಡೆದುಹೋದ ಸಣ್ಣಗುಂಪು ಎನ್ನುವ ಅರ್ಥದಲ್ಲಿ ಇಲ್ಲಿ ಅಧ್ಯಯನಕ್ಕೆ ತೊಡಗಲಾಗಿದೆ. ಆರ್ಥಿಕ ಕಾರಣಗಳ ಜೊತೆಗೆ ಪರಿಸರ, ಭಾಷೆ, ಧರ್ಮ, ಜಾತಿ, ಬಣ್ಣ ಮೊದಲಾದ ಕಾರಣಗಳೂ ಇಲ್ಲಿರುವುದು ನಿಜವಾದರೂ ಮನುಷ್ಯ ಚಿಕ್ಕಘಟಕವಾಗಿ ಬದುಕಬಯಸುವುದು ಸುಖದ ಅಪೇಕ್ಷೆಯಿಂದ. ಈ ಸುಖವನ್ನು ಆರ್ಥಿಕ ನೆಲೆಯಲ್ಲಿ ವ್ಯಾಖ್ಯಾನಮಾಡುವ ರೂಢಿಯೇ ಇರುವುದರಿಂದ ಸಮಾಜದ ಅಧ್ಯಯನ ಪ್ರಧಾನವಾಗಿ ಈ ನೆಲೆಯಲ್ಲಿಯೇ ನಡೆಯಬೇಕಾಗಿದೆ.

ಪಿಂಜಾರರ ಸಮಾಜ ಮುಖ್ಯವಾಗಿ ಇಸ್ಲಾಂ ಧರ್ಮದ ಆವರಣದಲ್ಲಿ ಹರಡಿಕೊಂಡಿದೆ. ಭಾರತೀಯ ಸಂದರ್ಭದಲ್ಲಿ ಇಸ್ಲಾಂ ಧರ್ಮದ ಗ್ರಹಿಕೆಯ ನೆಲೆಗಳು ವಿಚಿತ್ರವಾಗಿವೆ. ಅದು ಮುಖ್ಯವಾಗಿ ಭಾರತೀಯ

ಪುರೋಹಿತಶಾಹಿ ಮನಸ್ಸಿನ ವ್ಯಾಖ್ಯಾನವಾಗಿದೆ. ಇಸ್ಲಾಂನ ಆಗಮನದ ಸಂದರ್ಭದಲ್ಲಿನ ವೈದಿಕ ಮನಸ್ಸಿನ ತಳಮಳವನ್ನು ಗುರುತಿಸುವ ಪ್ರಯತ್ನವನ್ನು ಈ ಹಿಂದೆ ಮಾಡಲಾಗಿದೆ. ನಂತರ ಇಸ್ಲಾಂ ಭಾರತೀಯ ಸಮಾಜ ಸಂಸ್ಕೃತಿಯ ಮೇಲೆ ವಿಶೇಷವಾದ ಪ್ರಭಾವ ಹಾಗೂ ಪರಿಣಾಮಗಳನ್ನು ಬೀರುತ್ತಾ ಇಲ್ಲಿನ ಬದುಕಿನ ಭಾಗವಾಗಿದ್ದು ಇತಿಹಾಸ. ಆದರೆ ಭಾರತೀಯ ವೈದಿಕ ಮನಸ್ಸು ಭಾರತದ ಮೇಲೆ ರಾಜಕೀಯ ದಾಳಿ ಮಾಡಿಕೊಂಡು ಬಂದ ಕೆಲವು ಆಕ್ರಮಣಕಾರಿ ಮುಸಲ್ಮಾನ ದೊರೆಗಳ ನೆಪದಲ್ಲಿ ಇಡೀ ಇಸ್ಲಾಂ ಧರ್ಮವನ್ನೇ ಆಕ್ರಮಣಶೀಲ ಸ್ವರೂಪದ್ದೆಂಬಂತೆ ಬಿಂಬಿಸಿತು. ತಾನು ರೂಪಿಸಿಕೊಂಡು ಬಂದ ಜಾತಿವ್ಯವಸ್ಥೆಯ ಬೇರುಗಳು ಇಸ್ಲಾಂನ ಆಗಮನದಿಂದ ಶಿಥಿಲವಾಗತೊಡಗಿದುದರ ಪರಿಣಾಮವಾಗಿ ಅದರ ಮಾನವೀಯ ಮುಖವನ್ನು ವಿರೂಪಗೊಳಿಸುವ ಕೆಲಸವನ್ನು ಈ ಮನಸ್ಸು ವ್ಯವಸ್ಥಿತವಾಗಿ ಮಾಡಿಕೊಂಡು ಬಂದಿತು. ಆ ಹಿನ್ನೆಲೆಯಲ್ಲಿ ಇಸ್ಲಾಂ ಎಂದರೆ ಏಕದೇವತಾರಾಧನೆ, ನಿರಾಕಾರ ದೈವರೂಪ, ಜಾತಿಗಳೇ ಇಲ್ಲದಿರುವ ಸರ್ವಸಮಾನ ಭಾವನೆ ಮೊದಲಾದವುಗಳೆಲ್ಲಾ ನೇಪಥ್ಯಕ್ಕೆ ಸರಿದು ಹಿಂದೂಗಳ ವಿರುದ್ಧ ದಾಳಿ ಮಾಡುವುದಕ್ಕಾಗಿಯೇ ರೂಪುಗೊಂಡ, ಮುರಿಯದ ಒಗ್ಗಟ್ಟಿನಿಂದ ಸರ್ವಸನ್ನದ್ಧವಾದ ಸಂಘಟನೆ ಎಂಬ ಗ್ರಹಿಕೆಯೇ ಬಲವಾಗುವಂತೆ ನೋಡಿಕೊಳ್ಳಲಾಯಿತು. ಅಂದರೆ ಪ್ರಜ್ಞಾಪೂರ್ವಕವಾಗಿಯೇ ಇಸ್ಲಾಂ ಧಾರ್ಮಿಕಾವರಣದ ಒಳಗಿನ ವಿಭಿನ್ನ ಪಂಥ ಪಂಗಡಗಳನ್ನು ಅಲಕ್ಷಿಸಿ ಮುಸ್ಲಿಮರೆಂದರೆ ಧಾರ್ಮಿಕ ವಿಷಯದಲ್ಲಿ ಭಿನ್ನಾಭಿಪ್ರಾಯಗಳೇ ಇಲ್ಲದವರೆಂತಲೂ ಧರ್ಮರಕ್ಷಣೆಗಾಗಿ ಎಂಥ ಸಂದರ್ಭದಲ್ಲಿಯೂ ಹಿಂಸಾತ್ಮಕ ಹಾಗೂ ಸಂಘಟಿತ ಹೋರಾಟ ನಡೆಸುವ ಮತಾಂಧರು ಎಂಬಂತೆಯೂ ಚಿತ್ರಿಸಲಾಯಿತು. ವಾಸ್ತವವಾಗಿ ಇಸ್ಲಾಂ ಧರ್ಮ ಕೂಡ ಅನೇಕ ಜಾತಿ, ಪಂಗಡಗಳಿಂದ ವಿವಿಧ ಸಮಾಜಗಳಿಂದ ತುಂಬಿಹೋಗಿದೆ ಎಂಬುದು ಪಿಂಜಾರರ ಸಮಾಜದ ಅಧ್ಯಯನದ ಸಮಯದಲ್ಲಿ ತಿಳಿಯುತ್ತದೆ.

ಇಸ್ಲಾಂ ಧಾರ್ಮಿಕ ಒಳಾವರಣದಲ್ಲಿ ಮುಖ್ಯವಾಗಿ ಸುನ್ನಿ ಮತ್ತು ಷಿಯಾ ಎಂಬ ಸಾಮುದಾಯಿಕ ವಿಂಗಡಣೆಗಳಿವೆ. ಇವತ್ತಿಗೂ ಜಾಗತಿಕ ಸಂದರ್ಭದಲ್ಲಿ ಈ ಎರಡು ಸಮುದಾಯಗಳ ನಡುವಿನ ಸಾಮರಸ್ಯದ ಕೊರತೆ ಒಡೆದು ಕಾಣುತ್ತಿರುತ್ತದೆ. ಈ ಎರಡೂ ಸಮುದಾಯಗಳು 'ಅಲ್ಲಾಹ್'ನನ್ನೇ ಪರಮದೈವ ಎಂಬುದನ್ನು ನಿರ್ವಿವಾದವಾಗಿ ಒಪ್ಪಿಕೊಳ್ಳುತ್ತವಾದರೂ 'ಅಲ್ಲಾಹ್'ನ ಪ್ರಾರ್ಥನೆಗೆ ಸಂಬಂಧಿಸಿದಂತೆ ಭಿನ್ನಾಭಿಪ್ರಾಯಗಳನ್ನು ಒಳಗೊಂಡಿವೆ. ಧರ್ಮದ ಅಸ್ತಿತ್ವಕ್ಕೆ ಆಸ್ತಿಕತೆಯೇ ಮೂಲವಾದರೂ ಪ್ರಾರ್ಥನೆ, ಆಚರಣೆ ಮೊದಲಾದವುಗಳ ವಿಚಾರದಲ್ಲಿ ವ್ಯತ್ಯಯಗಳು ಉಂಟಾಗುತ್ತವೆ. ಈ ವ್ಯತ್ಯಾಸಗಳೇ ಸಮುದಾಯಗಳ ನಡುವಿನ ಸಂಘರ್ಷಕ್ಕೆ ಕಾರಣವಾಗುತ್ತವೆ. ಅದರಲ್ಲೂ ಮನುಷ್ಯ ಸ್ವಭಾವವೇ ಆದ 'ತನ್ನದೇ ಸರಿ' ಎಂಬ ಮನೋಭಾವದಿಂದಾಗಿ ಆಸ್ತಿಕತೆಯು ನಾನಾ ರೂಪಗಳಾಗಿ ಒಡೆದುಹೋಗುತ್ತದೆ. ಇಸ್ಲಾಂನ ಪ್ರಕಾರ 'ಅಲ್ಲಾ'ನ ಪ್ರಾರ್ಥನೆಗೆ ಇಂತಹದ್ದೇ ನಿರ್ದಿಷ್ಟ ಜಾಗ ಬೇಕು ಎಂಬಂತೇನೂ ಇಲ್ಲ. ಇದು ವಾಸ್ತವವಾಗಿ ಜಂಗಮ ಸ್ವರೂಪದ ಧಾರ್ಮಿಕ ತಿಳುವಳಿಕೆಯಾಗಿದೆ. ಆದರೆ ಪ್ರಾರ್ಥನೆಗಾಗಿ ಕಿಬ್ಲಾದ ಕಡೆ ತಿರುಗಬೇಕೆಂಬ ನಂಬಿಕೆ ಮೇಲಿನ ಎರಡೂ ಸಮುದಾಯಗಳಲ್ಲಿದೆ.

ಸುನ್ನಿ ಮತ್ತು ಷಿಯಾ ಎಂಬ ಎರಡು ಪ್ರಧಾನ ಕವಲುಗಳ ಜೊತೆಗೆ ಇಸ್ಲಾಂ ಸಮುದಾಯದಲ್ಲಿ ಶೇಕ್, ಸೈಯದ್, ಪಠಾಣ್, ಮೊಗಲ್, ಲಬ್ಬೆ, ದೆಹರಾ, ಬೊಹರಾ, ಬೇಗ್, ಚಪ್ಪರ್‌ಬಂದ್, ಮೊದಲಾದ ಉಪ

ಸಮುದಾಯಗಳೂ ಇರುವುದು ಕಂಡು ಬರುತ್ತದೆ. ಈ ಎಲ್ಲಾ ಸಮುದಾಯಗಳು ತನ್ನಷ್ಟಕ್ಕೆ ತಾನು ಶ್ರೇಷ್ಠ ಎಂದೂ, ತಾನೇ ನಿಜವಾದ ಇಸ್ಲಾಂನ ಅನುಯಾಯಿ ಎಂದು ನಂಬುತ್ತವೆ. ಅಲ್ಲದೆ ಪರಸ್ಪರ ವೈವಾಹಿಕ ಸಂಬಂಧಗಳನ್ನು ಇವು ನಿರಾಕರಿಸುತ್ತವೆ. ಪ್ರದೇಶ ಬದಲಾದಂತೆ ಈ ಸಮುದಾಯಗಳ ನಡುವಿನ ಭಾಷೆಯೂ ಬೇರೆ. ಇಂಡಿಯಾದಲ್ಲಿ, ಅದರಲ್ಲೂ ಕರ್ನಾಟಕದಲ್ಲಿ ಹರಡಿರುವಂತೆ ಜಗತ್ತಿನ ಎಲ್ಲ ಮುಸ್ಲಿಮರ ಭಾಷೆ 'ಉರ್ದು' ಎನ್ನುವುದು ನಿಜವಲ್ಲ. ಆದರೆ ಇಸ್ಲಾಂನ ಈ ಸಮುದಾಯಗಳಲ್ಲಿ ಹುಟ್ಟು, ಮುಂಜಿ, ಮದುವೆ, ಸಾವು ಮುಂತಾದ ಆಚರಣೆಗಳು ಮತ್ತು ಅವುಗಳ ಅನುಸರಣೆಯ ವಿಚಾರದಲ್ಲಿ ಪ್ರಾದೇಶಿಕವಾಗಿ ಲಭ್ಯವಾಗುವ ಪರಿಕರಗಳ ಮಟ್ಟಿಗೆ ಸಣ್ಣಪುಟ್ಟ ವ್ಯತ್ಯಾಸಗಳಿರಬಹುದಾದರೂ ಬಹುಮಟ್ಟಿಗೆ ಏಕರೂಪದಿಂದ ಕೂಡಿವೆ. ಹಾಗೆಯೇ ಈ ಎಲ್ಲ ಸಮುದಾಯಗಳು 'ಅಲ್ಲಾಹ್'ನನ್ನು ಆತ್ಯಂತಿಕ ದೈವ ಎಂದು ನಂಬುವುದು ನಿಜವಾದರೂ ಪ್ರಾರ್ಥನೆ (ನಮಾಜು)ಯ ವಿಧಿ ವಿಧಾನಗಳಲ್ಲಿ ಕೆಲವು ವಿಭಿನ್ನ ರೀತಿಯ ತಿಳುವಳಿಕೆಗಳಿವೆ. ಇಸ್ಲಾಂನ ಸಮುದಾಯಗಳಲ್ಲಿ ಸಾಮಾನ್ಯವಾಗಿ ದೇವರು ಮತ್ತು ಮನುಷ್ಯನ ನಡುವಿನ ಭಕ್ತಿಯ ಮಾಧ್ಯಮವಾಗಿರುವ ವ್ಯಕ್ತಿಯನ್ನು ಮುಲ್ಲಾ, ಮೌಲ್ವಿ, ಮುಜಾವರ ಎಂಬಿತ್ಯಾದಿ ಹೆಸರುಗಳಿಂದ ಗುರುತಿಸಲಾಗುತ್ತದೆ. ಸರಳವಾಗಿ ಹೇಳಬೇಕೆಂದರೆ ಈತ ಇಸ್ಲಾಂ ಪುರೋಹಿತ. ಎಲ್ಲ ಧಾರ್ಮಿಕ ಆಚರಣೆಗಳಲ್ಲಿ ಈತನ ಉಪಸ್ಥಿತಿ ಅನಿವಾರ್ಯ. ಹಿಂದೂ ಧಾರ್ಮಿಕ ಪುರೋಹಿತ ಸಾಮಾನ್ಯವಾಗಿ ಅಲ್ಲಿನ ವರ್ಣವ್ಯವಸ್ಥೆಯ ಮೊದಲ ಸಾಲಿನಲ್ಲಿ ಅಲಂಕೃತನಾಗಿರುವ ಬ್ರಾಹ್ಮಣನೇ ಆಗಿರುತ್ತಾನೆ. ಉಳಿದಂತೆ ಕ್ಷತ್ರಿಯ, ವೈಶ್ಯ, ಶೂದ್ರ ವರ್ಣಗಳ ಜನ ಎಷ್ಟೇ ವಿದ್ವತ್ತು ಅಂತಸ್ತುಗಳನ್ನು ಒಳಗೊಂಡಿದ್ದರೂ ಅವರ ಧಾರ್ಮಿಕ ಕ್ರಿಯೆ ಮತ್ತು ಆಚರಣೆಗಳಿಗೆ ವೈದಿಕ ಪುರೋಹಿತ ಬೇಕೇ ಬೇಕು. ಆದರೆ ಇಸ್ಲಾಂನಲ್ಲಿ ಧಾರ್ಮಿಕ ತಿಳುವಳಿಕೆಯುಳ್ಳ ಯಾರೇ ಆಗಿರಲಿ, ಆತ ಸ್ವಯಂ ಇಚ್ಛೆಯಿಂದ ಒಪ್ಪಿದ್ದಲ್ಲಿ ಧಾರ್ಮಿಕ ಆಚರಣೆಗಳನ್ನು ನೆರವೇರಿಸಿಕೊಡಬಲ್ಲ ಅಧಿಕಾರ ಹೊಂದಿರುತ್ತಾನೆ. ಹಿಂದೂ ಮತ್ತು ಇಸ್ಲಾಂ ಧರ್ಮಗಳ ಮೂಲಭೂತ ಗ್ರಹಿಕೆಯ ಬಹಳ ಮುಖ್ಯವಾದ ವ್ಯತ್ಯಾಸವೆಂದರೆ ಹಿಂದೂ ತಾತ್ವಿಕ ನೆಲೆ ಆಸ್ತಿಕ ಹಾಗೂ ನಾಸ್ತಿಕ ವಿಚಾರಧಾರೆಗಳನ್ನು ಒಳಗೊಂಡಿದ್ದರೆ ಇಸ್ಲಾನಲ್ಲಿ ಸಂಪೂರ್ಣವಾದ ಆಸ್ತಿಕ ವಿಚಾರಧಾರೆಯಿದೆ. ಹಾಗೆ ನೋಡಿದರೆ ಭಾರತೀಯ ತತ್ವಶಾಸ್ತ್ರದಲ್ಲಿ ನಾಸ್ತಿಕವಾದದ ಒಂದು ದೊಡ್ಡ ಪರಂಪರೆಯೇ ಇದೆ. ಭಾರತದ ತಾತ್ವಿಕ ಇತಿಹಾಸದಲ್ಲಿ ಈ ನಿರೀಶ್ವರವಾದ ಅಲ್ಲಲ್ಲಿ ಕೆಲವು ಉಗ್ರರೀತಿಯ ಪ್ರತಿಭಟನೆ ಹಾಗೂ ಹಿಂಸೆಯನ್ನು ಎದುರಿಸಿದೆಯಾದರೂ ತನ್ನ ವೈಚಾರಿಕ ಹಾಗೂ ಭೌತವಾದೀ ದೃಷ್ಟಿಕೋನಗಳ ಪರಿಣಾಮವಾಗಿ ಅಸಾಧಾರಾಣವಾದ ಗೌರವವನ್ನು ಉಳಿಸಿಕೊಂಡು ಬಂದಿದೆ. ಈ ರೀತಿಯಲ್ಲಿ ತನ್ನ ಗ್ರಹಿಕೆಗೆ ವಿರುದ್ಧವಾದ ಧಾರೆಯೊಂದನ್ನು ಗೌರವಿಸುವ, ಸಹಿಸುವ ನೆಲೆ ಇಸ್ಲಾಂನಲ್ಲಿ ಕಂಡುಬರುವುದಿಲ್ಲ. ಇದೇನೇ ಇರಲಿ, ಇಸ್ಲಾಂನ ವಿಭಿನ್ನ ಸಮುದಾಯಗಳಲ್ಲಿ ಎಲ್ಲ ಧಾರ್ಮಿಕ ವಲಯದಲ್ಲಿರುವಂತೆ ಆಸ್ತಿಕತೆ, ಪ್ರೀತಿ, ನಂಬಿಕೆ, ವಿಶ್ವಾಸ, ಔದಾರ್ಯ, ತ್ಯಾಗ, ಸಿಟ್ಟು, ಸಣ್ಣತನ, ದ್ವೇಷ, ದುರಾಸೆಗಳು ಸಹಜವಾಗಿವೆ. ಹಿಂದೂ ಸಮುದಾಯದಲ್ಲಿ ಸಸ್ಯಾಹಾರ ಹಾಗೂ ಮಾಂಸಾಹಾರದ ಜನವರ್ಗಗಳಿರುವಂತೆ ಇಸ್ಲಾಂನಲ್ಲಿ ಎರಡೂ ಬಗೆಯ ಆಹಾರವನ್ನು ಸೇವಿಸುವ ಜನವರ್ಗಗಳಿವೆ. ಆದರೆ ಇಸ್ಲಾಂನಲ್ಲಿ ಪೂರ್ಣ ಸಸ್ಯಾಹಾರಿಗಳಾಗಲೀ, ಪೂರ್ಣ ಮಾಂಸಾಹಾರಿಗಳಾಗಲೀ ಇಲ್ಲ. ಹಿಂದೂ

ಧರ್ಮದಲ್ಲಿ ಪೂರ್ಣ ಸಸ್ಯಾಹಾರಿಗಳಿದ್ದಾರೆ, ಪೂರ್ಣ ಮಾಂಸಾಹಾರಿಗಳಿಲ್ಲ. ಇಸ್ಲಾಂ ಧರ್ಮದಲ್ಲಿ ಮೇಲೆ ತಿಳಿಸಿದ ಸಮುದಾಯಗಳು ಸಾಮಾಜಿಕವಾಗಿ (ಬಡತನ - ಶ್ರೀಮಂತಿಕೆಯೆಂಬ ಆರ್ಥಿಕ ಅಂತಸ್ತುಗಳ ನಡುವೆಯೂ) ಮೇಲು-ಕೀಳು ಎಂಬ ತರ-ತಮದ ಭಾವನೆಯನ್ನು ಹೊಂದಿಲ್ಲ. ಹಿಂದೂ ಜಾತಿವ್ಯವಸ್ಥೆಯ ಪ್ರಧಾನ ನೆಲೆಯಾದ ಅಸಮಾನತೆಯಾಗಲೀ, ಅಸ್ಪೃಶ್ಯತೆಯಾಗಲೀ ಇಸ್ಲಾಂನಲ್ಲಿ ಇಲ್ಲ. ಅಲ್ಲಿ ಒಂದು ಜಾತಿಯಲ್ಲಿ ಹುಟ್ಟಿದ ಕಾರಣಕ್ಕೆ ಶ್ರೇಷ್ಠನೋ, ಕನಿಷ್ಠನೋ ಆಗಿಬಿಡುವ ಮಾನವ ಸಮುದಾಯ ಇಸ್ಲಾನಲ್ಲಿ ಹಾಗಾಗುವುದಿಲ್ಲ. ಆದರೆ ಇಸ್ಲಾಂನಲ್ಲಿ ನಂಬಿಕೆಯುಳ್ಳವನು, ಧಾರ್ಮಿಕ ತಿಳುವಳಿಕೆಯುಳ್ಳವನು ಗೌರವಿಸಲ್ಪಟ್ಟ ಹಾಗೆ ಅದರಿಂದ ಹೊರತಾದವನನ್ನು ತುಚ್ಛವಾಗಿ ನೋಡಲಾಗುತ್ತದೆ. ಹಿಂದೂ ಧರ್ಮದಲ್ಲಿ ಈ ಬಗೆಯ ತಿಳುವಳಿಕೆಯಿಂದ ಗೌರವ ಸಿಗಬಹುದಾದರೂ ತಿಳುವಳಿಕೆಯಿಲ್ಲದವನನ್ನು ಕೀಳಾಗಿ ನೋಡಲಾಗುವುದಿಲ್ಲ. ಇದನ್ನು ಧಾರ್ಮಿಕ ಉದಾರತೆ ಎನ್ನಬೇಕೋ ಏನೋ ಗೊತ್ತಿಲ್ಲ. ಇದು ಇಸ್ಲಾಂನಲ್ಲಿ ಅಷ್ಟಾಗಿ ಕಂಡು ಬರುವುದಿಲ್ಲ. ಇಸ್ಲಾಂನಲ್ಲಿ ಸಮುದಾಯಗಳ ಒಳಗೆ ಸಾಮಾನ್ಯ ಸಮಸ್ಯೆಗಳು ಎದುರಾದಾಗ ಅವುಗಳಿಗೆ ಪರಿಹಾರ ಸೂಚಿಸಿ ನ್ಯಾಯದಾನ ಮಾಡುವವನು ಆ ಸಮಾಜದ 'ಮೌಲ್ವಿ'ಯೇ ಆಗಿರುತ್ತಾನೆ. ಹಿಂದೂ ಜಾತಿ ವ್ಯವಸ್ಥೆಯಲ್ಲಿ ಆಯಾ ಜಾತಿಯ ಮುಖಂಡ ಆ ಬಗೆಯ ಜವಾಬ್ದಾರಿಯನ್ನು ನಿರ್ವಹಿಸುತ್ತಾನೆ. ಇಲ್ಲಿ ಪ್ರತಿಯೊಂದು ಜಾತಿ-ಉಪಜಾತಿಗೂ ತನ್ನದೇ ಆದ ರೀತಿ-ರಿವಾಜುಗಳಿರುತ್ತವೆ. ಅವುಗಳನ್ನು ಮೀರಿದಾಗ ಅದೇ ಸಂದರ್ಭದಲ್ಲಿ ತಕ್ಕ ಪರಿಹಾರಗಳನ್ನು ಆ ಜಾತಿವ್ಯವಸ್ಥೆ ಕಂಡುಕೊಳ್ಳುತ್ತದೆ. ಇಸ್ಲಾಂನಲ್ಲಿ ಆರ್ಥಿಕ, ಸಾಮಾಜಿಕ ಸಮಸ್ಯೆಗಳು ಇತ್ಯರ್ಥಗೊಳ್ಳುವುದು ತೀರ ವೈಯಕ್ತಿಕ ನೆಲೆಯಲ್ಲಿ. ಆದರೆ ಇಸ್ಲಾಂನಲ್ಲಿ ಬಹುಪಾಲು ಧಾರ್ಮಿಕ ವಿಧಿ-ವಿಧಾನಗಳ ವಿಚಾರದಲ್ಲಿ ಉಂಟಾಗಬಹುದಾದ ಬಿಕ್ಕಟ್ಟಿನ ಸಂದರ್ಭದಲ್ಲಿ ಉಗ್ರವಾದ ವಾದ-ವಿವಾದಗಳ ಮೂಲಕ ನ್ಯಾಯದಾನ ಮಾಡಲಾಗುತ್ತದೆ. ಹಿಂದೂ ಹಾಗೂ ಇಸ್ಲಾಂ ಧರ್ಮದಲ್ಲಿ ಬಹಳ ಮುಖ್ಯವಾದ ಆಹಾರ ಪದ್ಧತಿಯ ಆಚರಣೆ ಎಂದರೆ ಮಾಂಸಾಹಾರಕ್ಕೆ ಸಂಬಂಧಿಸಿದುದಾಗಿದೆ. ಹಿಂದೂಗಳಲ್ಲಿ, ಅದರಲ್ಲೂ ಮೇಲ್ಜಾತಿಗಳಲ್ಲಿ ದನದ ಮಾಂಸ ವರ್ಜ್ಯ ವಿಶೇಷವಾಗಿ ಗೋಮಾಂಸವನ್ನು ತಿನ್ನುವುದು ಪಾಪ ಎಂದೇ ಹಿಂದೂ ಧಾರ್ಮಿಕ ತಿಳುವಳಿಕೆ. ಆದರೆ ಹಿಂದೂ ಧರ್ಮದ ಕೆಳವರ್ಗವಾದ ಅಸ್ಪೃಶ್ಯರು ದನದ ಮಾಂಸವನ್ನು ತಿನ್ನುತ್ತಾರೆ. ಭಾರತೀಯ ಸಮಾಜದ ದಲಿತರ ಬಹಳ ಮುಖ್ಯವಾದ ಆಹಾರ ಪದ್ಧತಿ ಅದು. ನಿಜವಾಗಿಯೂ ದನಗಳ ಉಪಚಾರಕರು ರೈತರು ಮತ್ತು ದಲಿತರೇ. ಅವುಗಳ ಮೈತೊಳೆದು, ಕಾಲಿಗೆ ಬಿದ್ದು ಪೂಜೆ ಮಾಡುವವರು, ಸಗಣಿ ಹೊಡೆದು ಗ್ವಾತ ತುಂಬಿ ತಿಪ್ಪೆಗೆ ಹಾಕುವವರು, ಅವುಗಳಿಗೆ ನೀರು-ನಿಡೆಯ ದೇಕರಿಕೆ ಮಾಡುವವರು, ಅವುಗಳ ರಕ್ತ ಹೀರುವ ಉಣ್ಣೆ ಕಿತ್ತು ಮೈ ತುರಿಸುವವರು, ಅವುಗಳನ್ನು ಮತ್ತೊಬ್ಬರಿಗೆ ಮಾರುವಾಗ ತಬ್ಬಿಕೊಂಡು ಅಳುವವರು, ಹಲ್ಲೆ ಕಟ್ಟಿಸಿ ನೊಗ ಹೂಡಿ ಬಾರು ಕೋಲಿನಿಂದ ಹೊಡೆದು ಭೂಮಿ ಉಳುವವರು, ಕಾಲು ಜ್ವರ, ಬಾಯಿ ಜ್ವರ ಬಂದಾಗ ಗೊಟ್ಟ ತುಂಬ ಔಷಧಿ ಹಾಕುವವರು, ಕೊನೆಗೆ ಅವುಗಳ ಮಾಂಸವನ್ನು ಪಾಲು ಹಾಕಿಕೊಂಡು ತಿನ್ನುವವರು ದಲಿತರೇ. ಆದರೆ ಮೇಲ್ಜಾತಿಗಳು ದನದ ಮಾಂಸವನ್ನು ಉಪಯೋಗಿಸುವುದಿಲ್ಲ. ವಿಶೇಷವೆಂದರೆ ಶೂದ್ರ ಜನಾಂಗದ ಕೆಲವು ಜಾತಿಗಳಲ್ಲಿ ಹಂದಿ ಮಾಂಸ ಬಳಕೆಯಲ್ಲಿದೆ. ಇನ್ನೂ ಕೆಲವು ಬುಡಕಟ್ಟುಗಳಿಗೆ ಮಾಂಸಾಹಾರವಷ್ಟೇ ಮುಖ್ಯ. ಆ ಪ್ರಾಣಿ, ಈ

ಪ್ರಾಣಿ ಎಂಬ ಭೇದವಿಲ್ಲ. ಹೀಗಾಗಿ ಹಿಂದೂ ಧರ್ಮದಲ್ಲಿ ತುಂಬಿಹೋಗಿರುವ ಈ ಮಿಶ್ರಾಹಾರದ ರೀತಿಗಳೇನೇ ಇರಲಿ, ಇಲ್ಲಿ ಕೆಲವರಿಗಂತೂ ಗೋವು ಪವಿತ್ರ, ಗೋಹತ್ಯೆ ಪಾಪ. ಇನ್ನೂ ಮುಂದುವರೆದು ಈ ಗೋವಿನ ಬಗೆಗಿನ ಭಾವನೆ ಯಾವ ಹಂತಕ್ಕೆ ಹೋಗಿದೆ ಎಂದರೆ ಅದು ಸಾಮಾಜಿಕ ಕ್ಷೋಭೆಯನ್ನುಂಟು ಮಾಡಿ ರಾಜಕೀಯ ಅಧಿಕಾರವನ್ನು ಕಬಳಿಸುವ ಬಹುಮುಖ್ಯ ಸಾಧನವಾಗಿ ಹೋಗಿದೆ.

ವಿಚಿತ್ರವೆಂದರೆ ಇಸ್ಲಾಂ ಉಗ್ರವಾಗಿ ವಿರೋಧಿಸುವ ಹಂದಿ ಮಾಂಸವೂ ಕೂಡ ಗೋವಿನ ಜೊತೆಗೆ ಸಾಮಾಜಿಕ - ರಾಜಕೀಯ ಸ್ತರಗಳಲ್ಲಿ ಸೆಣಸಾಡುತ್ತಿರುವುದು. ಇಸ್ಲಾಂ ಅನುಯಾಯಿಗಳಿಗೆ ಮಾಂಸಾಹಾರ ಅವರ ಆಹಾರ ಪದ್ಧತಿಯ ಒಂದು ಭಾಗ. ಅವರವರ ಆದಾಯಕ್ಕನುಗುಣವಾಗಿ ಕುರಿ, ಮೇಕೆ, ಕೋಳಿ, ದನ ಮೊದಲಾದ ಪ್ರಾಣಿಗಳ ಮಾಂಸವನ್ನು ಬಳಸುತ್ತಾರೆ. ಇಂಡಿಯಾದ ಸಾಮಾಜಿಕ ವಾತಾವರಣದಲ್ಲಿ ನಿತ್ಯದ ಮೂರೂ ಹೊತ್ತು ಮಾಂಸ ತಿನ್ನುವ ಯಾವುದೇ ಮುಸ್ಲಿಮನಿದ್ದಂತಿಲ್ಲ. ಮುಖ್ಯವಾಗಿ ಹಬ್ಬ ಹರಿದಿನಗಳಲ್ಲಿ, ಮದುವೆ-ಮುಂಜಿಗಳಲ್ಲಿ ಮಾಡುವ ವಿಶೇಷ ಅಡಿಗೆ ಮಾಂಸಾಹಾರದ್ದೇ ಆಗಿರುತ್ತದೆ. ಇಸ್ಲಾಂ ಹಂದಿ ಮಾಂಸವನ್ನು ನಿಷೇಧಿಸಿದೆ. ಕೆಲವು ಮಡಿವಂತ ಮುಸ್ಲಿಮರಿಗೆ ಹಂದಿಯ ಹೆಸರು ಕೇಳಿದರೂ ಆಗುವುದಿಲ್ಲ. ಹಿಂದೂ ಹಾಗೂ ಮುಸ್ಲಿಂ ಮೂಲಭೂತವಾದಿಗಳು ಗೋವು ಮತ್ತು ಹಂದಿಯಂತಹ ಪ್ರಾಣಿಗಳ ಬಗೆಗೆ ಎರಡೂ ಧರ್ಮದ ಜನಸಾಮಾನ್ಯರಲ್ಲಿರುವ ಭಾವನೆಗಳನ್ನು ಉದ್ರೇಕಗೊಳಿಸುವ ಮೂಲಕ ತಮ್ಮ ರಾಜಕೀಯ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳುತ್ತಿರುವುದು ಮಾತ್ರ ದುರಂತವಾಗಿದೆ. ಹಿಂದೂಗಳಲ್ಲಿ ಹಂದಿಯನ್ನು ವರಾಹಾವತಾರವೆಂದೂ, ಲಕ್ಷ್ಮಿ ಎಂದೂ ಭಾವಿಸುತ್ತಾರೆ. ಆದರೂ ಹಂದಿಯನ್ನು, ಅದು ಇರುವ ಜಾಗವನ್ನು ಕೀಳಾಗಿ ನೋಡುವುದೂ ಇದೆ. ಮೋಟಾರು ಸೈಕಲ್, ಕಾರು, ಮೊದಲಾದ ವಾಹನಗಳನ್ನು ಓಡಿಸುವಾಗ ಅಕಸ್ಮಾತ್ ಅಡ್ಡ ಬಂದ ಹಂದಿಗೆ ವಾಹನ ತಾಗಿದರೆ ಅದು ಅಪಶಕುನವೆಂದೂ, ಅದರಿಂದ ಒಳ್ಳೆಯದಾಗುವುದಿಲ್ಲವೆಂದೂ ಭಾವಿಸಿ ಹಾಗೆ ತಾಗಿದ ಕೆಲವೇ ದಿನಗಳಲ್ಲಿ ಆ ವಾಹನವನ್ನು ಇತರರಿಗೆ ಮಾರಿಬಿಡುತ್ತಾರೆ. ಆ ವಾಹನವನ್ನು ಖರೀದಿಸುವವರಿಗೆ ಹಂದಿ ತಾಗಿದ ಸುದ್ಧಿಯನ್ನೂ ಹೇಳುವುದಿಲ್ಲ. ಇಷ್ಟೆಲ್ಲಾ ಭಾವನೆಗಳಿದ್ದರೂ ಹಂದಿಯನ್ನು ತಿನ್ನುವವರು ಹಿಂದೂ ಧರ್ಮದಲ್ಲಿದ್ದಾರೆ.

ಪಿಂಜಾರರ ಸಾಮಾಜಿಕ ಜೀವನಕ್ಕೂ, ಇದುವರೆಗೂ ಇಸ್ಲಾಂ-ಧಾರ್ಮಿಕ ವ್ಯವಸ್ಥೆಯೊಳಗೆ ಇರುವ ಸಮುದಾಯಗಳ ಸ್ಥೂಲ ಚಿತ್ರಣವನ್ನು ಹಿಂದೂ ಧಾರ್ಮಿಕ ಚಿತ್ರದೊಂದಿಗೆ ವಿಶ್ಲೇಷಿಸಿ ನೋಡಿದ ಕ್ರಮಕ್ಕೂ ಸಂಬಂಧವಿದೆ. ಯಾಕೆಂದರೆ ಒಂದೆರಡು ನೂರು ವರ್ಷಗಳಿಂದಷ್ಟೇ ತಾಂತ್ರಿಕವಾಗಿ ಇಸ್ಲಾಂಗೆ ಪರಿವರ್ತನೆಗೊಂಡಿರುವ ಪಿಂಜಾರರು ಭಾವನಾತ್ಮಕವಾಗಿ ಇನ್ನೂ ಹಿಂದೂ ಧಾರ್ಮಿಕ ವಿಚಾರಗಳ ಹ್ಯಾಂಗೋವರ್‌ನಲ್ಲಿದ್ದಾರೆ. ಹಿಂದೂ ಹಾಗೂ ಇಸ್ಲಾಂ ಧರ್ಮಗಳ ಉಭಯ ಸಾಂಸ್ಕೃತಿಕ ಪ್ರತಿನಿಧಿಗಳಂತಿರುವ ಪಿಂಜಾರರು ಸಾಮಾಜಿಕವಾಗಿ ಎರಡೂ ಧರ್ಮಗಳಿಗೆ ಜೋತು ಬಿದ್ದಿದ್ದಾರೆ. ಈ ಕಾರಣದಿಂದಲೇ ಅನನ್ಯ ಸಂಸ್ಕೃತಿಯೊಂದರ ಅನಾಮಿಕ ಧಣಿಗಳಾಗಿದ್ದಾರೆ.

ಹಿಂದಿನ ಅಧ್ಯಾಯದಲ್ಲಿ ಸ್ಪಷ್ಟಪಡಿಸಿರುವಂತೆ ಪಿಂಜಾರರು ಹಿಂದೂ ಮೂಲಾಶ್ರಮದಿಂದ ಇಸ್ಲಾಂಗೆ ಬಂದವರು. ಹೀಗೆ ಬಂದಾಗ ಅವರ ಸ್ವಂತ ಅಪೇಕ್ಷೆ ಏಷ್ಟಿತ್ತು, ಆಳುವ ವರ್ಗದ ಅವಸರ ಏನಿತ್ತು ಎಂಬ

ಚರ್ಚೆ ಈಗ ಅಪ್ರಸ್ತುತ. ಆದರೆ ಹೀಗೆ ಒಂದು ಧರ್ಮದ ಆವರಣವನ್ನು ದಾಟಿಕೊಂಡು ಮತ್ತೊಂದು ಧರ್ಮದ ನೆಲೆಗೆ ಬಂದಾಗ ಅನುಭವಿಸುವ ಇಕ್ಕಟ್ಟುಗಳು ಎಂಥವು ಎಂಬುದನ್ನು ತಿಳಿಯಲು ಪಿಂಜಾರರ ಜನಜೀವನದ ಅಧ್ಯಯನ ಮಾಡಬೇಕು. ಇವುಗಳಲ್ಲಿ ಮೊದಲನೆಯ ಬಿಕ್ಕಟ್ಟು ಎಂದರೆ ಪಿಂಜಾರರಿಗೆ ಇಸ್ಲಾಂನ ಪ್ರಾಥಮಿಕ ತಿಳುವಳಿಕೆಯೂ ಇರಲಿಲ್ಲ ಎನ್ನುವುದಾಗಿದೆ. ಒಂದು ಭೌಗೋಳಿಕ ಪರಿಸರವನ್ನು ತೀವ್ರವಾಗಿ ಪ್ರಭಾವಿಸುವ ಅಲ್ಲಿನ ಭಾಷೆ, ಅದು ಅಭಿವ್ಯಕ್ತಿಸಿದ ಪುರಾಣ, ಚರಿತ್ರೆ, ಕಾವ್ಯ, ಕತೆ, ಕಲೆ, ಜನಪದ, ಕ್ರೀಡೆ, ವಿವಿಧ ನಂಬಿಕೆ, ಆಚರಣೆಗಳು, ಸಾವಿರಾರು ವರ್ಷಗಳ ಪರಂಪರೆಯುದ್ಧಕ್ಕೂ ಅಕ್ಷರ ಬಲ್ಲವನಿಗೂ, ಇಲ್ಲದವನಿಗೂ ಆತನ ರಕ್ತಕಣಗಳಲ್ಲಿ, ಜೀವಕೋಶಗಳಲ್ಲಿ ಗುಪ್ತಗಾಮಿನಿಯಾಗಿ ಪ್ರಾಣಧಾತುಗಳಾಗಿರುತ್ತವೆ. ಅದರಿಂದ ಆತನ ಸಂವೇದನೆಗಳು ರೂಪುಕೊಂಡಿರುತ್ತವೆ. ಇವೆಲ್ಲಾ ಅಂಗಿ ಬಿಚ್ಚಿ ಅಂಗಿ ತೊಟ್ಟಂತೆ ಹೆಸರು ಬದಲಾದ ತಕ್ಷಣ ಬೇರೆಯಾಗಿಬಿಡುವುದಿಲ್ಲ. ಈ ಕೋಣೆಯಲ್ಲಿನ ದೀಪ ಮಂದವಾಯಿತೆಂದು ಮತ್ತೊಂದು ಕೋಣೆಯ ದೀಪವನ್ನು ತಂದಿಟ್ಟುಕೊಂಡಷ್ಟು ಸರಳವೂ ಅಲ್ಲ ಇದು. ಹಾಗಾಗಿ ಪಿಂಜಾರರಿಗೆ, ಅವರ ದೇಹಗಳ ಹೆಸರುಗಳ ಬದಲಾದವೇ ಹೊರತು ಆತ್ಮ ಬದಲಾಗಲಿಲ್ಲ. ಅವರ ಆತ್ಮದ ಬೇರುಗಳು ತಮ್ಮ ಮೂಲಾಶ್ರಮದಲ್ಲಿ ಗಾಢವಾಗಿ, ಆಳವಾಗಿ ಇಳಿದುಹೋಗಿದ್ದವು. ಆದುದರಿಂದ ಪಿಂಜಾರರು ಇಸ್ಲಾಂನ ಬಾಹ್ಯಾಚರಣೆಗಳಿಗೆ ಒಗ್ಗಿಕೊಳ್ಳಲು ಕೂಡ ನೂರಾರು ವರ್ಷಗಳು ಬೇಕಾದವು. ಆರಂಭದಲ್ಲಿ ಹೆಸರುಗಳು ಬದಲಾದಂತೆಲ್ಲಾ ಮುಂಜಿ-ಮದುವೆಯಂತಹ ಕಾರ್ಯಕ್ರಮಗಳಲ್ಲಿ ಹಿಂದೆ ಹೇಳಿದ 'ಮುಲ್ಲಾ' ಅವುಗಳನ್ನು ನೆರವೇರಿಸುವ ಜವಾಬ್ದಾರಿಯನ್ನು ನಿರ್ವಹಿಸುತ್ತಿದ್ದ. ಹೀಗೆ ತಾವು ಹೊಸದಾಗಿ ಕಾಲಿಟ್ಟ ಧರ್ಮವೊಂದರ ಜ್ಞಾನವನ್ನು ಅರಿಯುವುದಕ್ಕಿಂತ ಮೊದಲೇ ತಮ್ಮ ಮೂಲಾಶ್ರಮದ ರೀತಿಯ ಪುರೋಹಿತಶಾಹಿ ವ್ಯವಸ್ಥೆ ಅವರನ್ನು ನಿಂತಲ್ಲಿ ನಿಲ್ಲಿಸಿಬಿಟ್ಟಿತು. ಈ ಮುಲ್ಲಾಗಳು ಪಿಂಜಾರರ ಜನಜೀವನದ ಧಾರ್ಮಿಕ ಆಚರಣೆಗಳ ಉಸ್ತುವಾರಿ ವಹಿಸಿಕೊಂಡು ಬಂದರೇ ಹೊರತು ಇಸ್ಲಾಂನ ತತ್ವಾದರ್ಶಗಳನ್ನು ತಿಳಿಸಿ ಹೇಳುವ ರಿಸ್ಕ್‌ನ್ನು ತೆಗೆದುಕೊಳ್ಳಲಿಲ್ಲ. ಅದು ಮುಲ್ಲಾಗಳ ಜೀವನೋಪಾಯದ ಹಾದಿಯಾಯಿತು. ಆರ್ಥಿಕವಾಗಿ ಹಿಂದುಳಿದಿದ್ದ ಪಿಂಜಾರರಿಗೆ ತಂತಮ್ಮ ಜೀವನವನ್ನು ನಿಭಾಯಿಸುವುದು ಮುಖ್ಯವಾಯಿತು. ಆದುದರಿಂದ ಧಾರ್ಮಿಕ ತಿಳುವಳಿಕೆಯ ವಿಚಾರದಲ್ಲಿ ಎಂದಿನ ಉಪೇಕ್ಷೆ ಮುಂದುವರಿಯಿತು.

ಹೀಗೆ ಇಸ್ಲಾಂ ಅರಿವಿನಿಂದ ವಂಚಿತರಾಗಿದ್ದ ಪಿಂಜಾರರನ್ನು ಅಂದಿನ ಸಾಮಾಜಿಕ ಬದುಕು ಹೇಗೆ ಸ್ವೀಕರಿಸಿತು? ಎಂದು ಕೇಳಿಕೊಂಡರೆ ಪಿಂಜಾರರ ಸಾಮಾಜಿಕ ಶ್ರೇಣಿಯ ಚಿತ್ರ ದೊರಕುತ್ತದೆ. ಅಲ್ಲದೆ ಹಿಂದೆ ಹೇಳಿದಂತೆ ಇಸ್ಲಾಂನ ಹೆಚ್ಚುಕಡಿಮೆ ಎಲ್ಲ ಸಮುದಾಯಗಳಲ್ಲಿ ಧಾರ್ಮಿಕ ಅರಿವು ಮಾತ್ರ ವ್ಯಕ್ತಿಯೊಬ್ಬನ ಸಂಸ್ಕಾರವನ್ನೂ, ಜನಾಂಗವೊಂದರ ಸಾಮಾಜಿಕ ಪ್ರತಿಷ್ಠೆಯನ್ನೂ ಅಳೆಯುವ ಮಾನದಂಡವಾಗಿದೆ. ಆದುದರಿಂದ ಒಂದು ಕಡೆ ಇಸ್ಲಾಂ ಅರಿವಿನ ಕೊರತೆಯಿಂದ ಸಾಂಪ್ರದಾಯಿಕ ಮುಸ್ಲಿಮರಿಂದ ಉಪೇಕ್ಷೆಗೊಳಗಾದರೆ ಹಿಂದೂ ಧಾರ್ಮಿಕಾವರಣವನ್ನು ದಾಟಿ ಬಂದ ಕಾರಣಕ್ಕಾಗಿ ಹಿಂದೂ ಸಮುದಾಯದವರ ತಿರಸ್ಕಾರಕ್ಕೆ ಪಿಂಜಾರರು ಒಳಗಾದರು. ಇದು ಪಿಂಜಾರರು ನಿಜಕ್ಕೂ ಸಾಮಾಜಿಕವಾಗಿ ದ್ವೀಪದಂತಾದ ಸ್ಥಿತಿ. ಇನ್ನು ಪಿಂಜಾರರ ಎರಡನೆಯ ಬಿಕ್ಕಟ್ಟು ಎಂದರೆ ಅದು ಅವರ ಭಾಷೆಯದು.

ಭಾಷೆ ಎಂದರೆ ಅದು ಕೇವಲ ವ್ಯಾವಹಾರಿಕ ಸಂಗತಿಗಳಿಗಾಗಿ ಇರುವ, ಮಾಹಿತಿ ಸಂಗ್ರಹದ ಮಾಧ್ಯಮ ಎನ್ನುವಂತಹ ತಿಳುವಳಿಕೆ ತಪ್ಪು. ಬದಲಾಗಿ ಭಾಷೆ ಒಂದು ಪ್ರದೇಶದ, ಜನಾಂಗದ ಸಾಂಸ್ಕೃತಿಕ ಸಂಪತ್ತನ್ನು ಒಳಗೊಂಡ ಸಂವೇದನೆಗಳ ನಿರ್ಮಾಪಕ ಮತ್ತು ವಾಹಕ. ಇದು ಒಂದು ಜನಾಂಗದ ಪರಂಪರಾಗತವಾದ ಸಂವೇದನೆಗಳನ್ನು ಪೀಳಿಗೆಯಿಂದ ಪೀಳಿಗೆಗೆ ಹೊತ್ತೊಯ್ಯುವ ಸಾಧನವಾಗಿಯೂ ಕೆಲಸ ಮಾಡುತ್ತದೆ. ಇಂಥ ಕರ್ತೃತ್ವ ಶಕ್ತಿಯಿರುವುದು ಮಾತೃಭಾಷೆಗೆ. ಅದರ ನಂತರ ವ್ಯಕ್ತಿ ಎಷ್ಟೇ ಇತರ ಭಾಷೆ ಕಲಿತರೂ, ಅದರಲ್ಲಿ ಎಷ್ಟೇ ಪ್ರಭುತ್ವ ಗಳಿಸಿದರೂ ಅದು ಕೇವಲ ಸಂದೇಶವಾಹಕವಾಗಿ ಕಾಣುತ್ತದೆಯೇ ಹೊರತು ಆತನ ಅಂತರ್ಗತ ಸ್ವರೂಪವನ್ನು ದಾಖಲಿಸುವಷ್ಟು ಶಕ್ತವಾಗಿರುವುದಿಲ್ಲ. ಹಾಗಾಗಿ ಪಿಂಜಾರರ ಭಾಷೆ ಅವರ ಪರಿವರ್ತನೆಯ ಪೂರ್ವದ ಕನ್ನಡವೇ ಆಗಿ ಉಳಿದಿರುವುದು ಅತ್ಯಂತ ಸ್ವಾಭಾವಿಕ. ಆದರೆ ಇಸ್ಲಾಂನ ತತ್ವಾದರ್ಶಗಳನ್ನು ಕನ್ನಡದಲ್ಲಿ ಹೇಳಿಕೊಡುವ, ಬರೆಯುವ ಪ್ರಯತ್ನವನ್ನು ಸಂಬಂಧಪಟ್ಟವರು ಮಾಡದೇ ಹೋದ ಕಾರಣದಿಂದ ಹಾಗೂ ಪಿಂಜಾರರು ಧಾರ್ಮಿಕ ತಿಳುವಳಿಕೆಗಾಗಿ ಹಪಹಪಿಸುವಂತಹ ಸಾಮಾಜಿಕವಾದ, ಆರ್ಥಿಕವಾದ ಪರಂಪರೆಯನ್ನು ಹೊಂದಿರದೇ ಇದ್ದುದರಿಂದ ಅಷ್ಟರಮಟ್ಟಿಗೆ ಪಿಂಜಾರರಿಗೆ ಇಸ್ಲಾಂನ ಅರಿವು ದೂರವೇ ಉಳಿದುಬಿಟ್ಟಿತು. ಇವತ್ತಿಗೂ ಇಸ್ಲಾಂ ಧರ್ಮದ ಬಗೆಗಿನ ಸಾಹಿತ್ಯ ಕನ್ನಡದಲ್ಲಿ ವಿಪುಲವಾಗಿ ದೊರೆಯುತ್ತಿದ್ದರೂ ಪಿಂಜಾರರು ಅದರ ಬಗ್ಗೆ ಆಸಕ್ತಿ ತೋರದಿರುವುದಕ್ಕೆ ಅವರ ದೈನಂದಿನ ಬದುಕಿನ ಜಂಜಾಟಗಳೇ ಸಾಕ್ಷಿಯಾಗಿವೆ. ಅದರ ಹೊರತಾಗಿ ಇಸ್ಲಾಂ ಕುರಿತಂತೆ ನಡೆಯುವ ಇಸ್ತೆಮಾಗಳಲ್ಲಿ ಮಸೀದಿ, ಮದರಸಾಗಳಲ್ಲಿ ನಡೆಯುವ ಪ್ರವಚನಗಳಲ್ಲಿ ಬಳಕೆಯಾಗುವ ಭಾಷೆ ಕೂಡ ಕನ್ನಡವೇ ಆಗಿದಿದ್ದರೆ ಪಿಂಜಾರರಿಗೆ ಕೆಲಮಟ್ಟಿನ ಪ್ರಯೋಜನವಾಗುತ್ತಿತ್ತೋ ಏನೋ ! ಆದರೆ ಅಲ್ಲಿ ಕೂಡ ಮುಲ್ಲಾಗಳು ಕೆಲವರಿಗೆ ಮಾತ್ರ ಅರ್ಥವಾಗುವ ಉರ್ದು ಮತ್ತು ಅರಬ್ಬಿಯಲ್ಲಿ ಸುದೀರ್ಘ ಪ್ರವಚನ ನೀಡುತ್ತಾರೆ. ಇವರಿಗೆ ಕನ್ನಡ ಬರುವುದಿಲ್ಲ ಎನ್ನುವ ಅಂಶದ ಜೊತೆಗೆ ಕನ್ನಡ ಕಲಿಯುವ ಆಸಕ್ತಿಯಾಗಲೀ, ಕನ್ನಡ ಕಲಿತು ಕನ್ನಡದಲ್ಲಿ ಧಾರ್ಮಿಕ ಪ್ರವಚನ ನೀಡಿದರೆ ಹೆಚ್ಚು ಜನರಿಗೆ ತಲುಪೀತು ಎಂಬ ತಿಳುವಳಿಕೆಯಾಗಲೀ ಸಾಧ್ಯವಾಗಿಲ್ಲ. ಬದಲಾಗಿ ತಮಗೆ ಬರುವ ಭಾಷೆಯೇ ಎಲ್ಲರಿಗೂ ಅರ್ಥವಾಗುತ್ತದೆಂಬ ಭ್ರಮೆಯಿಂದ ಕೂಡಿದ್ದಾರೆ. ಆದುದರಿಂದಾಗಿಯೇ ಪಿಂಜಾರರು ತಮ್ಮ ಧಾರ್ಮಿಕ ಕ್ರಿಯೆಗಳಿಗೆ ಮುಲ್ಲಾಗಳನ್ನು ಅವಲಂಬಿಸಿದ್ದಾರೆ ಹಾಗೂ ಸಾಮೂಹಿಕವಾಗಿ ನಮಾಜು ಮಾಡುವ ಸಂದರ್ಭದಲ್ಲಿ ಅನುಕರಣೆ ಮಾಡುವುದು ಅವರಿಗೆ ಅನಿವಾರ್ಯವಾಗಿದೆ. ಈ ಕುರಿತು ಇನ್ನೂ ಕೆಲವು ಸಂಗತಿಗಳನ್ನು ಚರ್ಚಿಸುವುದು ಸಾಧ್ಯವಿದೆ. ಆದರೆ ಮುಂದೆ ಪಿಂಜಾರರ ಸಾಹಿತ್ಯವನ್ನು ಕುರಿತು ಚರ್ಚಿಸುವ ಸಂದರ್ಭದಲ್ಲಿ ಅವುಗಳ ಪ್ರಸ್ತಾಪ ಬರುವುದರಿಂದ ಇಲ್ಲಿ ಪಿಂಜಾರರ ಸಾಮಾಜಿಕ ಶ್ರೇಣಿಯ ಅಧ್ಯಯನಕ್ಕಷ್ಟೇ ಸೀಮಿತವಾಗಿರುವ ಸಂಗತಿಗಳನ್ನು ವಿಚಾರ ಮಾಡಲಾಗಿದೆ.

ಈವರೆಗೆ ಚರ್ಚಿತವಾಗಿರುವ ವಿಚಾರಗಳ ಹಿನ್ನೆಲೆಯಲ್ಲಿ ಪಿಂಜಾರರ ಸಾಮಾಜಿಕ ಸ್ಥಾನಮಾನಗಳನ್ನು ಗುರುತಿಸಬೇಕಾಗಿದೆ. ಪಿಂಜಾರರ ಮೂಲ ಕಸುಬಿಗೂ, ಅವರ ಸಾಮಾಜಿಕ ಜೀವನ ವಿಧಾನಕ್ಕೂ ಸಂಬಂಧವಿದೆ. ಹಾಸಿಗೆ, ದಿಂಬು ತಯಾರಿಸುವ ಪಿಂಜಾರರು ಅದಕ್ಕೆ ಅಗತ್ಯವಾಗಿರುವ ಕಚ್ಚಾವಸ್ತು ಹತ್ತಿ ಬೆಳೆಯುವ ಬಯಲು ಸೀಮೆಗಳಲ್ಲಿ ಹೆಚ್ಚು ವಾಸಿಸುತ್ತಾರೆ. ಹಾಗೆಂತಲೇ ಉತ್ತರ ಕರ್ನಾಟಕದ ಬಹುಪಾಲು

ಜಿಲ್ಲೆಗಳಲ್ಲಿ ಅವರು ಕಂಡು ಬರುತ್ತಾರೆ. ಪಿಂಜಾರರಲ್ಲಿ ಯಾವುದೇ ಉಪಜಾತಿ / ಪಂಗಡಗಳು ಕಂಡುಬರುವುದಿಲ್ಲ. ಇವರ ವೈವಾಹಿಕ ಸಂಬಂಧಗಳು ಪಿಂಜಾರರಲ್ಲಿಯೇ ನಡೆಯುತ್ತವೆ. ಮದುವೆಯೂ ಸೇರಿದಂತೆ ಇತರ ಧಾರ್ಮಿಕ ವಿಧಿ-ವಿಧಾನಗಳೆಲ್ಲವೂ ಇಸ್ಲಾಂ ಪ್ರಕಾರ ನಡೆಯುತ್ತವೆ. ಮೊದಲೇ ಹೇಳಿದಂತೆ ಇಲ್ಲೆಲ್ಲಾ ಮುಲ್ಲಾನ ಉಪಸ್ಥಿತಿ ಅನಿವಾರ್ಯವಾಗಿರುತ್ತದೆ. ಪಿಂಜಾರರು ತಮ್ಮ ಮೂಲ ಕಸುಬಾದ ಹಾಸಿಗೆ ತಯಾರಿಸುವುದರ ಜೊತೆಗೆ ಇತರೆ ಉಪಕಸುಬುಗಳನ್ನು ಮಾಡುತ್ತಾರೆ. ಸಣ್ಣಪುಟ್ಟ ಬೀಡಿ ಅಂಗಡಿಯ ವ್ಯಾಪಾರ, ಬಳೆ ವ್ಯಾಪಾರ, ಹಲ್ಲೆ ಕಟ್ಟುವುದು, ಕೂಲಿ-ನಾಲಿ ಮಾಡುವುದು, ತೆಂಗಿನ ಹಗ್ಗದ ವ್ಯಾಪಾರ, ಕಮ್ಮಾರಿಕೆ ಮೊದಲಾದ ಕಸುಬುಗಳಲ್ಲಿ ತೊಡಗಿದ್ದಾರೆ. ಇನ್ನು ಕೆಲವು ಕಡೆ ಒಂದೆರಡು ಎಕರೆ ಜಮೀನು ಹೊಂದಿದವರೂ ಇದ್ದಾರೆ. ಬಯಲು ಸೀಮೆಗಳಲ್ಲಿ ಹತ್ತಾರು ಎಕರೆ ಒಣಭೂಮಿಯ ಮಾಲೀಕರೂ ವಿರಳವೆಂಬಂತೆ ಕಂಡು ಬರುತ್ತಾರೆ. ಪಿಂಜಾರರು ರೈತಾಪಿ ದುಡಿಮೆಯಲ್ಲಿ ನಿಪುಣರು. ಬಿತ್ತುವ, ಒಕ್ಕಲು ಮಾಡುವ ಬಣವೆ ಒಟ್ಟುವ, ಬರಲುಕಟ್ಟುವ, ಹಗ್ಗ ಹೊಸೆಯುವ ಯಾವುದೇ ಕೆಲಸಗಳನ್ನು ಮಾಡಬಲ್ಲ ಕಲಾವಂತಿಕೆ ಅವರಲ್ಲಿದೆ. ಹೀಗಾಗಿ ಪಿಂಜಾರರು ತಾವು ಬದುಕುವ ಸಮಾಜದ ಮುಖ್ಯವಾಹಿನಿಯಲ್ಲಿರುವುದಂತೂ ನಿಜ. ಇವರ ನಿತ್ಯದ ಎಲ್ಲ ವ್ಯವಹಾರಗಳೂ ಹಿಂದೂ ಶೂದ್ರ ಸಮುದಾಯಗಳೊಂದಿಗೆ ಬೆರೆತುಹೋಗಿವೆ. ಇದಕ್ಕೆ ಕಾರಣ ಪಿಂಜಾರರು ಹಿಂದೂ ಹಬ್ಬ-ಹರಿದಿನಗಳನ್ನು ಆಚರಿಸುವುದು, ಆ ದೇವರು ದಿಂಡರುಗಳಿಗೆ ನಡೆದುಕೊಳ್ಳುವುದು. ಅಷ್ಟೇ ಅಲ್ಲದೆ ಉಡುಗೆ ತೊಡುಗೆ, ಆಹಾರಪದ್ಧತಿ, ನಡೆ-ನುಡಿಗಳ ವಿಚಾರದಲ್ಲಿ ಪಿಂಜಾರರನ್ನು ಹಿಂದೂ ಶೂದ್ರ ಸಮುದಾಯದಿಂದ ಬೇರ್ಪಡಿಸಿ ನೋಡುವುದು ಸಾಧ್ಯವಿಲ್ಲ. ಹೀಗಾಗಿ ಪಿಂಜಾರರ ಹೆಸರು ಮತ್ತು ಧಾರ್ಮಿಕ ಆಚರಣೆಗಳ ಸಂದರ್ಭದಲ್ಲಿ ಇಸ್ಲಾಂನ ಅನುಕರಣೆ ಹೊರತುಪಡಿಸಿದರೆ ಇವರು ಆಯಾ ಊರಿನ ಪ್ರಬಲ ಜಾತಿಯವರ ಮರ್ಜಿಗೊಳಗಾಗಿ ಬದುಕುತ್ತಾರೆ. ಉಳಿದಂತೆ ಕಾಟುಗ ಜನಾಂಗದವರೊಡನೆ (ಮಾಂಸಾಹಾರದ ಬಳಕೆಯಿರುವ ಜನಾಂಗಗಳಿಗೆ ಕರೆಯುವ ಹೆಸರು) ಪಿಂಜಾರರು ಅತ್ಯಂತ ಪ್ರೀತಿ ಸಲುಗೆಯಿಂದಿರುತ್ತಾರೆ. ವಿಶೇಷವಾಗಿ ಲಿಂಗಾಯ್ತರು ಹೆಚ್ಚಾಗಿರುವ ಊರುಗಳಲ್ಲಿ ಪಿಂಜಾರರು ಅವರನ್ನು ಶ್ರೀಮಂತರು, ದೌಳೋರು, ದೊಡ್ಡಜಾತಿಯವರು ಎಂದು ಗೌರವಿಸುವುದು ಕಂಡುಬರುತ್ತದೆ. ಪಿಂಜಾರರು ವ್ಯಾವಹಾರಿಕ ಹಾಗೂ ಭಾವನಾತ್ಮಕವಾಗಿ ಹಿಂದೂ ಸಮುದಾಯದವರೊಂದಿಗೆ ಹೆಚ್ಚು ಒಡನಾಡುವುದರಿಂದ ಸಹಜವಾಗಿ ಸಾಂಪ್ರದಾಯಿಕ ಮುಸ್ಲಿಮರು ಅವರನ್ನು ಹೀಯಾಳಿಸುವ, ಕಡೆಗಣಿಸುವ ರೀತಿಯಲ್ಲಿ ನಡೆದುಕೊಳ್ಳುತ್ತಾರೆ. ಪಿಂಜಾರರು ಮುಸ್ಲಿಮರೊಂದಿಗೆ ಎಂದಿನ ತಿರಸ್ಕಾರದ ಅಂತರವನ್ನಿಟ್ಟುಕೊಂಡಿರುತ್ತಾರೆ.

ಪಿಂಜಾರರ ಸಮಾಜಕ್ಕೆ ವಿಶಿಷ್ಟವಾದ ನಡವಳಿಕೆಗಳು ಎಂದರೆ ಇಸ್ಲಾಂ ಮತ್ತು ಹಿಂದೂ ಧಾರ್ಮಿಕ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವುದು. ಹಾಗೆ ನೋಡಿದರೆ ಇಸ್ಲಾಂಗಿಂತ ಹಿಂದೂ ಧರ್ಮದ ಚಟುವಟಿಕೆಗಳೇ ಅವರನ್ನು ಹೆಚ್ಚು ಪ್ರಭಾವಿಸಿವೆ. ಈ ಸಂಬಂಧವಾದ ವಿವರಗಳನ್ನು ಪಿಂಜಾರರ ಆಚರಣೆಗಳ ಅಧ್ಯಯನದಲ್ಲಿ ನೋಡಬಹುದಾಗಿದೆ. ಪಿಂಜಾರರಲ್ಲಿ ಸಂಘಟನೆಯಿಲ್ಲ. ಅದಕ್ಕೆ ಕಾರಣ ಅವರ ಬಡತನ ಮತ್ತು ಅನಕ್ಷರತೆ. ಹಾಗಾಗಿ ಅವರ ಸಾಮಾಜಿಕ ಬದುಕಿನಲ್ಲಿ ಒದಗುವ ಯಾವುದೇ ಸಮಸ್ಯೆಗಳಿಗೆ ಇಸ್ಲಾಂ ಧಾರ್ಮಿಕ ಆವರಣದಲ್ಲಿ ಪರಿಹಾರ ಹುಡುಕಿಕೊಳ್ಳುವುದಕ್ಕಿಂತ, ಕೋರ್ಟು, ಕಛೇರಿ

ಅಲೆಯುವುದಕ್ಕಿಂತ ಅವುಗಳನ್ನು ಸಹಿಸಿಕೊಳ್ಳುವುದರಲ್ಲೇ ಅವರ ಅನನ್ಯತೆಯಿದೆ. ಆದುದರಿಂದ ಪಿಂಜಾರರ ಸಾಮಾಜಿಕ ಜೀವನ ಅತ್ಯಂತ ಸಂಕೀರ್ಣವಾದದ್ದೇನೂ ಅಲ್ಲ, ಅಲ್ಲಿನ ಬಡತನ, ಅನಕ್ಷರತೆಯಂತಹ ಸಂಗತಿಗಳನ್ನು ಹೊರತುಪಡಿಸಿದರೆ ಅವರ ಬದುಕು ತೀರ ಸರಳವಾದದ್ದು. ಅವರ ಬದುಕಿನ ಒಳಾಡಳಿತದ ರೀತಿಯೂ ಜಾತಿಮೂಲ ವ್ಯವಸ್ಥೆಯ ಅವಿಭಾಜ್ಯ ಅಂಗವೇ ಆಗಿರುವುದರಿಂದ ಪಿಂಜಾರರು ತಮ್ಮ ಸಾಮಾಜಿಕ ಹಾಗೂ ಸಾಂಸಾರಿಕ ಸಂಬಂಧದ ವಿಷಯದಲ್ಲಿ ತಂತಮ್ಮ ನಡುವೆಯೇ ವ್ಯವಹರಿಸುತ್ತಾರೆ. ಸಮಸ್ಯಾತ್ಮಕವಾದ ಸಂದರ್ಭದಲ್ಲಿ ಊರಿನ ಹಿರಿಯರನ್ನು, ಗೌಡ ಅಥವಾ ಪಟೇಲರನ್ನು ಕಂಡೇ ಚರ್ಚಿಸುತ್ತಾರೆ. ಸಾಮಾನ್ಯವಾಗಿ ಊರಿನ ಹಿರಿಯರು ಎಂದರೆ ಸಾಮಾಜಿಕ, ಆರ್ಥಿಕವಾಗಿ ಸುಸ್ಥಿತಿಯಲ್ಲಿರುವ ಲಿಂಗಾಯ್ತರೇ ಆಗಿರುತ್ತಾರೆ. ಲಿಂಗಾಯ್ತರನ್ನೂ ಒಳಗೊಂಡು ಹಿಂದೂ ಸಮುದಾಯದ ಇತರ ಜನಾಂಗದವರೊಂದಿಗೆ ಪಿಂಜಾರರ ಆತ್ಮೀಯ ಒಡನಾಟವಿರುತ್ತದೆ. ಇವರು ಪರಸ್ಪರರಲ್ಲಿ ಅಳಿಯ, ಮಾವ, ಅತ್ತೆ, ಸೊಸೆಯಂಥ ಆಪ್ತ ಸಂಬಂಧದ ಸಂಬೋಧನಾ ರೀತಿಯನ್ನು ಉಳಿಸಿಕೊಂಡಿದ್ದಾರೆ. ವಿವಾಹದ ವಿಷಯದಲ್ಲಿ ಪಿಂಜಾರರು ಪಿಂಜಾರರಲ್ಲೇ ಸಂಬಂಧವನ್ನು ತರುವುದು, ಕೊಡುವುದು ನಡೆಯುತ್ತದೆ. ಬಹುಪತ್ನಿತ್ವವನ್ನು ನಿಷ್ಠುರವಾಗಿ ವಿರೋಧಿಸುವ ಪಿಂಜಾರರು ಸ್ವಂತ ಅಕ್ಕನ ಮಗಳನ್ನೂ ಮದುವೆಯಾಗುವುದಿಲ್ಲ. ಮತ್ತು ಚಿಕ್ಕಪ್ಪ-ದೊಡ್ಡಪ್ಪರ ಮಕ್ಕಳನ್ನೂ ಮದುವೆಯಾಗುವುದಿಲ್ಲ. ಈ ಸಂಗತಿಯೂ ಪಿಂಜಾರರು ಹಿಂದೂ ಮತ್ತು ಮುಸ್ಲಿಮರಿಂದ ಎಷ್ಟರಮಟ್ಟಿಗೆ ಭಿನ್ನ ಸಂಸ್ಕೃತಿಯೊಂದನ್ನು ಆಚರಣೆಯಲ್ಲಿಟ್ಟುಕೊಂಡಿದ್ದಾರೆ ಎನ್ನುವುದನ್ನು ಸ್ಪಷ್ಟಪಡಿಸುತ್ತದೆ.

ಸಾಮಾನ್ಯವಾಗಿ ಆಸ್ತಿ ಮತ್ತು ಹೆಣ್ಣಿನ ಸಂಬಂಧದ ವಿಷಯದಲ್ಲೇ ಬಹಳಷ್ಟು ಸಮಸ್ಯೆಗಳು ಇರುತ್ತವೆ. ಪಿಂಜಾರರೂ ಇದರಿಂದ ಹೊರತಲ್ಲ. ಈ ಎರಡೂ ಬಗೆಯ ಸಂದರ್ಭಗಳು ಉಂಟಾಗುವುದು ಸಾಮಾನ್ಯವಾಗಿ ಪಿಂಜಾರರು ಮತ್ತು ಹಿಂದೂ ಸಮುದಾಯದವರ ನಡುವೆಯೇ ಅನ್ನುವುದು ಸಹ ಮುಸ್ಲಿಮರಿಂದ ಪಿಂಜಾರರು ಎಷ್ಟು ದೂರವಿದ್ದಾರೆ ಅನ್ನುವುದನ್ನು ಖಚಿತಪಡಿಸುತ್ತದೆ. ಹಣ, ಭೂಮಿ, ಮನೆಗೆ ಸಂಬಂಧಿಸಿದ ತಕರಾರುಗಳಾಗಲೀ ಒಂದು ಗಂಡು ಮತ್ತೊಂದು ಹೆಣ್ಣನ್ನು ಇಟ್ಟುಕೊಂಡ ಅಥವಾ ಓಡಿಸಿಕೊಂಡ ಹೋದ ಸಂಗತಿಯಾಗಲೀ ಊರಿನ ಎಲ್ಲಾ ಜನಾಂಗದ ಹಿರಿಯರ ನಡುವೆ ಚರ್ಚಿತವಾಗುತ್ತವೆ. ಇಲ್ಲಿ ಖಾಜಿ ಅಥವಾ ಮುಲ್ಲಾನ ಉಪಸ್ಥಿತಿಯೇ ಇರುವುದಿಲ್ಲ. ಆತನ ಕೆಲಸವೇನಿದ್ದರೂ ಧಾರ್ಮಿಕ ಆಚರಣೆಯ ಸಂದರ್ಭದಲ್ಲಿ ಮಾತ್ರ. ಪಿಂಜಾರರ ನಡುವೆ ಉಂಟಾಗುವ ಅನೇಕ ಜಗಳ, ತಂಟೆಗಳನ್ನು ಹಿರಿಯ ಜಮೀನ್ದಾರರಾದ ಲಿಂಗಾಯ್ತ ಯಜಮಾನರೊಬ್ಬರು ಬಗೆಹರಿಸುತ್ತಾರೆ. ಪೊಲೀಸು, ಕೋರ್ಟು, ಕಛೇರಿ ಮೆಟ್ಟಿಲು ಹತ್ತುವ ಸಾಮರ್ಥ್ಯವಿಲ್ಲದ ಪಿಂಜಾರರು ಊರಿನ ದೊಡ್ಡವರ ಮಾರ್ಗದರ್ಶನದಂತೆ ನಡೆದುಕೊಳ್ಳುತ್ತಾರೆ. ಕೋಳಿ ಕದ್ದ, ಇನ್ಯಾವನೋ ಬಣವೆಗೆ ಬೆಂಕಿಯಿಟ್ಟ, ಮತ್ತೊಬ್ಬ ಯಾರೋ ಹೊಲದಲ್ಲಿ ದನ ಕೂಡಿದ - ಇಂತಹ ಸಾಮಾನ್ಯ ಸಂಗತಿಗಳು ಪಿಂಜಾರರ ಬದುಕಿನಲ್ಲಿ ಅತಿದೊಡ್ಡ ಮನಸ್ತಾಪವನ್ನುಂಟು ಮಾಡುತ್ತವೆ. ಹಾಗೇ ಎಲ್ಲರಲ್ಲಿರುವ ಹೊಟ್ಟೆಕಿಚ್ಚು, ಸಣ್ಣತನ, ಮೋಸ, ಸುಳ್ಳು ಹೇಳುವುದೂ ಕೂಡ ಪಿಂಜಾರರಲ್ಲಿದೆ. ಹಿಂಸೆಗೆ ಹೆದರುವ ಪಿಂಜಾರರು ಸಮಸ್ಯಾತ್ಮಕ ಸಂದರ್ಭಗಳಲ್ಲಿ ಬೈಗುಳಗಳ ಮೂಲಕವೇ ತಮ್ಮ ಸಿಟ್ಟನ್ನು ಹೊರಹಾಕುತ್ತಾರೆ.

ಜಗಳ ಅನ್ನುವುದು ಮಾತುಗಳ ನೆಲೆಯಲ್ಲಿ ಮುಗಿದೇ ಹೋಗುತ್ತದೆ. ಒಂದೆರಡು ದಿನದಲ್ಲಿ ಮನಸ್ತಾಪ ಕರಗಿ ಮತ್ತೆ ಎಂದಿನ ಆತ್ಮೀಯ ಒಡನಾಟದಲ್ಲಿ ತೊಡಗುತ್ತಾರೆ.

ದನ ಮತ್ತು ಹಂದಿ ಮಾಂಸದ ಬಳಕೆಯನ್ನು ವಿರೋಧಿಸುವಷ್ಟರ ಮಟ್ಟಿಗೆ ಹೆಚ್ಚು ಜನ ಹೆಂಡತಿಯರನ್ನು ಪಿಂಜಾರರು ನಿರಾಕರಿಸುತ್ತಾರೆ. ಇದಕ್ಕೆ ಅವರ ಬಡತನವಷ್ಟೇ ಕಾರಣವಾಗಿರಲಾರದು. ಹೆಂಡತಿ ಸತ್ತು ಹೋದರೆ, ಹೆಂಡತಿಗೆ ಮಕ್ಕಳಾಗದಿದ್ದರೆ ಮತ್ತೊಂದು ಮದುವೆಯ ಪ್ರಸ್ತಾಪ ಬರುತ್ತದೆ. ಅನೇಕರು ಪಿಂಜಾರರು ಇಂಥ ಸಂದರ್ಭಗಳಲ್ಲಿ 'ನಮ್ಮ ಹಣೆ ಬರಹದಲ್ಲಿ ಇದ್ದಂಗಾಗ್ತತೆ' ಎಂದು ಸುಮ್ಮನಿರುತ್ತಾರೆ. ಆದರೆ ಮತ್ತೊಬ್ಬ ಹೆಂಡತಿಗಾಗಿ, ಮೊದಲ ಹೆಂಡತಿ ಬದುಕಿದ್ದೂ, ಆಸೆಪಡುವುದನ್ನು ಪಿಂಜಾರರು ಒಪ್ಪುವುದಿಲ್ಲ. ವಿಶೇಷವೆಂದರೆ ಪಿಂಜಾರರು ಹೆಣ್ಣುಮಕ್ಕಳನ್ನು ಅವಮಾನದಿಂದ ಕೀಳಾಗಿ ನಡೆಸಿಕೊಳ್ಳುವುದಿಲ್ಲ. ಹೆಣ್ಣುಮಕ್ಕಳೆಲ್ಲ ದಿನವಿಡೀ ಗಂಡಿನಂತೆ ಕೆಲಸ ಮಾಡಿ ಮನೆಗೆ ಬಂದು ಅಡಿಗೆ ಮಾಡುವ ಜವಾಬ್ದಾರಿ ಹೆಣ್ಣಿನದಾಗಿರುತ್ತದೆ. ದುಡಿಯದ ಗಂಡಸನ್ನು ಹೆಣ್ಣು ಬಾಯಿಗೆ ಬಂದ ಹಾಗೆ ಬಯ್ಯುತ್ತಾಳೆ. ಹೆಣ್ಣು ಹುಟ್ಟಿದರೂ ಕೀಳೆಂದು ಭಾವಿಸುವುದಿಲ್ಲ. 'ಹೆಣ್ಣು ಹುಟ್ಟಿದ ಮನೆ ತಣ್ಣಗಂತೆ' ಅನ್ನುವುದು ಪಿಂಜಾರರ ತುದಿನಾಲಗೆಯಲ್ಲಿರುವ ಗಾದೆ. ಆದರೂ ಮದುವೆ ಮತ್ತು ಬದುಕಿನ ಅತಿಮುಖ್ಯ ನಿರ್ಧಾರಗಳನ್ನು ಕೈಗೊಳ್ಳುವಾಗ ಗಂಡಸರೇ ಮುಂದಾಗುತ್ತಾರೆ. ಆದರೆ ಇದು ಯಾವುದೂ ಹೆಣ್ಣಿನ ಗುಪ್ತ ಸಮ್ಮತಿಯನ್ನು ಪಡೆಯದೇ ನಡೆಯುವುದಿಲ್ಲ. ಪಿಂಜಾರರಲ್ಲಿ ವರದಕ್ಷಿಣೆಯ ಅನಿಷ್ಠ ಕೂಡ ಇದೆ. ಇದು ಈಗೀಗಂತೂ ವಿಕಾರ ರೂಪ ಪಡೆಯುತ್ತಿದೆ.

'ಹಿರಿಯಳಿಯ ತಂದೆಗೆ ಸಮಾನ' ಎಂದು ಭಾವಿಸುವ ಪಿಂಜಾರರು ಆತನನ್ನು ವಿಶೇಷವಾಗಿ ಆದರಿಸುತ್ತಾರೆ. ಪ್ರತಿ ವಿಚಾರದಲ್ಲೂ ಆತನ ಅನುಮತಿಯನ್ನು ಅಪೇಕ್ಷಿಸುತ್ತಾರೆ. ಅತ್ತೆಯಾದವಳಂತೂ ಅಳಿಯನ ಮುಖಕ್ಕೆ ಮುಖ ಕೊಟ್ಟು ಮಾತನಾಡದಷ್ಟು ಸಂಕೋಚದಿಂದಿರುತ್ತಾಳೆ. ಆತ ಸೊಸೆ ಮತ್ತು ಅಳಿಯಂದಿರ ಬದುಕನ್ನು ನೇರಗೊಳಿಸಲು ತಂದೆಯಷ್ಟೇ ಶ್ರಮ ವಹಿಸುತ್ತಾನೆ, ಚಿಂತಿಸುತ್ತಾನೆ. ಗಂಡಸರು ಮದುವೆಯಾಗಿ ಹೋದ ಅಕ್ಕ ತಂಗಿಯವರಿಗೆ ಪ್ರತಿವರ್ಷ ಯಾವುದಾದರೊಂದು ಹಬ್ಬದಲ್ಲಿ ಬಟ್ಟೆಬರೆ ಉಡುಗೊರೆ ಕೊಟ್ಟು ಆದರಿಸುತ್ತಾರೆ. ಹಾಗೆ ಮಾಡದಿದ್ದರೆ ಹೆಣ್ಣು ಮಕ್ಕಳ ಶಾಪ ತಟ್ಟಿ ತಾನು ಏಳಿಗೆಯಾಗುವುದಿಲ್ಲ ಅನ್ನುವ ಆಂತರಿಕ ಭಯ ಅವರನ್ನು ಕಾಡುತ್ತದೆ.

ಪಿಂಜಾರರು ಅವಿಭಕ್ತ ಕುಟುಂಬ ಪದ್ಧತಿಯಲ್ಲಿದ್ದವರಾದರೂ ಈಗ ವಿಭಕ್ತ ಕುಟುಂಬದವರೂ ಇದ್ದಾರೆ. ಕೆಲವರು ಮನೆಯಷ್ಟನ್ನೇ ಭಾಗಮಾಡಿಕೊಂಡು ತಮಗಿರುವ ಭೂಮಿಯಲ್ಲಿ ಒಟ್ಟಾಗಿ ದುಡಿಯುತ್ತಾರೆ. ಒಟ್ಟಾಗೆ ಕೂಲಿ-ನಾಲಿ ಮಾಡುತ್ತಾರೆ. ಪಿಂಜಾರರಲ್ಲಿ ವಿಶೇಷವಾದ ಒಳಾಡಳಿತ ವ್ಯವಸ್ಥೆಯಿಲ್ಲವಾದರೂ ಸಮಾಜದ ಮುಖ್ಯವಾಹಿನಿಯಲ್ಲಿ ಸೇರಿಹೋಗಿರುತ್ತಾರೆ. ಮುಸ್ಲಿಮರನ್ನು ತಮ್ಮ ನಿತ್ಯದ ಬದುಕಿನಲ್ಲಿ ಅಪ್ಪಾಗಿ ಹಚ್ಚಿಕೊಳ್ಳದ ಪಿಂಜಾರರು ಹಿಂದೂ ಸಮುದಾಯದವರಲ್ಲಿ ತಮ್ಮ ಒಟ್ಟಾರೆ ಜೀವನವನ್ನು ಕಳೆಯುತ್ತಾರೆ. ಹಿಂದೆ ಸೂಚಿಸಿದ ಆಸ್ತಿ ಮತ್ತು ಹೆಣ್ಣಿಗೆ ಸಂಬಂಧಪಟ್ಟ ಸಮಸ್ಯೆಗಳು ಪಿಂಜಾರರು - ಪಿಂಜಾರರ ನಡುವೆ ಕಾಣುವಷ್ಟೇ ಹಿಂದೂ-ಪಿಂಜಾರರ ನಡುವೆಯೂ ತಲೆದೋರುತ್ತವೆ.

ಪಿಂಜಾರರು ಇರುವ ಕಡೆಯೆಲ್ಲ ಅವರ ಬಗ್ಗೆ ಹಿಂದೂಗಳಲ್ಲಿ ಸಾಮಾನ್ಯವಾದ ಒಂದು ಅಭಿಪ್ರಾಯವಿದೆ. ಅದೇನೆಂದರೆ 'ಇವರು ಸಾಬರಂಗಲ್ಲ'ಅನ್ನುವುದು. ಅಥವಾ ಕೆಲವೊಮ್ಮೆ ರೇಗಿಸುವಾಗ ಸಿಟ್ಟಿನಿಂದ 'ನೀವೆಂಥ ಅಡ್ಡಸಾಬರಲೇ' ಎಂದೂ ಅನ್ನುತ್ತಾರೆ. ಇಂಥ ಸಂಗತಿಗಳು ಪಿಂಜಾರರ ಸಾಮಾಜಿಕ ಸ್ಥಾನವನ್ನು, ಎಲ್ಲೂ ಸಲ್ಲದಿರುವ ಸ್ಥಾನವನ್ನು, ಸ್ಪಷ್ಟವಾಗಿ ಹೇಳುತ್ತವೆ. ಹಿಂದೂಗಳ ಜೊತೆಯಲ್ಲಿರುವ ಕಾರಣದಿಂದ ಮುಸ್ಲಿಮರು ಪಿಂಜಾರರನ್ನು ದೂರುತ್ತಾರೆ. ಪಿಂಜಾರರನ್ನು ಮುಸ್ಲಿಮರಿಂದ ಪ್ರತ್ಯೇಕಿಸಿ ನೋಡುವ ಹಿಂದೂಗಳು ಪಿಂಜಾರರನ್ನು ಹಿಂದೂಗಳೆಂದೂ ಒಪ್ಪಲಾರರು, ಮುಸ್ಲಿಮರೆಂದೂ ಕರೆಯಲಾರರು. ಈ ಬಗೆಯ ಸಾಮಾಜಿಕ ಸಂದಿಗ್ಧ ಪಿಂಜಾರ ಜನಾಂಗದ್ದು. ಆದರೆ ಇಂತಹ ಇಕ್ಕಟ್ಟಿನ ನಡುವೆಯೂ ಪಿಂಜಾರರು ಉಭಯ ಸಂಸ್ಕೃತಿಗಳ ಅನುಸರಣೆಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ.

ಪಿಂಜಾರರ ಸಾಮಾಜಿಕ ಜೀವನದ ಅಧ್ಯಯನದ ಈ ಹಂತದಲ್ಲಿ ಒಂದು ಸಂಗತಿಯನ್ನು ಹೇಳಲೇಬೇಕು. ಅದೇನೆಂದರೆ ಪಿಂಜಾರರು ಭಾರತೀಯ ಸಮಾಜದಲ್ಲಿ ಅತ್ಯಂತ ನಿಕೃಷ್ಟ ಸ್ಥಿತಿಯನ್ನು ಅನುಭವಿಸುತ್ತಿದ್ದಾರೆ. ತಮ್ಮ ಮೂಲಾಶ್ರಮದ ಆಕರ್ಷಣೆಯಿಂದಾಗಿ ಇಸ್ಲಾಂನ, ಇಸ್ಲಾಂನ ನಿಷ್ಠೆ ಹೊಂದಿರುವುದಕ್ಕಾಗಿ ಹಿಂದೂ ಧರ್ಮದ ತಿರಸ್ಕಾರವನ್ನು ಒಟ್ಟಿಗೇ ಅನುಭವಿಸುವ ಪಿಂಜಾರರು ವಾಸಿಸುವ ಯಾವುದೇ ಊರಿನಲ್ಲಿಯಾಗಲೀ ಅಸ್ಪೃಶ್ಯರನ್ನು ಮೇಲ್ಜಾತಿಯ ಧಣಿಗಳ ಗತ್ತಿನಲ್ಲಿ ಉಪಚರಿಸುತ್ತಾರೆ. ಅಸ್ಪೃಶ್ಯರನ್ನು ತಮ್ಮ ಮನೆಯೊಳಗೂ ಬಿಟ್ಟುಕೊಳ್ಳುವುದಿಲ್ಲ. ವಿಪರ್ಯಾಸವೆಂದರೆ ಪಿಂಜಾರರನ್ನು ಹಿಂದೂ ಶೂದ್ರ ಸಮುದಾಯದವರು ತಮ್ಮ ಮನೆಯೊಳಗೆ ಬಿಟ್ಟುಕೊಂಡರೂ ಅಡಿಗೆ ಮನೆ, ದೇವರಕೋಣೆಯೊಳಗೆ ಬಿಟ್ಟುಕೊಳ್ಳುವುದಿಲ್ಲ. ಅಷ್ಟೇ ಅಲ್ಲ ಲಿಂಗಾಯ್ತರ ಮನೆಯೊಳಗೆ ಪಿಂಜಾರರು ಊಟ ಮಾಡುವ, ಚಹಾ ಕುಡಿಯುವ ಸಂದರ್ಭ ಬಂದರೆ ಅವರು ಬಳಸಿದ ತಟ್ಟೆ ಲೋಟಗಳನ್ನು ತೊಳೆಯದೇ ಒಳಗೆ ತೆಗೆದುಕೊಂಡು ಹೋಗುವುದಿಲ್ಲ. ಪಿಂಜಾರರ ಪರಿಸ್ಥಿತಿಯೇ ಹೀಗಿರುವಾಗ ಅವರು ಅಸ್ಪೃಶ್ಯರನ್ನು ಹೀಗೆ ನೋಡಿಕೊಳ್ಳುವುದು ವಿಚಿತ್ರವಾಗಿದೆ. ಹಿಂದೂ ಜಾತಿ ವ್ಯವಸ್ಥೆಯ ಮೇಲ್ಜಾತಿಯವರು ನಡೆಸಿಕೊಳ್ಳುವಷ್ಟು ಅಮಾನವೀಯವಾಗಿ ನಡೆದುಕೊಳ್ಳದಿದ್ದರೂ ಪಿಂಜಾರರು ಅಸ್ಪೃಶ್ಯರ ನಡುವಿನ ಸಂಬಂಧ ಆಪ್ಯಾಯಮಾನವಾಗೇನೂ ಇಲ್ಲ. ಇದನ್ನು ಗಮನಿಸಿದರೆ ಪಿಂಜಾರರು ಅಸ್ಪೃಶ್ಯರಲ್ಲದ, ಆದರೆ ಹಿಂದುಳಿದ ಶೂದ್ರ ಸಮುದಾಯಗಳಿಂದ ಮತಾಂತರಗೊಂಡಿರಬಹುದೇ? ಎಂದು ಸಂಶಯವಾಗುತ್ತದೆ. ಹಾಗೆ ನೋಡಿದರೆ ತಳವಾರ, ಕುರುಬ ಮತ್ತಿತರ ಕಾಟುಗ ಜನಾಂಗದವರೊಡನೆ ಸಲುಗೆಯಿಂದಲೇ ಇರುತ್ತಾರೆ. ಲಿಂಗಾಯಿತರೊಂದಿಗಿನ ಹೊಕ್ಕು ಬಳಕೆ ಕೂಡ ಚೆನ್ನಾಗಿದೆ. ಆದ್ದರಿಂದ ಪಿಂಜಾರರ ಇಂಥ ನಡವಳಿಕೆ ಅವರ ಮೂಲದ ಕುರಿತು ವಿಶೇಷವಾದ ಒಳನೋಟಗಳನ್ನು ಕೊಡುತ್ತದೆ.

ಪಿಂಜಾರರ ಕುಟುಂಬ ಪದ್ಧತಿ ಕೂಡ ಅವರ ಸಾಮಾಜಿಕ ಜೀವನದಂತೆಯೇ ವಿಶಿಷ್ಟವಾದುದು. ಅವರು ತಮ್ಮ ಕುಟುಂಬ ರಚನೆಯಲ್ಲಿ ಹಿಂದೂ ಮುಸ್ಲಿಮರಿಬ್ಬರಿಂದಲೂ ಅತ್ಯುತ್ತಮವಾದುದನ್ನು ಆಯ್ಕೆ ಮಾಡಿಕೊಂಡಂತೆ ಕಾಣುತ್ತದೆ. ಪಿಂಜಾರರಲ್ಲಿ ಕೂಡ ಪುರುಷ ಪ್ರಧಾನ ಕುಟುಂಬ ಪದ್ಧತಿಯೇ ರೂಢಿಯಲ್ಲಿದೆ. ಮದುವೆಯಾದ ಹೆಣ್ಣು ಗಂಡಿನ ಮನೆಗೆ ಹೋಗಿ ನೆಲೆಸುವುದರಿಂದ ಪುರುಷ ಪ್ರಾಧಾನ್ಯತೆ

ಆರಂಭವಾಗುತ್ತದೆ. ಪಿಂಜಾರರಲ್ಲಿ ಮದುವೆಯ ಸಂಪ್ರದಾಯಗಳು ಇಸ್ಲಾಂ ಧರ್ಮಾನುಸಾರವಾಗಿಯೇ ನಡೆಯುತ್ತವೆ. ಗಂಡನ್ನು ಹೆಣ್ಣಿನ ಮನೆಗೆ ಕರೆದುಕೊಂಡು ಹೋಗಿ ತೋರಿಸಲಾಗುತ್ತದೆ. ಪರಸ್ಪರರಿಗೆ ಒಪ್ಪಿಗೆಯಾದ ನಂತರ ನಿಶ್ಚಿತಾರ್ಥ, ಮಾತುಕತೆ, ಕೊಡುವುದು, ತಗೊಳ್ಳುವುದು, ಮದುವೆ ಮುಹೂರ್ತದ ನಿರ್ಧಾರ ಇತ್ಯಾದಿಗಳು ನಡೆಯುತ್ತವೆ. ಪಿಂಜಾರ ಜನಾಂಗದಲ್ಲಿ ತಂತಮ್ಮ ನಡುವೆಯೇ ಸಂಬಂಧಗಳು ನಡೆಯುತ್ತವೆ. ಸಾಮಾನ್ಯವಾಗಿ ಪಿಂಜಾರರು ತಮ್ಮ ಮನೆಯ ಹೆಣ್ಣನ್ನು ಮುಸ್ಲಿಂ ಮನೆತನಕ್ಕೆ ಕೊಡುವುದಿಲ್ಲ ಹಾಗೂ ಮುಸ್ಲಿಂ ಮನೆತನದ ಹೆಣ್ಣನ್ನು ತಮ್ಮ ಮನೆಗೆ ತಂದುಕೊಳ್ಳುವುದೂ ಇಲ್ಲ. ಪಿಂಜಾರರು ಇದಕ್ಕೆ ಕೊಡುವ ಕಾರಣ ಕುತೂಹಲಕರವಾಗಿದೆ. 'ನಮಗೂ ಅವರಿಗೂ ಸರಿಬರುವುದಿಲ್ಲ, ನಮ್ಮ ಹೆಣ್ಣು ಮಕ್ಕಳಿಗೆ ಬುರುಖಾ ಹಾಕಿಸಿಬಿಡ್ತಾರೆ' ಎಂದು ಮೂಗು ಮುರಿಯುತ್ತಾರೆ. ಹಾಗೆಯೇ ಮುಸ್ಲಿಮರು ಕೂಡ ಪಿಂಜಾರರ ಮನೆತನಕ್ಕೆ ಹೆಣ್ಣುಕೊಟ್ಟು ತಂದುಕೊಳ್ಳುವ ಸಂಪ್ರದಾಯವನ್ನಿಟ್ಟುಕೊಂಡಿಲ್ಲ. ಅದಕ್ಕೆ ಅವರು ಕೊಡುವ ಕಾರಣ 'ಅವರು ನದಾಫರು, ನದಾಫ ದೀನ್ ಮೆ ನಹೀ, ದುನಿಯಾಮೆ ನಹೀ', ಅಂದರೆ ಪಿಂಜಾರರಿಗೆ ಧರ್ಮವೂ ಇಲ್ಲ, ಲೋಕವೂ ಇಲ್ಲ, ಎಂದು ಇದು ವಿಚಿತ್ರವಾದರೂ ಸತ್ಯವಾಗಿದೆ. ಇಂಥ ಕಾರಣದಿಂದಲೇ ಪಿಂಜಾರರನ್ನು ಅಲ್ಪ ಸಂಖ್ಯಾತರಲ್ಲಿಯೇ ಇರುವ ಅತ್ಯಲ್ಪ ಸಂಖ್ಯಾತರು **(Microscopic Minority)** ಎಂದು ಕರೆಯುವುದು ವಾಡಿಕೆಯಾಗಿದೆ.

ಪಿಂಜಾರರಲ್ಲಿ ವೈವಾಹಿಕ ಸಂಬಂಧವನ್ನು ಕುರಿತು ವೈಜ್ಞಾನಿಕ ತಿಳುವಳಿಕೆಯಿರುವಂತೆ ಕಾಣುತ್ತದೆ. ಈ ಕುರಿತ ವಸ್ತುಸ್ಥಿತಿ ಹೀಗಿದೆ ; ಇಸ್ಲಾಂನಲ್ಲಿ ಗಂಡು ತನ್ನ ಸ್ವಂತ ಅಕ್ಕ ಅಥವಾ ತಂಗಿಯ ಮಗಳನ್ನು ಮದುವೆಯಾಗುವುದು ನಿಷಿದ್ಧ. ಹಿಂದೂಗಳಲ್ಲಿ ಇದಕ್ಕೆ ಅವಕಾಶವಿದೆ. ಮಾತ್ರವಲ್ಲ ಇದು ಹೆಚ್ಚಾಗಿಯೂ ಇದೆ. ಇಸ್ಲಾಂನಲ್ಲಿ ಅಣ್ಣ, ಚಿಕ್ಕಪ್ಪ, ದೊಡ್ಡಪ್ಪನ ಮಗಳನ್ನು ಮದುವೆಯಾಗಲು ಸಮ್ಮತಿಯಿದೆ. ಹಿಂದೂಗಳಲ್ಲಿ ಇದಕ್ಕೆ ಅವಕಾಶವಿಲ್ಲ, ಮಾತ್ರವಲ್ಲ ಇದನ್ನು ಅನೈತಿಕ ಎಂದೇ ಪರಿಗಣಿಸಲಾಗುತ್ತದೆ (ಭಾರತೀಯ ಸಾಮಾಜಿಕ ಪರಿಸರದಲ್ಲಿ ಹಿಂದೂ **v/s** ಮುಸ್ಲಿಂ ಎಂಬಂತಾಗಿರುವುದ್ಕಕೆ ಬಹುಶಃ ಈ ಎರಡೂ ಧರ್ಮಗಳಲ್ಲಿರುವ ಪರಸ್ಪರ ವಿರುದ್ಧವೆನ್ನಬಹುದಾದ ಈ ಬಗೆಯ ಸಂಗತಿಗಳೇ ಕಾರಣವಿರಬಹುದು. ಇದಕ್ಕೆ ಪೂರಕವಾಗಿ ಹಿಂದೂಗಳಲ್ಲಿ ವಿಗ್ರಹಾರಾಧನೆಯಿದೆ, ಇಸ್ಲಾಂನಲ್ಲಿ ಇಲ್ಲ. ಹಿಂದೂಗಳಲ್ಲಿ ಅನೇಕ ದೇವ-ದೇವತೆಗಳಿದ್ದರೆ, ಇಸ್ಲಾಂನಲ್ಲಿ ಏಕದೇವೋಪಾಸನೆ, ಹಿಂದೂಗಳು ಪೂರ್ವಕ್ಕೆ ತಿರುಗಿ ಪ್ರಾರ್ಥಿಸಿದರೆ, ಮುಸ್ಲಿಮರು ಪಶ್ಚಿಮಕ್ಕೆ ತಿರುಗುತ್ತಾರೆ. ಉರ್ದು ಭಾಷೆಯೊಂದನ್ನು ಹೊರತುಪಡಿಸಿದರೆ ಭಾರತೀಯ ಭಾಷೆಗಳ ಲಿಪಿಯನ್ನು ಬರೆಯುವ, ಓದುವ ಕ್ರಮ ಎಡದಿಂದ ಬಲಕ್ಕೆ. ಆದರೆ ಭಾರತದಲ್ಲಿ ಮುಸ್ಲಿಮರು ಹೆಚ್ಚಾಗಿ ಬಳಸುವ ಉರ್ದು, ಮತ್ತು ಮುಸ್ಲಿಮರ ಮೂಲ ಭಾಷೆ ಅರಬ್ಬಿಯನ್ನು ಓದುವ, ಬರೆಯುವ ಕ್ರಮ ಬಲದಿಂದ ಎಡಕ್ಕೆ ಇತ್ಯಾದಿ - ಹೀಗೆ ಪಟ್ಟಿ ಬೆಳೆಯುತ್ತದೆ). ಇರಲಿ, ಪಿಂಜಾರರಲ್ಲಿ ಮಾತ್ರ ಹಿಂದೂ ಹಾಗೂ ಇಸ್ಲಾಂನಿಂದ ಆಯ್ದುಕೊಂಡ ವಿವಾಹಪದ್ಧತಿಯ ಕ್ರಮಂಗಳು ವಿಶಿಷ್ಟವಾಗಿದೆ. ಉದಾಹರಣೆಗೆ ಪಿಂಜಾರರು ಸ್ವಂತ ಅಕ್ಕ ಅಥವಾ ತಂಗಿಯ ಮಗಳನ್ನು ಮದುವೆಯಾಗುವುದಿಲ್ಲ. ಇದು ಇಸ್ಲಾಂನಿಂದ ಆಯ್ದುಕೊಂಡದ್ದು. ಹಾಗೆಯೇ ಪಿಂಜಾರರು ಅಣ್ಣ, ದೊಡ್ಡಪ್ಪ, ಚಿಕ್ಕಪ್ಪನ ಮಗಳನ್ನು ಮದುವೆಯಾಗುವುದಿಲ್ಲ. ಹಾಗೂ ಇದನ್ನು ಅನೈತಿಕ ಎಂದೇ ಭಾವಿಸುತ್ತಾರೆ. ಇದು ಹಿಂದೂ ಧರ್ಮದಿಂದ

ಆಯ್ಕೆ ಮಾಡಿಕೊಂಡದ್ದು. ಪಿಂಜಾರರು ಅಳವಡಿಸಿಕೊಂಡಿರುವ ಈ ರೀತಿಯನ್ನು ಗಮನಿದರೆ ಒಂದು ವೈಜ್ಞಾನಿಕವಾದ ಮತ್ತೊಂದು ಸಾಮಾಜಿಕ ಸಂಬಂಧಗಳ ಸಂದರ್ಭದಲ್ಲಿ ಅನುಸರಿಸಲಾಗುವ ಕೆಲವು ಮೌಲ್ಯಗಳನ್ನು ಯಥಾವತ್ತಾಗಿ ಮುಜುಗರಕ್ಕೆ ಒಳಗಾಗದಂತೆ ಪಾಲಿಸಬಹುದಾದ ಆಯ್ಕೆ ಇದಾಗಿದೆ. ಇದು ಉತ್ತಮವೂ ಆಗಿದೆ. ಆದರೆ ಪಿಂಜಾರರ ಕೌಟುಂಬಿಕ ಪದ್ಧತಿಯಲ್ಲಿರುವ ವಿಶಿಷ್ಟತೆಯೆಂದರೆ ತಂತಮ್ಮೊಳಗೆ ಹೊಸ ಹೊಸ ಸಂಬಂಧವನ್ನು ಹುಡುಕಿಕೊಳ್ಳುವುದು. ಇದರಿಂದ ಕಾಲಾನಂತರದಲ್ಲಿ ಆಗುವ ವಿರುದ್ಧ ಪರಿಣಾಮವನ್ನು ಪಿಂಜಾರರು ಗಮನಿಸಿಲ್ಲ ಎಂದು ಹೇಳುವಂತಿಲ್ಲ. ಯಾಕೆಂದರೆ ಒಂದು ಊರಿನ ಗಂಡು ಮತ್ತೊಂದು ಊರಿನ ಹೆಣ್ಣನ್ನು ಮದುವೆಯಾದಾಗ ಅದು ಹೊಸ ಸಂಬಂಧವೇನೋ ಸರಿ. ಆ ಎರಡು ಮನೆತನಗಳ ನಡುವೆ ನಂಟಸ್ತಿಕೆ ಏರ್ಪಟ್ಟಿದ್ದು ಸರಿ. ಆದರೆ ಇವರ ಕರುಳಬಳ್ಳಿ ಬೆಳೆದಂತೆ ಇಂಥದೇ ಹೊಸ ಸಂಬಂಧ ಸಾಧ್ಯವಾಗುತ್ತದೆ ಎಂಬ ನಂಬಿಕೆಯಿಲ್ಲ. ಅಲ್ಲದೇ ಹೀಗೆ ಹೊಸ ಸಂಬಂಧವನ್ನು ಹುಡುಕಿಕೊಂಡು ಹೊರಟಾಗ ತಮ್ಮ ಬೀಗರಿಗೆ ಅಣ್ಣ-ತಮ್ಮಂದಿರಾದಂತಹ ಮನೆತನದಲ್ಲಿ ಹೆಣ್ಣು ಮಾಡಿಕೊಂಡರೇನೋ ಸರಿ, ಕೆಲವೊಮ್ಮೆ ತಮ್ಮ ಬೀಗರಿಗೆ ಬೀಗರಾದವರ ಮನೆಯಲ್ಲಿ ಸಂಬಂಧ ಉಂಟಾಗುವುದು ಸಾಧ್ಯವಿದೆ. ಇದರಿಂದ ತಮಗೆ ಅಣ್ಣ-ತಮ್ಮಂದಿರಾದವರ ಮನೆಯಿಂದ ಹೆಣ್ಣು ತಂದುಕೊಂಡು, ಅಣ್ಣ-ತಮ್ಮ ಎಂದು ಕರೆಯುತ್ತಿದ್ದವರು, ಅಳಿಯ-ಮಾವ ಎನ್ನಬೇಕಾದ ಆಭಾಸಗಳೂ ಆದದ್ದಿದೆ. ಇವು ದೂರದ ಊರಿನಲ್ಲಿ ತಮಗೆ ಅರಿವಿಲ್ಲದೇ ಆಗುವುದರಿಂದ ಇವುಗಳ ಬಗ್ಗೆ ಪಿಂಜಾರರು ಅಷ್ಟೇನೂ ತಲೆಕೆಡಿಸಿಕೊಳ್ಳುವುದಿಲ್ಲ.

ಪಿಂಜಾರರ ಕುಟುಂಬದಲ್ಲಿ ಅವ್ವ-ಅಪ್ಪ, ಅಜ್ಜ-ಅಜ್ಜಿ, ಅತ್ತೆ-ಮಾವ, ಸಣ್ಣಪ್ಪ-ದೊಡ್ಡಪ್ಪ, ಅಕ್ಕ-ತಮ್ಮ, ಅಣ್ಣ-ತಂಗಿ, ಅಕ್ಕ-ಮಾವ (ಅಕ್ಕ ಅಥವಾ ತಂಗಿಯ ಗಂಡನನ್ನು ಹಿಂದೂಗಳಲ್ಲಿ ಭಾವ ಎಂದು ಕರೆಯುವ ವಾಡಿಕೆಯಿದೆ. ಆದರೆ ಪಿಂಜಾರರಲ್ಲಿ ಮಾವ ಎಂದೇ ಕರೆಯುತ್ತಾರೆ. ಕನ್ನಡದಲ್ಲಿರುವ ವ್ಯಾಕರಣ ವೈಶಿಷ್ಟ್ಯವಾದ 'ವಮಹಪ' ಭೇದವನ್ನು ಇಲ್ಲಿ ನೆನೆಸಿಕೊಂಡರೆ ಭಾವ-ಮಾವ ಪದಗಳ ಅರ್ಥ ಒಂದೇ ಆಗುತ್ತದೆ). ಮುಂತಾದ ಪರಿಭಾಷೆಗಳಲ್ಲಿಯೇ ಸಂಬಂಧಗಳಿವೆ. ತಂಗಿ ಅಥವಾ ಮಗಳನ್ನೂ ಸಂಬೋಧಿಸುವಾಗ ತಾಯಿ ಎಂದೂ, ಮಗನನ್ನು ಕರೆಯುವಾಗ ತಮ್ಮ ಎಂದೂ, ಪ್ರೀತಿ ತೋರುವುದಿದೆ. ಈ ಮೊದಲೇ ಹೇಳಿದಂತೆ ಪಿಂಜಾರರಲ್ಲಿ ಪುರುಷ ಪ್ರಧಾನ ಕೌಟುಂಬಿಕ ವ್ಯವಸ್ಥೆ ಜಾರಿಯಲ್ಲಿದೆ. ಕುಟುಂಬದ ಯಾವುದೇ ಮುಖ್ಯ ಜವಾಬ್ದಾರಿ ಗಂಡಸಿನದೇ ಆಗಿರುತ್ತದೆ. ಅದು ರೈತಾಪಿ ಕೆಲಸವಾಗಿರಲಿ, ಮನೆಯ ಸದಸ್ಯರಿಗೆ ಬಟ್ಟೆ-ಬರೆ ತರುವುದಿರಲಿ, ಹಬ್ಬ-ಹರಿದಿನದ ಆಚರಣೆಯಿರಲಿ, ಮದುವೆಯ ಸಂಬಂಧವಾದ ಮಾತುಕತೆಯಿರಲಿ, ಆಸ್ತಿ ಹಂಚಿಕೆಯ ವಿಚಾರವಿರಲಿ, ಎಲ್ಲಾ ಸಂಗತಿಗಳನ್ನು ಮನೆಯ ಯಜಮಾನ ನಿರ್ವಹಿಸುತ್ತಾನೆ, ಆತನದೇ ಕಡೆಯ ಮಾತೂ ಆಗಿರುತ್ತದೆ. ಕೆಲವೊಮ್ಮೆ ಇದೆಲ್ಲಾ ಮನೆಯವರೊಂದಿಗೆ ಚರ್ಚೆ ಮಾಡಿದ ನಂತರವೇ ನಿರ್ಧಾರವಾಗುತ್ತದೆ.

ಪಿಂಜಾರರಲ್ಲಿ ಅವಿಭಕ್ತ ಕುಟುಂಬಗಳೇ ಹೆಚ್ಚಾಗಿದ್ದುದು ತಿಳಿದುಬರುತ್ತದೆ. ಸಾಮಾನ್ಯವಾಗಿ ನಾಲ್ಕೈದು ತಲೆಮಾರಿನವರೆಗೂ ಈ ಬಗೆಯ ಅವಿಭಕ್ತ ಕುಟುಂಬಗಳು ಮುಂದುವರಿದುಕೊಂಡು ಬಂದದ್ದಿದೆ. ಇಂಥ ಕುಟುಂಬದ ಹಿರಿಯ ಯಜಮಾನನ ನಿರ್ದೇಶನದಂತೆ ಹಾಸಿಗೆ, ದಿಂಬು ತಯಾರಿಸುವುದು, ಉಳುಮೆ, ಬಿತ್ತನೆ, ಕೊಯ್ಲು, ಒಕ್ಕಲು, ಮೊದಲಾದ ರೈತಾಪಿ ಕೆಲಸಗಳು, ಸಂಸಾರಕ್ಕೆ ಅಗತ್ಯವಾದ ಕಾಳು-ಕಡಿ,

ಬಟ್ಟೆ-ಬರೆ ತರುವುದು, ಮನೆಯ ಗಂಡು-ಹೆಣ್ಣಿನ ವಿವಾಹದ, ಕೊಡು-ತಗಳೋ ಮಾತುಕತೆ ನಡೆಸುವುದು. (ಇನ್ನೂ ಮುಂದುವರಿದು ಅಣ್ಣ-ತಮ್ಮಂದಿರ ನಡುವೆ ಭಿನ್ನಾಭಿಪ್ರಾಯಗಳು ಬಂದು ಭಾಗವಾಗಲೇಬೇಕೆಂದು ಯಾರಾದರೂ ಹಟ ಹಿಡಿದರೆ ಹಾಗೆ ಹೊರಗೆ ಹೋಗಬೇಕೆನ್ನುವವನನ್ನು ಮೊದಲು ಬರಿಗೈಯಿಂದಲೇ ಬೇರೆ ಮಾಡಲಾಗುತ್ತದೆ. ಯಾಕೆಂದರೆ ಎಲ್ಲರಲ್ಲಿಯೂ ಒಂದಾಗಿ ಬಾಳುವ ಬಯಕೆಯಿದ್ದಾಗ ತಾನೊಬ್ಬನು ಬೇರೆಯಾಗಬೇಕೆನ್ನುವವನನ್ನೇ ಹೊರಹಾಕಿ ಆತ ತಾನಾಗಿಯೇ ಮತ್ತೆ ಕೂಡಿ ಬದುಕುತ್ತೇನೆಂದು ಬರಲಿಚ್ಛಿಸಿದರೆ ಸೇರಿಸಿಕೊಳ್ಳುತ್ತಾರೆ. ಈ ನಡುವೆ ಕುಟುಂಬದಿಂದ ಹೊರಹೋದವನು ಇಲ್ಲಿಗಿಂತ ಸ್ವಂತ ಕೂಲಿ-ನಾಲಿ ಮಾಡಿ ಸುಖವಾಗಿರುವುದನ್ನು ಕಂಡ ಒಳಗಿನವರಲ್ಲಿಯೂ ಭಾಗವಾಗಬೇಕೆಂಬ ಬಯಕೆ ಏನಾದರೂ ಬಂದರೆ ಅದರ ಸೂಕ್ಷ್ಮವನ್ನು ಅರ್ಥ ಮಾಡಿಕೊಂಡ ಹಿರಿಯ ತಲೆ ಎಲ್ಲರಿಗೂ ಇದ್ದುದರಲ್ಲಿ ಸಮವಾಗಿ ಹಂಚಿ ಕೈತೊಳೆದುಕೊಳ್ಳುತ್ತದೆ) ಮೊದಲಾದ ಎಲ್ಲಾ ಕೆಲಸ ಕಾರ್ಯಗಳಿಗೂ ಮನೆಯ ಯಜಮಾನನ ಆಣತಿ ಬೇಕೇ ಬೇಕು.

ಪಾಶ್ಚಾತ್ಯರ ಆಧುನಿಕತೆಯ ಪ್ರಭಾವ ಹಾಗೂ ಪ್ರಜಾಪ್ರಭುತ್ವ ವ್ಯವಸ್ಥೆ ಎಲ್ಲ ಜಾತಿಗಳಲ್ಲಿದ್ದಂತಹ ಅವಿಭಕ್ತ ಕುಟುಂಬ ಪದ್ಧತಿಯನ್ನು ಒಡೆದು ಹಾಕಿದೆ. ಮೇಲ್ಜಾತಿಯ ಶ್ರೀಮಂತರಲ್ಲಿ ಮಾತ್ರವಿದ್ದ ಈ ಪದ್ಧತಿ ನಿಧಾನವಾಗಿಯಾದರೂ ಇತರ ಮಧ್ಯಮ, ಹಿಂದುಳಿದ ವರ್ಗಗಳನ್ನು ಪ್ರಭಾವಿಸಿತು. ಅವಿಭಕ್ತ ಕುಟುಂಬ ಪದ್ಧತಿಗೆ ಆರ್ಥಿಕವಾದ ಉತ್ಪಾದನೆ ಮತ್ತು ಆದಾಯ ಮುಖ್ಯ ಲಕ್ಷಣವಾಗಿರುವುದರಿಂದ ಇದು ಬರಬರುತ್ತಾ ಹಲವರು ದುಡಿದುಂಡರೆ ಕೆಲವರು ಮಾತ್ರ ಅವರ ಬೆವರಿನ ಫಲದಿಂದ ಅಧಿಕಾರ ನಡೆಸುವುದನ್ನು ವಿರೋಧಿಸುವ ಕುಟುಂಬದೊಳಗಿನ ಸಾಮಾಜಿಕ ಬಂಡಾಯವನ್ನು ಹುಟ್ಟು ಹಾಕಿತು. ಅಲ್ಲದೆ ಮನುಷ್ಯ ಆಧುನಿಕನಾದಂತೆ ಕೆಲವು ಸಂಗತಿಗಳಲ್ಲಾದರೂ ಏಕಾಂತವನ್ನು ಬಯಸಲಾರಂಭಿಸಿದ. ಆ ಏಕಾಂತದಲ್ಲಿ ತಾನು, ತನ್ನ ಮಕ್ಕಳು ಎನ್ನುವ ವಿಶೇಷ ಮಮಕಾರ ಹುಟ್ಟಿದಂತೆ ತನ್ನದೇ ಆದಾಯ ತನ್ನ ಸಣ್ಣ ಕುಟುಂಬಕ್ಕೆ ಮಾತ್ರ ವ್ಯಯವಾಗುವಂತಿದ್ದರೆ ಅದರಿಂದ ತನಗೇ ಲಾಭ ಎನ್ನುವಂತಹ ಲಾಲಸೆ ಅಥವಾ ಸಹಜ ಬಯಕೆಯಿಂದ ಪ್ರತ್ಯೇಕಗೊಳ್ಳುವ ಬಗ್ಗೆ ಆಲೋಚನೆ ಬರುತ್ತದೆ.

ಆದ್ದರಿಂದ ಈಗ ವಿಭಕ್ತ ಕುಟುಂಬಗಳೇ ಹೆಚ್ಚು ಸಂಖ್ಯೆಯಲ್ಲಿವೆ. ಪಿಂಜಾರರಲ್ಲಿ ಅವಿಭಕ್ತ ಕುಟುಂಬಗಳು ದೀರ್ಘಾವಧಿಯ ಕಾಲ ಜಾರಿಯಲ್ಲಿರಲಿಲ್ಲ ಎಂದು ಈಗಿನ ಹಿರಿಯರು ಹೇಳುತ್ತಾರೆ. ಯಾಕೆಂದರೆ ಇಂಥ ಕುಟುಂಬಗಳ ನಿರ್ವಹಣೆಗೆ ಸಾಕಾಗುವಷ್ಟು ದೊಡ್ಡ ಮನೆಗಳಾಗಲೀ, ಆರ್ಥಿಕ ಉತ್ಪನ್ನವಾಗಲೀ ಪಿಂಜಾರರಿಗೆ ಇರಲಿಲ್ಲ. ಪಿಂಜಾರರ ಕಾಯಕವೇ ಅಂತಹದ್ದು. ಆ ಹೊತ್ತಿನ, ಆ ದಿನದ ಖರ್ಚಿಗೆ ಸಾಕಾಗುವಷ್ಟು ಆದಾಯ ದೊರತರೆ ಅದೇ ಪುಣ್ಯ. ಅದರಲ್ಲೂ ಆಧುನಿಕ ಕೈಗಾರಿಕೆಗಳ ಹಿನ್ನೆಲೆಯಲ್ಲಿ ಪಿಂಜಾರರ ಕಾಯಕಕ್ಕೆ ತೀವ್ರತರವಾದ ಹಿನ್ನಡೆಯುಂಟಾಗಿದೆ. ನಮ್ಮ ನಾಡಿನ ಎಲ್ಲ ಬಗೆಯ ವೃತ್ತಿವಂತರ ಗೃಹ ಕೈಗಾರಿಕೆಗಳು ನಾಶದ ಹಂತಕ್ಕೆ ಬಂದು ವಿಚಿತ್ರವಾದ ಸ್ಪರ್ಧೆಯೂ ಏರ್ಪಟ್ಟಿದೆ. ಆಧುನಿಕ ಗಿರಣಿ, ಕೈಗಾರಿಕೆಗಳ ಆಕರ್ಷಣೀಯ ತಯಾರಿಕೆಗಳ ಜೊತೆಗೆ ಸ್ಪರ್ಧಿಸುವುದು ಕರಕುಶಲ ಕಲಾವಿದರಿಗೂ ಕಷ್ಟವಾಗುತ್ತಿದೆ. ಇಷ್ಟಾಗಿಯೂ ಪಿಂಜಾರರ ಕಾಯಕ ಹೊಸ ಜಾಯಮಾನಕ್ಕನುಗುಣವಾಗಿ

ಹೊಂದಿಕೊಳ್ಳುತ್ತ ಕುಂಟುತ್ತಾ ಸಾಗಿದೆ. ಹಳ್ಳಿಹಳ್ಳಿಗಳ ಮೇಲೆ ಹತ್ತಿ, ಬಟ್ಟೆ ಹೊತ್ತು ತಿರುಗಾಡಿ ಹಾಸಿಗೆ ರಿಪೇರಿ ಎಂದು ಕೂಗುತ್ತಾ ಹೊರಟ ಪಿಂಜಾರರನ್ನು ಒಂದಿಷ್ಟು ಪ್ರೀತಿಯಿಂದ ಕರೆದು ಮಾತನಾಡಿಸಿದರೆ ಅವರ ಕಾಯಕ ಕಷ್ಟದ ಕತೆಯನ್ನು ಕೇಳಬಹುದು, ಕಣ್ಣೀರು ಮಿಡಿಯಬಹುದು.

## ೩.೨ ಪಿಂಜಾರರ ಮನೆಗಳ ರಚನೆ, ಸ್ವರೂಪ:

ಪಿಂಜಾರರ ಕಸುಬು ಮತ್ತು ಆ ಮೂಲದ ಆದಾಯವನ್ನವಲಂಬಿಸಿಯೇ ಅವರ ಮನೆಗಳ ರಚನೆಯಿರುತ್ತದೆಂದು ಅವರ ಮನೆಗಳನ್ನು ನೋಡಿದ ತಕ್ಷಣ ಹೇಳಿಬಿಡಬಹುದು. ಪಿಂಜಾರರಲ್ಲಿ ಅನೇಕರು ತಮ್ಮ ಸಾಂಪ್ರದಾಯಿಕ ವೃತ್ತಿಯಲ್ಲೇ ಮುಂದುವರಿದವರ ಮನೆಗಳು ಅವರ ಅಲೆಮಾರಿ ಸ್ವರೂಪವನ್ನು ಪ್ರತಿನಿಧಿಸುತ್ತವೆ. ಪಿಂಜಾರರಲ್ಲಿ ಸಾಮಾಜಿಕ, ರಾಜಕೀಯ ಸ್ಥಿತ್ಯಂತರಗಳ ಹಿನ್ನೆಲೆಯಲ್ಲಿ ಬೇರೆ ಬೇರೆ ವೃತ್ತಿಯನ್ನು ಅವಲಂಬಿಸಿರುವವರಿಗೂ ತಮ್ಮ ಪಾರಂಪಾರಿಕ ಕಸುಬನ್ನೇ ಜೀವನಾಧಾರವಾಗಿಟ್ಟುಕೊಂಡವರಿಗೂ ವಿಚಿತ್ರವಾದ ಅಂತರಗಳಿವೆ. ಈ ಹಿನ್ನೆಲೆಯಲ್ಲಿ ಅವರ ಮನೆಗಳ ರಚನೆ, ಸ್ವರೂಪವನ್ನು ನೋಡಬಹುದಾಗಿದೆ.

ಮೊದಲಿಗೆ ಸಾಂಪ್ರದಾಯಿಕವಾದ ವೃತ್ತಿಯಲ್ಲಿ ಮುಂದುವರಿದವರು ಪಿಂಜಾರರಲ್ಲಿ ಬಹುಸಂಖ್ಯೆಯಲ್ಲಿದ್ದಾರೆ. ಇವರ ಬದುಕು ಅಪ್ಪಟ ಅಲೆಮಾರಿ ಸ್ವರೂಪದ್ದು. ಇವರ ತಿರುಗಾಟಕ್ಕೆ ಹಳ್ಳಿ, ನಗರ ಯಾವುದೇ ಆಗಲಿ ನೆಲೆಯಿಲ್ಲ. ಅಲ್ಲದೆ ಸೀಸನ್‌ಗೆ ಸಂಬಂಧಿಸಿದಂತೆ ಇವರು ಪ್ರದೇಶಗಳನ್ನು ಆಯ್ದುಕೊಳ್ಳುತ್ತಾರೆ. ಕೆಲವರು ಹೆಂಡತಿ, ಮಕ್ಕಳು, ಪಾತ್ರೆ-ಪಡಗ, ಬಟ್ಟೆ-ಬರೆ ಸಮೇತ ಊರೂರು ಅಲೆದು ಆದಾಯ ಸಿಗುವವರೆಗೆ ಒಂದು ಊರಲ್ಲಿ ಹತ್ತಾರು ದಿನಗಳಿದ್ದು ಸಂಸಾರ ನಿಭಾಯಿಸುತ್ತಾರೆ. ಇಂಥವರಿಗೆ ಊರಿನ ಹೊರಗಿನ ಬೀಳು ಬಿದ್ದ ಹೊಲ, ದೇವಸ್ಥಾನದಕಟ್ಟೆ, ಶಾಲೆಯ ಮೈದಾನ ಹೀಗೆ ಇಂಥವೇ ವಾಸಸ್ಥಾನಗಳು. ಇರುವಷ್ಟು ದಿನ ಡೇರೆ-ಗುಡಾರ ಹಾಕಿಕೊಂಡು ಊರಿನೊಳಗೆ ಬೀದಿ ಬೀದಿ ತಿರುಗಿ ಹಾಸಿಗೆ ರಿಪೇರಿ ಎಂದು ಸಾರುತ್ತಾ ತನ್ನ ಕೈಗಳಿಗೆ ಕೆಲಸ ಕೊಡುವವರಿಗಾಗಿ ಅರಸುತ್ತಾ ಸಾಗುತ್ತಾರೆ. ಇತ್ತ ಗುಡಾರದ ಹೊರಗೆ ಮಕ್ಕಳು ಜಗತ್ತಿನ ಅರಿವಿಲ್ಲದವರ ಹಾಗೆ ಮಣ್ಣುಕಲ್ಲುಗಳ ಸಂಗಡಿಗರಾಗಿ ಸ್ಲೇಟು, ಪುಸ್ತಕ, ಶಾಲೆ, ಮೇಷ್ಟ್ರುಗಳ ಕಾಟವಿಲ್ಲದೆ ಆಡುತ್ತಿದ್ದರೆ ತಾಯಿಯಾದವಳು ತನ್ನ ಗಂಡ ಈ ಹೊತ್ತು ಏನು ತರುತ್ತಾನೋ ಎಂದು ಗದ್ದಕ್ಕೆ ಕೈಕೊಟ್ಟುಕೊಂಡು ನಿರೀಕ್ಷೆಯಲ್ಲಿರುತ್ತಾಳೆ. ಇಂಥವರಿಗೆ ಮನೆ ಎಂದರೆ ನಾಲ್ಕು ಉದ್ದವಾದ ಮೊಳೆಗಳು ಮತ್ತು ನಾಲ್ಕು ಮೂಲೆಗೂ ಹಗ್ಗ ಕಟ್ಟಿರುವ ಗುಡಾರ. ಇನ್ನೂ ಅವರ ಬಟ್ಟೆ ಬರೆಗೊಂದು ಹಳೆಯ ಟ್ರಂಕು, ಒಂದೆರಡು ಗೋಣಿಚೀಲ ಇವರ ಆಸ್ತಿ. ಇವರು ತಮ್ಮ ಕಾಯುಕಕ್ಕೆ ಬಳಸುವ ಕಮಾನು (ಬೆಸ್ಕಿ), ಕೊಡತಿ, ಸಂಸ್ಕರಿಸಿದ ಹತ್ತಿ, ಹಾಸಿಗೆಯ ಬಟ್ಟೆ ಇವೇ ಅವರ ಒಡವೆಗಳು.

ಈ ಬಗೆಯ ಪಿಂಜಾರರು ಬದಲಾದ ಸಾಮಾಜಿಕ ಪರಿಸ್ಥಿತಿಯಲ್ಲಿ ಸಾಂಪ್ರದಾಯಿಕ ಕಸುಬನ್ನು ನಿರ್ವಹಿಸಲು ಸಾಧ್ಯವಾಗದೆ ಆರ್ಥಿಕವಾಗಿ ತೀವ್ರವಾಗಿ ಹಿಂದುಳಿದಿದ್ದಾರೆ. ಈಗಂತೂ ಭಾರತ

ತೇಜೋಮಯವಾಗಿ ಪ್ರಕಾಶಿಸುತ್ತಾ ಮುನ್ನಡೆಯುತ್ತಿದೆ ಎಂಬ ಘೋಷಣೆಗಳು ಮುಗಿಲು ಮುಟ್ಟುತ್ತಿರುವಾಗ ತಮ್ಮ ಯಾವ ತಪ್ಪಿಗಾಗಿ ಪಿಂಜಾರರು ಆರ್ಥಿಕ-ಸಾಮಾಜಿಕ ಹಿನ್ನಡೆ ಅನುಭವಿಸುತ್ತಿದ್ದಾರೆ ? ಎಂದು ಯೋಚಿಸುವುದು ಮುಖ್ಯವಾಗಿದೆ. ಒಂದು ಕಡೆ ಅಲ್ಪಸಂಖ್ಯಾತರನ್ನು ಓಲೈಸಲಾಗುತ್ತಿದೆ ಎಂಬಂಥ ಹೇಳಿಕೆಗಳು ಬಹುಸಂಖ್ಯಾತರಲ್ಲಿ ಮುಸ್ಲಿಮರ ಬಗೆಗಿನ ಅಸಹನೆಯನ್ನುಂಟು ಮಾಡುತ್ತಿದ್ದರೆ ಯಾವುದೇ ಓಲೈಸುವಿಕೆಯಿಂದ ಹೊರತಾಗಿರುವ ಪಿಂಜಾರರ ಪಾಡನ್ನು ಕೇಳುವವರಿಲ್ಲದೆ ಸಾಮಾಜಿಕವಾಗಿ ಅನಾಥ ಭಾವನೆಯನ್ನು ಹೊಂದಿದ್ದಾರೆ. ಇನ್ನೊಂದು ಕಡೆ ತಮ್ಮ ಸಾಂಪ್ರದಾಯಿಕ ವೃತ್ತಿಯನ್ನು ಬಿಡಲಾಗದೆ ಆಧುನಿಕತೆಯ ಸವಾಲನ್ನು ಎದುರಿಸಲಾಗದೆ ಆ ವೃತ್ತಿಯಿಂದ ವಂಶಪಾರಂಪರ್ಯವಾಗಿ ಬರುವ ಅಸ್ತಮಾ, ಕ್ಷಯದಂತಹ ರೋಗಗಳಿಗೆ ಪಿಂಜಾರರು ಬಲಿಯಾಗುತ್ತಿದ್ದಾರೆ. ಈ ಕಾಲದ ಪ್ರಾಥಮಿಕ ಅಗತ್ಯಗಳಾದ ಅನ್ನ, ಅಕ್ಷರ, ಆರೋಗ್ಯದಂತಹ ಮೂಲಭೂತ ಸೌಕರ್ಯಗಳಿಂದ ಪಿಂಜಾರರು ಯಾವಾಗಲೂ ದೂರವಾಗಿದ್ದಾರೆ. ಜೀವ ಸಮುದಾಯಪರವಾದ ಕಾಳಜಿಯಿರುವ ಪ್ರಾಮಾಣಿಕ ರಾಜಕೀಯ ವ್ಯವಸ್ಥೆಯಿಂದ ಮಾತ್ರ ಈ ಬಗೆಯ ಜನಾಂಗಗಳು ತಮ್ಮ ಬದುಕಿನಲ್ಲಿ ಹೊಸಬೆಳಕನ್ನು ಕಾಣವುದು ಸಾಧ್ಯ.

ಎರಡನೆಯ ರೀತಿಯ ಪಿಂಜಾರರು ಸಾಂಪ್ರದಾಯಿಕ ವೃತ್ತಿಯ ಜೊತೆಗೆ ಸಣ್ಣ-ಪುಟ್ಟ ಉಪಕಸುಬುಗಳನ್ನು ನಿರ್ವಹಿಸುತ್ತಾರೆ. ಈ ಬಗೆಯ ಜನರು ತಮ್ಮ ಸಾಂಪ್ರದಾಯಿಕ ವೃತ್ತಿಯಿಂದ ಜೀವನ ನಿರ್ವಹಣೆಗೆ ಸಾಕಾಗುವಷ್ಟು ಆದಾಯ ಸಾಧ್ಯವಿಲ್ಲ ಎಂಬ ಅರಿವಿನಿಂದ ಹೊಟ್ಟೆ ಹೊರೆಯುವ ಸಲುವಾಗಿ ಯಾವುದೇ ಕೆಲಸವನ್ನು ಮಾಡುವ ಉತ್ಸಾಹ ತೋರುವವರಾಗಿದ್ದಾರೆ. ಇಂಥವರು ಸಾಮಾನ್ಯವಾಗಿ ಅಲೆಮಾರಿಗಳಾಗಿರುವುದಿಲ್ಲ. ಹೀಗೆ ಇತರೆ ಕೆಲಸಗಳನ್ನು ಮಾಡುವ ಪಿಂಜಾರರನ್ನು ಕುರಿತು ಅಧ್ಯಯನವೊಂದು ಹೀಗೆ ಹೇಳುತ್ತದೆ. ಇತ್ತೀಚೆಗೆ ಆಧುನಿಕ ಯಂತ್ರಗಳು ಬಂದಂತೆ ಪಿಂಜಾರ ಜನಾಂಗದ ಎಲ್ಲ ಜನರು ಗಾದಿ ಹಾಕುವ ಕಾಯಕದಲ್ಲಿ ನಿರತರಾಗಿಲ್ಲ. ಕೆಲವರು ಮನೆ ಕಟ್ಟುವ ಗಾರೆ ಕೆಲಸ ನಿರ್ವಹಿಸಿದರೆ ಮತ್ತೆ ಕೆಲವರು ತಾಮ್ರ, ಸಿಲ್ವರ್, ಕಬ್ಬಿಣ, ಹಿತ್ತಾಳೆ, ಕೊಡಪಾನ, ಡಬರಿಗಳಿಗೆ ಬಣ್ಣಹಾಕಿ ಹೊಸರೂಪ ಕೊಡುವಲ್ಲಿ ನಿರತರಾಗಿದ್ದಾರೆ. ಇನ್ನೂ ಕೆಲವರು ಬುಟ್ಟಿಹೊತ್ತು ತರಕಾರಿ ಮಾರುತ್ತಿದ್ದಾರೆ.

'ಸೈಕಲ್ ತುಳಿದು ಗೋಣಿ ಚೀಲ ತುಂಬುತ್ತಾರೆ. ಮೋಡ್ಕ ವ್ಯಾಪಾರವನ್ನು ಮಾಡುತ್ತಿದ್ದಾರೆ. ಹಾಗೆಯೇ ಅರ, ಗರಗಸ, ಉಳಿ, ಸುತ್ತಿಗೆ, ಮೊಳೆ ಬಳಸಿ ಎತ್ತಿನ ಕೊಂಬು ಎರೆದು ಕೋಡು ಹಣಸು ಹಾಕಿ ಶೃಂಗಾರಗೊಳಿಸುತ್ತಾರೆ. ಎಲೆಯ ಸುತ್ತಿ ತಂಬಾಕು ತುಂಬಿ ಬೀಡಿಕಟ್ಟುತ್ತಾರೆ. ಪಟ್ಟಣದಂತಹ ಪ್ರದೇಶಗಳಲ್ಲಿ ಮಂಡಾಳಭಟ್ಟಿ ಹಾಕಿ ಮಂಡಕ್ಕಿ ಹುರಿಯುತ್ತಾರೆ. ಇವು ಯಾವುದನ್ನೂ ಬೇಡವಾದವರು ಕೃಷಿ ಮಾರುಕಟ್ಟೆ, ಬಸ್‌ನಿಲ್ದಾಣ ಹಾಗೂ ಇನ್ನಿತರ ಸ್ಥಳಗಳಲ್ಲಿ ಹಮಾಲಿ ಕೆಲಸ ಮಾಡುತ್ತಾರೆ.'

ಹೀಗೆ ನಾನಾ ವೃತ್ತಿಗಳಲ್ಲಿ ಚದುರಿಹೋಗಿರುವ ಪಿಂಜಾರರು ಹಳ್ಳಿ ಹಾಗೂ ನಗರಗಳಲ್ಲಿ ಕಾಣಸಿಗುತ್ತಾರೆ. ಹಳ್ಳಿಗಳಲ್ಲಿನ ಪಿಂಜಾರರು ತೆಂಗಿನ ಗರಿಗಳಿಂದ ತಯಾರಿಸಿದ ನೆರಿಕೆಯಿಂದ ಮನೆ ಮಾಡಿಕೊಂಡಿರುತ್ತಾರೆ. ಸುತ್ತಲೂ ನಾಲ್ಕು ಕಡೆ ತೆಂಗಿನ ಗರಿಗಳನ್ನು ಒತ್ತೊತ್ತಾಗಿ ನೆಟ್ಟು ನಡುಭಾಗವನ್ನು ಎತ್ತರಿಸಿ ಉದ್ದಕ್ಕೂ ಒಂದು ಮರದ ದಿಂಡನ್ನು ಹೊಂದಿಸಿರುತ್ತಾರೆ. ಆ ಮರದ ದಿಂಡಿನಿಂದ ಉಳಿದ ಎರಡೂ

ಕಡೆ ಇಳಿಜಾರಾಗುವಂತೆ, ಮಳೆ ನೀರು ಸರಾಗವಾಗಿ ಬೀಳುವಂತೆ ಬಿದಿರುಗಳ ಅಥವಾ ದಬ್ಬೆಯನ್ನು ಕತ್ತದಿಂದ ಕಟ್ಟುತ್ತಾರೆ. ಅದರ ಮೇಲೆ ಆಪು ಅಥವಾ ಜೊಂಡನ್ನು ಸಮನಾಗಿ ಹಾಸಿ ಅದು ಜಾರದಂತೆ, ಗಾಳಿಗೆ ಹಾರದಂತೆ ಅಲ್ಲೊಂದು ಇಲ್ಲೊಂದರಂತೆ ದಪ್ಪ ಕಲ್ಲುಗಳನ್ನು ಇಟ್ಟಿರುತ್ತಾರೆ. ಮನೆಯ ಮೇಲೆ ಎತ್ತರದಲ್ಲಿ ಜೋಡಿಸಿರುವ ಮರದ ದಿಂಡು ಅಥವಾ ತೊಲೆ ಇರುವ ಜಾಗವನ್ನು 'ಬೆಂಗ್ಟಿ' ಎನ್ನುತ್ತಾರೆ. ಗುಡಿಸಿಲಿನ ಒಳಭಾಗದಲ್ಲಿ ನಟ್ಟನಡುವೆ ಬೆಂಗ್ಟಿಯನ್ನು ಆತುಕೊಂಡಿರುವ ಹಾಗೆ ನೆಲದಲ್ಲೊಂದು ಕಂಬವನ್ನು ನೆಟ್ಟಿರುತ್ತಾರೆ. ಈ ಕಂಬವೇ ಮನೆಯ ಭಾರವನ್ನು ಹೊತ್ತುಕೊಂಡಿರುತ್ತದೆ. ಮತ್ತು ಒಳಭಾಗವನ್ನು ಇಲ್ಲಿಂದಲೇ ಅಡಿಗೆ ಮನೆ ಮತ್ತು ಹಜಾರವನ್ನು ಬೇರ್ಪಡಿಸುವಂತೆ ಎರಡೂ ತುದಿಯಿಂದ ನೆರಕೆ ಕಟ್ಟಿಕೊಂಡು ಓಡಾಡುವುದಕ್ಕೆ ಸ್ವಲ್ಪ ಜಾಗ ಬಿಟ್ಟಿರುತ್ತಾರೆ. ಈ ನಡುಗಂಬದಿಂದ ಪ್ರತ್ಯೇಕವಾಗಿ ಕಾಣುವ ಅಡಿಗೆ ಕೋಣೆಯಲ್ಲಿ ಮಡಕೆ, ಪಾತ್ರೆ ಒಂದು ಮೂಲೆಯಲ್ಲಿ ಕುಳ್ಳನ್ನು ಒಟ್ಟಲಾಗಿರುತ್ತದೆ. ನೆರಕೆಯನ್ನು ಬಿಟ್ಟು ಸ್ವಲ್ಪ ದೂರದಲ್ಲಿ ಒಲೆಯಿರುತ್ತದೆ. ರಾತ್ರಿ ಅಲ್ಲೂ ಮಲಗುತ್ತಾರೆ. ಪಿಂಜಾರರ ಬದುಕಿಗೆ ಅವಶ್ಯಕವಾಗಿರುವ ಉಪಕರಣಗಳನ್ನು ಅಡ್ಡಾದಿಡ್ಡಿ ಒಗೆದಿರುತ್ತಾರೆ. ಅಡಿಗೆ ಕೋಣೆಯಲ್ಲಿ ಪಿಂಜಾರರ ಸಂಪತ್ತು ಎನ್ನಬಹುದಾದ ಒಂದಿಷ್ಟು ಕಾಳು-ಕಡಿ ಮತ್ತು ಬಟ್ಟೆ-ಬರೆ, ದುಪ್ಪಡಿಗಳಿರುತ್ತವೆ. ಹೊರಹಜಾರದಲ್ಲಿ ಈಚಲು ಅಥವಾ ಕಡ್ಡಿ ಚಾಪೆಗಳಿರುತ್ತವೆ. ದುರಂತವೆಂದರೆ ಹಾಸಿಗೆ, ತಲೆದಿಂಬು ತಯಾರಿಸುವ ಜನರಿಗೆ ಅವು ಇಲ್ಲದಿರುವುದು. ಅನೇಕ ಪಿಂಜಾರ ಹೆಣ್ಣು ಮಕ್ಕಳು, ಎಲ್ಲ ಹಳ್ಳಿಯ ಬಡ ಹೆಣ್ಣುಮಕ್ಕಳಂತೆ ಮೈತೊಳೆದುಕೊಳ್ಳುವುದಕ್ಕಾಗಿ ಪಡುವ ಕಷ್ಟ ವಿಪರೀತ. ಗುಡಿಸಲಿನ ನೆರಕೆಗೇ ಹೊಂದಿಕೊಂಡಂತೆ ಹಳೆಯ ಸೀರೆಯನ್ನೋ, ದುಪ್ಪಡಿಯನ್ನೋ ಮರೆಯಾಗಿ ಕಟ್ಟಿಕೊಂಡು ಮೈ ತೊಳೆಯುತ್ತಾರೆ. ಅದೂ ಸಂಜೆಗತ್ತಲು ಮೂಡಿದ ನಂತರವೇ ಹೆಣ್ಣು ಮಕ್ಕಳು ಎರಡಕ್ಕೆ ಹೋಗುವುದೂ ಸಾಯಂಕಾಲದ ಹೊತ್ತಿನಲ್ಲೇ ತಿಪ್ಪೆಯ ಗುಂಡಿಯನ್ನೋ, ಗಿಡಮರಗಳ ಮರೆಯನ್ನೋ ಹುಡುಕಿಕೊಂಡು ಹೋಗಿ ನಿತ್ಯಕರ್ಮವನ್ನು ಸಾಯಂಕಾಲ ಇಲ್ಲವೇ ಬೆಳಕು ಹರಿಯುವ ಮುನ್ನ ಮುಗಿಸಿಕೊಳ್ಳುತ್ತಾರೆ. ಗಂಡಸರಿಗೆ ಸ್ನಾನಕ್ಕಾಗಲೀ, ಎರಡಕ್ಕಾಗಲೀ ಈ ತೊಂದರೆಯಿಲ್ಲ. ಹತ್ತಿರದ ಬಾವಿಯಲ್ಲೋ, ಹಳ್ಳದಲ್ಲೋ ಮುಳುಗಿ ಬರುತ್ತಾರೆ. ಯಾವ ಹೊತ್ತಾದರೇನು ಚಂಬು ಹಿಡಿದುಕೊಂಡು ಎರಡಕ್ಕೆ ಕುಂತು ತೊಳೆದುಕೊಂಡು ಬರುತ್ತಾರೆ. ಕುತೂಹಲದ ಸಂಗತಿಯೆಂದರೆ ಪಿಂಜಾರರು, ಗಂಡಾಗಲಿ, ಹೆಣ್ಣಾಗಲೀ ಒಂದಕ್ಕೆ ಹೋದಾಗ ಮುಸ್ಲಿಮರಂತೆ ಜನನಾಂಗಕ್ಕೆ ಇಟ್ಟಿಗೆ ಮುಟ್ಟಿಸಿಕೊಳ್ಳುವುದಾಗಲೀ, ತೊಳೆದುಕೊಳ್ಳುವುದಾಗಲೀ ಮಾಡುವುದಿಲ್ಲ. ಇನ್ನೂ ವಿಶೇಷವೆಂದರೆ ಸೋಮವಾರ ಪಿಂಜಾರರನೇಕರು ಮೈ ತೊಳೆದುಕೊಂಡು ದನಕರುಗಳಿಗೂ ಮೈತೊಳೆದು ಎತ್ತುಗಳನ್ನು ಹೂಡದೇ ಇರುವುದು. ಹೀಗೆ ಪ್ರತೀ ಸೋಮವಾರ ನಡೆದುಕೊಳ್ಳುವ ರೂಢಿ ಈ ಕಡೆಯ ಲಿಂಗಾಯ್ತರಲ್ಲಿರುವ ಪದ್ಧತಿಯಿಂದ ಬಂದದ್ದು ಮತ್ತು ವ್ಯವಸಾಯವನ್ನು ನಂಬಿದ ಜನರ ಸಾಮಾನ್ಯ ಆಚರಣೆ ಪ್ರತೀ ಸೋಮವಾರ ಬೇಸಾಯ ಹೂಡದೇ ಬಸವಣ್ಣನಿಗೆ ವಿಶ್ರಾಂತಿ ಕೊಡುವುದು.

ಒಂದೇ ಬಾಗಿಲಿರುವ ಗುಡಿಸಲಿನ ಮುಂದೆ ಅಗಲವಾದ, ಚಪ್ಪಟೆಯಾದ ಪಾತ್ರೆ, ಪಡಗಗಳನ್ನು ತೊಳೆಯುಲು ಅನುಕೂಲವಾಗುವಂತಹ ಕಲ್ಲನ್ನು ಹಾಕಿಕೊಂಡಿರುತ್ತಾರೆ. ಬಾವಿಗೋ ಹಳ್ಳಕ್ಕೋ

ಹೋಗಲಾಗದೆ ಇದ್ದಾಗ ಗಂಡಸರು ಸ್ನಾನ ಮಾಡುವುದು ಈ ಕಲ್ಲಿನ ಮೇಲೆಯೇ. ತಣ್ಣೀರಿನಲ್ಲಿ ಮೈ ತೊಳೆದುಕೊಳ್ಳುವುದೇ ಹೆಚ್ಚು. ಗರ್ಭಿಣಿ ಮತ್ತು ಮಕ್ಕಳನ್ನು ಬಿಸಿ ನೀರಿನಲ್ಲಿ ಸ್ನಾನ ಮಾಡಿಸುತ್ತಾರೆ. ಸ್ನಾನ ಮಾಡುವಾಗ ಮೈ ಉಜ್ಜಿಕೊಳ್ಳಲು ಸ್ವಲ್ಪ ನುಣುಪಾದ ಬೆಣಚುಕಲ್ಲನ್ನು ಉಪಯೋಗಿಸುತ್ತಾರೆ. ತಲೆ, ಮೈಯಿಗೆ ಬಟ್ಟೆಯ ಸೋಪನ್ನೇ ಅನೇಕರು ಬಳಸುತ್ತಾರೆ. ಬಾಗಿಲನ್ನು ಕೂಡ ತೆಂಗಿನ ಗರಿಯಲ್ಲೇ ಮಾಡಿ ಹೋಗುವಾಗ, ಬರುವಾಗ ಎತ್ತಿ ಇಡುವಂತೆ, ನೆರಕೆಗೆ ಕಟ್ಟುವ ವ್ಯವಸ್ಥೆ ಮಾಡಿರುತ್ತಾರೆ. ಮತ್ತೆ ಕೆಲವರು ಈಚಲ ತಡಿಯನ್ನೇ ಬಾಗಿಲನ್ನಾಗಿ ಮಾಡಿಕೊಂಡಿರುತ್ತಾರೆ. ಇನ್ನೂ ಕೆಲವರು ತಗಡಿನ ಕದವನ್ನು ಮಾಡಿಕೊಂಡಿದ್ದಾರೆ. ಇಂತಹ ಗುಡಿಸಲುಗಳಿರುವವರು ಸಾಮಾನ್ಯವಾಗಿ ದನಕರುಗಳನ್ನು ಸಾಕಿಕೊಳ್ಳುವಷ್ಟು ಸ್ಥಿತಿವಂತರಿರುವುದಿಲ್ಲ. ಕೋಳಿಗಳನ್ನು ಸಾಕಿರುತ್ತಾರೆ, ಸಂಜೆ ಕೋಳಿಗಳನ್ನು ಹಜಾರದ ಒಂದು ಮೂಲೆಯಲ್ಲಿ ಹುಲ್ಲನ್ನೋ, ತೌಡನ್ನೋ ಹಾಕಿ ಪುಟ್ಟಿಯೊಂದರಿಂದ ಮುಚ್ಚುತ್ತಾರೆ. ಕಸ ಗುಡಿಸಲು ಈಚಲಿನ ಕಸಮರಿಕೆಯನ್ನು ಬಳಸುತ್ತಾರೆ.

ಈ ಗುಂಪಿನ ಪಿಂಜಾರರು ವಿವಿಧ ಕೆಲಸಗಳನ್ನೂ ಮಾಡುವುದರಿಂದ ದಿನನಿತ್ಯದ ಬದುಕನ್ನು ನಿಭಾಯಿಸುವುದಕ್ಕೆ ಅಗತ್ಯವಾದ ಆದಾಯವನ್ನು ಸಂಪಾದಿಸುತ್ತಾರೆ. ಇಂಥವರಲ್ಲಿ ಕೆಲವರು ಮಕ್ಕಳನ್ನು ಶಾಲೆಗೆ ಕಳಿಸುವುದೂ ಇದೆ. ತಮ್ಮ ಪಾಡು ತಮ್ಮ ಮಕ್ಕಳಿಗೆ ಆಗಬಾರದು ಎಂಬುದು ಇದರ ಹಿಂದಿನ ಆಶಯವಾಗಿದೆ. ನಗರಗಳಲ್ಲಿದ್ದುಕೊಂಡು ಬೇರೆ ಬೇರೆ ಕೆಲಸಗಳಲ್ಲಿ ತೊಡಗಿಕೊಂಡಿರುವ ಪಿಂಜಾರರು ಬಹುಪಾಲು ಕೊಳಗೇರಿಗಳಲ್ಲೇ ವಾಸವಾಗಿದ್ದಾರೆ. ಇಂಥ ಕಡೆ ಜೀವನೋಪಾಯಕ್ಕೆ ಯಾವ ಕೆಲಸವನ್ನಾದರೂ ಮಾಡಲೇಬೇಕಾದ ಅನಿವಾರ್ಯತೆ ಅವರಿಗಿರುತ್ತದೆ. ನಗರವೆಂದರೆ ನಾಗರಿಕ ಸೌಲಭ್ಯಗಳು ಇರುತ್ತವೆಂದು ತಿಳಿದುಬರುವ ಪಿಂಜಾರರು ತಾವು ವಾಸಿಸುವ ಕೊಳಗೇರಿಗಳು ಹಳ್ಳಿಯ ಬದುಕಿಗಿಂತ ದುಸ್ತರವಾಗಿರುವುದನ್ನು ಕಂಡು ಪರಿತಪಿಸುತ್ತಾರೆ. ನೀರು, ವಿದ್ಯುತ್, ಸಾರಿಗೆ ಸೌಕರ್ಯ, ಶಾಲೆ, ಮಾರುಕಟ್ಟೆ ಇತ್ಯಾದಿ ಯಾವುದೂ ಕೊಳಗೇರಿಗಳಿಗೆ ಸಲೀಸಾಗಿ ಸಿಗುವುದಿಲ್ಲ. ಬಾಡಿಗೆ ಮನೆಗಳು, ಇಕ್ಕಟ್ಟಾದ ಮನೆಗಳು, ಮನೆಗಳ ಮುಂದೆಯೇ ನಿಂತ ಕೊಳೆನೀರಿನ ಚರಂಡಿ - ಇದೆಲ್ಲಾ ನೋಡಿದರೆ ಹಳ್ಳಿಗಳ ವಿಶಾಲ ಬಯಲಿನಲ್ಲಿ ಗುಡಾರ ಹೊಡೆದುಕೊಂಡು ಬದುಕುವ ಪಿಂಜಾರರ ಬದುಕೇ ಉತ್ತಮ ಎನಿಸಿಬಿಡುತ್ತದೆ. ತಮ್ಮ ಆದಾಯಕ್ಕೆ ತಕ್ಕಂತೆ ತಾರಸಿ ಮನೆಗಳು ಸಿಗುವುದು ನಗರದಲ್ಲಿ ಕಷ್ಟವಾದ್ದರಿಂದ ತಗಡು (ಶೀಟ್) ಹಾಕಿದ ಮನೆಗಳೇ ಅವರ ಪಾಲಿನ ಅರಮನೆಗಳು.

ಇನ್ನು ಪಿಂಜಾರರಲ್ಲಿ ಮೇಲಿನ ರೀತಿಗಿಂತ ಭಿನ್ನವಾದ ಗುಂಪೊಂದಿದೆ. ಅದೆಂದರೆ ತಮ್ಮನ್ನು ತಾವು ಪೂರ್ಣಪ್ರಮಾಣದಲ್ಲಿ ಕೃಷಿ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿರುವುದು. ಇವರಲ್ಲಿ ಕೂಡ ಭೂರಹಿತರು ಮತ್ತು ಭೂ ಹಿಡುವಳಿದಾರರು ಎಂದು ಗುರುತಿಸಬಹುದು. ಇವರು ಹಳ್ಳಿಯ ವಾಸಿಗರು. ಉತ್ತರ ಕರ್ನಾಟಕದ ಬಹುಪಾಲು ಹಳ್ಳಿಗಳ ಬೆದ್ದಲು ವ್ಯವಸಾಯದ ಕೆಲಸಗಳಲ್ಲಿ ಪಿಂಜಾರರು ನಿರತರಾಗಿದ್ದಾರೆ. ತಮ್ಮದೇ ಸ್ವಂತ ಜಮೀನು ಇಲ್ಲದವರು ಇತರ ಜಾತಿಯ, ಉದಾ: ಲಿಂಗಾಯ್ತರು, ಜಮೀನುದಾರರ ಮನೆ ಹೊಲಗಳಲ್ಲಿ ಕೆಲಸ ಮಾಡುವುದಕ್ಕೆ ನಿಯೋಜಿತರಾಗಿರುತ್ತಾರೆ. ಮಕ್ಕಳು ಜಾಸ್ತಿಯಿದ್ದು, ಜೀವನ ನಿರ್ವಹಣೆ ಕಷ್ಟವಾಗಿದ್ದರೆ ಅಂತಹವರು ಮಕ್ಕಳನ್ನು ಉಳ್ಳವರ ಮನೆಯಲ್ಲಿ

ದನಕಾಯಲು ಸಂಬಳ ಇಡುತ್ತಾರೆ. ಬಡ ಪಿಂಜಾರರೇ ಜಾಸ್ತಿಯಿರುವ ಭೂರಹಿತರಲ್ಲಿ ಇನ್ನೂ ಜೀತಪದ್ಧತಿ ಗಾಢವಾಗಿದೆ. ಹಾಗೆ ಜೀತಕ್ಕೆ ಇದ್ದ ಹುಡುಗನ ಪೂರ್ತಿ ಬದುಕು ಆತನ ಧಣಿಯ ಸೇವೆಗೇ ಮೀಸಲು. ಧಣಿ ಒಳ್ಳೆಯವನಾದರೆ ತನ್ನ ಜೀತದಾಳಿಗೆ ಬಟ್ಟೆ ಬರೆ ಕೊಡುವುದು, ಮದುವೆ ಮಾಡುವುದು, ಆತನಿಗೇ ಒಂದು ಮನೆ ಕಟ್ಟಿಸಿಕೊಡುವುದು ಮೊದಲಾದ ಸಹಾಯವನ್ನು ಮಾಡುವುದೂ ಇದೆ. ಇನ್ನೂ ಕೆಲವು ಪಿಂಜಾರರು ಹೀಗೆ ಸಂಬಳ ಇರುವುದಿಲ್ಲ. ಆದರೆ ಖಾಯಂ ಆಗಿ ಒಬ್ಬ ಸಾಹುಕಾರನ ಮನೆ-ಹೊಲಗಳ ಕೆಲಸಕ್ಕಾಗಿಯೇ ಹೋಗುತ್ತಾರೆ. ಅಂದರೆ ಬೇರೆ ಯಾರು ಕರೆದರೂ ಹೋಗುವುದಿಲ್ಲ. ಸಾಹುಕಾರನ ಹೊಲ-ಮನೆಯಲ್ಲಿ ಕೆಲಸವಿರಲಿ, ಬಿಡಲಿ, ಆತನ ನಿಷ್ಠೆ ಅವನಿಗೇ ಮೀಸಲು. ಸಾಹುಕಾರನಿಂದ ತನ್ನ ಮನೆಯಲ್ಲಾಗುವ ಹಬ್ಬ, ಮದುವೆ, ಆಸ್ಪತ್ರೆಯ ಖರ್ಚು ಹೀಗೆ ಸಂದರ್ಭ ಯಾವುದೇ ಇರಲಿ, ಸಹಾಯದ ರೂಪದಲ್ಲಿ ಹಣ ಪಡೆಯುತ್ತಾರೆ. ಇದಕ್ಕೆ ಬಡ್ಡಿಯಿಲ್ಲ, ಆದರೆ ಕೆಲವೊಮ್ಮೆ ಸಾಹುಕಾರ ಏನೂ ಕೊಡದಿದ್ದರೂ ಆತ ದಾಕ್ಷಿಣ್ಯಕ್ಕಾಗಿ ಕೆಲಸ ಮಾಡಬೇಕಾಗಿ ಬರುತ್ತದೆ.

ಭೂರಹಿತ ಪಿಂಜಾರರಲ್ಲಿ ಇನ್ನೂ ಕೆಲವರು ಯಾರದೋ ಮನೆಯಲ್ಲಿ ಜೀತಕ್ಕಿರುವ, ಯಾವುದೋ ಸಾಹುಕಾರನ ನಿಷ್ಠೆಗಾಗಿ ದುಡಿಯುವುದಕ್ಕಿಂತ ಭಿನ್ನವಾಗಿ ಇರುವವರೂ ಇದ್ದಾರೆ. ಇವರ ರೀತಿ ಎಂದರೆ ಕೂಲಿ-ನಾಲಿ ಮಾಡುವುದು, ಇವರು ಯಾರು ಕರೆಯುತ್ತಾರೋ ಅವರ ಕೆಲಸಕ್ಕೆ ಹೋಗುತ್ತಾರೆ. ಕೂಲಿಗೆ ತಕ್ಕ ದುಡಿಮೆ ಇವರ ನೀತಿ. ಹೀಗೆ ಕೂಲಿಯಿಂದಲೇ ಬಂದ ಆದಾಯದಲ್ಲಿ ಸ್ವಲ್ಪ ಉಳಿಸಿಯೋ ಏನೋ ಕೆಲವರು ಎತ್ತುಗಳನ್ನು ಖರೀದಿಸುತ್ತಾರೆ. ಆರಂಭದಲ್ಲಿ ಯಾರದೋ ಕುಂಟೆ, ನೇಗಿಲು, ನೊಗ ಮೊದಲಾದ ವ್ಯವಸಾಯದ ಮುಟ್ಟುಗಳನ್ನು ಪಡೆದುಕೊಂಡು ಕೂಲಿಬೇಸಾಯ ಮಾಡುತ್ತಾರೆ. ನಿಧಾನವಾಗಿ ತಮಗೆ ಜಮೀನು ಇಲ್ಲದಿದ್ದರೂ ವ್ಯವಸಾಯಕ್ಕೆ ಅಗತ್ಯವಾದ ಎಲ್ಲ ಉಪಕರಣಗಳನ್ನು ಮಾಡಿಸಿಟ್ಟುಕೊಳ್ಳುತ್ತಾರೆ. ಬರೀ ಮನುಷ್ಯ ಕೂಲಿ ಹೋಗುವುದಕ್ಕಿಂತ ಕೂಲಿಬೇಸಾಯಕ್ಕೆ ಹೋದರೆ ಉತ್ತಮ ಕೂಲಿ ಸಿಗುವುದು ಇದಕ್ಕೆ ಕಾರಣವಾಗಿದೆ. ಇಂತಹವರ ಮನೆಗಳ ರಚನೆ ಮತ್ತು ಸ್ವರೂಪ ಹಿಂದೆ ಹೇಳಿದುದಕ್ಕಿಂತ ಉತ್ತಮ ಎನ್ನಬಹುದಾದ ರೀತಿಯಲ್ಲಿರುತ್ತದೆ.

ಕೆಲವರ ಮನೆಗಳು ಕೆಸರುಂಡೆ ಮಾಡಿ ಅದನ್ನು ದಪ್ಪನಾಗಿ ಜೋಡಿಸಿದ ಗೋಡೆಗಳಿಂದ ಮಾಡಿದ್ದುದ್ದಾಗಿರುತ್ತವೆ. ಗುಡಿಸಲುಗಳನ್ನು ಈ ರೀತಿಯ ಗೋಡೆಕಟ್ಟಿ ನಡುಭಾಗವನ್ನು ಎತ್ತರಿಸಿ ಬೆಂಗ್ಟಿ ಕಟ್ಟಿ ಗಳು ಮತ್ತು ದಬ್ಬೆ ಬಿಗಿದು ಕರಿ ಹೆಂಚನ್ನು ಹೊದಿಸಲಾಗಿರುವಂತಹ ಮನೆಗಳಲ್ಲಿ ಪಿಂಜಾರರು ಹೆಚ್ಚು ವಾಸಿಸುತ್ತಾರೆ. ಈ ಮನೆಗಳಲ್ಲಿ ಕೂಡ ವಿಶೇಷವಾದ ಕೊಠಡಿಯ ವ್ಯವಸ್ಥೆಯಿರುವುದಿಲ್ಲ. ಅಡಿಗೆ ಕೋಣೆ ಸಾಮಾನ್ಯವಾಗಿ ಪಿಂಜಾರರ ಸಂಪತ್ತನ್ನು ಕೂಡಿಟ್ಟಿರುವ ಜಾಗ. ಇಂಥ ಮನೆಯಲ್ಲಿ ಒಂದು ಹಳೆಯ ಟ್ರಂಕು ಇದ್ದೇ ಇರುತ್ತದೆ. ಅದರಲ್ಲಿ ಹಬ್ಬದಲ್ಲಿ ಉಡಬಹುದಾದ ಸೀರೆ, ಬೆಂಡೋಲೆ, ಜುಮುಕಿ, ತರಹದ ಒಡವೆಗಳನ್ನು ಇಟ್ಟು ಬೀಗ ಹಾಕಲಾಗಿರುತ್ತದೆ. ಇಂತಹ ಮನೆಗಳಲ್ಲಿರುವ ಹೊರ ಹಜಾರದಲ್ಲಿ ತೊಲೆಯಿಂದ ತೊಲೆಗೆ ಗಳು ಅಥವಾ ಹಲಗೆ ಜೋಡಿಸಿ ಅಟ್ಟ ಮಾಡಿರುತ್ತಾರೆ. ಅಟ್ಟದಲ್ಲಿ ವ್ಯವಸಾಯದ ಮುಟ್ಟುಗಳನ್ನೇ ಸಾಮಾನ್ಯವಾಗಿ ಇಟ್ಟಿರುತ್ತಾರೆ. ಚಲ್ಕೆ, ಗುದ್ದಲಿ, ಹಾರೆಕೋಲು, ಕುಡ, ತಾಳು, ಸಡ್ಡೆ, ಎಡೆಕುಂಟೆ ನೊಗ, ಮಿಣಿ ಹೀಗೆ ಏನು ಬೇಕೆಂದರೂ ಅಟ್ಟದಲ್ಲಿ ಹುಡುಕಬೇಕು. ಹಜಾರದ ಮತ್ತೊಂದು

ಗೋಡೆಯ ಕಡೆಗೆ ಒಳಕಲ್ಲು ಇರುತ್ತದೆ. ಅದರ ಸಮೀಪದಲ್ಲೇ ತುಂಬಾರೆ ಮತ್ತು ಒನಕೆಗಳನ್ನು ಮೂಲೆಗೊರಗಿಸಿ ನಿಲ್ಲಿಸುತ್ತಾರೆ. ಅಡಿಗೆ ಕೋಣೆಯಲ್ಲಿ ಜೋಳ ತುಂಬಿದ ಗೂಡೆಯಿರುತ್ತದೆ. ಮನೆಯ ಹೊರಭಾಗದಲ್ಲಿ ಕಟ್ಟೆ ಕಟ್ಟಿ ಅದರ ಕೊನೆಯಲ್ಲಿ ಇಂಡಿ ಆರಿಯುವ ದುಂಡಿಯನ್ನು ಇಟ್ಟಿರುತ್ತಾರೆ. ಇಂತಹ ದುಂಡಿ ಅನೇಕ ಮನೆಗಳಿಗೆ ಒಂದೇ ಇದ್ದು, ಅಗತ್ಯವಾದಾಗ ಬಂದು ಬೇರೆಯುವವರು ಇಂಡಿ ಆರೆದೊಯ್ಯುತ್ತಾರೆ. ಇಂಥ ಮನೆಗಳಲ್ಲಿ ಬಚ್ಚಲಿನ ಸ್ಥಿತಿ ಹೆಚ್ಚು ಕಡಿಮೆ ಹಿಂದೆ ಹೇಳಿದಂಥದ್ದೇ. ಕೆಲವರು ಮನೆಯ ಹೊರಗೆ ನಾಲ್ಕು ಮೋಟಗೋಡೆಗಳನ್ನು ಕಟ್ಟಿರುತ್ತಾರೆ. ಮೇಲ್ಭಾಗದಿಂದ ಏನನ್ನೂ ಮುಚ್ಚಿರುವುದಿಲ್ಲ. ಈ ಮನೆಗಳಿಗೆ ಕೂಡ ಒಂದೇ ಬಾಗಿಲು. ಅದು ಬೇವಿನದೋ, ಹುಣಸೆಯದೋ ಮರದಿಂದ ಮಾಡಿಸಿದ ಒಂಟಿ ಕದದಿಂದ ಕೂಡಿರುತ್ತದೆ. ಯಾವ ಚಿತ್ತಾರಗಳೂ ಇರದ ಕದ ಬಾಗಿಲಿಗೆ ಸುಣ್ಣ ಮತ್ತು ಕೆಮ್ಮಣ್ಣನ್ನು ಬಳಿದಿರುತ್ತಾರೆ. ಕದದ ಒಳ ಭಾಗದಲ್ಲಿ ಅಗುಣಿ ಹಾಕುವ ವ್ಯವಸ್ಥೆಯಿರುತ್ತದೆ. ಹೊರಭಾಗದಲ್ಲಿ ಚಿಲಕವಿದ್ದು ಬೀಗ ಹಾಕುವಂತೆ ಮಾಡಿರುತ್ತಾರೆ. ಮನೆಯ ತೊಲೆ ಕಂಬಗಳಿಗೆ ಕೆಮ್ಮಣ್ಣು ಬಳಿದಿರುತ್ತಾರೆ. ಹಬ್ಬ ಮದುವೆ ಮುಂತಾದ ದಿನಗಳಲ್ಲಿ ಇಡೀ ಮನೆಯನ್ನು ಸುಣ್ಣ, ಕೆಮ್ಮಣ್ಣಿನಿಂದ ಬಳಿದು, ನೆಲವನ್ನು ಸಗಣಿಯಿಂದ ಸಾರಿಸುತ್ತಾರೆ. ಹೊಸಲಿನ ನಡುಭಾಗದಲ್ಲಿ ಐದು ಅಥವಾ ಹತ್ತು ಪೈಸೆಯ ನಾಣ್ಯವನ್ನು ಮೊಳೆಯಿಂದ ಬಡಿದಿರುತ್ತಾರೆ. ಒಂದೆರಡು ದನಕರುಗಳಿದ್ದವರು ಹಜಾರದ ಒಂದು ಕಡೆಯಲ್ಲಿ ಗೂಟ ನೆಟ್ಟು ಅಡ್ಡಗೋಡೆಯಾಗಿ ಕಲ್ಲುನೆಟ್ಟು ದನಗಳನ್ನು ಕಟ್ಟಿ ಹುಲ್ಲು ಹಾಕುತ್ತಾರೆ. ಕುಂಟೆ, ನೇಗಿಲು (ರಂಟೆ) ಮುಂತಾದವುಗಳನ್ನು ಮನೆಯಿಂದ ಹೊರಗೆ, ಆದರೆ ಗೋಡೆಗೊರಗಿರುವಂತೆ ಇಟ್ಟಿರುತ್ತಾರೆ.

ಮತ್ತೆ ಕೆಲವರು ಜಮೀನು ಹೊಂದಿದವರಾಗಿದ್ದಾರೆ.ಇಡೀ ಉತ್ತರ ಕರ್ನಾಟಕದ ಜಿಲ್ಲೆಗಳಲ್ಲಿ ಮಳೆ ಆಧಾರಿತ ಬೆಳೆಗಳನ್ನೇ ಹೆಚ್ಚಾಗಿ ಬೆಳೆಯುತ್ತಾರೆ. ಅಲ್ಲಿ ನೀರಾವರಿಯ ಸಾಕಷ್ಟು ಸೌಲಭ್ಯಗಳಿಲ್ಲದಿರುವುದು ಆ ಭಾಗ ಹಿಂದುಳಿದಿರುವಿಕೆಗೆ ಕಾರಣ. ಸ್ವಂತ ಭೂಮಿ ಹೊಂದಿರುವ ಪಿಂಜಾರರು ಕೃಷಿ ಚಟುವಟಿಕೆಗಳಲ್ಲಿ ಸದಾ ನಿರತರಾಗಿರುತ್ತಾರೆ. ಉತ್ತರ ಕರ್ನಾಟಕದ ಮುಖ್ಯ ಬೆಳೆಗಳಾದ ಜೋಳ, ಹತ್ತಿ, ಸೂರ್ಯಕಾಂತಿ, ಈರುಳ್ಳಿ, ಮೆಣಸಿನಕಾಯಿ ಮೊದಲಾದ ಬೆಳೆಗಳನ್ನು ಇವರೂ ಬೆಳೆಯುತ್ತಾರೆ. ಸ್ವಂತ ಜಮೀನು, ಮನೆ, ದನಕರುಗಳನ್ನು ಹೊಂದಿರುವ ಈ ಪಿಂಜಾರರು ತುಂಬ ಕಡಿಮೆ ಪ್ರಮಾಣದಲ್ಲಿದ್ದಾರೆ. ಇಂಥವರಲ್ಲಿ ಕೆಲವರು ಜನರಿಗೆ ಮತ್ತು ದನಗಳಿಗೆ ಪ್ರತ್ಯೇಕ ಮನೆಗಳನ್ನು ಹೊಂದಿದವರೂ ಇದ್ದಾರೆ. ಮತ್ತೆ ಕೆಲವರು ತಾವು ವಾಸಿಸುವ ಮನೆಯ ಒಂದು ಭಾವನ್ನೇ ದನದ ಕೊಟ್ಟಿಗೆಯನ್ನಾಗಿ ಮಾಡಿಕೊಂಡಿರುತ್ತಾರೆ. ದನಗಳಿಗೆ ಪ್ರತ್ಯೇಕ ಮನೆ ಕಟ್ಟಿಕೊಂಡಿರುವವರು ವ್ಯವಸಾಯದ ಸಲುವಾಗಿ ಎತ್ತುಗಳನ್ನು, ಕರಾವಿನ ಸಲುವಾಗಿ ಹಸು ಅಥವಾ ಎಮ್ಮೆಗಳನ್ನು ಸಾಕಿಕೊಂಡಿರುತ್ತಾರೆ. ದನಗಳಿಗಾಗಿ ಪ್ರತ್ಯೇಕವಾಗಿರುವ ಮನೆಗಳು ಸಾಮಾನ್ಯವಾಗಿ ಕೆಸರುಂಡೆಯ ಗೋಡೆಗಳಿಂದ ಕೂಡಿದ್ದು ಮೇಲ್ಛಾವಣಿಯನ್ನು ಆಪಿನಿಂದ ಮುಚ್ಚಲಾಗಿರುತ್ತದೆ. ದನದ ಮನೆಯ ನೆಲಕ್ಕೆ ಹಾಸುಗಲ್ಲನ್ನು ಹೊಂದಿಸಿರುತ್ತಾರೆ. ಒಂದು ಗೋಡೆಯ ಉದ್ದಕ್ಕೂ ಹಾಸುಗಲ್ಲನ್ನು ಅಡ್ಡಲಾಗಿ ನೆಟ್ಟು ದನಗಳಿಗೆ ಹುಲ್ಲು ಹಾಕುವುದಕ್ಕೆ ಗ್ವಾನ್ನೆ ತಯಾರಿಸಿರುತ್ತಾರೆ. ಸಾಮಾನ್ಯವಾಗಿ ಹೊರಗೂ ಇಂತಹ ಗ್ವಾನ್ನೆ ಇರುತ್ತದೆ. ಒಳಗಡೆ ಇರುವ, ಅಂದರೆ ಹಕ್ಕೆಯಲ್ಲಿರುವ ಗೂಟಗಳಲ್ಲಿ ಕಣ್ಣಿ ಇರುತ್ತದೆ.

ಹೊರಗಡೆ ದನಗಳನ್ನು ಕಟ್ಟುವಾಗ ಬೇರೆಯದೇ ಆದ ಹಗ್ಗವಿರುತ್ತದೆ. ದನದ ಮನೆಯಲ್ಲೇ ಒಂದು ಭಾಗದಲ್ಲಿ ಮಣ್ಣು ಹಾಕಿ ಎತ್ತರಿಸಿ ಅಲ್ಲಿ ಗಂಡಸೊಬ್ಬನು ಮಲಗಿಕೊಳ್ಳುವ ವ್ಯವಸ್ಥೆ ಮಾಡಿರುತ್ತಾರೆ. ಇದರ ಇನ್ನೊಂದು ಬದಿಯಲ್ಲಿ ರಾತ್ರಿಗೆ ಸಾಕಾಗುವಷ್ಟು ಸೊಪ್ಪೆ ಅಥವಾ ಮೇವು ಇರುತ್ತದೆ. ರಾತ್ರಿ ದನಕರುಗಳ ಗ್ವಾತ ಒಂದೆಡೆ ಸಂಗ್ರಹವಾಗುವಂತೆ ಗುಂಡಿ ಮಾಡಿ ಚಪ್ಪಟೆ ಕಲ್ಲೊಂದನ್ನು ಮುಚ್ಚಿರುತ್ತಾರೆ. ದನದ ಮನೆಯಲ್ಲಿ ಲಾಟೀನು ಇರುತ್ತದೆ. ನಾಯಿಯನ್ನು ಅಗತ್ಯವಾಗಿ ಸಾಕಿರುವ ಪಿಂಜಾರರು ರಾತ್ರಿ ಹೊತ್ತು ದನದ ಮನೆಯಲ್ಲಿ ಅದೂ ಇರುವಂತೆ ನೋಡಿಕೊಳ್ಳುತ್ತಾರೆ. ತಂಗಳು ಮುದ್ದೆ ಅಥವಾ ರೊಟ್ಟಿ ನಾಯಿಯ ಆಹಾರ. ದನದ ಕೊಟ್ಟಿಗೆಯಲ್ಲೇ ಜೊತೆಯಲ್ಲಿ ನಿರ್ದಿಷ್ಟ ಅಂತರದಲ್ಲಿ ಗೂಟ ಹೊಡೆದು ನೊಗವನ್ನು ಅಡ್ಡಲಾಗಿಟ್ಟಿರುತ್ತಾರೆ. ಆ ಗೂಟಗಳಿಗೆ ನೊಗಸುತ್ತು, ಪಟಗಣ್ಣಿ, ಬಾರುಕೋಲುಗಳನ್ನು ನೇತು ಹಾಕಿರುತ್ತಾರೆ. ಬಂಡಿ (ಗಾಡಿ, ಚಕ್ಕಡಿ ಅಂತಲೂ ಕರೆಯುತ್ತಾರೆ)ಯ ಹಲಗೆ, ಕಣಿಗೆ ಮತ್ತು ತಡಿಕೆಗಳೂ ಕೊಟ್ಟಿಗೆಯಲ್ಲಿರುತ್ತವೆ. ಎಡೆಕುಂಟೆ, ದೊಡ್ಡಕುಂಟೆ, ಮುರೆಕುಂಟೆ, ನೇಗಿಲಬಾಳು, ಕೂರಿಗೆ, ಸಗಣಿಪುಟ್ಟಿ, ಬರಲು ಮುಂತಾದವೆಲ್ಲಾ ಹಕ್ಕೆಯಲ್ಲಿರುತ್ತವೆ. ರಾತ್ರಿ ಹಕ್ಕೆಯಲ್ಲಿ ಆ ಎತ್ತರ ಭಾಗದಲ್ಲಿ ಮಲಗಿರುವವನೇ ಬೆಳಿಗ್ಗೆ ದನಕರುಗಳನ್ನು ಹೊರಗೆ ಕಟ್ಟುವ, ಸಗಣಿ ಹೊಡೆದು ತಿಪ್ಪೆಗೆ ಹಾಕುವ, ಕೋಳಿ ಬಿಡುವ ಕೆಲಸಗಳನ್ನು ಮಾಡುತ್ತಾನೆ.

ಜನರ ವಾಸಕ್ಕಾಗಿ ಕಟ್ಟಲಾಗಿರುವ ಮನೆಗಳಲ್ಲಿ ಸಾಮಾನ್ಯವಾಗಿ ಅಡಿಗೆ ಕೋಣೆಯ ಹೊರತಾಗಿ ವಿಶೇಷ ವಿಭಾಗಗಳಿರುವುದಿಲ್ಲ. ಈ ಮನೆಗಳೂ ಕೆಸರುಂಡೆಯ ಗೋಡೆಗಳಿಂದ ಕೂಡಿದ್ದು, ಇಡೀ ಮನೆಯ ಯಾವ ಗೋಡೆಗೂ ಕಿಟಕಿಗಳಿರುವುದಿಲ್ಲ. ಇಂಥ ಗೋಡೆಗಳಿಗೆ ಉದ್ದನೆಯ ತೊಲೆಯನ್ನು ಹಾಸಿ ಅದರ ಎರಡೂ ಕಡೆಯ ಹಾರುಗಳಿಗೆ ಬಿದಿರುಗಳಗಳನ್ನು ಬೀಸಿ ಅವುಗಳಿಗೆ ಅಡ್ಡಲಾಗಿ ಬಿದಿರುದಬ್ಬೆಯನ್ನು ಬಿಗಿದು ಕಪ್ಪುಹೆಂಚುಗಳನ್ನು ಹೊದಿಸಲಾಗಿರುತ್ತದೆ. ಉತ್ತರ ಕರ್ನಾಟಕದ ಅನೇಕ ಊರುಗಳಲ್ಲಿ ಸಾಮಾನ್ಯವಾಗಿರುವ ಮಾಳಿಗೆ ಮನೆಯನ್ನು ಕೆಲವು ಪಿಂಜಾರರು ಹೊಂದಿದ್ದಾರೆ. ಬೇಸಿಗೆಯಲ್ಲಿ ಇಂಥ ಮನೆಗಳಲ್ಲಿ ಮಲಗುವುದು ಕಷ್ಟ. ಆದ್ದರಿಂದ ಗಂಡಸರು ಹೆಂಗಸರು ಮಕ್ಕಳಾದಿಯಾಗಿ ಬೇಸಿಗೆಯಲ್ಲಿ ಮನೆಯಂಗಳಕ್ಕೆ ಚಾಪೆ ಹಾಸಿಬಿಡುತ್ತಾರೆ. ಮಾಳಿಗೆ ಮನೆ ಹಾಗೂ ಹೆಂಚಿನ ಮನೆ ಯಾವುದೇ ಆಗಿರಲಿ ಪಿಂಜಾರರ ಮನೆಗಳಲ್ಲಿ ಅಟ್ಟವಿರುವುದಿಲ್ಲ. ಸಂಸಾರ ನಿರ್ವಹಣೆಯ ಕಾಳು-ಕಡೆ, ಬಟ್ಟೆ-ಬರೆ ಮೊದಲಾದವುಗಳಿಗೆ ಮನೆಯ ಒಂದು ಮೂಲೆಯೇ ಆಶಯವಾಗಿರುತ್ತದೆ. ಹಾಸಿಗೆ ತಯಾರಿಸುವವರಾದರೂ ಇವರ ಮನೆಗಳಲ್ಲಿ ಹಾಸಿಗೆಗಳಿರುವುದಿಲ್ಲ. ಈಚಲು ಚಾಪೆ ಮತ್ತು ಗೋಣಿಚೀಲಗಳನ್ನು ಇವರು ಹಾಸಿಕೊಳ್ಳುತ್ತಾರೆ. ಅಡಿಗೆ ಮನೆ, ಹಜಾರ ಇವೆರಡೇ ಪಿಂಜಾರರ ಮನೆಯ ವಿಭಾಗಗಳು. ಅಡಿಗೆ ಮನೆಯಲ್ಲಿ ಒಲೆ, ಒಲೆಯ ಒಂದು ಮೂಲೆಯಲ್ಲಿ ಸೌದೆ, ಇನ್ನೊಂದು ಮೂಲೆಯಲ್ಲಿ ಕಾಳು ಕಡೆ ತುಂಬಿರುವ ಮಡಕೆಗಳ ಅಡಕಲು. ಪಿಂಜಾರರು ಉರುವಲನ್ನಾಗಿ ಬಳಸುವುದು ಸಾಮಾನ್ಯವಾಗಿ ಹೊಲ, ಬೀಳುಗಳಲ್ಲಿ ಬೆಳೆದ ಜೀಕುಜಾಲಿಯ ಮುಳ್ಳಿನ ಕಟ್ಟಿಗೆ ದನಕರುಗಳಿರುವವರು ಬೆರಣಿಯನ್ನು ಬಳಸುತ್ತಾರೆ. ಬಡಗಿತನ ಮಾಡುವವರು ಆ ದುಡಿಮೆಯಿಂದ ಬಂದ ಚಕ್ಕೆಗಳನ್ನೇ ಬಳಸುತ್ತಾರೆ. ಕೆಲವು ಕಡೆ ತೆಂಗಿನ ಗರಿ, ಮುಟ್ಟೆ, ಸೊಪ್ಪೆದಂಟು, ಭತ್ತದ ಹುಲ್ಲನ್ನು ಉರುವಲನ್ನಾಗಿ ಬಳಸುವ ಪಿಂಜಾರರಿದ್ದಾರೆ.

ಬಹುಪಾಲು ಪಿಂಜಾರರ ಮನೆಗಳಿಗೆ ಹಿತ್ತಲು ಬಾಗಿಲುಗಳೇ ಇರುವುದಿಲ್ಲ. ಮುಂದಿನ ಮುಖ್ಯ ಬಾಗಿಲಿನ ಮೂಲಕವೇ ಅವರ ಎಲ್ಲ ಚಟುವಟಿಕೆಗಳು ನಡೆಯುತ್ತವೆ. ಮನೆಯ ಮುಖ್ಯ ಬಾಗಿಲಿನ ಹೊರಗೆ ಒಂದು ಪಕ್ಕಕ್ಕೆ ಬಚ್ಚಲು ಇರುತ್ತದೆ. ಈ ಬಚ್ಚಲಿಗೆ ಬಾಗಿಲಿರುವುದಿಲ್ಲ. ಮರೆಗೆ ಎಂಬಂತೆ ಆಳುದ್ದದ ಮೂರು ಗೋಡೆಗಳನ್ನು ಕಟ್ಟಿರುತ್ತಾರೆ. ಅವುಗಳಿಗೆ ಮೇಲ್ಛಾವಣಿ ಕೂಡ ಇರುವುದಿಲ್ಲ. ಪಾತ್ರೆ ಪಡಗ ತೊಳೆಯುವುದಕ್ಕೆಂದು ಅಂಗಳದಲ್ಲಿ ಹಾಸುಗಲ್ಲೊಂದನ್ನು ಹಾಕಿಕೊಂಡಿರುತ್ತಾರೆ. ಗಂಡಸರ ಸ್ನಾನ ಇಲ್ಲೇ ನಡೆಯುತ್ತದೆ. ಹೆಂಗಸರು ಸ್ನಾನ ಮಾಡುವಾಗ ಬಚ್ಚಲಿನ ಪ್ರವೇಶದ ಜಾಗಕ್ಕೆ ಸೀರೆಯೊಂದನ್ನು ಇಳಿಬಿಟ್ಟುಕೊಂಡಿರುತ್ತಾರೆ. ಒಳಗೆ ಹೊರಗೆ ಓಡಾಡಲು ಒಂದೇ ಬಾಗಿಲು ಇರುವುದರಿಂದ ಹಜಾರದಲ್ಲಿ ಮಲಗಿದವರನ್ನು ಎಚ್ಚರಿಸದೇ ಇತರ ಕೆಲಸಗಳನ್ನು ಮಾಡುವಂತಿಲ್ಲ. ಬೀಗರು, ಬಿಜ್ಜರು ಬಂದು ಮನೆ ತುಂಬಿದಾಗ ಅನಿವಾರ್ಯವಾಗಿ ಮನೆಯ ಹೊರಭಾಗದ ಕಟ್ಟೆ, ಅಂಗಳದಲ್ಲಿ ಮಲಗುತ್ತಾರೆ. ನೇರವಾಗಿ ಬೆಂಗ್ಬಿಗೆ ಅಥವಾ ತೊಲೆಗೆ ಹಗ್ಗಕಟ್ಟಿ ಆ ಹಗ್ಗಕ್ಕೆ ದಪ್ಪನೆಯ ಬಟ್ಟೆ, ಅಂದರೆ ಎರಡು ಮೂರು ಹಳೆಯ ಸೀರೆ ಅಥವಾ ಪಂಚೆ, ಕೆಲವೊಮ್ಮೆ ದುಪ್ಪಡಿಯನ್ನು ಕಟ್ಟಿ ತೊಟ್ಟಿಲು / ಜೋಲಿ ಮಾಡಿ, ಅದರಲ್ಲಿ ಮಗುವನ್ನು ಮಲಗಿಸಿ ತೂಗುತ್ತಾರೆ. ಬಾಣಂತನಕ್ಕೆ ವಿಶೇಷ ಕೊಠಡಿಗಳಿರುವುದಿಲ್ಲ. ಎರಡು ಗೋಡೆಯ ನಡುವೆ ಹಗ್ಗ ಕಟ್ಟಿ ಅದಕ್ಕೆ ಸೀರೆಯನ್ನು ಅಡ್ಡಲಾಗಿ ಇಳಿಬಿಟ್ಟುಕೊಂಡು ಮರೆಮಾಡಿಕೊಳ್ಳುತ್ತಾರೆ. ಪಿಂಜಾರರು ತಮ್ಮ ಮನೆಬಾಗಿಲು, ಕದಗಳಿಗೆ ಬಳಸುವುದು ಸಾಮಾನ್ಯವಾಗಿ ಸ್ಥಳೀಯವಾಗಿ ಸಿಗುವ ಜಾಲಿ, ಬೇವು, ಹಲಸು ಮುಂತಾದ ಮರಗಳನ್ನೇ. ಪಿಂಜಾರರ ಮನೆಯ ಕದ, ಬಾಗಿಲುಗಳಿಗೆ ಕಲಾತ್ಮಕ ಚಿತ್ತಾರಗಳಿರುವುದು ಕಂಡು ಬರುವುದಿಲ್ಲ.

ಕೊನೆಯದಾಗಿ ನಗರವಾಸಿ ಪಿಂಜಾರರು ಅದರಲ್ಲೂ ಆರ್ಥಿಕವಾಗಿ ಉತ್ತಮವಾಗಿರುವವರು ತಾರಸಿ ಮನೆಗಳನ್ನು ಕಟ್ಟಿಕೊಂಡವರು ಕೆಲವರಿದ್ದಾರೆ. ಈ ಗುಂಪಿನವರು ಸರ್ಕಾರಿ ನೌಕರರು, ರಾಜಕಾರಣಿಗಳು, ವ್ಯಾಪಾರಸ್ಥರು, ಪರಂಪರಾಗತ ಶ್ರೀಮಂತಿಕೆಯಿದ್ದವರು ಸೇರಿದ್ದಾರೆ. ಇವರೆಲ್ಲ ಕೇವಲ ಬೆರಳೆಣಿಕೆಯಷ್ಟು ದೊಡ್ಡ ನಗರ, ಅಂದರೆ ಜಿಲ್ಲಾ / ತಾಲ್ಲೂಕು ಕೇಂದ್ರಗಳಲ್ಲಿ ವ್ಯವಸ್ಥಿತವಾದ ಬಂಗಲೆಗಳನ್ನು ಕಟ್ಟಿಕೊಂಡವರಿದ್ದಾರೆ. ಇಂಥವರು ಸಾಮಾನ್ಯವಾಗಿ ಎಲ್ಲ ಜಾತಿಗಳಲ್ಲಿರುವಂತೆ ಸ್ವಜಾತಿಯವರನ್ನು ಕಡೆಗಣಿಸುವವರೇ. ಆದರೆ ಪಿಂಜಾರರ ಒಟ್ಟು ಅಭಿವೃದ್ಧಿಯನ್ನು ಕನಸುತ್ತ ಅದಕ್ಕಾಗಿ ತಮ್ಮ ಆದಾಯದ ಬಹುಪಾಲನ್ನು ವ್ಯಯಿಸುತ್ತಾ ಸಂಘ ಕಟ್ಟಿ ಸಮಾವೇಶ ನಡೆಸಿ ಸರ್ಕಾರದ ಮಟ್ಟದಲ್ಲಿ ಪಿಂಜಾರರಿಗೆ ಅನುಕೂಲ ಕಲ್ಪಿಸಲು ಪ್ರಯತ್ನಿಸುತ್ತಿರುವ ನಿರಪೇಕ್ಷ ವ್ಯಕ್ತಿತ್ವದ ಜನಾಬ್ ಹಿರೇಹಾಳ್ ಇಬ್ರಾಹಿಂ ಸಾಹೇಬರಂತಹವರೂ ಇದ್ದಾರೆ.

## ೩.೩ *ನ್ಯಾಯ ಪದ್ಧತಿ*

ಪಿಂಜಾರರಲ್ಲಿ ಮುಖ್ಯವಾಗಿ ಎರಡು ವಿಚಾರಗಳಲ್ಲಿ ಸಮಸ್ಯೆಗಳು ತಲೆದೋರುತ್ತವೆ. ಬಹುಶಃ ಇಡೀ ಮಾನವ ಕುಲವೇ ಇಂಥ ಸಮಸ್ಯೆಗಳನ್ನು ಸದಾ ಕಾಲ ಎದುರಿಸುತ್ತಿರುತ್ತದೆ. ಮನುಷ್ಯನಿಗೆ ಆಸ್ತಿಯ ಪರಿಕಲ್ಪನೆ ಬಂದದ್ದೇ ಬೆಂಕಿಯ ಆವಿಷ್ಕಾರದಿಂದ ಮತ್ತು ಆಹಾರವನ್ನು ಬೇಯಿಸಿ ತಿನ್ನುವುದನ್ನು ಆತ

ಕಂಡುಕೊಂಡಾಗಿನಿಂದ. ಇದರ ಜೊತೆಗೆ ತಾನು, ತನ್ನವರು ಎಂಬ ಮಮಕಾರವೂ ಸೇರಿಕೊಂಡು ತನ್ನವರಿಗಾಗಿ ಆಸ್ತಿಯನ್ನು ಸಂಪಾದಿಸುವ ಆಸೆ ಹುಟ್ಟಿಕೊಂಡಿತು. ಸಂಪಾದಿಸಬೇಕೆಂಬ ಆಸೆಯಿಂದ ದುರಾಸೆ ಹುಟ್ಟುತ್ತದೆ. ಸಂಪಾದನೆಯ ಆಸೆ ತೀವ್ರವಾದಾಗ ಕೂಡಿಟ್ಟುಕೊಳ್ಳುವ ಮೋಹ ಗಟ್ಟಿಯಾದಾಗ ದುರಾಸೆ ಹೆಚ್ಚುತ್ತದೆ. ಮಿತಿ ಮೀರಿದ ಆಸೆಯ ಪರಿಣಾಮವಾಗಿ ದುರಾಸೆ ಅಥವಾ ಸಂಗ್ರಹ ಬುದ್ಧಿಗೆ ಕಾವಲು ಮತ್ತು ರಕ್ಷಣೆ ಬೇಕಾಗುತ್ತದೆ. ದುರಾಸೆಯಿಂದ ಅನೇಕ ಕೆಟ್ಟ ಹಾಗೂ ದುಷ್ಟ ಸ್ಥಿತಿಗಳು ಉಂಟಾಗುತ್ತವೆ. ಇವುಗಳ ಪರಿಣಾಮವೇ ಸಮುದಾಯಗಳ ವಿಸಂಘಟನೆ, ಸಮುದಾಯಗಳ ನಡುವೆ ಹಿಂಸೆ, ಕುಟುಂಬಗಳಲ್ಲಿ ಒಡಕು, ಅಪನಂಬಿಕೆ, ಉಳ್ಳವರಿಗೆ ಅಹಂಕಾರ, ಇಲ್ಲದವನ ದೈನೇಸಿ ಸ್ಥಿತಿ ಮೊದಲಾದುವು. ಇವು ಹೆಚ್ಚಾದಂತೆ ನ್ಯಾಯದ ಪರಿಕಲ್ಪನೆ ಬಂದದ್ದು ತಡವಾಗಿ. ಅಧರ್ಮದಿಂದ ನಡೆದುಕೊಳ್ಳುವವರಿಗೆ ಹೇಗೆ ಧರ್ಮ ಬೇಕೋ ಹಾಗೆ ಅನ್ಯಾಯ ನಡೆಯುವ ಕಡೆಯೆಲ್ಲಾ ನ್ಯಾಯ ಮಾತಾಡಬೇಕಾಗುತ್ತದೆ. ಇದು ಕ್ರಮೇಣ ವ್ಯವಸ್ಥೆಯ ಒಂದು ಭಾಗವಾಗಿ ಬಿಟ್ಟಿದೆ. ವಾಸ್ತವವಾಗಿ ನ್ಯಾಯ ಎನ್ನುವುದು ಮನುಷ್ಯನ ಆತ್ಮಸಂಸ್ಕಾರಕ್ಕೆ ಸಂಬಂಧಪಟ್ಟದ್ದು. ಇದರ ಅರಿವಿಲ್ಲದವನ ದೆಸೆಯಿಂದ ಅದು ಒಂದು ಬಗೆಯ ರಾಜಕೀಯ ಸಾಮಾಜಿಕ ಹಾಗೂ ಧಾರ್ಮಿಕ ಸ್ವರೂಪವನ್ನು ಪಡೆದುಬಿಟ್ಟಿದೆ.

ಪಿಂಜಾರರಲ್ಲಿ ಮುಖ್ಯವಾಗಿ ಗಂಡು-ಹೆಣ್ಣಿನ ವಿಚಾರದಲ್ಲಿ ಸಮಸ್ಯೆಗಳು ಕಂಡುಬರುತ್ತವೆ. ಹೆಣ್ಣು ಎಲ್ಲ ಜಾತಿ, ಧರ್ಮದವರಿಗೂ ಅನುಭೋಗದ ವಸ್ತು ಎಂಬಂತೆಯೇ ನಡೆಸಿಕೊಂಡು ಬರಲಾಗುತ್ತಿದೆ. ಗಂಡು-ಹೆಣ್ಣಿನ ನಡುವಿನ ಪ್ರೀತಿ ಅನೇಕ ಸಲ ಅನೈತಿಕ ಎನ್ನಬಹುದಾದ ಸಂದರ್ಭ ಬಂದಾಗ ಇದು ಮತ್ತಷ್ಟು ಸ್ಫುಟವಾಗುತ್ತದೆ. ಪಿಂಜಾರರಲ್ಲಿ ಏಕಪತ್ನಿ ಪದ್ಧತಿಯು ರೂಢಿಯಲ್ಲಿದೆ. ಇಸ್ಲಾಂನಲ್ಲಿ ಬಹುಪತ್ನಿ ಪದ್ಧತಿ ಇರುವುದಾದರೂ ಪಿಂಜಾರರು ಏಕಪತ್ನಿ ಪದ್ಧತಿಯನ್ನು ಪಾಲಿಸುವುದು ಅವರ ಮೂಲಾಶ್ರಮವನ್ನು ನೆನಪಿಗೆ ತರುತ್ತದೆ. ಹಾಗೆ ನೋಡಿದರೆ ಇಂಡಿಯಾದ ಮುಸ್ಲಿಮರಲ್ಲಿ ಕೂಡ ಬಹುಪತ್ನಿ ಪದ್ಧತಿ ವಿರಳವೇ. ಕೆಲವೊಮ್ಮೆ ಆಕಸ್ಮಿಕವಾಗಿಯೋ, ಉದ್ದೇಶಪೂರ್ವಕವಾಗಿಯೋ ಗಂಡು ಮತ್ತೊಬ್ಬಳನ್ನು ಮದುವೆ ಮಾಡಿಕೊಂಡು ಬಂದನೆಂದರೆ ಆಗ ಶುರುವಾಗುತ್ತದೆ ಕದನ ! ಇಂಥ ಸಂದರ್ಭದಲ್ಲಿ ಮೊದಲ ಹೆಂಡತಿ ಅತ್ತುಕರೆದು ಗೋಳಾಡುವುದು, ಗಂಡನಿಗೆ, ಸವತಿಗೆ ಹಿಡಿಶಾಪ ಹಾಕಿ ಮಣ್ಣು ತೂರುವುದು ನಡೆಯುತ್ತದೆ. ಇನ್ನೂ ಮುಂದುವರೆದು ತನ್ನ ಮಕ್ಕಳು ದೊಡ್ಡವರಿದ್ದರೆ ಮೊದಲ ಹೆಂಡತಿ ಅವರ ಮೂಲಕ ಸವತಿಯನ್ನು ಹೊರಹಾಕಲೂ ಪ್ರಯತ್ನಿಸುತ್ತಾಳೆ. ತನ್ನ ತಂದೆ-ತಾಯಿ, ಅಣ್ಣ-ತಮ್ಮ ಮೊದಲಾದವರನ್ನು ಕರೆಸುತ್ತಾಳೆ. ಅಕ್ಕಪಕ್ಕದವರು ಪಿಂಜಾರರು, ಪಿಂಜಾರರಲ್ಲದವರು ಎಲ್ಲ ಸೇರಿ ಬಾಯಿಗೆ ಬಂದದ್ದು ಮಾತಾಡುತ್ತ ರಾದ್ಧಾಂತ ಸೃಷ್ಟಿಸುತ್ತಾರೆ. ಯಾವುದೂ ಬಗೆಹರಿಯದೇ ಇದ್ದಾಗ ಕೆಲವು ಪಿಂಜಾರ ಮುಖಂಡರು ಎನಿಸಿಕೊಂಡವರು ಇತರ ಜಾತಿಯ ಹಿರಿಯರೂ ಸೇರಿ ಸಮಸ್ಯೆಗೆ ಸಂದರ್ಭೋಚಿತ ಪರಿಹಾರ ನೀಡುತ್ತಾರೆ. ಮೊದಲ ಹೆಂಡತಿ ಬದುಕಿದ್ದೂ ಇನ್ನೊಬ್ಬಳನ್ನು ಮದುವೆಯಾಗಿ ಬಂದ ಗಂಡಸಿಗೆ ಎಲ್ಲ ಸೇರಿ ಛೀಮಾರಿ ಹಾಕುತ್ತಾರೆ. ಗಂಡ ಹೀಗೆ ನಡೆದುಕೊಂಡದ್ದನ್ನು ಹಿರಿಯರಿಗೆ ತಿಳಿಸದೆ ಕುಲಾಚಿತ್ರವಾಗಿ ಬಯ್ದು ರಾದ್ಧಾಂತ ಮಾಡಿರುವುದರಿಂದ ಸುದ್ದಿ ಗುಲ್ಲೋ ಗುಲ್ಲಾಗಿರುವುದರಿಂದ ಹೊಸದಾಗಿ ಬಂದವಳನ್ನು ಹಿಂತಿರುಗಿ ಕಳಿಸಿದರೆ ಆಕೆಯನ್ನು ಯಾರೂ ಮದುವೆಯಾಗದೆ ಅವಳ ಜೀವನ ಹಾಳಾಗುವುದರಿಂದ ಮೊದಲ ಹೆಂಡತಿಗೆ

ಒಂದಿಷ್ಟು ಬುದ್ಧಿವಾದ ಹೇಳಿ 'ನಿನ್ನ ಗಂಡನನ್ನು ನೀನು ಹದ್ದುಬಸ್ತಿನಲ್ಲಿಟ್ಟುಕೊಳ್ಳದೇ ಹೀಗೆ ಹಡದಿಬಿಟ್ಟಿದ್ದಕ್ಕೇ ಹೀಗಾಗಿದೆ, ಹೊಂದಿಕೊಂಡು ಹೋಗು' ಎಂದು ಸುಮ್ಮನಾಗಿಸುತ್ತಾರೆ. ಆದರೆ ಇವರಿಬ್ಬರ ಜಗಳ ನಿಲ್ಲುವುದು ಸಾಧ್ಯವಿಲ್ಲದ ಕಾರಣ ಒಂದೇ ಮನೆಯಲ್ಲಿರತಕ್ಕದ್ದಲ್ಲ ಎಂದು ತೀರ್ಮಾನಿಸಿ ಇಬ್ಬರು ಹೆಂಡಿರ ಶೂರನಿಗೆ ಅವಳಿಗೊಂದು ಮನೆಮಾಡಿಕೊಡಲೂ ಆಜ್ಞಾಪಿಸುತ್ತಾರೆ.

ಈ ತರಹದ ಕೌಟುಂಬಿಕ ಸಮಸ್ಯೆಗಳಾಗಲೀ, ಆಸ್ತಿ ವಿವಾದಗಳಾಗಲೀ ಮುಲ್ಲಾನವರೆಗೂ ಹೋಗುವುದಿಲ್ಲ ಎನ್ನುವುದೇ ಪಿಂಜಾರರ ವೈಶಿಷ್ಟ್ಯ. ಅಂದರೆ ಪಿಂಜಾರರು ಮುಲ್ಲಾನನ್ನು ತಮ್ಮ ಧಾರ್ಮಿಕ ಗುರು ಎಂದು ಒಪ್ಪಿಕೊಂಡಿದ್ದರೂ ಸಾಮಾಜಿಕ ಸಾಂಸಾರಿಕ ವಿಚಾರಗಳ ವಿಷಯದಲ್ಲಿ ಆತನ ಅಭಿಪ್ರಾಯವನ್ನು ಕೇಳಬೇಕೆಂಬ, ಆತನ ಅಭಿಪ್ರಾಯವೇ ಅಂತಿಮವೆಂಬ ಭಾವನೆ ಅವರಲ್ಲಿದ್ದಂತಿಲ್ಲ.

ಮೇಲೆ ತಿಳಿಸಿದ ಗಂಡು-ಹೆಣ್ಣಿನ ಉದಾಹರಣೆಯಲ್ಲಿ ನ್ಯಾಯ ಕೇಳಲು ಯಾರೂ ಹೋಗುವುದಿಲ್ಲ. ಇಲ್ಲಿ ಇನ್ನೊಂದು ಉದಾಹರಣೆಯಿದೆ. ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಈ ಸಮಸ್ಯೆಯನ್ನು ವಿವರಿಸಿದ ಹಿರಿಯರೊಬ್ಬರು ಊರು, ವ್ಯಕ್ತಿಗಳ ಹೆಸರನ್ನು ಗೌಪ್ಯವಾಗಿಡುವ ಭರವಸೆಯನ್ನು ತೆಗೆದುಕೊಂಡರು. ಇದು ಒಂದೇ ಜಾತಿಯ, ಅಂದರೆ ಪಿಂಜಾರರ ಅವಿವಾಹಿತ ಗಂಡು-ಹೆಣ್ಣಿನ ಸಂಬಂಧ. ವಾಸ್ತವವಾಗಿ ಈ ಹುಡುಗ-ಹುಡುಗಿ ಬೀಗರೇ ಆಗಿದ್ದರು. ಅವರು ಹಿರಿಯರ ಹತ್ತಿರ ತಮ್ಮ ಆಸಕ್ತಿಯನ್ನು ತಿಳಿಸಿದ್ದರೆ ಸಾಂಪ್ರದಾಯಿಕವಾಗಿ ಮದುವೆ ನಡೆದೂ ಹೋಗುತ್ತಿತ್ತು. ಆದರೆ ಹಾಗಾಗಲಿಲ್ಲ. ಇಬ್ಬರೂ ಹೊಲದ ಕೆಲಸಗಳಿಗೆ ಕೂಲಿ ಹೋಗುತ್ತಿದ್ದರು. ಪ್ರೇಮವೋ, ಕಾಮವೋ ಈ ಯಾವುದರ ತಿಳುವಳಿಕೆಯಿರಲಿಲ್ಲವೆಂದಲ್ಲ. ಅವರು ಕೂಡಿದರು. ಹುಡುಗಿ ಗರ್ಭಿಣಿಯಾದಳು. ಮನೆಯವರೆಲ್ಲ ಆತಂಕಕ್ಕೀಡಾಗಿ ವಿಚಾರಿಸಿದರು. ಹುಡುಗ ತಮ್ಮವನೇ ಆಗಿರುವುದು, ಅದರಲ್ಲೂ ಬೀಗನೇ ಆಗಿರುವುದು ಅವರಿಗೆ ಸಮಾಧಾನ ತಂದಿತು. ಇರುವ ವಿಷಯವನ್ನು ಹುಡುಗನ ಹಿರಿಯರಿಗೆ ಹೇಳಿ ಮದುವೆ ಮಾಡಿಕೊಳ್ಳಲು ಕೇಳಿಕೊಂಡರು. ಹುಡುಗ ನಿರಾಕರಿಸಿದ. ತನಗೂ ಆಕೆಗೂ ಯಾವುದೇ ಸಂಬಂಧವಿಲ್ಲ ಎಂದು ಹೇಳಿದ್ದಲ್ಲದೆ ಬೇರೆ ಯಾರ್‍ಯಾರದೋ ಹೆಸರು ಹೇಳಿದ. ಹುಡುಗನ ಹಿರಿಯರೂ ಅದನ್ನೇ ಸಮರ್ಥಿಸಿದರು. ಪರಸ್ಪರ ಬಯ್ದಾಟ, ಜಗಳ, ಕೈಕೈ ಮಿಲಾಯಿಸುವ ಹಂತಕ್ಕೆ ಬಂದಾಗ ಸಮಸ್ಯೆ ಮಸೀದಿಗೆ ವರ್ಗಾವಣೆಯಾಗಿ ಬಂತು. ಇಂತಹ ಅನೈತಿಕವಾದುದನ್ನು ಬಗೆಹರಿಸಲು ಮಸೀದಿ ತಕ್ಕ ಸ್ಥಳವಲ್ಲ, ಇಲ್ಲಿಗೆ ತರಬೇಡಿ ಎಂದು ಮುಲ್ಲಾ ನಿಷ್ಠುರವಾಗಿ ಹೇಳಿದ. ಜನ ಕೇಳಲಿಲ್ಲ. ಜನಕ್ಕೆ ದೇವಮಂದಿರದಲ್ಲಿ ಮನುಷ್ಯ ಸುಳ್ಳು ಹೇಳಲಾರ ಎಂಬ ನಂಬಿಕೆ. ಈ ಸಮಸ್ಯೆಗೆ ಸಂಬಂಧಪಟ್ಟವರು, ಸಂಬಂಧವಿಲ್ಲದವರು ಕುತೂಹಲಿಗಳಾಗಿ ಜಮಾಯಿಸಿದರು. ಇತರ ಜನಾಂಗದವರೂ ಈ ಪಿಂಜಾರರ ಅಸಹ್ಯವನ್ನು ನೋಡಿ ಮೂಗು ಮುರಿಯುತ್ತಾ ನಿಂತರು. ಮುಲ್ಲಾನಿಲ್ಲದ ಮಸೀದಿಯಲ್ಲಿ ಹುಡುಗ-ಹುಡುಗಿ ನಿಜ ಹೇಳುವುದರ ಮೂಲಕ ಪ್ರಮಾಣ ಮಾಡಬೇಕೆಂದು ಒತ್ತಾಯ ಬಂತು. ಹುಡುಗಿ ಮಸೀದಿಯ ಹೊರಗೆ ಜನರಿಗೆ, ದೇವರಿಗೆ ಎದುರಾಗಿ ನಿಂತು ಆದದ್ದನ್ನೆಲ್ಲಾ ಅಳುತ್ತಲೇ ವಿವರಿಸಿ ಆ ಹುಡುಗನೇ ಇದಕ್ಕೆಲ್ಲಾ ಕಾರಣನೆಂದು ಪ್ರಮಾಣಿಸಿ ಆತನಿಗೆ ಕ್ಯಾಕರಿಸಿ ಉಗಿದಳು. ಇದಾವುದರಿಂದಲೂ ಏನೂ ಆಗಿಯೇ ಇಲ್ಲ ಎಂಬ ನಿರ್ಲಜ್ಜತೆಯಿಂದ ಹುಡುಗ ಅದನ್ನೆಲ್ಲಾ ನಿರಾಕರಿಸಿ ಪ್ರಮಾಣ ಮಾಡಿದನು. ನೆರೆದ ಎಲ್ಲ ಬಗೆಯ ಜನ

ಏನು ತೀರ್ಮಾನ ಮಾಡಬೇಕೆಂದು ಅರಿಯದೆ ಇಬ್ಬರೂ ದೇವರೆದುರು ಪ್ರಮಾಣ ಮಾಡಿದ್ದಾರೆ, ದೇವರು ನೋಡಿಕೊಳ್ಳಲಿ ಎಂದು ಕೈತೊಳೆದುಕೊಂಡರು. ಟವಲ್ಲು ಕೊಡವಿಕೊಂಡು ಎದ್ದರು. ಹುಡುಗಿ ಮತ್ತು ಆಕೆಯ ಮನೆಯವರು ಮುಖ ಕಿವುಚಿಕೊಂಡು ಮನೆಕಡೆ ನಡೆದರು. ಆ ದಿನ ರಾತ್ರಿಯೇ ಆ ಹುಡುಗಿ ನೇಣು ಹಾಕಿಕೊಳ್ಳಲು ಯತ್ನಿಸಿದಳು. ಮನೆಯವರು ಇದರಿಂದ ಮತ್ತಷ್ಟು ಸಮಸ್ಯೆ ಮಾಡಬೇಡ ಎಂದು ಬಯ್ದರು. ದಿನಕಳೆದಂತೆ ಜನ ಮರೆಯುತ್ತಾ ಬಂದರು. ಈ ನಡುವೆ ಹುಡುಗಿಯ ಗರ್ಭಪಾತ ಮಾಡಿಸಲಾಯಿತು. ಕೆಲದಿನಗಳ ನಂತರ ಬೇರೆ ಊರಿನ ಗಂಡುನೋಡಿ ಮದುವೆ ಮಾಡಿಕೊಡಲಾಯಿತು.

ಈ ಘಟನೆ ಯಾವುದೋ ಕತೆಯಲ್ಲ. ಇಲ್ಲಿ ಪಿಂಜಾರರ ಸಾಮಾಜಿಕ ಬದುಕಿನಲ್ಲಿ ನಿರ್ದಿಷ್ಟವಾದ ಕಟ್ಟಳೆಗಳು ಇಲ್ಲದಿರುವುದು ಹಾಗೂ ಧಾರ್ಮಿಕ ಬದ್ಧತೆಯೇ ಇಲ್ಲದಿರುವ ಪಿಂಜಾರರು ಹಾದಿ ತಪ್ಪಿದಾಗ ಅವರಲ್ಲಿನ ದುರ್ಬಲರಿಗೆ ಅನ್ಯಾಯವಾಗುವುದು ಕಂಡುಬರುತ್ತದೆ. ಹಾಗಾಗಿಯೇ ಇವರು ಅಸಂಘಟಿತರಾಗಿರುವುದು. ಹೀಗೆ ನಡೆದ ಹತ್ತಾರು ಘಟನೆಗಳಲ್ಲಿ ಕೊನೇಪಕ್ಷ ಸಾಂವಿಧಾನಿಕ ಪರಿಹಾರವನ್ನು ಪಡೆದು ನ್ಯಾಯ ಕಂಡುಕೊಳ್ಳುವ ಪ್ರಯತ್ನವೂ ಈ ಜನಾಂಗದಲ್ಲಿ ನಡೆಯುವುದಿಲ್ಲ. ಈ ಮಾರ್ಗ ಪಿಂಜಾರರಂಥ ಜನಾಂಗಕ್ಕೆ ದುಬಾರಿಯಾಗಿರುವುದು ಇದಕ್ಕೆ ಕಾರಣವಾಗಿದೆ.

ಪಿಂಜಾರರಲ್ಲಿ ಇತರೆ ಜಾತಿಯವರ ಜೊತೆಗಿನ ಸಂಬಂಧಗಳಿಗೇನೂ ಕೊರತೆಯಿಲ್ಲ. ಬಹುಶಃ ಇದು ಎಲ್ಲ ಜಾತಿಗಳಲ್ಲಿಯೂ ಇರುತ್ತದೆ. ಪಿಂಜಾರರ ಗಂಡು ಇತರೆ ಯಾವುದೇ ಜಾತಿಯ ಹೆಣ್ಣಿನೊಂದಿಗೆ ಸಂಬಂಧವಿಟ್ಟುಕೊಂಡಿದ್ದರೆ ಅಂತಹವರನ್ನು ಹಿಡಿದು ಮದುವೆ ಮಾಡಿಬಿಡುವುದೇ ಸೂಕ್ತ ಎಂಬ ಭಾವನೆಯಿದೆ. ಆದರೆ ಆ ಇತರೇ ಜಾತಿಯ ಹೆಣ್ಣಿನ ಮನೆಯವರು ಒಪ್ಪದೇ ಇದ್ದಾಗ ಬಹುಪಾಲು ಆ ಪ್ರಕರಣ ಮುಚ್ಚಿಹೋಗುತ್ತದೆ. ಅಥವಾ ಆ ಹುಡುಗಿ ತನ್ನೆಲ್ಲಾ ಸಂಬಂಧಗಳನ್ನು ಹರಿದುಕೊಂಡು ಓಡಿ ಬಂದರೆ ಪಿಂಜಾರರು ಸುಮ್ಮನೆ ನಿಖಾಃದ ಶಾಸ್ತ್ರ ಮಾಡಿ ಮನೆ ತುಂಬಿಸಿಕೊಳ್ಳುತ್ತಾರೆ. ಆ ಹುಡುಗಿಗೆ ತಮ್ಮದೇ ಒಂದು ಹೆಸರನ್ನಿಟ್ಟು ಕರೆಯುತ್ತಾರೆ. ಹಾಗೆಯೇ ಪಿಂಜಾರರ ಹೆಣ್ಣು ಇತರೇ ಜಾತಿಯ ಗಂಡಿನ ಜೊತೆಗೆ ಸಂಬಂಧಹೊಂದಿದ್ದು ಗಂಡಿನ ಕಡೆಯವರು ಒಪ್ಪದಿದ್ದಾಗ ಈ ಹೆಣ್ಣಿಗೆ ಅವಸರದಲ್ಲಿ ಬೇರೆ ಮದುವೆ ಮಾಡಿಬಿಡಲಾಗುತ್ತದೆ. ಕೆಲವೊಮ್ಮೆ ಆ ಹುಡುಗಿ ಓಡಿಹೋದರೆ ಪಿಂಜಾರರು ಯಾವ ಪ್ರತಿಭಟನೆ ಮಾಡದೇ ತಮ್ಮಷ್ಟಕ್ಕೆ ತಾವು ಬಯ್ದುಕೊಂಡು ಸುಮ್ಮನಿದ್ದು ಬಿಡುತ್ತಾರೆ. ಆದರೆ ಹಾಗೆ ಹೋದ ಹುಡುಗಿಯನ್ನು ಹುಡುಗನ ಕಡೆಯವರು ಸ್ವೀಕರಿಸದಿದ್ದರೆ, ಸ್ವೀಕರಿಸಿಯೂ ಹಿಂಸೆ ಕೊಟ್ಟರೆ ಪಿಂಜಾರರಿಗೆ ಅಸಹಾಯಕತೆಯೊಂದೇ ಪರಿಹಾರವಾಗುತ್ತದೆ.

ವಿವಾಹಿತರ ನಡುವಿನ ಸಂಬಂಧಗಳು ಪಿಂಜಾರರಲ್ಲಿ ಹೆಚ್ಚಿನ ಘರ್ಷಣೆಯನ್ನುಂಟು ಮಾಡುತ್ತವೆ. ಕೆಲವು ಸಂದರ್ಭಗಳಲ್ಲಿ ಜಗತ್ತಿಗೆಲ್ಲಾ ಗೊತ್ತಿದ್ದರೂ 'ಬಾಯಿಬಿಟ್ಟರೆ ಬಣ್ಣಗೇಡು' ಎಂಬಂತೆ ಒಳಗೊಳಗೇ ನುಂಗಿಕೊಂಡು ಇರುವುದೂ ಇದೆ. ಆದರೆ ಹೀಗೆ ಅದುಮಿಟ್ಟುಕೊಂಡ ರೋಷ, ದ್ವೇಷ ಬೇರೆ ಯಾವುದೋ ವ್ಯವಹಾರದ ವಿಷಯದಲ್ಲಿ ಭಿನ್ನಾಭಿಪ್ರಾಯ ಬಂದಾಗ ಸ್ಫೋಟಗೊಂಡು ಬಿಡುತ್ತದೆ. ವಿವಾಹಿತರಾಗಿದ್ದು ಇತರರ ದಾಂಪತ್ಯದಲ್ಲಿ ಸರಸವಾಡುವ ಗಂಡು-ಹೆಣ್ಣಿನ ಸಂಬಂಧಗಳು ಮನುಷ್ಯ ಸಮುದಾಯದಲ್ಲಿ

ಸಾಮಾನ್ಯವಾಗಿದ್ದರೂ ಇವು ಕೆಲವೊಮ್ಮೆ ಸಾಮಾಜಿಕ ಅಶಾಂತಿಯನ್ನುಂಟು ಮಾಡುತ್ತವೆ. ನ್ಯಾಯಾನ್ಯಾಯದ ಪರಿಕಲ್ಪನೆಗಿಂತ ಮನುಷ್ಯ ವ್ಯಕ್ತಿಗತ ಘನತೆ ಮತ್ತು ಸಂಸ್ಕಾರವನ್ನು ಹೊಂದುವುದೇ ಇಂತಹ ಕ್ಷೋಭೆಯನ್ನು ತಡೆಗಟ್ಟಲು ಇರುವ ಮಾರ್ಗ.

ಇನ್ನು ಪಿಂಜಾರರಲ್ಲಿ ಆಸ್ತಿಯ ವಿಚಾರದಲ್ಲಿ ಉಂಟಾಗುವ ಸಮಸ್ಯೆಗಳಿವೆ. ಬಹುಪಾಲು ಅಣ್ಣ-ತಮ್ಮಂದಿರ ನಡುವೆ ಭಾಗವಾಗುವಾಗ ಈ ಸಮಸ್ಯೆಗಳು ಎದುರಾಗುತ್ತವೆ. ಬಹುಸಂಖ್ಯಾತ ಪಿಂಜಾರರಿಗೆ ಆಸ್ತಿಯೇ ಇಲ್ಲ. ಆದರೆ ಪೂರ್ಣಪ್ರಮಾಣದ ಕೃಷಿಯನ್ನು ಅವಲಂಬಿಸಿದ್ದು, ಅಲ್ಪಸ್ವಲ್ಪ ಜಮೀನು ಹೊಂದಿರುವವರಲ್ಲಿ ಇಂಥ ವಿವಾದಗಳಿವೆ. ಇವೆಲ್ಲಾ ಜಗಳಗಳಾಗಿ ಊರಿನ ನಾಲ್ಕು ಜನ ಮುಖಂಡರು ಸೇರಿ ಸಮರ್ಪಕವಾದ ತೀರ್ಮಾನ ನೀಡುವುದರ ಮೂಲಕ ಬಗೆಹರಿದೇ ಹೋಗುತ್ತವೆ. ಮನೆ, ಹೊಲದಂತಹ ಚಿರಆಸ್ತಿಯ ವಿಚಾರದಲ್ಲಿನ ಜಗಳಗಳಿಗಿಂತ ಪಿಂಜಾರರಲ್ಲಿ ಯಾರೋ ಬಣವೆಗೆ ಬೆಂಕಿಯಿಟ್ಟ ಎಂದು, ಯಾರೋ ಕೋಳಿ ಕದ್ದ ಎಂದು, ಇನ್ಯಾರೋ ತನ್ನನ್ನು ನೋಡಿ ಕ್ಯಾಕರಿಸಿದ ಎಂಬಂತಹ ತರಲೆ ಜಗಳಗಳೇ ಜಾಸ್ತಿ. ಇಂತಹವೆಲ್ಲಾ ಅವರವರ ಬಾಯಿತೀಟೆ ತೀರುವವರೆಗೆ ಬಯ್ದು, ಹೆಚ್ಚೆಂದರೆ ನಿರಾಯುಧರಾಗಿ ಹೊಡೆದಾಡುವುದರೊಂದಿಗೆ ಮುಗಿದೇ ಹೋಗುತ್ತವೆ. ಇವು ನ್ಯಾಯವನ್ನು ಅಪೇಕ್ಷಿಸುವುದಿಲ್ಲ.

ಆದರೆ ತಲೆಮಾರುಗಳ ದ್ವೇಷ ಸಾಧನೆಗಾಗಿ ಪ್ರೇಮ ಪ್ರಕರಣವೊಂದನ್ನು ಭೀಕರವಾಗಿ ಬಳಸಿಕೊಂಡ ಮೈ ನಡುಗಿಸುವಂತಹ ಘಟನೆಯೊಂದನ್ನು ಪಿಂಜಾರರ ಹಿರಿಯರೊಬ್ಬರು ಹೇಳಿದರು. ಪಿಂಜಾರರ ಜನಾಂಗಕ್ಕೆ ಸೇರಿದ ಯುವಪ್ರೇಮಿಗಳಿಬ್ಬರು ತಮ್ಮ ಎರಡೂ ಮನೆತನದವರ ನಡುವಿನ ಸೇಡಿನ ಭಾವನೆಯಿಂದಾಗಿ ತಮ್ಮ ಮದುವೆ ಸಾಧ್ಯವಿಲ್ಲ ಎಂಬುದು ಮನವರಿಕೆಯಾದಾಗ ಒಂದು ರಾತ್ರಿ ಊರು ಬಿಟ್ಟುಹೋದರು. ಹುಡುಗಿಯ ಮನೆಯವರು ಬಡವರೂ ಮುಗ್ಧರೂ ಆಗಿದ್ದು, ಇದರಿಂದ ಮಾನಹೋಯಿತಲ್ಲಾ ಎಂದು ಗೋಳಾಡುತ್ತಾ ಊಟ ನಿದ್ದೆ ಬಿಟ್ಟು ಕುಳಿತರು. ಹುಡುಗನ ಚಿಕ್ಕಪ್ಪ ಮತ್ತು ಆತನ ಮಕ್ಕಳು ಈ ಸಂದರ್ಭವನ್ನು ಬಳಸಿಕೊಂಡು ಹೇಗಾದರೂ ಮಾಡಿ ಇವರ ವಿರುದ್ಧದ ತಮ್ಮ ಹಳೆಯ ಸೇಡನ್ನು ತೀರಿಸಿಕೊಳ್ಳಬಯಸಿದರು. ತಾವೇ ಮುಂದೆ ನಿಂತು ಹುಡುಗ-ಹುಡುಗಿಯರನ್ನು ಹುಡುಕಿ ಕರೆತಂದು ಮದುವೆ ಮಾಡುವುದಾಗಿ ಓಡಾಡಿದರು. ಅವರು ಸಿಗಲಿಲ್ಲ. ಬಂದರೆ ಮದುವೆ ಮಾಡಿದರಾಯಿತೆಂದು ಹುಡುಗಿಯ ತಂದೆ-ತಾಯಿಗೆ ಎಲ್ಲರೂ ಸಮಾಧಾನಮಾಡಿದರು. ಹತ್ತು ದಿನಗಳ ನಂತರ ಊರಿಗೆ ಬಂದ ಪ್ರೇಮಿಗಳನ್ನು ಕರೆದೊಯ್ದು ಹುಡುಗನ ಚಿಕ್ಕಪ್ಪ ಮತ್ತು ಆತನ ಮಕ್ಕಳು ಸೇರಿ ಅವರಿಬ್ಬರನ್ನೂ ಹಿಗ್ಗಾಮುಗ್ಗಾ ಹೊಡೆದರು. ಹಿತ್ತಾಳೆಯ ಚಂಬಿನೊಳಗೆ ಮುಷ್ಟಿಯಿಟ್ಟುಕೊಂಡು ಹುಡುಗನ ತಲೆ, ಕಿವಿ, ಎದೆಗೆ ಗುದ್ದಿದರು. ಸಿನಿಮಾ ಶೈಲಿಯ ಬಾಕ್ಸಿಂಗ್ ಎಂದೇ ಜನ ಅದನ್ನು ನೆನೆಯುತ್ತಾರೆ. ಹುಡುಗನ ಕಿವಿ, ಬಾಯಿ, ಮೂಗಲ್ಲಿ ರಕ್ತ ಸುರಿಯಲಾರಂಭಿಸಿತು. ಇವರ ಬಗ್ಗೆ ಗೊತ್ತಿದ್ದ ಜನ ಯಾರೂ ಅಡ್ಡ ಬಂದು ತಡೆಯಲಿಲ್ಲ. ಹುಡುಗ ಇನ್ನೇನು ಬದುಕಲಾರ ಎನಿಸಿದಾಗ ಹುಡುಗಿ ಓಡಿ ಬಂದು ಹೊಡೆಯಬೇಡಿರೆಂದು ಬೇಡಿದಳು. ಹೀಗೆ ಹೊಡೆಯುವಾಗ ಹುಡುಗಿಯ ಕಡೆಯವರು ಬಿಡಿಸಿಕೊಳ್ಳಲು ಬಂದೇ ಬರುತ್ತಾರೆ. ತಮ್ಮ ಹುಡುಗಿಯನ್ನು ಓಡಿಸಿಕೊಂಡು ಹೋಗಿದ್ದಕ್ಕೆ ಅವರೇ ಈ ಪರಿ ಸಾಯುವಂತೆ

ಹುಡುಗನಿಗೆ ಹೊಡೆದಿದ್ದಾರೆ ಎಂದು ಅವರ ಮೇಲೆ ಆರೋಪ ಹೊರಿಸಿ ಅವರನ್ನು ಜೈಲಿಗೆ ಹಾಕಿಸಬಹುದು ಎಂಬುದು ಹುಡುಗನ ಚಿಕ್ಕಪ್ಪ ಮತ್ತು ಆತನ ಮಕ್ಕಳ ಹುನ್ನಾರವಾಗಿತ್ತು. ಲೋಕಾರೂಢಿಯಲ್ಲಿ ಸಾಮಾನ್ಯವಾಗಿ ಹುಡುಗಿ ಕಡೆಯವರು ಹುಡುಗನ ಮೇಲೆ ಹಲ್ಲೆ ಮಾಡುವುದು ವಾಡಿಕೆಯಾಗಿತ್ತಲ್ಲ, ಹಾಗೇ ಆಗಿರಬೇಕೆಂದು ಸಮಾಜ ನಂಬಿಬಿಡುತ್ತದೆಂದೂ ಈ ಹಲ್ಲೆಕೋರರು ನಿರೀಕ್ಷಿಸಿದ್ದರು. ಅದೃಷ್ಟವಶಾತ್ ಹುಡುಗಿ ಕಡೆಯ ಮನೆಮಂದಿಯೆಲ್ಲಾ ಅವತ್ತು ಜೋಳದ ತೆನೆಕೊಯ್ಯಲು ಹೋಗಿದ್ದರು. ಇತ್ತ ಹುಡುಗ ಸಾವಿನ ಹಾದಿಯಲ್ಲಿ ಸಾಗುತ್ತಿದ್ದುದನ್ನು ಕಂಡು ತಾವು ಯಾರ ಕಡೆಗೋ ಬಿಟ್ಟ ಬಾಣ ತಮ್ಮ ಕಡೆಗೇ ತಿರುಗಿತಲ್ಲಾ ಎಂಬ ಆತಂಕದಲ್ಲಿ ಸಾಯುತ್ತಿದ್ದ ಹುಡುಗನಿಗೂ, ಅಳುತ್ತಿದ್ದ ಹುಡುಗಿಗೂ ವಿಷ ಕುಡಿಸಿಬಿಟ್ಟರು. ಪ್ರೇಮಿಗಳು ಆತ್ಮಹತ್ಯೆಗೆ ಯತ್ನಿಸಿದರು, ಅವರನ್ನು ನಾವು ಬದುಕಿಸಲು ಪ್ರಯತ್ನಿಸಿದೆವು ಎಂಬ ಹೊಸ ಆಟ ಹೂಡಿ ಇಬ್ಬರನ್ನೂ ಹತ್ತಿರದ ನಗರದ ಆಸ್ಪತ್ರೆಗೆ ಅವರೇ ಕರೆತಂದರು. ತರುವ ಹಾದಿಯಲ್ಲಿ ಹುಡುಗ ದಾರುಣವಾಗಿ ಕೊನೆಯುಸಿರೆಳೆದ. ಹುಡುಗಿ ಆಸ್ಪತ್ರೆಗೆ ದಾಖಲಾದಳು. ಇದೆಲ್ಲಾ ಆಗುತ್ತಿದ್ದಂತೆ ನಾಟಕೀಯವಾಗಿ ಕೊಲೆಗಾರರು ಪರಾರಿಯಾದರು. ಪೊಲೀಸರಿಗೆ ಸುದ್ಧಿ ತಿಳಿದು ಎರಡು ಮೂರು ದಿನಗಳಲ್ಲಿ ಆರೋಪಿಗಳನ್ನು ಸೆರೆಹಿಡಿದು ಜೈಲಿಗೆ ಹಾಕಿದರು. ಪೊಲೀಸರ ವಿಚಾರಣೆಯಿಂದ ತಿಳಿದುಬಂದ ಎರಡು ಮುಖ್ಯ ಸಂಗತಿಗಳು ಇವು : ೧) ಹುಡುಗನ ಹೆಸರಿನಲ್ಲಿ ಎರಡು ಎಕರೆ ನೀರಾವರಿ ಜಮೀನು ಇದ್ದು, ಅದನ್ನು ಆತನ ಅತ್ತೆ ಅವನಿಗೆ ಬರೆದುಕೊಟ್ಟಿದ್ದಳು. ಅತ್ತೆಗೆ ಮಕ್ಕಳಿರಲಿಲ್ಲ, ಗಂಡನೂ ಇರಲಿಲ್ಲ. ೨) ಈ ಹುಡುಗನನ್ನು ಸಾಯಿಸಿದರೆ ಜಮೀನು ಗಿಟ್ಟಿಸಿಕೊಳ್ಳಬಹುದು. ಹಾಗೆಯೇ ಈ ಆರೋಪವನ್ನು ಹುಡುಗಿಯ ಕಡೆಯವರ ಮೇಲೆ ಹಾಕಿ ಅವರನ್ನು ಜೈಲಿಗೆ ಕಳಿಸಿ, ಎರಡು ತಲೆಮಾರುಗಳ ಹಿಂದೆ ಈ ಹುಡುಗಿಗೆ ಸಂಬಂಧವೇ ಇಲ್ಲದ ಆದರೆ ಆಕೆಯ ಮನೆತನಕ್ಕೆ ಸಂಬಂಧಿಸಿದವರು ಇವರನ್ನು ಇವರು ಮಾಡಿದ ತಪ್ಪಿನ ಸಾಕ್ಷಿ ಹೇಳಿ ಜೈಲಿಗೆ ಕಳಿಸಿದ ಪ್ರತೀಕಾರವನ್ನು ಈ ಬಗೆಯಲ್ಲಿ ತೀರಿಸಿಕೊಳ್ಳಬಹುದು. ಈ ಆರೋಪಿಗಳ ಮೇಲಿನ ಎರಡೂ ಆಸೆಗಳು ಈಡೇರದೆ ಜೈಲುಪಾಲಾದ ಹುಡುಗನ ಚಿಕ್ಕಪ್ಪ ಜೈಲಿನಲ್ಲಿಯೇ ಸತ್ತ. ಆತನ ಮಕ್ಕಳು ಇನ್ನೂ ಈ ಆರೋಪದಿಂದ ಮುಕ್ತರಾಗಿಲ್ಲ. ಆ ಊರಿನ ಪಿಂಜಾರರು ಮಾತ್ರ ಈ ಘಟನೆಯನ್ನೆಲ್ಲಾ ನೆನೆದು ಹೇಳುವ ಒಂದೇ ಮಾತು 'ಇದು ದೇವರು ಕೊಟ್ಟ ತೀರ್ಪು'.

ಮನುಷ್ಯರ ನಡುವಿನ ಸೇಡು ಸಣ್ಣತನಗಳು ಸಂದರ್ಭವೊಂದನ್ನು ಹೇಗೆ ವಿಕೃತವಾಗಿ ಬಳಸಿಕೊಳ್ಳುತ್ತವೆ ಎನ್ನುವುದಕ್ಕೆ ಈ ಘಟನೆ ನಿದರ್ಶನವಾಗಿದೆ. ಹಾಗೆಯೇ ಪಾಪಕೃತ್ಯವೊಂದು ಈ ಸಮಾಜದ, ಈ ಲೋಕದ ಸಂದರ್ಭದಲ್ಲಿ ಭಯಹುಟ್ಟಿಸಿ ಜನಸಮುದಾಯವನ್ನು ಇಲ್ಲಿನ ನ್ಯಾಯ, ನೀತಿಗಳ ವ್ಯವಸ್ಥೆಯನ್ನು ಅಸಹಾಯಕವನ್ನಾಗಿ ಮಾಡಿದರೂ ಅಂತಿಮವಾಗಿ ಸನ್ನಡತೆಯೇ ಉಳಿಯುತ್ತದೆ, ಸತ್ಯವೇ ಗೆಲ್ಲುತ್ತದೆ, ಅದು ಕಾಣದ ದೇವರ ಮೂಲಕವಾಗಿ ಬಾಳುತ್ತದೆ, ಬದುಕುತ್ತದೆ, ಬೆಳಗುತ್ತದೆ. ಇದು ಎಲ್ಲ ಜೀವಸಮುದಾಯಗಳ ಆಶಯವಾಗಿದೆ.

## ೩.೪ ಆಹಾರ ಪದ್ಧತಿ

ಜನಾಂಗವೊಂದರ ಆಹಾರ ಪದ್ಧತಿ ಆ ಜನಾಂಗ ವಾಸವಾಗಿರುವ ಪ್ರದೇಶ ಮತ್ತು ಅಲ್ಲಿನ ಭೌಗೋಳಿಕತೆಯನ್ನು ಅವಲಂಬಿಸಿರುವುದು ಸಹಜವಾದರೂ ಆ ಜನಾಂಗದ ಆರ್ಥಿಕ ಸ್ಥಿತಿಗತಿಗಳ ನೆಲೆಯಲ್ಲಿಯೂ ಅದನ್ನು ವಿಶ್ಲೇಷಿಸಬೇಕಾಗಿದೆ. ಅಂದರೆ ಮೂಲಭೂತವಾಗಿ ಜನಾಂಗ ಅವಲಂಬಿತವಾಗಿರುವ ಕಸುಬು ಅವರ ಆಹಾರ ಕ್ರಮದ ಆಧಾರವಾಗಿರುತ್ತದೆ. ಇಂಡಿಯಾದಂತಹ ಸಾಮಾಜಿಕ ವಾತಾವರಣದಲ್ಲಿ ಜನಾಂಗಗಳ ಆಹಾರ ಕ್ರಮದ ಬಗ್ಗೆ ಚಿಂತಿಸುವಾಗ ಆಯಾ ಜನಾಂಗಗಳ ವೃತ್ತಿಯನ್ನಷ್ಟೇ ಹಿನ್ನೆಲೆಯಾಗಿಟ್ಟುಕೊಂಡರೆ ಸಾಕಾಗುವುದಿಲ್ಲ. ಯಾಕೆಂದರೆ ಮೇಲ್ನೋಟಕ್ಕೆ ವೃತ್ತಿಭಿನ್ನತೆಯಿಂದ ಜನಾಂಗಗಳು ರೂಪುಗೊಂಡಿರುವಂತೆ ಕಂಡರೂ ಮೂಲದಲ್ಲಿ ಅಸಮಾನತೆಯ ಸ್ಪಷ್ಟಗೆರೆ ಕಾಣಿಸುತ್ತದೆ. ನಿದ್ರಾಹಾರ ಮೈಥುನಗಳು ಜೀವಸಮುದಾಯದ ಮೂಲ ಪ್ರವೃತ್ತಿಗಳಾಗಿದ್ದರೂ ಮನುಷ್ಯನಿಗೆ ಸಂಬಂಧಿಸಿದಂತೆ ನಿದ್ರಾಹಾರಗಳ ಹೊರತಾಗಿ ಮೈಥುನ ಬೇರೊಂದು ಸಾಮಾಜಿಕ ಆಯಾಮವನ್ನು ಸೂಚಿಸುತ್ತದೆ. ಬರುಬರುತ್ತಾ ಈ ಸಾಮಾಜಿಕ ಆಯಾಮ ರಾಜಕೀಯ ನೆಲೆಯ ಭಾಗವಾದಂತೆ ಆಹಾರ ಕ್ರಮವನ್ನು ಮನುಷ್ಯ ಮತಾಚರಣೆಯ ಆವರಣದೊಳಗೆ ಎಳೆದುಕೊಂಡ. ಹಸಿವನ್ನು ಇಂಗಿಸಿಕೊಳ್ಳಲು ಸಿಕ್ಕಿದ್ದನ್ನು ತಿನ್ನುತ್ತಿದ್ದ ಮೂಲಮಾನವ ಧರ್ಮ ರಾಜಕಾರಣದ ಬಲೆಯೊಳಗೆ ಸಿಕ್ಕು ಅನಿವಾರ್ಯವಾಗಿ ತಿನ್ನುವ ಅನ್ನದಲ್ಲೂ ಆಯ್ಕೆ ಮಾಡಿಕೊಂಡ. ಅದೂ ಅಲ್ಲದೆ ಅದರಲ್ಲಿ ಸಸ್ಯಾಹಾರ, ಮಾಂಸಾಹಾರದಂತಹ ಭಾಗಗಳಾಗಿ ಶ್ರೇಷ್ಠ ಕನಿಷ್ಠ ಎಂಬಂತಹ ತಾರತಮ್ಯವನ್ನು ಮಾಡತೊಡಗಿದ. ಹೀಗೆ ಆಹಾರ ಕ್ರಮದಲ್ಲಿನ ಶ್ರೇಷ್ಠ - ಕನಿಷ್ಠಗಳು ಅಂತಹ ಆಹಾರವನ್ನು ಸೇವಿಸುವ ಜನಾಂಗಗಳ ಸಂದರ್ಭದಲ್ಲಿಯೂ ಅದೇ ತೆರನಾದ ಕಂದಕಗಳನ್ನು ಸೃಷ್ಟಿಮಾಡಿದವು. ಆದರೆ ಜನಪದರು, ನಮ್ಮ ಅನೇಕ ಬುಡಕಟ್ಟುಗಳು ಆಹಾರಕ್ರಮವನ್ನು ಅತ್ಯಂತ ವ್ಯಕ್ತಿಗತವಾಗಿ, ವೈಜ್ಞಾನಿಕವಾಗಿ ಪರಿಭಾವಿಸುವ ಪರಿಪಾಠವನ್ನು ಹೊಂದಿವೆ. 'ಊಟ ತನ್ನಿಚ್ಛೆ ನೋಟ ಪರರಿಚ್ಛೆ' ಎನ್ನುವುದು ಈ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ಜನಪ್ರಿಯ ಗಾದೆ. ಇಷ್ಟಾಗಿಯೂ ಪರಂಪರಾಗತವಾಗಿ ಜನಾಂಗಗಳು ಅನುಸರಿಸಿಕೊಂಡು ಬಂದ ಆಹಾರಕ್ರಮವನ್ನು ಅಧ್ಯಯನ ಮಾಡುವುದು ಸಂಸ್ಕೃತಿ ಅಧ್ಯಯನದ ಭಾಗವಾಗಿದೆ. ಆದುದರಿಂದ ಆಹಾರ ಪದ್ಧತಿಯ ಅಧ್ಯಯನವೂ ಆಯಾ ಸಂಸ್ಕೃತಿಗಳ ಆಯ್ಕೆಯ ಅನನ್ಯತೆಯನ್ನು ಸಾರುವುದು ಸಾಧ್ಯವಿರುತ್ತದೆ. ಈ ಹಿನ್ನೆಲೆಯಲ್ಲಿ ಪಿಂಜಾರರ ಆಹಾರ ಪದ್ಧತಿಯ ವಿಶಿಷ್ಟತೆಯನ್ನು ಅಧ್ಯಯನ ಮಾಡಬೇಕಾಗಿದೆ.

ಪಿಂಜಾರರ ಜೀವನ ವಿಧಾನದ ಅತ್ಯಂತ ಮುಖ್ಯ ಭಾಗವಾದ ಆಹಾರ ಪದ್ಧತಿ ಕೂಡ ಹಿಂದೂ ಶ್ರೇಣೀಕೃತ ವ್ಯವಸ್ಥೆಯ ಕೆಳವರ್ಗದವರಿಗಿಂತ ಮೂಲಭೂತವಾಗಿ ಭಿನ್ನವಾದುದಲ್ಲ. ಆದರೆ ಆಹಾರ ಪದ್ಧತಿಯಲ್ಲಿ ಪ್ರಮುಖವಾಗಿರುವ ಸಸ್ಯಾಹಾರ ಮತ್ತು ಮಾಂಸಾಹಾರದ ವಿಚಾರದಲ್ಲಿ ಪಿಂಜಾರರು ಸ್ವಲ್ಪಮಟ್ಟಿಗೆ ವಿಶಿಷ್ಟವಾಗಿದ್ದಾರೆ. ಆಹಾರ ಪದ್ಧತಿಯೂ ಕೂಡ ಧಾರ್ಮಿಕ ಮೂಲವಾದ ವಿಶೇಷ ನಂಬಿಕೆಗಳನ್ನು ಒಳಗೊಂಡಿದ್ದು, ಹಬ್ಬ-ಹರಿದಿನ, ಮದುವೆ ಮುಂಜಿಯಂತಹ ಅಪರೂಪದ ದಿನಗಳಲ್ಲಿ

ಪಿಂಜಾರರು ಹಿಂದೂ ಮತ್ತು ಮುಸ್ಲಿಂ ಧರ್ಮದ ಎರಡೂ ಆಚರಣೆಗಳನ್ನು ಅನುಸರಿಸುತ್ತಾರೆ. ಗ್ರಾಮಾಂತರ ಪ್ರದೇಶದಲ್ಲೇ ಪಿಂಜಾರರ ಪ್ರಧಾನ ನೆಲೆಗಳಿರುವುದರಿಂದ ಮತ್ತು ನಗರದಲ್ಲಿ, ಜೀವನ ನಿರ್ವಹಣೆ ಹಾಗೂ ಭದ್ರತೆಯ ದೃಷ್ಟಿಯಿಂದ ವಾಸಿಸುತ್ತಿರುವ ಪಿಂಜಾರರು ಕೂಡ ತಮ್ಮ ಮೂಲಾಚರಣೆಯನ್ನು ಸಂಪೂರ್ಣವಾಗಿ ಬಿಡಲಾಗದಂತಹ ಮಾನಸಿಕ ತಳಮಳಗಳನ್ನು ಅನುಭವಿಸುವುದರಿಂದ ಪಿಂಜಾರರ ಆಹಾರ ಪದ್ಧತಿಯ ಕ್ರಮ ಮುಸ್ಲಿಮರ ಕ್ರಮವನ್ನು ಪ್ರಧಾನವಾಗಿ ಒಳಗೊಂಡಿರುವುದಿಲ್ಲ.

ಪಿಂಜಾರರು ಬಹುಮಂದಿ ಇತರರ ಹೊಲಗದ್ದೆಗಳಲ್ಲಿ ಕೂಲಿ ಅಥವಾ ಗುತ್ತಿಗೆ ಕೆಲಸ ಮಾಡುವವರೇ ಆಗಿದ್ದು, ಬೆರಳೆಣಿಕೆಯಷ್ಟು ಮಂದಿ ಮಾತ್ರ ಜಮೀನಿಟ್ಟುಕೊಂಡು ವ್ಯವಸಾಯ ಮಾಡುತ್ತಾರೆ. ಪಿಂಜಾರರ ಪ್ರಧಾನ ನೆಲೆಯೇ ಆದ ಬಯಲು ಸೀಮೆಯಲ್ಲಿ ಬೆಳೆಯಲಾಗುವ ಜೋಳ ,ಹತ್ತಿ, ಶೇಂಗ, ರಾಗಿ, ನವಣೆ, ಮೆಣಸಿನಕಾಯಿ ಮುಂತಾದ ಪೈರುಗಳನ್ನೇ ಬೆಳೆಯುತ್ತಾರೆ. ಜಮೀನಿರುವವರು ಮತ್ತು ಸ್ವಲ್ಪಮಟ್ಟಿಗೆ ಸ್ಥಿತಿವಂತರಾಗಿರುವವರು ಕೊಳವೆ ಬಾವಿಗಳನ್ನು ತೆಗೆಸಿಕೊಂಡು ಅರೆ ನೀರಾವರಿಯನ್ನು ಮಾಡಿಕೊಂಡಿದ್ದಾರೆ. ಮತ್ತೆ ಕೆಲವರು ನದಿ ಅಥವಾ ಹೊಳೆ ಹೊಲದ ಪಕ್ಕದಲ್ಲಿ ಹರಿಯುತ್ತಿದ್ದರೆ ಅದಕ್ಕೆ ಪಂಪುಸೆಟ್ಟು ಹಾಕಿಸಿಕೊಂಡಿರುತ್ತಾರೆ. ಆದರೆ ಇಂತಹವರು ಊರಿಗೆ ಒಬ್ಬಿಬ್ಬರಷ್ಟೇ. ಪಿಂಜಾರರ ಅತ್ಯಂತ ಶೋಚನೀಯ ಸ್ಥಿತಿ ಎಂದರೆ ಅವರ ಮಕ್ಕಳು, ಮುದುಕರೆನ್ನದೆ ಶ್ರೀಮಂತ ಲಿಂಗಾಯ್ತರ ಮನೆಗಳಲ್ಲಿ ಜೀತಕ್ಕಿರುವುದು. ರೈತಾಪಿ ಬದುಕಿಗೆ ಸಂಬಂಧಿಸಿದ ಪ್ರತಿಯೊಂದು ಕೆಲಸದಲ್ಲೂ ನಿಪುಣರಾಗಿರುವ ಪಿಂಜಾರರಿಗೆ ಆದಾಯ ಮೂಲಗಳಿಲ್ಲದೇ ಜೀವನ ನಿರ್ವಹಣೆ ಬರ್ಬರವೆನಿಸಿದ್ದು ಜೀತ (ಬಯಲು ಸೀಮೆಯಲ್ಲಿ ಸಂಬಳ ಇರುವುದು ಎನ್ನುತ್ತಾರೆ) ಕ್ಕಿರುವುದು ಅನಿವಾರ್ಯವೆಂಬಂತಹ ಸ್ಥಿತಿಯಿದೆ.

ಕೂಲಿಕಾರರೇ ಹೆಚ್ಚಿರುವ ಪಿಂಜಾರರು ಆಹಾರ ಸಂಗ್ರಹಣೆ ಮಾಡಿಕೊಳ್ಳುತ್ತಾರೆನ್ನುವುದೇ ಒಂದು ವಿಕಟ ವ್ಯಂಗ್ಯ. ಆದರೆ ಇಂತಹ ಅನೇಕ ವ್ಯಂಗ್ಯಗಳಿಂದ ತುಂಬಿರುವ ಪಿಂಜಾರರ ಬದುಕು ಒಂದು ರೀತಿಯಲ್ಲಿ ಸರಳವಾದದ್ದು. ಆಯಾ ದಿನದ ಕೂಲಿ ಕೆಲಸದ ನಂತರವೇ ಆ ರಾತ್ರಿ ಮತ್ತು ಒಂದೆರಡು ದಿನದ ಮಟ್ಟಿಗಾಗುವಷ್ಟು ಕಾಳುಕಡ್ಡಿಯನ್ನು ಪ್ರತಿದಿವಸ ಪಡೆಯುತ್ತಾರೆ. ಬಯಲು ಸೀಮೆಯ ಎಲ್ಲ ಜನರ ಪ್ರಧಾನ ಅಡಿಗೆಯಾದ ಜೋಳದ ರೊಟ್ಟಿಯೇ ಪಿಂಜಾರರ ನಿತ್ಯದ ಊಟ. ಸಾಮಾನ್ಯವಾಗಿ ಕೂಲಿಗೆ ಪ್ರತಿಫಲವಾಗಿ ದವಸಧಾನ್ಯದ ರೂಪದಲ್ಲಿ. ಹಬ್ಬ, ತಿಥಿ ಮುಂತಾದ ದಿನಗಳಲ್ಲಿ ಮುಂಗಡವಾಗಿ ಹಣದ ರೂಪದಲ್ಲಿ ಪಡೆದು ನಂತರ ಕೂಲಿಯಿಂದ ಅದನ್ನು ತೀರಿಸುತ್ತಾರೆ. ಜೋಳವನ್ನು ಸೇರಿನಲ್ಲಿ ಅಳೆದು ಒಂದು ಸೇರಿಗೆ ನಿಗದಿ ಮಾಡಿದ ಬೆಲೆಯಿಂದ ಅವರ ಕೂಲಿಗಾಗುವಷ್ಟನ್ನು ಕೊಡುತ್ತಾರೆ. ಸಾಮಾನ್ಯವಾಗಿ ಪಿಂಜಾರರ ಹೆಂಗಸರೇ ಈ ಕಾಳುಕಡ್ಡಿಯನ್ನು ಪಡೆದು ಗಿರಣಿಗೆ ಹಾಕಿಸಿಕೊಂಡು ರಾತ್ರಿಯ ಅಡಿಗೆಗೆ ಏರ್ಪಾಡು ಮಾಡುತ್ತಾರೆ. ಬಹುಶಃ ಇದು ಎಲ್ಲ ಜನಾಂಗದ ಹೆಂಗಸರಿಗಿರುವ ಹೆಚ್ಚುವರಿ ಕೆಲಸ. ತಮ್ಮ ಮನೆಯ ಗಂಡಸರ ಜೊತೆಯೇ ಗಂಡಸರಷ್ಟೇ ಕೆಲಸ ಮಾಡುವ ಹೆಂಗಸರು ನಿತ್ಯ ಸಂಜೆ ಕೆಲಸದಿಂದ ಬಂದವರೇ, ಬರುವಾಗಲೇ ಜೋಳ ಬೀಸಿಕೊಂಡು ರೊಟ್ಟಿ ತಟ್ಟುವ ಕೆಲಸದಲ್ಲಿ ತೊಡಗಬೇಕಾಗುತ್ತದೆ.

ಜೋಳದ ಹಿಟ್ಟು, ಸಾರಿಗೆ ಬೇಕಾಗುವ ಉಳ್ಳಾಗಡ್ಡೆ, ಬೆಳ್ಳುಳ್ಳಿ, ಬೇಳೆ, ಕಡಲೆಕಾಳು, ಹೆಸರು, ಹುರುಳಿ ಮುಂತಾದುವನ್ನು ಇಟ್ಟುಕೊಳ್ಳುವುದು ಎರೆಮಣ್ಣಿನ ಮಡಕೆಗಳಲ್ಲಿ, ಹಳ್ಳಿಗಾಡಿನ ಪಿಂಜಾರರ ಒಲೆ ಮಣ್ಣಿನದಾಗಿದ್ದು ಬೆರಣಿಯನ್ನು (ಅವರು ಕುಳ್ಳು ಎನ್ನುತ್ತಾರೆ) ಉರುವಲಾಗಿ ಬಳಸುತ್ತಾರೆ. ಜೊತೆ ಎತ್ತು ಅಥವಾ ಗೊಡ್ಡು ಆಕಳುಗಳನ್ನು ಸಾಕಿಕೊಂಡು ಕೂಲಿ ವ್ಯವಸಾಯ ಮಾಡುವುದು ಪಿಂಜಾರರ ಸಾಮಾನ್ಯ ಕೆಲಸದಲ್ಲಿ ಒಂದು. ಅದರಲ್ಲೂ ಕೆಲವರು ಒಂದು ಎತ್ತು ಅಥವಾ ಆಕಳನ್ನಿಟ್ಟುಕೊಂಡು ಮತ್ತೊಂದನ್ನು ಇನ್ನೊಬ್ಬರಿಂದ ಮುಯ್ಯಿಪಡೆದು ಬೇಸಾಯ ಮಾಡುತ್ತಾರೆ.

ವರ್ಷಗಟ್ಟಲೆ ದವಸ ಧಾನ್ಯವನ್ನು ಸಂಗ್ರಹಿಸಲು ಸಾಧ್ಯವಿಲ್ಲದ ಪಿಂಜಾರರು ಕೂಲಿ ಸಿಗದ ದಿನಗಳಲ್ಲಿ ಬೇಕಾಗಬಹುದೆಂದು ಅಷ್ಟಿಷ್ಟನ್ನು ಕೂಡಿಡುತ್ತಾರೆ. ಸಾಮಾನ್ಯವಾಗಿ ದೊಡ್ಡ ಅಂದರೆ ೨೦-೪೦ ಸೇರು ತುಂಬಬಲ್ಲ ಮಡಕೆಗಳಲ್ಲಿಟ್ಟಿರುತ್ತಾರೆ. ಹಾಗೆ ಇಡುವ ಮೊದಲು ಧಾನ್ಯವನ್ನು ಚೆನ್ನಾಗಿ ಒಣಗಿಸಿ ಕಲ್ಲು-ಕಡ್ಡಿ ಆರಿಸಿ ಸ್ವಚ್ಛ ಮಾಡುತ್ತಾರೆ. ಅಗತ್ಯ ಬಿದ್ದಾಗಲೆಲ್ಲಾ ಬೇಕಾಗುವಷ್ಟನ್ನು ಹೊರತೆಗೆದುಕೊಳ್ಳುತ್ತಾರೆ. ಜೋಳಕ್ಕೆ ಒಗ್ಗಿಕೊಂಡಿರುವ ಈ ಜನ ರಾಗಿಯನ್ನು ಬೆಳೆದರೂ ಮಾರಿ ಜೋಳವನ್ನು ಕೊಂಡುಕೊಳ್ಳುತ್ತಾರೆ. ಹತ್ತಿಪ್ಪತ್ತು ಚೀಲಗಟ್ಟಲೆ ಬೆಳೆಯುವವರು ಸಾಮಾನ್ಯವಾಗಿ ಬಿದಿರಿನ ಪಳತದಲ್ಲಿ ದವಸವನ್ನು ತುಂಬುತ್ತಾರೆ. ನೆಲವನ್ನು ಸಗಣಿಯಿಂದ ಸಾರಿಸಿ ಪಳತವನ್ನೂ ಅದರ ಒಳ-ಹೊರಗೆ ಸಗಣಿಯಿಂದ ಬಳಿಯುತ್ತಾರೆ. ಪಳತಕ್ಕೆ ಹುಳು ಹಿಡಿಯದಿರಲೆಂದು ಈ ವಿಧಾನವನ್ನು ಅನುಸರಿಸುತ್ತಾರೆ. ಹೀಗೆ ಮಾಡುವುದರಿಂದ ದವಸವೂ ಕೆಡುವುದಿಲ್ಲ ಎನ್ನುತ್ತಾರೆ. ಇನ್ನೂ ಹೆಚ್ಚು ಬೆಳೆಯುವವರು ಹಗೇವಿನಲ್ಲಿ ದವಸವನ್ನಿಡುತ್ತಾರೆ. ಪಿಂಜಾರರಲ್ಲಿ ಇಂತಹವರು ಇಲ್ಲವೇ ಇಲ್ಲ ಅನ್ನುವಷ್ಟು ವಿರಳ. ಪಿಂಜಾರರು ದುಂಡನೆಯ ಮತ್ತು ಕಂಠವಿರುವಂತಹ ಮಡಕೆಗಳನ್ನು ಬಳಸುತ್ತಾರೆ. ಅಡಿಗೆ ಮಾಡುವುದಕ್ಕೆ ಅಂತಹುದೇ ಚಿಕ್ಕ ಸೋರೆಗಳನ್ನು ಬಳಸುವ ಪಿಂಜಾರರು ಮಣ್ಣಿನ ಚಿಪ್ಪುಗಳಲ್ಲಿ ಉಣ್ಣುತ್ತಾರೆ. ಮಣ್ಣಿನ ಒಲೆಯ ಒಂದು ಕಡೆ ನೀರನ್ನು ತುಂಬಿಡಲು ದೊಡ್ಡ ಸೋರೆಯೊಂದನ್ನು ಇಟ್ಟಿರುತ್ತಾರೆ. ಉಳಿದ ಎರಡು ಕಡೆ ಮಣ್ಣಿನಲ್ಲೇ ಮಾಡಿದ ಒಲೆದಿಂಡುಗಳಿರುತ್ತವೆ. ಇದು ಅಡಿಗೆ ಬೇಯುತ್ತಿರುವಾಗಲೇ ನೀರನ್ನು ಕಾಯಿಸುವುದಕ್ಕಾಗಿ ಮಾಡಿಕೊಂಡ ವ್ಯವಸ್ಥೆ. ನೀರು ತುಂಬಿಟ್ಟುಕೊಳ್ಳಲೂ ಕೂಡ ದೊಡ್ಡ ದೊಡ್ಡ ಗಡಿಗೆಗಳಿರುತ್ತವೆ. ಕೆಲವರ ಮನೆಯಲ್ಲಿ ಹಿತ್ತಾಳೆಯ ಹಂಡೇವುಗಳೂ ಇರುವುದನ್ನು ನೋಡಬಹುದು. ಹಿತ್ತಾಳೆಯ ಈ ಹಂಡೇವುಗಳನ್ನು ಒಳ-ಹೊರಗೆ ಇಟ್ಟಿಗೆ ಹೆಂಡೆಯನ್ನು ಪುಡಿಮಾಡಿ ತಿಕ್ಕಿ ತೊಳೆದು ನೀರು ತುಂಬಿ ಅದರ ಮೇಲೆ ಹಿತ್ತಾಳೆಯ ತಟ್ಟೆಯಂಥ ಹೂವಿನ ಚಿತ್ತಾರವಿರುವ ತಬಕಗಳನ್ನು ಮುಚ್ಚುತ್ತಾರೆ. ಮತ್ತೆ ಕೆಲವರು ಬಿದಿರಿನ ತಬಕ ಮುಚ್ಚುತ್ತಾರೆ. ಇದು ಅವರವರ ಸ್ಥಿತಿವಂತಿಕೆಯನ್ನು ಅವಲಂಬಿಸಿರುತ್ತದೆ. ದವಸಧಾನ್ಯ ತುಂಬಿದ ಮಡಕೆಗಳನ್ನು ಅಡಿಗೆ ಕೋಣೆಯ ಮೂಲೆಯೊಂದರಲ್ಲಿ ಒಂದರ ಮೇಲೊಂದರಂತೆ ಪೇರಿಸಿಡುತ್ತಾರೆ. ನಿತ್ಯದ ಬಳಕೆಗಾಗಿ ಬೇಕಿರುವಂಥ ಉಪ್ಪು, ಮೆಣಸಿನಕಾಯಿ ಮುಂತಾದವುಗಳನ್ನು ತುಂಬಿದ ಮಡಕೆಗಳು ಮೇಲ್ಗಡೆಯೇ ಇರುವಂತೆ ಜೋಡಿಸಿರುತ್ತಾರೆ.

ಆಧುನಿಕತೆ ಬಂದಂತೆ ಮಡಕೆಗಳು ದೂರಾಗಿರುವುದು ನಿಜವಾದರೂ ಪಿಂಜಾರರು ಮಡಕೆಯ ಬಳಕೆಯನ್ನು ಪೂರ್ತಿ ಬಿಟ್ಟಿಲ್ಲ. ಇತ್ತೀಚೆಗೆ ಗೋಣಿ ಚೀಲಗಳಲ್ಲಿ ದವಸಧಾನ್ಯಗಳನ್ನು ತುಂಬಿಡುವ

ವಿಧಾನವನ್ನು ಪಿಂಜಾರರು ಅನುಸರಿಸುತ್ತಾರೆ. ದವಸಗಳನ್ನು ತುಂಬಿಡಬಲ್ಲ ಗೋಣಿಚೀಲ (ಪಲ್ಲಚೀಲ ಮತ್ತು ಪಟಿಂಚೀಲ ಎಂದೂ ಕರೆಯುತ್ತಾರೆ). ಮಳೆ ಬರುವಾಗ ಕೊಪಳೆ ಮಾಡಿಕೊಂಡು ಮೈ ನೆನೆಯದಂತೆ ಕಾಪಾಡುವ ಸಾಧನವೂ ಆಗಿ ಅವರ ಉಪಯೋಗಕ್ಕೆ ಬರುತ್ತದೆ. ಹತ್ತಿಯನ್ನು ಸಾಮಾನ್ಯವಾಗಿ ಮನೆಯ ಮೂಲೆಯೊಂದರಲ್ಲಿ ಆಗಾಗ್ಗೆ ಬಿಡಿಸಿಕೊಂಡು ಬಂದಂತೆ ಒಟ್ಟುತ್ತಾರೆ. ಹತ್ತಿರದ ನಗರಕ್ಕೆ ಹೋಗಿ ಬಟಾರವನ್ನು ತಂದು ಕಟ್ಟಿ ಅದರಲ್ಲಿ ತುಂಬಿ ಟ್ರ್ಯಾಕ್ಟರ್, ಬಸ್ಸು ಅಥವಾ ಲಾರಿಯಲ್ಲಿ ಮಾರ್ಕೆಟ್ಟಿಗೆ ಒಯ್ದು ಮಾರುತ್ತಾರೆ. ಹತ್ತಿ ಬಿಡಿಸಿ ತುಂಬಿಟ್ಟುಕೊಂಡು ತರುವುದು ಬಿದಿರಿನ ಜಲ್ಲೆ ಅಥವಾ ಜಲ್ದಟ್ಟಿಯಲ್ಲಿ.

ಮಣ್ಣಿನ ಚಿಪ್ಪಿನಲ್ಲಿ ಒಂದರಲ್ಲೇ ಮುದ್ದೆ ಮತ್ತು ಸಾರನ್ನು ಹಾಕಿಕೊಂಡು ಪಿಂಜಾರರು ಉಣ್ಣುತ್ತಾರೆ. ನಾಗರಿಕತೆಯ ಪ್ರವೇಶದಿಂದ ಕೆಲವರು ಅಲ್ಯುಮಿನಿಯಂನ ತಟ್ಟೆ ಮತ್ತು ಪಾತ್ರೆಗಳನ್ನು ತಮ್ಮಲ್ಲಿರುವ ಹಿತ್ತಾಳೆಯ ದಬರಿ ಮುಂತಾದವುಗಳನ್ನು ಕೊಟ್ಟು ಕೊಂಡುಕೊಳ್ಳುತ್ತಾರೆ. ಇವರ ಜೀವನ ಮಟ್ಟ ಸ್ಟೀಲ್‌ಕೊಳ್ಳುವಷ್ಟರ ಮಟ್ಟಿಗೆ ಸುಧಾರಿಸಿಲ್ಲ.

ಸಾಮಾನ್ಯವಾಗಿ ಬೆಳಿಗ್ಗೆ ಎದ್ದವರೇ ಕಸಮುಸುರೆ ಮಾಡಿಕೊಂಡು ಹೆಂಗಸರು ಜೋಳದ ಹಿಟ್ಟು ಕಲಸಿಕೊಂಡು, ಕಲಸಿಕೊಳ್ಳುವುದಕ್ಕೆ ಬಿಸಿ ನೀರಿ ಕಾಯಿಸಿರುತ್ತಾರೆ, ರೊಟ್ಟಿ ಸುಡುತ್ತಾರೆ. ಅದಕ್ಕೆ ಮೊದಲು ಬೆಲ್ಲದ ಚಹಾ ಕುಡಿಯುವುದು ರೂಢಿಯಲ್ಲಿದೆ. ಗಂಡಸರು ನಿತ್ಯಕರ್ಮಗಳನ್ನು ಮುಗಿಸಿಕೊಂಡವರೇ ದನಗಳನ್ನು ಹೊರಗೆ ಕಟ್ಟಿ ಸಗಣಿ ಹೊಡೆದು ದನಗಳಿಗಾಗಿ ಹುಲ್ಲು ತರಲು ಹೋಗುತ್ತಾರೆ. ಹೊಲ, ದನ ಇಟ್ಟುಕೊಂಡವರು ಜೋಳದ ಸೊಪ್ಪೆ ಮತ್ತು ಶೇಂಗದ ಹೊಟ್ಟನ್ನು ತಂತಮ್ಮ ಕಣದಲ್ಲೇ ಹಾಕಿ ಬಣವೆ ಒಟ್ಟಿಕೊಂಡಿರುತ್ತಾರೆ. ಅಡಿಗೆಯ ಕೆಲಸ ಪೂರ್ತಿ ಹೆಣ್ಣು ಮಕ್ಕಳಿಗೇ ಸಂಬಂಧಿಸಿದ್ದು. ಹೆಣ್ಣು ಮಕ್ಕಳಿಲ್ಲದ ಗಂಡಸರ ಮನೆಯಲ್ಲಿ ಒಲೆ ಹಚ್ಚುವುದೇ ಕಡಿಮೆ. ಇಡೀ ಊರು ಸಂಬಂಧಿಕರಿಂದ ತುಂಬಿರುತ್ತದೆ ಮತ್ತು ಹಿಂದೂ ಜನಾಂಗದ ಯಾರೇ ಆಗಲಿ ಪಿಂಜಾರರನ್ನು ಆದರದಿಂದ ನೋಡುವುದರಿಂದ ಮತ್ತು ಅನೇಕ ಗಂಡಸರು ಅಡಿಗೆ ಮಾಡುವುದರಲ್ಲಿ ನಿಷ್ಣಾತರೂ ಆಗಿರುವುದರಿಂದ ಅಂತಹವರಿಗೆ ಊಟದ ತೊಂದರೆಯಾಗುವುದಿಲ್ಲ. ಜೋಳದ ರೊಟ್ಟಿಗೆ ಶೇಂಗಾ ಇಂಡಿ ಅಥವಾ ಚಟ್ನಿ ಮತ್ತು ಮೆಣಸಿನಕಾಯಿ ಚಟ್ನಿಯ ಜೊತೆಗೆ ಮೊಸರೋ ಮಜ್ಜಿಗೆಯನ್ನೋ ಬೆರೆಸಿಕೊಂಡು ಉಣ್ಣುತ್ತಾರೆ. ಹಸಿಮೆಣಸಿನಕಾಯನ್ನು ಕೆಂಡದಲ್ಲಿ ಸುಟ್ಟು ಮುದ್ದೆ ತೊಟ್ಟುವ ಕೈಬಟ್ಟಲಲ್ಲಿ ಹಾಕಿ ಉಪ್ಪು, ಬೆಳ್ಳುಳ್ಳಿ ಬೆರಸಿ ಮುದ್ದೆಕೋಲಿನಿಂದ ಕುಟ್ಟಿ ಅರೆದು ಮಾಡಿದ ಚಟ್ನಿ ಮತ್ತು ಕೆಂಪು, ಒಣಗಿದ ಮೆಣಸಿನಕಾಯಿ ಉಪ್ಪು, ಬೆಳ್ಳುಳ್ಳಿಯಿಂದ ಮಾಡಿದ ಕೆಂಪನಿಂಡಿ ಪಿಂಜಾರರ ಸಾಮಾನ್ಯ ಊಟ. ಕೆಂಪನಿಂಡಿಯ ಜೊತೆಗೆ ಇದ್ದರೆ ಬೆಲ್ಲವನ್ನು ರೊಟ್ಟಿಗೆ ಹಚ್ಚಿಕೊಂಡು ತಿನ್ನುತ್ತಾರೆ. ಮೆಣಸಿನಕಾಯಿ ಕೂಡ ಇಲ್ಲದಾಗ ರೊಟ್ಟಿ, ಉಳ್ಳಗಡ್ಡೆಯೇ ಊಟ - ಇದು ಅವರ ಅತ್ಯಂತ ಪ್ರಿಯವಾದ ಊಟ ಕೂಡ. ಒಣ ಮಂಡಕ್ಕಿಗೆ ಒಗ್ಗರಣೆ ಹಾಕಿಕೊಂಡು ತಿನ್ನುವುದು. ಉರಿದ ಶೇಂಗಕಾಯಿ ತಿನ್ನುವುದು ಅವರಲ್ಲಿ ಸಾಮಾನ್ಯ. ಅಪರೂಪಕ್ಕೆಂಬಂತೆ ಮುದ್ದೆ ಮಾಡುವ ಪಿಂಜಾರರು ಮುದ್ದೆ ಮಜ್ಜಿಗೆ ಕಲಸಿಕೊಂಡು ಉಣ್ಣುತ್ತಾರೆ. ಕರಾವು ಇದ್ದವರಲ್ಲಿ ಮೊಸರು ಮಜ್ಜಿಗೆ ತರುವುದು ಮಾಮೂಲಿ. ಮೊದಮೊದಲು ಕೇಳಿದರೆ ಪುಕ್ಕಟೆಯಾಗಿ ಸಿಗುತ್ತಿದ್ದ ಹಾಲು ಮೊಸರು ಈಗೀಗ ದುಡ್ಡಿಗೂ ಒದಗಾಗುತ್ತಿರುವುದು ಪಿಂಜಾರರು ಸ್ವಂತ ಆಕಳನ್ನೋ, ಎಮ್ಮೆ ಅಥವಾ ಮೇಕೆಯನ್ನೋ, ಸಾಕಿಕೊಳ್ಳುವಂತೆ

ಮಾಡಿದೆ. ದೈನಂದಿನ ಬದುಕಿನ ಅಗತ್ಯಗಳನ್ನು ತರುವ, ಕೊಡುವ ವಿಷಯದಲ್ಲಿ ಯಾವ ಜಾತಿಯ ಪ್ರಶ್ನೆಯೂ ಪಿಂಜಾರರನ್ನು ಕಾಡುವುದಿಲ್ಲವಾದರೂ ಸ್ವಂತ ಸಂಬಂಧಿಗಳಿಗಿಂತ ಲಿಂಗಾಯತ್ತರಲ್ಲಿ ಅವರ ಒಡನಾಟ ಹೆಚ್ಚಾಗಿ ಕಂಡುಬರುತ್ತದೆ. ಊರಿನಲ್ಲಿ ಪಿಂಜಾರರ ಹಟ್ಟಿ ಎನ್ನುವುದು ಇರುತ್ತದಾದರೂ ಹಿಂದೂ ಜನಾಂಗಗಳ ನಡುವೆ ಕೂಡ ಅವರ ವಾಸ ದಟ್ಟವಾಗಿದೆ. ವಿಚಿತ್ರವೆಂದರೆ ಮುಸ್ಲಿಮರ ನಡುವೆಯೇ ಅವರ ಕೊಡು-ಕೊಳ್ಳುವ ಸಂಬಂಧ ಇಲ್ಲದಿರುವುದು. ಆರ್ಥಿಕವಾಗಿ ಮುಸ್ಲಿಮರು ಮತ್ತು ಪಿಂಜಾರರ ಸ್ಥಿತಿಯಲ್ಲಿ ವ್ಯತ್ಯಾಸವಿಲ್ಲದಿದ್ದರೂ ಪಿಂಜಾರರು ವ್ಯವಸಾಯದಲ್ಲಿ ಪೂರ್ಣವಾಗಿ ತೊಡಗಿಸಿಕೊಂಡರೆ ಮುಸ್ಲಿಮರು ಸಣ್ಣ ಪುಟ್ಟ ಚಿಲ್ಲರೆ ವ್ಯಾಪಾರದಲ್ಲಿ ತೊಡಗಿರುತ್ತಾರೆ. ಹಳ್ಳಿಯ ಪಿಂಜಾರರಿಗೆ ಮುಸ್ಲಿಮರನ್ನು ಕಂಡರೆ ಅಷ್ಟಕ್ಕಷ್ಟೆ. ಪಿಂಜಾರರು ಮತ್ತು ಮುಸ್ಲಿಮರ ನಡುವೆ ವೈವಾಹಿಕ ಸಂಬಂಧಗಳೂ ಏರ್ಪಡುವುದಿಲ್ಲವಾದ್ದರಿಂದ ಹಿಂದೂ ಧರ್ಮದ ಇತರರು ನೋಡುವ ಹಾಗೇ ಪಿಂಜಾರರೂ ಮುಸ್ಲಿಮರನ್ನು ಒಂದು ರೀತಿಯ ಪ್ರತ್ಯೇಕ ದೃಷ್ಟಿಯಿಂದ ನೋಡುವುದೂ ಇದೆ. ಇದಕ್ಕೆ ಮುಸ್ಲಿಮರಿಂದ ತಮಗಾಗುವ ಮಾನಸಿಕ ಹಲ್ಲೆಯೇ ಕಾರಣ ಅನ್ನುವುದಕ್ಕಿಂತ ಹೆಚ್ಚಾಗಿ ಪಿಂಜಾರರು ನಾವು ಬೆಳೆದು ಬಂದಿರುವುದೇ ಹೀಗೆ, ನಮಗೂ ಅವರಿಗೂ ಸರಿ ಬರುವುದಿಲ್ಲ ಎಂದು ನಿಷ್ಠುರವಾಗಿಯೇ ಹೇಳುತ್ತಾರೆ.

ಪಿಂಜಾರರ ಅತಿ ವಿಶಿಷ್ಟ ಆಹಾರದ ಆಯ್ಕೆ ವಿಚಾರವನ್ನು ಇಲ್ಲಿ ಹೇಳಲೇಬೇಕು. ಧರ್ಮಮೂಲ ನಂಬಿಕೆಯ ಹಾಗೆ ಮುಸ್ಲಿಮರಿಗೆ ಹಂದಿಯ ಮಾಂಸ ನಿಷೇಧ - ಅಷ್ಟೇ ಹಿಂದೂಗಳಿಗೆ, ಅಸ್ಪೃಶ್ಯರ ಹೊರತು, ಗೋವಿನ ಅಥವಾ ದನಮಾಂಸದ ನಿಷೇಧ. ಹಿಂದೂಗಳಲ್ಲಿ ಶುದ್ಧ ಸಸ್ಯಾಹಾರಿಗಳೂ ಇರುವ ಹಾಗೆ ಮುಸ್ಲಿಮರಲ್ಲಿ ಶುದ್ಧ ಮಾಂಸಾಹಾರಿಗಳಿಲ್ಲ. ಆದರೆ ಹಿಂದೂ ಧರ್ಮದ ಕೆಲವು ಜನಾಂಗದವರಲ್ಲಿ ಹಂದಿ ಮಾಂಸದ ಬಳಕೆಯಿದೆ. ಹಾಗೇ ಮುಸ್ಲಿಮರು ದನದ ಮಾಂಸವನ್ನು ಸಾಮಾನ್ಯವಾಗಿ ತಿನ್ನುತ್ತಾರೆ. ಪಿಂಜಾರರ ವಿಶಿಷ್ಟತೆ ಎಂದರೆ ಹಂದಿ ಮತ್ತು ದನದ ಮಾಂಸಗಳೆರಡನ್ನು ತಿನ್ನದಿರುವುದು. ಪಿಂಜಾರರು ಮಾಂಸವನ್ನು ಉಪಯೋಗಿಸುವುದು ಮದುವೆ-ಮುಂಜಿ ಹಬ್ಬ ಮುಂತಾದ ವಿಶೇಷ ದಿನಗಳಲ್ಲಿ ಮಾತ್ರ. ಉಳಿದಂತೆ ಅವರು ಪೂರ್ಣ ಪ್ರಮಾಣದ ಸಸ್ಯಾಹಾರಿಗಳು. ಕೋಳಿ, ಕುರಿ, ಮೇಕೆ ಮಾತ್ರ ಅವರು ಮಾಂಸ ತಿನ್ನಲು ಬಳಸುವ ಪ್ರಾಣಿಗಳು. ಈ ಪ್ರಾಣಿಗಳನ್ನು ಸಾಮಾನ್ಯವಾಗಿ ಸಾಕುವ ಪಿಂಜಾರರು ಅವನ್ನು ಕೊಯ್ಯುವುದಕ್ಕಾಗಿ ಮುಲ್ಲಾನನ್ನು ಕರೆತರುತ್ತಾರೆ. ಮುಲ್ಲಾನಿಂದ ಹಲಾಲ್ (ಜುಬಾ) ಆಗದೇ ಅವರು ಮಾಂಸವನ್ನು ತಿನ್ನುವುದಿಲ್ಲ. ಕೊಯ್ದುದ್ದಕ್ಕಾಗಿ ಮುಲ್ಲಾನಿಗೆ ಪ್ರಾಣಿಯ ಕೆಲಭಾಗದ ಮಾಂಸವನ್ನು ಮಜೂರಿಯ ಜೊತೆ ಗೌರವಪೂರ್ವಕವಾಗಿ ಕೊಡುತ್ತಾರೆ. ಆತನನ್ನು ಕೆಲವರು ಊಟಕ್ಕೂ ಕರೆಯುತ್ತಾರೆ. ದನ ಮತ್ತು ಹಂದಿಯ ಮಾಂಸ ತಿನ್ನುವ ಯಾರನ್ನು ಕಂಡರೂ ಅಸಹ್ಯಪಡುವ ಪಿಂಜಾರರು ಈ ವಿಚಾರದಲ್ಲಿ ಹಿಂದೂ-ಮುಸ್ಲಿಂ ಎರಡೂ ಧರ್ಮವನ್ನು ಮೀರುವ ಪ್ರಯತ್ನ ಮಾಡಿದ್ದಾರೆ. ಹಬ್ಬ ಮುಂತಾದ ವಿಶೇಷದ ಸಂದರ್ಭಗಳಲ್ಲಿ ಮಾತ್ರ ಮಾಂಸವನ್ನು ತಿನ್ನುವ ಪದ್ಧತಿ ಹಿಂದೂ ಧರ್ಮದ ಶೂದ್ರರಲ್ಲಿರುವ ಪದ್ಧತಿಯ ಅನುಕರಣೆಯಾಗಿದೆ ಮತ್ತು ಆಗಾಗ್ಗೆ ಮಾಂಸವನ್ನು ತಂದು ತಿನ್ನಲು ಅವರ ಆರ್ಥಿಕ ದುಸ್ಥಿತಿಯಿಂದಾಗಿ ಸಾಧ್ಯವಾಗದಿರುವುದೂ ಗಮನಿಸಬೇಕಾದ ಅಂಶ. ಶೂದ್ರರ ಹಾಗೆಯೇ ವಿಶೇಷ ಸಂದರ್ಭಗಳಲ್ಲಿ ಮೊದಲು ಸಿಹಿಯೂಟ ಅಂದರೆ ಹೋಳಿಗೆ, ಹುಗ್ಗಿ (ಪಾಯಸ), ನಂತರ ಮಾರನೆಯ ದಿನ ಮಾಂಸದ ಅಡಿಗೆ.

ಮಾಂಸದ ಸಾರನ್ನು ಒಂದು ದಿನಕ್ಕಿಂತ ಹೆಚ್ಚಿಗೆ ಇಡುವುದಿಲ್ಲ. ಆದರೆ ಹೋಳಿಗೆ ಕಟ್ಟನ್ನು ವಾರಗಟ್ಟಲೆ ಉಪಯೋಗಿಸುವುದು ಉಂಟು. ವಿಶೇಷದ ದಿನಗಳಲ್ಲಿ 'ದಾವತ್ತು' ಇರುತ್ತದೆ. ತಮಗೆ ಪ್ರೀತಿಪಾತ್ರರಾದವರನ್ನೊ, ಆಪ್ತರಾದವರನ್ನೊ ಕರೆದುಕೊಂಡು ಬಂದು ಗೌರವಾದರಗಳಿಂದ ಉಪಚರಿಸುವುದಕ್ಕೆ 'ದಾವತ್ತು' ಎನ್ನುತ್ತಾರೆ. ಇಂತಹ 'ದಾವತ್ತು'ಗಳಲ್ಲಿ ಎಲ್ಲ ಜನಾಂಗದವರೂ ಇರುತ್ತಾರೆ.

### ೩.೫ ಉಡುಗೆ – ತೊಡುಗೆ

ಮನುಕುಲವು ಬರುವಾಗ ಬೆತ್ತಲೆ, ಹೋಗುವಾಗ ಬೆತ್ತಲೆ, ಬಂದು ಹೋಗುವ ನಡುವೆ ಬರೀ ಕತ್ತಲೆ, ಎನ್ನುವ ದರ್ಶನಕ್ಕೆ ಸರಿಯಾಗಿ ತನ್ನ ಜೀವನಾನುಭವಗಳನ್ನು ಚರಿತ್ರೆಯುದ್ದಕ್ಕೂ ಬಿತ್ತಿಕೊಂಡು ಬಂದಿದೆ. ಮಾನವ ವಿಕಾಸದ ದೀರ್ಘ ಇತಿಹಾಸದಲ್ಲಿ ನಿದ್ರಾಹಾರ ಮೈಥುನದಂತಹ ಮೂಲ ಪ್ರವೃತ್ತಿಗಳ ಹೊರತಾದ ಮಾನಾಪಮಾನದ ಕಲ್ಪನೆ ಯಾವಾಗ ಹುಟ್ಟಿಕೊಂಡಿತು ಎನ್ನುವುದು ಕುತೂಹಲಕರವಾಗಿದೆ. ಗಂಡು ಮತ್ತು ಹೆಣ್ಣಿನ ದೇಹಗಳ ಜೈವಿಕ ಸ್ವರೂಪವೇ 'ಮಾನ'ದ ಕಲ್ಪನೆಗೆ ಕಾರಣವಾಗಿದೆ. ಮೈಥುನದಂತಹ ಬಹುಮುಖ್ಯ ಕ್ಷಣಗಳಲ್ಲಿ ಮನುಷ್ಯನ ಜೈವಿಕ ರಚನೆಯಲ್ಲಿ ಕಾಣಬರುವ ಸ್ಪಂದನಶೀಲ ಗುಣದಿಂದ ಸ್ವತಃ ಮನುಷ್ಯನಿಗೆ ಮುಜುಗರವಾದಂತಿದೆ. ಪ್ರೌಢಾವಸ್ಥೆಗೆ ತಲುಪಿದಂತೆಲ್ಲಾ ದೇಹದಲ್ಲಾಗುವ ಸ್ವಾಭಾವಿಕವಾದ ಪರಿವರ್ತನೆಗಳು ಆತನಿಗೆ ಸುಖ ಕೊಟ್ಟ ಹಾಗೆಯೇ ಹೇಳಿಕೊಳ್ಳಲಾಗದಂತಹ ನಾಚಿಕೆಯನ್ನುಂಟು ಮಾಡಿರಬೇಕು. ಇದರ ಜೊತೆಗೆ ನಿಸರ್ಗದೊಡನೆ ಸ್ವಚ್ಛಂದವಾಗಿ, ಲೀಲಾಜಾಲವಾಗಿ ಬದುಕುತ್ತಿದ್ದ ಮನುಷ್ಯನಿಗೆ ಬರುಬರುತ್ತಾ ವಾತಾವರಣದಲ್ಲಾಗುವ ವೈಪರೀತ್ಯದಿಂದಾಗಿ ದೇಹದ ರಕ್ಷಾಕವಚವಾದ ಚರ್ಮದಲ್ಲಿ ನಿಗ್ರಹಶಕ್ತಿ ಕಡಿಮೆಯೂ ಆಗಿರಬೇಕು. ಈ ಯಾವ ಕಾರಣವೇ ಇರಲಿ, ಇಂದು ಮನುಷ್ಯನಿಗೆ ಬಟ್ಟೆ-ಬರೆ ಅವಶ್ಯಕವಾಗಿದೆ. ಒಂದು ಕಾಲಕ್ಕೆ ಮರದ ತೊಗಟೆ, ಎಲೆ, ಸೊಪ್ಪು ಮೊದಲಾದವನ್ನು ಮೈಗೆ ಸುತ್ತಿಕೊಳ್ಳುತ್ತಿದ್ದ ಮನುಷ್ಯ ತನ್ನ ದೇಹರಕ್ಷಣೆಗಾಗಿ ಮಾತ್ರವಲ್ಲ, ತನ್ನ ದೇಹದ ಸೌಂದರ್ಯ ವರ್ಧನೆಯ ಕಾರಣಕ್ಕಾಗಿ ಕೂಡ ಅತ್ಯಾಧುನಿಕವಾದ ಫ್ಯಾಷನ್ ಡಿಸೈನ್‌ನಂತಹ ಬೃಹತ್ ಉದ್ದಿಮೆಗಳನ್ನು ಹೊಂದಿದ್ದಾನೆ. ಜವಳಿ ಕ್ಷೇತ್ರದಲ್ಲಿ ಆಗಿರುವ ತೀವ್ರವಾದ ಕ್ರಾಂತಿಯಿಂದಾಗಿ ಇವತ್ತು ಮನುಷ್ಯನಿಗೆ ಅದು ಕೇವಲ ಮಾನಮುಚ್ಚುವ ಪರದೆಯಾಗಿ ಮಾತ್ರ ಉಳಿದಿಲ್ಲ, ಬದಲಾಗಿ ಮನುಷ್ಯ ತಾನು ಉಡುವ ಬಟ್ಟೆಯಿಂದಾಗಿ ಆತ ತನ್ನ ಪ್ರತಿಷ್ಠೆ, ಅಂತಸ್ತುಗಳನ್ನು ತೋರ್ಪಡಿಸುವ ಸಾಧನವಾಗಿ ಮಾರ್ಪಟ್ಟಿದೆ. ಹಿಂದೆ ಹತ್ತಿಯ ಕಾರ್ಖಾನೆಗಳು ಜಗತ್ತಿನಾದ್ಯಂತ ಉತ್ಪಾದನೆ ಮಾಡಿದ ವೈವಿಧ್ಯಮಯ ಉಡುಗೆಗಳು ಅದರ ಸ್ವರೂಪದಲ್ಲಿ ಬದಲಾದಂತೆ ಔಟ್‌ಡೇಟೆಡ್ ಅನಿಸಲಾರಂಭಿಸಿದವು. ಈ ಕ್ಷೇತ್ರದಲ್ಲಾದ ಮಹಾಕ್ರಾಂತಿಯ ಪರಿಣಾಮ ಎಂಥದೆಂದರೆ ಮೊದಮೊದಲು ಗಜ, ಮೀಟರ್‌ನಂತಹ ಅಳತೆಗಳಲ್ಲಿ ಬಟ್ಟೆಗಳನ್ನು ಖರೀದಿಸಲಾಗುತ್ತಿತ್ತು. ಈಗ ಈ ಅಳತೆಗಳಿದ್ದರೂ ಕೆಲವು ಐಟಂಗಳನ್ನು ಕಿಲೋಗ್ರಾಂನ ತೂಕದಲ್ಲಿ ಮಾರಲಾಗುತ್ತಿದೆ. ನಮ್ಮ ದೇಶದಲ್ಲಿ ಕೆಲವರು ಸಾವಿರಾರು ಸೀರೆ, ಶರ್ಟ್, ಪ್ಯಾಂಟ್‌ಗಳನ್ನು ಖರೀದಿಸಿ ಅಲ್ಮೆರಾದಲ್ಲಿ ಜೋಡಿಸಿಟ್ಟುಕೊಳ್ಳುವುದು

ಸಾಧ್ಯವಾಗಿದ್ದರೆ ಇನ್ನೂ ಅಪಾರ ಸಂಖ್ಯೆಯ ಬಡಜನ ಯಾವನೋ ತಿಕ್ಕಲನೊಬ್ಬ ತನ್ನ ಹುಟ್ಟುಹಬ್ಬದ ನೆವದಲ್ಲಿ ಹಂಚುವ ಕಳಪೆದರ್ಜೆಯ ಸೀರೆ, ಬಟ್ಟೆಗಳನ್ನು ಪಡೆಯುವುದಕ್ಕಾಗಿ ಉಂಟಾದ ನೂಕುನುಗ್ಗಲಿನಲ್ಲಿ ಪ್ರಾಣ ಕಳೆದುಕೊಳ್ಳುತ್ತಿರುವುದು ಶೋಚನೀಯವಾಗಿದೆ. ಇಂಥ ಜನರ ಶವಗಳನ್ನು ಎಣಿಸುತ್ತಾ ಹುಸಿಗಂಬನಿ ಮಿಡಿಯುತ್ತಾ ವಿಷಾದಿಸುವ ಕವಿಹೃದಯದ ಅನಭಿಷಿಕ್ತ ದೊರೆಗಳು ಭಾರತ ಪ್ರಕಾಶಿಸುತ್ತಿದೆ, ಮುನ್ನಡೆಯುತ್ತಿದೆ ಎನ್ನುತ್ತಿರುವುದು ಕ್ರೌರ್ಯದ ಸಂಕೇತವಾಗಿದೆ. ಇದೇನೇ ಇರಲಿ, ಮನುಷ್ಯ ಉಡುಗೆಯನ್ನು ತನ್ನ ಎಲ್ಲ ಬಗೆಯ ಪ್ರತಿಷ್ಠೆಗಳಿಗೆ ಬಳಸುವ ಅನಿವಾರ್ಯ ಆಚರಣೆಯಂತೆ ಮಾಡಿಕೊಂಡಿದ್ದಾನೆ./ವಿಶೇಷವೆಂದರೆ ಬಟ್ಟೆಯ ಸಂಶೋಧನೆಯ ಮೂಲಕ್ಕೆ ಹೋದರೆ ಪಿಂಜಾರರೇ ಮೂಲಶೋಧಕರು ಎಂಬ ಕಾಲ್ಪನಿಕ ಭಾವನಾತ್ಮಕ ಸತ್ಯ ಗೊತ್ತಾಗುತ್ತದೆ. ಇವತ್ತು ಯಾವ ಪಿಂಜಾರರು ಗೇಣುಬಟ್ಟೆಗೂ ಪಡಬಾರದ ಪಜೀತಿ ಅನುಭವಿಸುತ್ತಾರೋ ಅವರೇ ಮನುಷ್ಯನಿಗೆ ಮಾನರಕ್ಷಣೆಯ ಉಪಾಯ ಹೇಳಿಕೊಟ್ಟವರೆಂದರೆ ಆಶ್ಚರ್ಯವಾಗುತ್ತದೆ. ಪಿಂಜಾರ ಜನಾಂಗದ ವಿಶಿಷ್ಟ ಉಡುಗೆ-ತೊಡುಗೆಗಳನ್ನು ಕುರಿತು ಚಿಂತಿಸುವಾಗ ಅವರಲ್ಲಿರುವ ಕಾಲ್ಪನಿಕ ಕತೆಯೊಂದನ್ನು ನೆನಪಿಸಿಕೊಳ್ಳುವುದು ಅವಶ್ಯಕ. ಮಾನವ ದೇವರ ಸೃಷ್ಟಿಯ ಪ್ರತೀಕ. ಸೃಷ್ಟಿಯಾಗುತ್ತಲೇ ಮಾನವ ಬೆತ್ತಲೆ. ಸುಸಂಸ್ಕೃತ ಬದುಕು ಕಂಡಿರಲಿಲ್ಲ. ಬೆಟ್ಟಗುಡ್ಡಗಳ ಸಾಲುಗಳೇ ಬೆಚ್ಚನೆಯ ಹಂದರಗಳು, ದಟ್ಟ ಅರಣ್ಯಗಳೇ ವಾಸಿಸುವ ಮನೆಗಳು. ಸಂಚರಿಸುವ ತಾಣಗಳಲ್ಲಿ ದೊರೆಯುವ ಗೆಡ್ಡೆ-ಗೆಣಸುಗಳೇ ಹಸಿದ ಹೊಟ್ಟೆಗೆ ಆಹಾರ. ಇದು ಬಿಟ್ಟು ಬೇರೆ ಯಾವುದರ ಪರಿವೆಯೂ ಇರಲಿಲ್ಲ. ಪಂಚವಿಕೋಪಗಳ ಧಗೆ ಮಾತ್ರ ಏರುತ್ತಲೇ ಇತ್ತು. ಇಂತಹ ಪರಿಸ್ಥಿತಿಯಲ್ಲಿ ಮಾನವ ರಕ್ಷಣೆ ಕಂಡುಕೊಳ್ಳಬೇಕಾಯಿತು. ಗಿಡದ ಎಲೆ, ತೊಗಟೆ, ಸುತ್ತಿಕೊಂಡರೆ ಚಳಿಯಿಂದ ಪಾರಾಗಬಹುದು ಎಂಬ ಅರಿವು ಮೂಡಿತು. ಅದರ ಜೊತೆಗೆ ಮಾನದ ಅರಿವು ಗೊತ್ತಾದಾಗ ಮತ್ತಷ್ಟು ರಕ್ಷಣೆ ಪಡೆಯಲು ಮಾನವ ಮುಂದಾದ. ದಿನಗಳೆದಂತೆ ಮಾನವರ ಸಂಖ್ಯೆ ಏರತೊಡಗಿತು. ಪ್ರತಿಯೊಬ್ಬ ಮಾನವನ ಶೋಧ ನಡೆಯುತ್ತಿದ್ದಂತೆ ಅದರಲ್ಲಿ ಒಬ್ಬ ಮಾನವ ಮರಗಿಡಗಳ ಎಲೆ ಸೊಪ್ಪಿನಲ್ಲಿಯ ದಾರದಂತಿರುವ ನಾರಿನ ಎಳೆಗಳನ್ನು ಗುರುತಿಸಿ ಅದನ್ನೇ ಒತ್ತೊತ್ತಾಗಿ ಬಲೆಯಂತೆ ಹೆಣೆದು ಕಲಾತ್ಮಕವಾಗಿ ಧರಿಸಿಕೊಂಡ. ನಾರಿನ ಎಳೆಗಳನ್ನು ಹಿಂಜುತ್ತ ಹಿಂಜುತ್ತ ಮಾನವ ಬದುಕಿಗೆ ಮಾನ ಮರ್ಯಾದೆಯ ಮುಡಿಪಾಗಿ ರಕ್ಷಣಾವಸ್ತ್ರ ಕೊಟ್ಟವನೇ ಜನಮನದಲ್ಲಿ ಪಿಂಜಾರನಾದ. ಅಂದು ಮಾನ ರಕ್ಷಣೆಗಾಗಿ ನಾರಿನ ಎಳೆಗಳನ್ನು ಹಿಂಜಿದ ಪಿಂಜಾರರು ಮುಂದೆ ನಾಗರಿಕತೆ ಆಧುನಿಕತೆಯತ್ತ ಹೊರಟಂತೆ ಇಂದು ಬೆಸ್ಕಿ ಮತ್ತು ಕೊಡತಿಯನ್ನು ಹಿಡಿದು ಗಾದಿ, ದಿಂಬು ಹಾಕುವಲ್ಲಿ ನಿರತರಾಗಿದ್ದಾರೆ ಈ ಕಾರಣದಿಂದಲೇ ಪಿಂಜಾರರನ್ನು ಕೆಳಜಾತಿಯವರೆಂದು ಪರಿಗಣಿಸುವುದು ತಪ್ಪು, ಜಗತ್ತಿಗೆ ಮಾನದ ರಕ್ಷಣೆಯ ವಸ್ತ್ರವನ್ನು ಕೊಟ್ಟ ಅವರನ್ನು 'ಪಿಂಜಿನ ಆರ್ಯ'ರೆಂದು ಪಿಂಜಾರರ ಹಿರಿಯರೊಬ್ಬರು ಹೇಳುತ್ತಾರೆ. ಈ ಬಗೆಯ ಮೇಲರಿಮೆಯ ಭಾವನೆ ಪಿಂಜಾರರಲ್ಲಿಲ್ಲ.

ಹೀಗೆ ಯಾವುದೋ ಕಾಲದಲ್ಲಿ 'ಮಾನ'ದ ಕಲ್ಪನೆ ಬಂದು ಮನುಷ್ಯ ಅದನ್ನು ತನ್ನ ಸಾಮಾಜಿಕ ಪ್ರತಿಷ್ಠೆಯ ಸಂಕೇತದಂತೆ ನಿರ್ವಹಿಸಿಕೊಂಡು ಬಂದದ್ದಿದೆ. ಇದು ಬರಬರುತ್ತಾ ಗೌರವದ ಜೊತೆ ಸೌಂದರ್ಯ ವರ್ಧನೆಯ ಸಾಧನವೂ ಆಗಿರುವುದು, ಈ ಸೌಂದರ್ಯದ ಪ್ರದರ್ಶನಕ್ಕಾಗಿ ಎಲ್ಲ ದೇಶಗಳ

ಬೃಹತ್ ಉದ್ದಿಮೆಗಳು ಕೋಟಿಗಟ್ಟಲೆ ಬಂಡವಾಳ ಹೂಡಿ 'ಸ್ಪರ್ಧೆ' ಮತ್ತು ಜಾಹೀರಾತುಗಳ ಅಬ್ಬರದಲ್ಲಿ ಮನುಷ್ಯನ ಮೂಲಭೂತ ಅಗತ್ಯಗಳನ್ನು ಮರೆಸುತ್ತಿರುವುದು ಇಲ್ಲದವರ ಪಾಲಿಗೆ ನರಕವಾಗಿದೆ. ಆದರೆ ಅಸಂಖ್ಯಾತ ಬಡವರ ಬದುಕಿಗೆ ಇವತ್ತಿಗೂ ಉಡುಗೆ-ತೊಡುಗೆಗಳು ಅವಶ್ಯಕ ಸಾಮಗ್ರಿಗಳಾಗಿವೆಯೇ ಹೊರತು ವಿಲಾಸದ ವಸ್ತುಗಳಾಗಿಲ್ಲ. ಆಡಂಬರ, ಪ್ರದರ್ಶನ ಇವೆಲ್ಲಾ ಉಳ್ಳವರ ಶೋಕಿಯ ಸಂಗತಿಗಳಷ್ಟೇ ಅಲ್ಲ, ಅವರಿಗೆ ಅಪಾರವಾದ ಹಣವನ್ನು ತಂದುಕೊಡುವ ವಿಷಯಗಳಾಗಿವೆ. ಅದೇ ಕಾಲಕ್ಕೆ ಉಡುಗೆ-ತೊಡುಗೆಗಳು ಬಡವರಿಗೆ ಕನಸಿನ ಗಂಟಾಗಿವೆ. ಇಂಥದರ ಹಿನ್ನೆಲೆಯಲ್ಲಿ ಪಿಂಜಾರರ ಬದುಕಿನಲ್ಲಿ ಅವರ ಸಾಮಾಜಿಕ ಜೀವನ ವಿಧಾನದಲ್ಲಿ ಉಡುಗೆ-ತೊಡುಗೆಗಳು ನಿರ್ವಹಿಸುವ ಚಿತ್ರವನ್ನು ವಿಶ್ಲೇಷಿಸಿಕೊಳ್ಳಬಹುದು.

ಪಿಂಜಾರರ ಸಾಮಾಜಿಕ ಜೀವನಕ್ರಮಕ್ಕೂ ಅವರ ಆರ್ಥಿಕ ಸ್ಥಿತಿಗತಿಗಳಿಗೂ ಸಂಬಂಧವಿದೆ. ಬಹುಶಃ ಮನುಷ್ಯನ ಚರಿತ್ರೆಯಲ್ಲಿ ಆರ್ಥಿಕ ಸ್ಥಿತಿಗತಿಗಳು ಆತನ ಎಲ್ಲ ಕನಸು ಮತ್ತು ಪ್ರಯತ್ನಗಳನ್ನು ನಿಯಂತ್ರಿಸುತ್ತಲೇ ಬಂದಿವೆ. ಮತ್ತು ಮನುಷ್ಯ ಅವುಗಳನ್ನು ಮೀರುವ ನಿರಂತರ ಯತ್ನದಲ್ಲಿ ಸಾಗಿ ಬಂದಿದ್ದಾನೆ. ಈ ಯತ್ನದಲ್ಲಿ ಗೆಲುವು ಕಂಡವರು ಸೋತವರನ್ನು ಕಡೆಗಣಿಸುತ್ತಾ ಅವರ ಯಥಾಸ್ಥಿತಿಗೆ ಕಾರಣವಾಗಿದ್ದಾರೆ. ಇದಕ್ಕೆ ನಮ್ಮ ದೇಶದಲ್ಲಿ ಇತರೆ ಸಾಮಾಜಿಕ ಕಾರಣಗಳೂ ಇವೆ ಎನ್ನುವುದನ್ನು ಮರೆಯುವಂತಿಲ್ಲ. ಪಿಂಜಾರರ ಉಡುಗೆ ತೊಡುಗೆಗಳ ಬಗ್ಗೆ ಮಾತಾಡುವಾಗ ಅವರ ಒಟ್ಟಾರೆ ಅಧ್ಯಯನದ ಸೂಕ್ಷ್ಮಗಳನ್ನು ದಾಖಲಿಸಿದ **Edgar Thurston** ಅವರ ಮಾತೊಂದನ್ನು ಇಲ್ಲಿ ನೆನೆಸಿಕೊಳ್ಳುವುದು ಅವಶ್ಯಕ. ಪಿಂಜಾರರ ಸಾಂಸ್ಕೃತಿಕ ವಿವರಗಳನ್ನು ಕೊಡುವ ಸಂದರ್ಭದಲ್ಲಿ **Thurston** ಅವರು ಹೀಗೆ ಬರೆಯುತ್ತಾರೆ, **"In dress they resemble the Hindus and often shave off the beard, but do not leave a single lock of hair upon the head as most Hindus do"** **Thurston** ಅವರ ಮಾತಿಗೆ ಪೂರಕವಾಗಿ ಈ ಹಿಂದೆ ವಿಶ್ಲೇಷಿಸಿದಂತೆ ಪಿಂಜಾರರು ತಮ್ಮ ಮೂಲಾಶ್ರಮದ ಆಚರಣೆಗಳಿಂದ ಪೂರ್ಣವಾಗಿ ಭಿನ್ನರಾಗಿರುವಂತೆ ಕಾಣುವುದಿಲ್ಲ. ಉಳಿದೆಲ್ಲ ವಿವರಗಳಂತೆ ಪಿಂಜಾರರು ಉಡುಗೆ-ತೊಡುಗೆಗಳ ವಿಷಯದಲ್ಲಿಯೂ ಬಹುಪಾಲು ಹಿಂದೂಗಳನ್ನು ಅನುಸರಿಸುತ್ತಾರೆ. ಅನುಸರಿಸಬೇಕೆಂಬ ಉದ್ದೇಶದಿಂದಲ್ಲ, ಅದು ಅವರ ಪರಂಪರಾಗತ ನಡವಳಿಕೆ ಅಷ್ಟೇ.

ಹತ್ತಿ ಪಿಂಜುವ ಪ್ರಧಾನ ಕಸುಬಿನಿಂದ ಹಿಡಿದು ರೈತಾಪಿ ಕೆಲಸಗಳವರೆಗೂ ತೊಡಗಿಸಿಕೊಂಡಿರುವ ಪಿಂಜಾರರು ಬಯಲುಸೀಮೆಯ, ಹಿಂದೂ ಧರ್ಮದ ಶೂದ್ರ ಜನಾಂಗದ ಉಡುಗೆ-ತೊಡುಗೆಗಳಿಂದ ಭಿನ್ನವಾದ ವಸ್ತ್ರಾಭರಣಗಳನ್ನೇನೂ ಧರಿಸುವುದಿಲ್ಲ. ಮೂಲಾಚರಣೆಯಿಂದಲೂ ನಡೆದು ಬಂದ ರೀತಿಯ ಜೊತೆಗೆ ಪಿಂಜಾರರು ಇಸ್ಲಾಂ ಧರ್ಮದ ಕೆಲವು ತಾಂತ್ರಿಕ ಪ್ರಭಾವಗಳಷ್ಟನ್ನೇ ಒಳಗೊಂಡಂತೆ ಕಾಣುತ್ತದೆ. ಶುದ್ಧ ಹತ್ತಿಯ ಬಟ್ಟೆಯನ್ನೇ ಪಿಂಜಾರರು ಉಡುತ್ತಾರೆ. ಇದು ಶ್ರಮದಾಯಕ ಕೆಲಸಗಳಲ್ಲಿರುವವರಿಗೆ ಅಗತ್ಯ ಕೂಡ. ಬಯಲುಸೀಮೆಯ ಬರ್ಬರ ಸೆಖೆ, ಬಿಸಿಲುಗಳಲ್ಲಿ ಹತ್ತಿಯ ಬಟ್ಟೆಗಳೇ ತಂಪು ಅನ್ನುವ ಕಾರಣವಿದ್ದೀತು. ಅಲ್ಲದೆ ಹತ್ತಿಬಟ್ಟೆ ಟೆರಿಕಾಟ್ ಟೆರಿವುಲ್, ರೇಷ್ಮೆ ಬಟ್ಟೆಗಳಿಗಿಂತ ಅಗ್ಗ ಎನ್ನುವ ಕಾರಣವೂ ಇದೆ.

ಗಂಡಸರು ಉದ್ದತೋಳಿನ, ಎದೆಯಿಂದ ಸ್ವಲ್ಪ ಉದ್ದದವರೆಗೆ ಒಂದೆರಡು ಗುಂಡಿಗಳಿರುವ, ತೊಡೆಯನ್ನು ಮುಚ್ಚಿಕೊಳ್ಳುವಂತಹ ಅಂಗಿಯನ್ನು ತೊಡುತ್ತಾರೆ. ಅಂಗಿಯ ಒಳಗಡೆ ತೋಳಿಲ್ಲದಂತೆ ಹೊಲಿದಿರುವ ಜಂಪರ್ ಅಥವಾ ಬನಿಯನ್ ಎಂದು ಕರೆಯಬಹುದಾದ ಉಡುಪನ್ನು ಧರಿಸಿರುತ್ತಾರೆ. ಅದರ ಎದೆಯ ಎಡಭಾಗದಲ್ಲಿ ಸಾಮಾನ್ಯವಾಗಿ ಒಂದು ಬಕಣವಿರುತ್ತದೆ. ಕೆಲಸಗಳಲ್ಲಿರುವಾಗ ಈ ಎರಡೂ ಉಡುಪುಗಳನ್ನು ಬಿಚ್ಚಿಟ್ಟಿರುತ್ತಾರೆ. ತಲೆಗೆ ಯಾವಾಗಲೂ ಹತ್ತಿಯ ಬಿಳಿ ಅಥವಾ ಬಣ್ಣದ ಸಾದಾ ರುಮಾಲನ್ನು ಬಿಗಿದಿರುತ್ತಾರೆ. ಕೆಲಸವಿಲ್ಲದಾಗ ರುಮಾಲು ಹೆಗಲ ಮೇಲಿರುತ್ತದೆ. ಹೆಚ್ಚಾಗಿ ಹತ್ತಿಯ, ಬಿಳಿಯ ಲುಂಗಿ ಅಥವಾ ಪಂಚೆಯನ್ನು ಉಡುವ ಪಿಂಜಾರರು ಧಾರವಾಡ, ಬಳ್ಳಾರಿ ಕಡೆಯಲ್ಲಿ ಕಚ್ಚೆ ಹಾಕುತ್ತಾರೆ. ಪಂಚೆಯ ಒಳಗಡೆ ಬಿಳಿಯ ಮತ್ತು ಬಣ್ಣದ ಪಟ್ಟಿಗಳಿರುವ ಡ್ರ್ಯಾಯರ್ ಧರಿಸಿರುತ್ತಾರೆ. ಅದಕ್ಕೂ ಉದ್ದನೆಯ ಬಕಣವಿರುತ್ತದೆ. ಯಾವುದೇ ಹಳ್ಳಿಯ ಬಡರೈತರಂತಿರುವ ಪಿಂಜಾರರು ರಂಜಾನ್ ಮತ್ತು ಬಕ್ರೀದ್ ಹಬ್ಬದಲ್ಲಿ ಸಾಮೂಹಿಕ ನಮಾಜಿಗೆ ಹೋಗುವಾಗ ಕೆಲವರು ವಿಶೇಷವಾಗಿ ಪೈಜಾಮು ಧರಿಸುತ್ತಾರೆ. ಇನ್ನೂ ಕೆಲವರು ಮದುವೆಯಲ್ಲಿ ಬಿಳಿ ಪೈಜಾಮು ಧರಿಸುವುದು ರೂಢಿ.

ಅಪಾರ ಸಂಖ್ಯೆಯ ಸಾಮಾನ್ಯ ಪಿಂಜಾರರ ದೇಹದಲ್ಲಿ ಚಿನ್ನಬೆಳ್ಳಿ ಒಡವೆಗಳನ್ನು ಕಾಣುವುದು ಕಷ್ಟ. ಮದುವೆಯ ಸಲುವಾಗಿ ಹೆಣ್ಣಿನ ಮನೆಯವರು ಕೊಟ್ಟ ಉಂಗುರ, ಕೊರಳಸರಗಳಿರುತ್ತವೆ. ಮದುವೆಯಲ್ಲಿ ಉಂಗುರವನ್ನು ಎಡಗೈಯ ನಾಲ್ಕನೆಯ ಬೆರಳಿಗೆ ಹಾಕಿರುತ್ತಾರೆ. ಈ ಉಂಗುರ ಮತ್ತು ಕೊರಳ ಸರಗಳು ಮದುವೆ, ಹಬ್ಬದಂತಹ ವಿಶಿಷ್ಟ ಸಮಯದಲ್ಲಿ ಕಾಣುತ್ತಿರುತ್ತವೆ. ಉಳಿದಂತೆಲ್ಲ ಅವು ಗಿರವಿ ಅಂಗಡಿಯಲ್ಲಿ ಅಥವಾ ತಮ್ಮೂರಿನ ಸಾಹುಕಾರನ ಪಿಟಾರಿಯಲ್ಲಿರುವುದೇ ಹೆಚ್ಚು. ನಗರ ಪ್ರದೇಶಗಳಲ್ಲಿರುವ ಬಡ ಪಿಂಜಾರರದೂ ಇದೇ ಗತಿ. ಒಂದಿಷ್ಟು ಸ್ಥಿತಿವಂತರಾದವರು ಎರಡೂ ಕೈಗಳ ಬೆರಳುಗಳನ್ನು ಉಂಗುರಗಳಿಂದ ತುಂಬಿಸಿಕೊಂಡು ದೌಲತ್ತಿನಿಂದಿರುತ್ತಾರೆ. ಇವರು ಯಾವಾಗಲೂ ಗರಿಗರಿ ಎನ್ನುವಂತಹ ಪಂಚೆ, ಪೈಜಾಮು ಜುಬ್ಬಗಳಲ್ಲಿ ಹೊಳೆಯುತ್ತಿರುತ್ತಾರೆ. ಗಡ್ಡ ಬಿಟ್ಟರದ ಪಿಂಜಾರರು ಮಾತಿನಲ್ಲಿ, ನಡವಳಿಕೆಯಲ್ಲಿ, ಆಚರಣೆಯಲ್ಲಿ ಹೀಗೆ ಒಟ್ಟಾರೆಯಾಗಿ ಒಳ ಹೊರ ರೂಪದಲ್ಲಿ ಶೂದ್ರನ ಪ್ರತಿರೂಪದಂತಿರುತ್ತಾರೆ.

ಪಿಂಜಾರರ ಹೆಣ್ಣುಮಕ್ಕಳು ಹತ್ತಿಯ ಹದಿನಾರು ಮೊಳದುದ್ದದ ಸೀರೆಗಳನ್ನು ಉಡುತ್ತಾರೆ. ಅವುಗಳಲ್ಲಿ ಕಡ್ಡಿ ಸೀರೆಗಳೇ ಜಾಸ್ತಿ. ಸೀರೆಯ ಹೊರಅಂಚಿನಲ್ಲಿ ಕಣವಿರುತ್ತದೆ. ಅದು ತಲೆಯ ಮೇಲ್ಭಾಗಕ್ಕೆ ಬರುವಂತೆ ತಲೆ ಮುಸುಕು ಹೊತ್ತುಕೊಳ್ಳುವುದು ಈ ಹೆಣ್ಣು ಮಕ್ಕಳ ಸಹಜ ರೂಢಿ. ತಲೆತುಂಬ ಮುಸುಕೆಳೆದುಕೊಳ್ಳದವರನ್ನು ಗಂಡುಬೀರಿ, ನಾಚಿಕೆಯಿಲ್ಲದವಳು ಎಂದೆಲ್ಲ ಅಣಕಿಸಲಾಗುತ್ತದೆ. ನಗರದವರಾಗಲಿ, ಹಳ್ಳಿಯವರಾಗಲಿ ಪಿಂಜಾರ ಹೆಣ್ಣು ಮಕ್ಕಳು ಬುರ್ಖಾ ಹಾಕುವುದಿಲ್ಲ. ಕುಂಕುಮವನ್ನೂ ಇಡುವುದಿಲ್ಲ, ಕಡ್ಡಿ ಸೀರೆಗಳು, ಬಣ್ಣದ ಸಾದಾ ಸೀರೆಗಳು ಇವರಲ್ಲಿ ಹೆಚ್ಚು ಬಳಕೆಯಲ್ಲಿವೆ. ಅಂಥದ್ದೇ ಬಟ್ಟೆಯ ರವಿಕೆಯನ್ನು ಹೊಲಿಸುತ್ತಾರೆ. ಮೊಳಕೈವರೆಗೂ ತುಂಬುವಂತಹ ತೋಳು, ಎದೆಯಲ್ಲಿ ಗುಂಡಿಯನ್ನು ಹಾಕುವ, ಬಿಚ್ಚುವ ಅವಕಾಶವಿರುವಂತೆ ಹೊಲಿಸುತ್ತಾರೆ. ಈ ಹೆಣ್ಣು ಮಕ್ಕಳು ಒಳವಸ್ತ್ರವನ್ನು ಧರಿಸುವುದು ಕಡಿಮೆಯಾದರೂ ಒಳಲಂಗದ ಬಳಕೆ ಕಂಡುಬರುತ್ತಿದೆ.

ಹುಡುಗಿಯರು ಲಂಗದಾವಣಿ, ಲಂಗ ಜಾಕೆಟ್ಟುಗಳನ್ನು ಉಡುತ್ತಾರೆ. ಋತುವಾದ ನಂತರ ಸೀರೆಯುಡುವಂತೆ ಒತ್ತಾಯಿಸಲಾಗುತ್ತದೆ.

ಎಲ್ಲ ಹೆಣ್ಣುಮಕ್ಕಳಿಗೆ ಮೂಗು, ಕಿವಿ ಚುಚ್ಚುತ್ತಾರೆ. ಬೆಂಡೋಲೆ, ಜುಮುಕಿ, ಮೂಗುಬಟ್ಟು ಇವರ ಸಾಮಾನ್ಯ ಒಡವೆಗಳು. ಮದುವೆಯಾದ ಹೆಣ್ಣುಮಕ್ಕಳು ಕೊರಳಲ್ಲಿ ಕರಿಮಣಿಸರ ಧರಿಸುತ್ತಾರೆ. ಮತ್ತೆ ಕೆಲವರು ಕರಿಮಣಿಗಳ ನಡುವೆ ಬಂಗಾರದ, ಚಿತ್ರವಿರುವ, ದುಂಡನೆಯ ಪದಕಗಳನ್ನು ಪೋಣಿಸಿಕೊಂಡಿರುತ್ತಾರೆ. ಹಳೆಯ ಕಾಲದ ಹೆಣ್ಣುಮಕ್ಕಳು ಬುಗುಡಿ, ಕಾಲ್‌ಪಿಲ್ಲಿ, ಬಾಜಿಬಂದು, ಬೆಳ್ಳಿಯ ಸೊಂಟಪಟ್ಟಿ, ಹಣೆಯಿಂದ ನೆತ್ತಿಯವರೆಗಿರುವ ಚಿನ್ನದ ನಾಗರಹೂವು ಮುಂತಾದ ಆಭರಣಗಳನ್ನು ಧರಿಸುತ್ತಿದ್ದರಂತೆ. ಕೈಗೆ ಬೆಳ್ಳಿಯ ಕಡಗಗಳೂ ಇರುತ್ತಿದ್ದುವಂತೆ. ಈಗಿನ ಹೆಣ್ಣುಮಕ್ಕಳಲ್ಲಿ ಸಾಮಾನ್ಯವಾಗಿರುವ ಮೂಗುಬಟ್ಟು, ಬೆಂಡೋಲೆ, ಜುಮುಕಿ ಜೊತೆಗೆ ತಾಳಿಗಳೇ ಅವರ ಮುಖ್ಯವಾದ ಆಭರಣಗಳು. ತಾಳಿ ಬಂಗಾರದ್ದಾಗಿದ್ದರೆ ಅದನ್ನು ಯಾವಾಗಲೂ ಧರಿಸುವುದಿಲ್ಲ. ಅದರ ಬದಲಾಗಿ ಕರಿಮಣಿಸರ ಇದ್ದೇ ಇರುತ್ತದೆ. ವಿಶೇಷ ದಿನಗಳಲ್ಲಿ ತಾಳಿಯನ್ನು ಧರಿಸುತ್ತಾರೆ. ದುರಂತವೆಂದರೆ ಪಿಂಜಾರರು ತಾಳಿ ಎಂದು ಕರೆಯುವ ಈ ಆಭರಣ ಕೂಡ ಅವರ ಬದುಕಿನ ಬಹುಕಾಲ ಗಿರವಿ ಅಂಗಡಿಯಲ್ಲಿರುತ್ತದೆ. ಆದರೆ ಅತ್ಯಂತ ಜವಾಬ್ದಾರಿಯಿಂದ ಅದನ್ನು ಬಿಡಿಸಿಕೊಂಡು ಬರುತ್ತಾರೆ.

ಹಾಸಿಗೆಯನ್ನು ಮಾಡುವ ಪಿಂಜಾರರು ಹಾಸಿಗೆಯ ಮೇಲೆ ಮಲಗುವಂತಹ ಸ್ಥಿತಿಯಲ್ಲಿಲ್ಲ. ಅವರ ಹಾಸಿಗೆ ಎಂದರೆ ಗೋಣಿಚೀಲ (ಪಟಂಚೀಲ) ಅಥವಾ ಈಚಲು ಚಾಪೆಗಳು. ಅನೇಕರ ಮನೆಗಳಲ್ಲಿ ತಲೆದಿಂಬು ಇಲ್ಲ. ಹಳೆಯ ಅರಿವೆಗಳಲ್ಲೇ ಒಂದು ಚೀಲದಂತೆ ಹೊಲಿದು ಅದರಲ್ಲಿ ಹಳೆಯ ನಿರುಪಯೋಗಿ ಸೀರೆ, ರವಿಕೆ, ಜಂಪರು ಇತ್ಯಾದಿ ಬಟ್ಟೆಗಳನ್ನು ತುಂಬಿ ಬಾಯಿ ಹೊಲಿದು ತಲೆದಿಂಬಾಗಿ ಮಾಡಿಕೊಂಡವರಿದ್ದಾರೆ. ಉತ್ತರ ಕರ್ನಾಟಕದಲ್ಲಿ ತುಂಬ ಜನಪ್ರಿಯವಾಗಿರುವ ಕೌದಿಗಳು ಇವರ ಹೊದಿಕೆಗಳು. ಅದೂ ಮನೆಗೆ ಒಂದೋ ಎರಡರಂತಿರುತ್ತವೆ. ಇದ್ದಷ್ಟೂ ಜನ ಅದರಲ್ಲೇ ಬುಡರಿಕೊಳ್ಳುತ್ತಾರೆ. ಕಾಲಿಗೆ ಚರ್ಮದ ಕಪ್ಪು ಚಪ್ಪಲಿಗಳನ್ನು ಧರಿಸುತ್ತಾರೆ. ಬಹುಸಂಖ್ಯಾತ ಪಿಂಜಾರರು ಬರಿಗಾಲಿನವರು. ನೀರಾವರಿ ಪ್ರದೇಶದಲ್ಲಿರುವ ಪಿಂಜಾರರು ಚಪ್ಪಲಿ ಧರಿಸುವುದು ಕಡಿಮೆ. ಕಲ್ಲುಮುಳ್ಳುಗಳ, ಬಿಸಿಲಿನ ಪ್ರದೇಶದವರಾದ ರಾಯಚೂರು, ಬಳ್ಳಾರಿ, ಧಾರವಾಡ, ಬಿಜಾಪುರದ ಪಿಂಜಾರರು ಹೊಲಿದ ಚಪ್ಪಲಿಗಳನ್ನು ಅಗತ್ಯವಾಗಿ ಧರಿಸುತ್ತಾರೆ.

ಮಕ್ಕಳಿಗೆ ಕುಲಾಯಿ ಹೊಲಿದು ತೊಡಿಸುತ್ತಾರೆ. ಮಕ್ಕಳಿಗೆ ಬೇಕಾಗುವ ನಿಕ್ಕರು ಮತ್ತು ಕುಲಾಯವನ್ನು ಮುದುಕಿಯರು ಕೈಯ ಹೊಲಿಗೆಯಿಂದಲೇ ರಚಿಸುತ್ತಾರೆ.

ಗಡ್ಡ ಬಿಡದ, ಜುಬ್ಬ ಪೈಜಾಮ ಹಾಕದ ಪಿಂಜಾರ ಗಂಡಸರು, ಬುರ್ಕಾದ ಬಗ್ಗೆ ಏನೂ ಗೊತ್ತಿಲ್ಲದ ಹೆಣ್ಣುಮಕ್ಕಳು - ಹೀಗೆ ಯಾವುದೇ ಧರ್ಮದ ಪ್ರಧಾನ ಆಚರಣೆಯನ್ನು ಒಳಗೊಳ್ಳದ ಕರ್ನಾಟಕದ ಪಿಂಜಾರರು ಇದೇ ಕಾರಣಕ್ಕಾಗಿ ಮುಖ್ಯರಾಗುತ್ತಾರೆ. ಮುಂಜಿ, ಮದುವೆ, ಹುಟ್ಟು ಸಾವಿನಂಥ ಮುಖ್ಯ ಸಂದರ್ಭಗಳಲ್ಲಿ ಮುಸ್ಲಿಂ ಧರ್ಮದ ಆಚರಣೆಗಳನ್ನು ತಾಂತ್ರಿಕವಾಗಿ ಮಾತ್ರ ಇವರು ಅಪೇಕ್ಷಿಸುತ್ತಾರೆ.

ಉಳಿದಂತೆ ಬದುಕಿನ ಬಹುಭಾಗ ಯಾವ ಧರ್ಮ, ದೇವರುಗಳ ಬಗ್ಗೆಯೂ ಗಂಭೀರ ಆಸಕ್ತಿಯನ್ನು ತೋರುವುದಿಲ್ಲ. ಪ್ರತಿಯೊಬ್ಬ ಪಿಂಜಾರನ ವೈಯಕ್ತಿಕ ಬದುಕು ನಿತ್ಯದ ಅಗತ್ಯಗಳಿಲ್ಲದೆ ತೊಳಲಾಡುತ್ತಿರುವಾಗ ಬದುಕಿಗೆ ನೇರವಾಗಿ ಸಹಕಾರಿಯಲ್ಲದ ದೇವರು, ಧರ್ಮಗಳ ಬಗೆಗಿನ ಉದಾಸೀನ ಸಹಜವಾದುದಾಗುತ್ತದೆ. ಇದು ಸಾಮಾಜಿಕವಾಗಿ ದೇವರನ್ನು ನಂಬಿಯೂ, ಧಾರ್ಮಿಕ ಅವಲಂಬನೆಯನ್ನು ಒಪ್ಪಿಕೊಂಡೂ ಬದುಕುತ್ತಿರುವ ಪಿಂಜಾರರು ಅವುಗಳನ್ನು ಮೀರುವ ಪ್ರಯತ್ನವೂ ಆಗಿರಬಹುದೆನಿಸುತ್ತದೆ.

## ೩.೬ ವೈದ್ಯಪದ್ಧತಿ

ಎಲ್ಲ ಜೀವಸಮುದಾಯಗಳಲ್ಲಿ ತಂತಮ್ಮ ಸಂತಾನವನ್ನು ಆರೈಕೆ ಮಾಡುವುದು ಆರೋಗ್ಯದ ಬಗೆಗಿನ ಕಾಳಜಿಯ ಮುಖ್ಯ ಲಕ್ಷಣವಾಗಿದೆ. ಹವಾಮಾನ ವೈಪರೀತ್ಯದಿಂದಲೋ, ಆಹಾರದ ವ್ಯತ್ಯಯದಿಂದಲೋ ದೇಹ ಜಡವಾಗುವ, ಆಯಾಸಕ್ಕೊಳಗಾಗುವ ಸಾಮಾನ್ಯ ಲಕ್ಷಣದಿಂದ ಹಿಡಿದು ಜೀವಹೋಗುವಂತಹ ಸಂದರ್ಭದವರೆಗೂ ಒಂದಲ್ಲ ಒಂದು ಬಗೆಯಲ್ಲಿ ಜೀವಸಮುದಾಯ ತಲ್ಲಣಕ್ಕೊಳಗಾಗುತ್ತಿರುತ್ತದೆ. ಪ್ರಾಣಿಗಳು ತಮ್ಮ ಮರಿಗಳ ಮೈ ನೆಕ್ಕುವುದು, ಅವುಗಳ ಆರೋಗ್ಯಕ್ಕೆ ಸಂಬಂಧಪಟ್ಟ ಆರೈಕೆಯ ವರ್ತನೆಯೇ ಆಗಿದೆ. ಆದರೆ ತಮಗಾಗುವ ಗಾಯಕ್ಕೆ ರೋಗಕ್ಕೆ ತಾನೇ ಮದ್ದು ಮಾಡಿಕೊಳ್ಳುವ ಬೌದ್ಧಿಕ ಶಕ್ತಿಯಿಲ್ಲದ ಪ್ರಾಣಿಗಳಿಗೆ ನಿಸರ್ಗವೇ ಜೀವನಿರೋಧಕ ಶಕ್ತಿಯನ್ನು ಅಪಾರವಾಗಿ ದಯಪಾಲಿಸಿದೆ. ಮನುಷ್ಯನಿಗೂ ಈ ಬಗೆಯ ಶಕ್ತಿ ಇದ್ದಾಗ್ಯೂ ತನ್ನ ಬೌದ್ಧಿಕ ಶಕ್ತಿ ಮತ್ತು ಸಂಶೋಧನೆಯ ಫಲವಾಗಿ ತನಗೊದಗುವ ಎಲ್ಲ ಜಾಡ್ಯಗಳಿಗೂ ತಾನೇ ಮದ್ದು ಕಂಡುಕೊಳ್ಳುವಲ್ಲಿ ಯಶಸ್ವಿಯಾಗಿದ್ದಾನೆ. ವೈಜ್ಞಾನಿಕ ಆರೋಗ್ಯಶಾಸ್ತ್ರ ಬೆಳೆಯುವ ಮೊದಲೇ ಮನುಷ್ಯ ನಿಸರ್ಗದ ಸಹಜ ಉತ್ಪನ್ನಗಳಿಂದ ತನ್ನ ದೈಹಿಕವಾದ ರೋಗಗಳಿಗೆ ಮದ್ದು ಮಾಡಿಕೊಳ್ಳುವ ನಿರಂತರ ಪ್ರಯೋಗಶೀಲತೆಯನ್ನು ಮಾಡಿದ ಪರಿಣಾಮವಾಗಿ ಆಗಿಂದಾಗ್ಗೆ ತನ್ನ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳುವುದು ಸಾಧ್ಯವಾಯಿತು. ಇದು ಕ್ರಮೇಣ ಅನುಭವ ಜನ್ಯ ಪದ್ಧತಿಯಾಗಿ ರೂಪುಗೊಳ್ಳುತ್ತ ಮನುಷ್ಯ ಬುದ್ಧಿವಂತನಾದಂತೆ ಶಾಸ್ತ್ರವಾಗಿ ಬೆಳೆದುಬಂದಿತು. ನಿಸರ್ಗಕ್ಕೆ ಹೆಚ್ಚು ಹತ್ತಿರವಾಗಿ ಬದುಕಿದ ನಮ್ಮ ಅನೇಕ ಬುಡಕಟ್ಟುಗಳು ತಮ್ಮ ಆರೋಗ್ಯದ ಸಮಸ್ಯೆಗಳಿಗೆ ಸ್ಥಳೀಯವಾಗಿ ಲಭ್ಯವಾದ ಗಿಡಮೂಲಿಕೆಗಳಿಂದಲೇ ಔಷಧಿಯನ್ನು ಕಂಡುಕೊಂಡವು. ಅದು ಇವತ್ತಿಗೂ ದೇಸೀ ಅಥವಾ ಜನಪದ ವೈದ್ಯ ಪದ್ಧತಿಯ ರೂಪದಲ್ಲಿ ಉಳಿದುಕೊಂಡು ಬಂದಿದೆ. ಮಾನವ ಬದುಕಿನಲ್ಲಿ ಉಂಟಾಗುವ ತೀರ ಸಾಮಾನ್ಯ ಕಾಯಿಲೆಗಳಿಗೆ ಈ ದೇಸೀಪದ್ಧತಿಯ ಮದ್ದಿನಿಂದ ತೀವ್ರಗತಿಯ ಬದಲಾವಣೆ ಕಂಡುಬರುವುದೂ ಇದೆ. ಕೆಲವೊಮ್ಮೆ ಅಲೋಪಥಿಗಿಂತ ಉತ್ತಮ ಎನಿಸುವ ಈ ಮದ್ದು ಪಕ್ಕ ಪರಿಣಾಮಗಳನ್ನು ಉಂಟು ಮಾಡುವುದಿಲ್ಲ. ಅಲ್ಲದೆ ವೈಜ್ಞಾನಿಕ ಬುದ್ಧಿಯಿಂದ ನಾಗರಿಕವಾದಂತೆಲ್ಲಾ ನಮ್ಮ ಸಮಾಜದಲ್ಲಿ ಆರೋಗ್ಯದ ಅನುಕೂಲಗಳು ನಗರಗಳಿಗೆ ಸೀಮಿತವಾಗಿ ಉಳ್ಳವರಿಗೆ ಮಾತ್ರ ಎಟುಕುವಂತಿರುತ್ತವೆ. ಆದರೆ ಇನ್ನೂ ಗುಡ್ಡಗಾಡುಗಳಲ್ಲಿ, ಕಾಡುಮೇಡುಗಳಲ್ಲಿ, ದೂರದ ಹಳ್ಳಿಗಳಲ್ಲಿ ವಾಸಮಾಡುವ ಅಸಂಖ್ಯಾತ

ಬುಡಕಟ್ಟುಗಳು, ಬಡವರು ತಮಗೆ ಸಲೀಸಾಗಿ ಲಭ್ಯವಾಗುವ ದೇಸೀ ವೈದ್ಯ ಪದ್ಧತಿಯನ್ನೇ ಅವಲಂಬಿಸುವುದು ಅನಿವಾರ್ಯವಾಗಿದೆ. ಅಲ್ಲದೆ ಆಧುನಿಕ ಔಷಧ ಮತ್ತು ಡಾಕ್ಟರುಗಳು, ಆಸ್ಪತ್ರೆಗಳು ಎಂದರೆ ಹಣ ಸುಲಿಗೆಯ ಕೂಪಗಳಾಗಿರುವುದರಿಂದ ಇದಕ್ಕೆ ತಕ್ಕ ಆರ್ಥಿಕ ಶಕ್ತಿ ಕೂಡ ಈ ಜನಾಂಗಗಳಿಗಿಲ್ಲದಿರುವುದರಿಂದ ಆಧುನಿಕ ವೈದ್ಯ ಪದ್ಧತಿಯಿಂದ ಇವರೆಲ್ಲಾ ದೂರವುಳಿಯುವಂತಾಗಿದೆ.

ಪಿಂಜಾರರು ಕೂಡ ಈ ಬಗೆಯ ಸಾಮಾಜಿಕ, ಆರ್ಥಿಕ ನೆಲೆಯಿಂದ ಬಂದವರೇ ಆಗಿದ್ದಾರೆ. ತಮ್ಮ ಮಕ್ಕಳು-ಮರಿಗಳಿಗೆ ಸೀತ, ಕೆಮ್ಮು, ನೆಗಡಿಯಂತಹ ಸಾಮಾನ್ಯ ಲಕ್ಷಣಗಳು ಕಂಡುಬಂದರೆ ಉರಿವ ಕೆಂಡವನ್ನು ಹೆಂಚಿನಲ್ಲಿ ಹಾಕಿಕೊಂಡು ಅದರಲ್ಲಿ ಅರಿಶಿಣದ ಪುಡಿ, ರಾಗಿಹಿಟ್ಟು, ಬೆಲ್ಲವನ್ನು ಉದುರಿಸುತ್ತಾರೆ. ಅದರಿಂದ ಎದ್ದ ಹೊಗೆಯನ್ನುಸೇವಿಸುವ ಹಾಗೆ ಮಗುವಿನ ಮುಖ, ಎದೆಯನ್ನು ಕೆಂಡಕ್ಕೆದುರಾಗಿ ಹಿಡಿಯುತ್ತಾರೆ. ಹಾಗೆ ದಿನದಲ್ಲಿ ಎರಡು ಮೂರು ಸಾರಿ ಮಾಡಿದರೆ ಸಹಜವಾಗಿ ಸೀತ, ಕೆಮ್ಮು ಕಡಿಮೆಯಾಗುತ್ತದೆ. ದೊಡ್ಡವರಿಗೂ ಇದೇ ಉಪಚಾರ. ಜ್ವರ ಬಂದರೆ ತಕ್ಷಣಕ್ಕೆ ಎದೆ, ಬೆನ್ನನ್ನು ತಣ್ಣನೆಯ ಬಟ್ಟೆಯಿಂದ ಆಗಾಗ್ಗೆ ಒರೆಸುತ್ತಾರೆ. ಮತ್ತು ಬಳೆಯ ಒಡಕಿನ ಚೂರನ್ನು ಹಣತೆಯಲ್ಲಿ ಕಾಯಿಸಿ ಮಗುವಿನ ಹಣೆಯ ನಡುಭಾಗಕ್ಕೆ, ಬಗಲಿಗೆ, ನೆತ್ತಿಗೆ, ಎರಡೂ ಕಿವಿಯ ಪಕ್ಕಕ್ಕೆ, ಎದೆ, ಬೆನ್ನಿಗೆ ಚುಟಿಕೆ ಹಾಕುತ್ತಾರೆ. ಕೆಲವರು ಮನೆಯ ಹಾರುಗಳಿಗೆ ಕಟ್ಟಿದ ಬಳ್ಳಿಯ ಚೂರಿನಿಂದ ಸುಡುತ್ತಾರೆ. ಕಫ ಹೆಚ್ಚಾದರೆ ವೀಳೆದೆಲೆಗಳನ್ನು ಬಿಸಿಮಾಡಿ ಅದರ ರಸ ಹಿಂಡಿ ಅದಕ್ಕೆ ಸ್ವಲ್ಪ ಉಪ್ಪು ಬೆರೆಸಿ ಎದೆಹಾಲಿನಿಂದ ಕುಡಿಸುತ್ತಾರೆ. ಅಜೀರ್ಣವಾದರೆ ತಾಯಿಯಾದವಳು ಅಜ್ವಾನ ಕಾಳುಗಳನ್ನು ಅಗಿದು ಮಗುವಿನ ಕಿವಿಯೊಳಗೆ, ಹೊಕ್ಕಳಕ್ಕೆ ಉಸುರು ಹೋಗುವಂತೆ ಗಾಳಿ ಊದುತ್ತಾಳೆ. ಹೊಟ್ಟೆನೋವಿಗೆ ನಾಲ್ಕೈದು ವೀಳೆದೆಲೆಗಳನ್ನು ಹೊಟ್ಟೆಯ ಮೇಲೆ ಹರಡಿ, ಮೃದುವಾಗಿ ತಟ್ಟಿ ಸ್ವಲ್ಪ ಹೊತ್ತು ಬಿಟ್ಟು ತೆಗೆಯುತ್ತಾರೆ. ಸರಿಯಾಗಿ ಭೇದಿ ಆಗದಿದ್ದರೆ ಹುಣಿಸೆಯ ಚಿಗುರುಕಡ್ಡಿಯನ್ನು ಮೃದುವಾಗಿ ಗುದದೊಳಗೆ ಹಾಕಿ ತೆಗೆಯುತ್ತಾರೆ. ಹಾಗೆ ಒಂದೆರಡು ಸಲ ಮಾಡಿದ ತಕ್ಷಣ ಭೇದಿ ಸಲೀಸಾಗುತ್ತದೆ. ಕಿವಿ ನೋವು ಬಂದರೆ ಬೆಳ್ಳುಳ್ಳಿ ಮತ್ತು ಎಲೆಮೂಗನ್ನು ಜಜ್ಜಿ ಕೊಬರಿ ಎಣ್ಣೆಯಲ್ಲಿ ಹಾಕಿ ನಚ್ಚುಬೆಚ್ಚಗೆ ಬಿಸಿಮಾಡಿ ಕಿವಿಯಲ್ಲಿ ಬಿಡುತ್ತಾರೆ. ಕಣ್ಣುರಿ ಬಂದಾಗ ಎದೆಹಾಲಿನಿಂದ ಹತ್ತಿ ಅರಳೆಯನ್ನು ನೆನೆಸಿ ಕಣ್ಣಿನಲ್ಲಿ ಹಿಂಡುತ್ತಾರೆ. ಮಕ್ಕಳಿಗೇನಾದರೂ ಕುತ್ತಿಗೆ ಬೆನ್ನು ಉಳುಕು ಬಂದರೆ ಸೀರೆಯ ಎರಡೂ ಬದಿಯನ್ನು ಒಬ್ಬೊಬ್ಬರು ಅಗಲವಾಗಿ ಹಿಡಿದುಕೊಂಡು ಅದರಲ್ಲಿ ಮಗು ಹಾಕಿ ಅತ್ತಿಂದಿತ್ತ, ಇತ್ತಿಂದಿತ್ತ ಉರುಳಾಡಿಸುತ್ತಾರೆ. ಹಲ್ಲುನೋವು ಬಂದರೆ ದವಡೆಯಲ್ಲಿ ಲವಂಗವೊಂದನ್ನು ಇಟ್ಟುಕೊಳ್ಳುತ್ತಾರೆ. ಹಾವು ಕಡಿದರೆ ಊರಿನಲ್ಲಿಯೇ ಯಾರಾದರೂ ನಾಟಿವೈದ್ಯರಿದ್ದರೆ ಅವರಿಂದ ಸೊಪ್ಪಿನ ರಸ ಕುಡಿಸಿ ವಾಂತಿ ಮಾಡಿಸುತ್ತಾರೆ. ಹಾವು ಕಡಿದ ಜಾಗಕ್ಕೆ ಕೋಳಿಯ ಗುದವನ್ನು ಹಿಡಿದು ನಿಲ್ಲುತ್ತಾರೆ, ಹಾಗೆ ನಿಂತ ಕೆಲಹೊತ್ತಿನಲ್ಲೇ ಕೋಳಿ ಸತ್ತರೆ ಕಡಿಸಿಕೊಂಡವನು ಬದುಕಿದ ಎಂದರ್ಥ. ಕೋಳಿಯ ಗುದ ತನ್ನ ಸಂಕುಚನ ಗುಣದಿಂದ ವಿಷವನ್ನು ಹೀರಿಕೊಳ್ಳುತ್ತದೆ ಎಂಬ ನಂಬಿಕೆಯಿದೆ. ಕೋಳಿ ಸಾಯದಿದ್ದರೆ ಕಡಿಸಿಕೊಂಡವನಿಗೆ ಅಪಾಯ ಎಂದು ನಂಬಲಾಗುತ್ತದೆ. ನಾಯಿ ಕಡಿದರೆ ಕೂಡ ನಾಟಿ ಔಷಧಿ ಹಾಕಿಸಲಾಗುತ್ತದೆ. ತಲೆನೋವು ಬಂದರೆ ಕೆಂಡ ಕಾಯಿಸುತ್ತಾರೆ. ಕೈಕಾಲು, ಕುತ್ತಿಗೆ ಉಳುಕುಗಳಿಗೆ ಕೊಬರಿ ಎಣ್ಣೆ ಸವರಿ ತಿಕ್ಕಲಾಗುತ್ತದೆ. ಕಣ್ಣಲ್ಲಿ ಕಳ್ಳಿ ಹಾಲು ಬಿದ್ದು ಉರಿಯುತ್ತಿದ್ದರೆ

ತಾಯಿಯರ ಎದೆಹಾಲನ್ನು ಹಾಕಿ ತಣ್ಣಗೆ ಮಾಡುತ್ತಾರೆ. ಕೈಕಾಲುಗಳಲ್ಲಿ ಸಣ್ಣ ಪುಟ್ಟ ತರಚು ಗಾಯಗಳಾಗಿ ರಕ್ತ ಸುರಿಯುತ್ತಿದ್ದರೆ ಬೆಂಕಿಪೊಟ್ಟಣದ ಮದ್ದನ್ನು ಕಿತ್ತು ಹಚ್ಚುತ್ತಾರೆ.

ಹೀಗೆ ಪಿಂಜಾರರು ಸಣ್ಣ-ಪುಟ್ಟ ಆರೋಗ್ಯದ ತೊಂದರೆಗಳಿಗೆ ಆಧುನಿಕ ವೈದ್ಯಪದ್ಧತಿಯನ್ನು ಅರಸಿಕೊಂಡು ಹೋಗುವುದಿಲ್ಲ. ಅಲೆಮಾರಿಗಳು, ಶ್ರಮಿಕರೂ ಆಗಿರುವಂತಹ ಜನಸಮುದಾಯಗಳಿಗೆ ಇಂಥ ತೊಂದರೆಗಳು ತಾನಾಗಿಯೇ ಒಂದೆರಡು ದಿನಕ್ಕೆ ಗುಣವಾಗಿಬಿಡುತ್ತವೆ. ಜೀವಕ್ಕೆ ಮಾರಕವಾಗುವಂತಹ ಕಾಯಿಲೆಗಳು ಬಂದರೆ ದೇವರ ಮೇಲೆ ಭಾರ ಹಾಕಿ ಸುಮ್ಮನಿದ್ದು ಬಿಡುತ್ತಾರೆ. ಅದರಲ್ಲೂ ಈ ಬಗೆಯ ಸಮುದಾಯಗಳಲ್ಲಿ ತಮ್ಮ ಅನಾರೋಗ್ಯವನ್ನು ಇತರರಿಗೆ ಹೇಳಿಕೊಳ್ಳುವ ಸ್ವಭಾವವೇ ಇರುವುದಿಲ್ಲ. ಅದೊಂದು ಬಗೆಯ ಕೀಳರಿಮೆ ಅವರನ್ನು ಕಾಡುತ್ತಿರುತ್ತದೆ. ಉಳಿದಂತೆ 'ಉಂಡು ಕೆಂಡವ ಕಾಯಿ, ಉಂಡು ನಡೆ ಶತಪದವ, ಉಂಡೆಡ ಮಗ್ಗುಲೊಳು ಮಲಗಿರಲು ವೈದ್ಯನ ಭಂಡಾಟವೇ ಬೇಡ ಸರ್ವಜ್ಞ' ಎಂಬಂತೆ ಇವರ ಬದುಕು ಸರಳ, ಆರೋಗ್ಯವೂ ಸರಳ ಬೆವರಿನ ದುಡಿಮೆಯಿಲ್ಲದ, ನಾಗರಿಕತೆ ಕಲಿಸುವ ಆಲಸ್ಯದ, ಉಂಡದ್ದು ಕರಗದಂತಹ ಐಷಾರಾಮಿ ಜೀವನ ಅನೇಕ ಬಗೆಯ ರೋಗರುಜಿನಗಳನ್ನು ಉಂಟು ಮಾಡುತ್ತಿರುವಾಗ ನಮ್ಮ ಬುಡಕಟ್ಟುಗಳ ಜೀವನಕ್ರಮ ಮಾದರಿ ಸ್ವರೂಪದ್ದಾಗಿದೆ.

## ೩.೭ ಜಾತಿ ಬಹಿಷ್ಕಾರ ಮತ್ತು ಜಾತಿಗೆ ಸೇರಿಸಿಕೊಳ್ಳುವ ಕ್ರಮ

ಸರಳವಾಗಿ ಹೇಳಬೇಕೆಂದರೆ ಪಿಂಜಾರರಲ್ಲಿ ಜಾತಿಗೆ ಸಂಬಂಧಿಸಿದಂತಹ ವಿಧಿವತ್ತಾದ ಷರತ್ತುಗಳಾಗಲೀ, ಕಟ್ಟಳೆಗಳಾಗಲೀ ಇಲ್ಲ. ಜಾತಿಯನ್ನು ಮೀರುವ ಸಂದರ್ಭದಲ್ಲಿ ಪಿಂಜಾರರು ಈ ಕುರಿತು ಉಪೇಕ್ಷೆಯಿಂದಿರುವುದೇ ಹೆಚ್ಚು ಮತ್ತು ಹಾಗೆ ಮೀರುವ ವ್ಯಕ್ತಿ ಜಾತಿ ಅಥವಾ ಸಮಾಜದಿಂದ ಯಾವುದೇ ದಂಡನೆಯನ್ನು ಅನುಭವಿಸುವುದಿಲ್ಲ ಅಥವಾ ಸಮಾಜ ಆ ಬಗೆಯ ದಂಡನೆಯನ್ನು ವಿಧಿಸುವುದಿಲ್ಲ. ಇಂತಹ ವಿಚಾರಗಳಲ್ಲಿ ತೀರ ವ್ಯಕ್ತಿಗತ ಮನೋಭಾವದಿಂದ ನೋಡಲಾಗುತ್ತದೆ. ಹಾಗಾಗಿ ಪಿಂಜಾರರಲ್ಲಿ ವಿಧಿ ನಿಷೇಧಗಳು ಇಲ್ಲ. ಆದರೆ ಜಾತಿಗೆ ಸಂಬಂಧಪಟ್ಟ ವಿಷಯದಲ್ಲಿ ಅವರು ಹೇಗೆ ನಡೆದುಕೊಳ್ಳುತ್ತಾರೆ ಎನ್ನುವುದನ್ನು ನೋಡಬಹುದು.

ಎಲ್ಲ ಅರ್ಥದಲ್ಲಿಯೂ ಪಿಂಜಾರರದು ಸಂಘಟಿತ ಜಾತಿಯಲ್ಲ. ಪಿಂಜಾರರಿಗೆ ವಿಶಿಷ್ಟವಾದ ನಿಯಮಗಳು ಇದ್ದಂತಿಲ್ಲ. ಮದುವೆ-ಮುಂಜಿ, ಸಾವು, ಹಬ್ಬ-ಹರಿದಿನಗಳಂತಹ ಆಚರಣೆಗಳ ಸಂದರ್ಭದಲ್ಲಿ ಇಸ್ಲಾಂಗೆ ನಿಷ್ಠರಾಗಿರುತ್ತಾರೆ ಎನ್ನುವುದರ ಹೊರತಾಗಿ ಉಳಿದಂತೆ ವಿಚಿತ್ರ ಸ್ವಚ್ಛಂದತೆ ಅವರ ಬದುಕಿನಲ್ಲಿ ಕಂಡುಬರುತ್ತದೆ. ಪಿಂಜಾರರನ್ನು ಮುಸ್ಲಿಮರಾಗಲೀ, ಇತರ ಜಾತಿಯವರಾಗಲಿ ಬಹಿಷ್ಕರಿಸುವುದು ಈವರೆಗೆ ನಡೆದಿಲ್ಲ. ಪಿಂಜಾರರು ತಮ್ಮ ಜನಾಂಗದ ಯಾರೇ ಆಗಲಿ ಜಾತಿಗೆ ವಿರುದ್ಧವಾಗಿ ನಡೆದುಕೊಂಡಾಗಲೂ ಬಹಿಷ್ಕರಿಸುವುದು ನಡೆದುಕೊಂಡು ಬಂದಿಲ್ಲ. ಜಾತಿಗೆ ವಿರುದ್ಧವಾಗಿ ನಡೆದುಕೊಳ್ಳುವುದು ಎಂದರೆ ತನ್ನದಲ್ಲದ ಜಾತಿಯವರೊಂದಿಗೆ ಅನೈತಿಕ ಸಂಬಂಧ ಇಟ್ಟುಕೊಳ್ಳುವುದು,

ಜಾತಿಗೆ ಅಪಮಾನವಾಗುವ ರೀತಿಯಲ್ಲಿ ಕಳ್ಳತನ, ದರೋಡೆ ಮೊದಲಾದ ಅಪರಾಧಗಳಲ್ಲಿ ಭಾಗಿಯಾಗುವುದು, ತನ್ನ ಕುಲದೈವಕ್ಕೋ, ಧರ್ಮಕ್ಕೋ ಅವಹೇಳನ ಮಾಡುವುದು, ತನ್ನ ಜಾತಿಯ ಮುಖಂಡರನ್ನು ಅಗೌರವದಿಂದ ಕಾಣುವುದು, ಜೂಜು, ಕುಡಿತ, ಸೂಳೆಗಾರಿಕೆಯಂತಹ ಚಟುವಟಿಕೆಗಳಲ್ಲಿ ತೊಡಗುವುದು - ಇತ್ಯಾದಿ ಸಂದರ್ಭದಲ್ಲಿ ಹಾಗೆ ನಡೆದುಕೊಂಡ ವ್ಯಕ್ತಿಯನ್ನು ಯಾರೋ ಕೆಲವರು ಮಾತಿನ ಸಂಬಂಧದಿಂದ ದೂರವಿಡಬಹುದಷ್ಟೇ ಹೊರತು ಅವನನ್ನು ಬಹಿಷ್ಕಾರ ಹಾಕುವುದಿಲ್ಲ. ಅಂತಹದೊಂದು ವ್ಯವಸ್ಥೆಯೇ ಈ ಜನಾಂಗದಲ್ಲಿಲ್ಲ. ಮಹಿಳೆಯರಿಗಾದರೂ ಅಷ್ಟೇ, ಮೇಲೆ ತಿಳಿಸಿದ ಯಾವ ಚಟುವಟಿಕೆಯಲ್ಲಿ ಆಕೆ ತೊಡಗಿದ್ದರೂ ಆಕೆಯನ್ನು ಸಮಾಜ ನೀಚಳೆಂಬಂತೆ ನೋಡುತ್ತದೆಯೇ ಹೊರತು ಆಕೆಗೆ ಯಾವುದೇ ಬಹಿಷ್ಕಾರ ಹಾಕುವುದಿಲ್ಲ. ಪಿಂಜಾರರ ಗಂಡು ತನ್ನ ಜಾತಿಗೆ ಸೇರದ ಹೆಣ್ಣನ್ನು ಮದುವೆಯಾದರೆ, ಓಡಿಸಿಕೊಂಡು ಬಂದರೆ ಅಂಥ ಸಂದರ್ಭದಲ್ಲಿಯೂ ಅವರನ್ನು ಬಹಿಷ್ಕರಿಸುವುದಿಲ್ಲ. ಆ ಹೆಣ್ಣಿನ ಒಪ್ಪಿಗೆ ಪಡೆದು ಆತನ ಜೊತೆಗೆ ಹೊಂದಿಕೊಂಡು ಬಾಳಲು ಬುದ್ಧಿವಾದ ಹೇಳುತ್ತಾರೆ. ಮತ್ತು ಆಕೆಗೆ ತಮ್ಮ ಜಾತಿಯ ಹೆಸರೊಂದನ್ನು ಇಟ್ಟು ಕರೆಯುತ್ತಾರೆ. ಹೀಗೆ ಹೆಸರಿಡುವಾಗ ಕೂಡ ಯಾವುದೇ ನಿಯಮ, ಶಾಸ್ತ್ರಗಳನ್ನು ಅನುಸರಿಸಲಾಗುವುದಿಲ್ಲ, ಮತ್ತು ಈ ಸಂಬಂಧವಾಗಿ ಮುಲ್ಲಾನನ್ನೋ, ಜಾತಿಯ ಮುಖಂಡರನ್ನೋ ಕಾಣುವುದಿಲ್ಲ. ಇಂತಹ ಸಂಬಂಧಗಳು ಸಂಘರ್ಷದಿಂದ ಕೂಡಿದ್ದರೆ ಆಕೆಯ ಮನವೊಲಿಸಿ ತನ್ನ ಊರಿಗೆ ಹೋಗಲು ತಿಳಿಸುತ್ತಾರೆ. ಈ ವಿಷಯದಲ್ಲಿ ಗಂಡಿನ ತಪ್ಪೇನಾದರೂ ಇದ್ದರೆ ಆತನ ಮನೆಯವರೇ ಆತನಿಗೆ ಹೊಡೆದು ಬಡಿದು ಬುದ್ಧಿ ಹೇಳುತ್ತಾರೆ. ಮತ್ತು ತೀರ ಕಠಿಣವಾದ ಶಿಕ್ಷೆ ಎಂದರೆ ಮನೆಯಿಂದ ಹೊರಹಾಕುತ್ತಾರಷ್ಟೇ.

ಪಿಂಜಾರರಲ್ಲಿ ಜಾತಿನಿಷ್ಠವಾದ ಭಾವನೆಗಳಿಲ್ಲ ಎಂದು ಹೇಳುವಂತಿಲ್ಲ. ಪಿಂಜಾರರನ್ನು ಅಣಕಿಸುವ ಮುಸ್ಲಿಮರನ್ನು ಕಂಡಾಗಲೆಲ್ಲಾ ಅವರು ಉರಿದು ಬೀಳುವುದುಂಟು. ಆದರೆ ಇಡೀ ಜಾತಿಗೆ ಕಟ್ಟುನಿಟ್ಟಾಗಿ ಅನುಸರಿಸಲೇಬೇಕೆಂಬ ನಿಯಮಗಳು ಯಾಕೆ ಪಿಂಜಾರರಲ್ಲಿಲ್ಲ ಎನ್ನುವುದು ಕುತೂಹಲಕರವಾಗಿದೆ. ಇದಕ್ಕೆ ಪಿಂಜಾರರು ಮತಾಂತರಕ್ಕೊಳಪಟ್ಟವರಾದುದರಿಂದ ಮತ್ತು ತೀರಾ ಭಿನ್ನ ಧರ್ಮವೊಂದರ ಆಚರಣೆಗಳಿಗೆ ನಿಷ್ಠರಾದುದರಿಂದ ಹೀಗಾಗಿರಬಹುದೇ ? ಪಿಂಜಾರರಲ್ಲಿನ ಈ ನಿಯಮರಾಹಿತ್ಯವನ್ನು ಹೊರತಾಗಿಸಿ ನೋಡಿದರೆ ಪಿಂಜಾರರಿಗೆ ನೈತಿಕವಾದುದೊಂದು ನೆಲೆಯಿದೆ. ಅದು ಜಾತಿ ಧರ್ಮಗಳು ಸಂಕೇತಿಸುವ ನೈತಿಕತೆಗಿಂತ ಭಿನ್ನವಾದುದು ಎಂದು ತೋರುತ್ತದೆ. ಕಳ್ಳ, ಕೊಲೆಗಾರರನ್ನು, ಎರಡು ಮದುವೆಯಾದವರನ್ನು, ವಿವಾಹಿತರ ನಡುವಿನ ಅನೈತಿಕ ಸಂಬಂಧ ಹೊಂದಿದವರನ್ನು, ಗಂಟುಗಳ್ಳರನ್ನು, ಮೋಸಗಾರರನ್ನು, ದುಡಿಯದ ಮೈಗಳ್ಳನನ್ನು ಪಿಂಜಾರರು ತುಂಬ ಕೀಳಾಗಿ ಕಾಣುವುದಿದೆ. ಈ ಬಗೆಯ ಜನ ಸಮಾಜದ ಆರೋಗ್ಯವನ್ನು ಹಾಳು ಮಾಡುವುದರಿಂದ ಅಂತಹವರನ್ನು ಪಿಂಜಾರರು ಕ್ಷಮಿಸುವುದಿಲ್ಲ, ಪ್ರೋತ್ಸಾಹಿಸುವುದಿಲ್ಲ. ಉತ್ತಮ ಹಾಗೂ ಮೇಲ್ಜಾತಿಗಳಲ್ಲಿ ಇಂತಹವರನ್ನು ನೋಡುವ ಕ್ರಮವೇ ಬೇರೆ. ಅವನು ಏನೇ ಮಾಡಲಿ, ನಮ್ಮವನು, ಇರಲಿ ಬಿಡಿ ಎನ್ನುವಂತಹ ಧೋರಣೆ ಅಲ್ಲಿದೆ. ಬಹುಪಾಲು ಬುಡಕಟ್ಟು, ಹಾಗೂ ಹಿಂದುಳಿದ ಜಾತಿಗಳಲ್ಲಿ ಅಂತಹವರ ಕುರಿತಾದ ನಿಷ್ಠುರವಾದ ಮನೋಭಾವ ಕಂಡುಬರುತ್ತದೆ. ಅಂದರೆ ಪಿಂಜಾರರಲ್ಲಿ ಜಾತಿ ಅಥವಾ ಧರ್ಮ ಪ್ರಣೀತವಾದ ನೀತಿ

ನಿಯಮಗಳನ್ನು ಸಮುದಾಯದ ಒತ್ತಾಯದಿಂದಲೋ ಭಯದಿಂದಲೋ ಅನುಸರಣೆ ಮಾಡುವುದಕ್ಕಿಂತ ವಕ್ತಿಗತ ತಿಳುವಳಿಕೆ, ಸಂಸ್ಕಾರಗಳ ಬಲದಿಂದ ಸನ್ನಡತೆಯ ಹಾದಿಯಲ್ಲಿ ಸಾಗಬೇಕಾದ ಅಗತ್ಯವನ್ನು ಒತ್ತಿ ಹೇಳುವ ಪರಿಪಾಠವಿರುವಂತಿದೆ. ಹಾಗಾಗಿ ಜಾತಿ ಬಹಿಷ್ಕಾರ ಮತ್ತು ಜಾತಿಗೆ ಸೇರಿಸಿಕೊಳ್ಳುವ ಕ್ರಮ ಪಿಂಜಾರ ಜನಾಂಗದಲ್ಲಿ ಯಾವ ಮಹತ್ವವನ್ನೂ ಪಡೆದುಕೊಂಡಿಲ್ಲ.

ಪಿಂಜಾರರಿಗೆ ಸಂಬಂಧಪಟ್ಟ ವಿವಾದಗಳಲ್ಲಿ ಸಾಮಾನ್ಯವಾಗಿ ಮುಸ್ಲಿಮರೂ ತಲೆಹಾಕುವುದಿಲ್ಲ. ಅದಕ್ಕೆ ಮುಖ್ಯ ಕಾರಣ ಅವರಿಗೆ ಇಸ್ಲಾಂ ತಿಳುವಳಿಕೆಯಿಲ್ಲ, ಹೇಳಿದರೂ ಅವರು ಕೇಳುವುದಿಲ್ಲ ಎಂಬುದು. ಹಾಗೆ ನೋಡಿದರೆ ಪಿಂಜಾರರ ಎಲ್ಲ ಬಗೆಯ ಸುಖದುಃಖಗಳಲ್ಲಿ ಸಮಾನವಾಗಿ ಭಾಗವಹಿಸಿ ಸ್ಪಂದಿಸುವವರು ಹಿಂದೂಗಳೇ, ಅದರಲ್ಲೂ ಲಿಂಗಾಯ್ತರೇ. ಇವರ ಬಗ್ಗೆ ಪಿಂಜಾರರಿಗೂ ಗೌರವವಿರುವುದರಿಂದ ಸಾಮಾನ್ಯವಾಗಿ ವಿವಾದಗಳನ್ನು ಕುರಿತಂತೆ ಲಿಂಗಾಯ್ತರು ಹೇಳುವ ಪರಿಹಾರ ಸೂತ್ರಗಳಿಗೆ ಸಮ್ಮತಿ ನೀಡುತ್ತಾರೆ. ಇದು ಪಿಂಜಾರರಲ್ಲಿ ಜಾತಿಪದ್ಧತಿಯ ಕ್ರೌರ್ಯಗಳಿಗೆ ತುತ್ತಾಗಿಯೂ ಅದನ್ನು ಮೀರುವ ಮಾನವೀಯ ಹುಡುಕಾಟದ ಪ್ರಯತ್ನದ ಸಂಕೇತವಾಗಿದೆ.

## ೩.೮ ನಂಬಿಕೆಗಳು

ಜನಾಂಗಗಳು ತಮ್ಮ ಸಾಮುದಾಯಿಕ ಬದುಕಿನ ನಿರ್ವಹಣೆಯ ಸಂದರ್ಭದಲ್ಲಿ ರೂಢಿಗತವಾಗಿ ಬಂದ ಅನೇಕ ಬಗೆಯ ನಂಬಿಕೆಯ ನೆಲೆಯನ್ನು ಹೊಂದಿರುತ್ತವೆ. ಮೂಲಭೂತವಾಗಿ ಮನುಷ್ಯ ಆಶಾವಾದಿ. ಆತನ ಆಸೆಗಳು ಕೆಲವೊಮ್ಮೆ ನಿರಾಶೆ ಉಂಟುಮಾಡಿದರೂ ಅದರ ಕೊನೆಯಲ್ಲಿ ಮತ್ತದೇ ಆಸೆಯನ್ನು ಹೊತ್ತು ತರುತ್ತವೆ. ಹುಟ್ಟಿಗಿಂತ ಮೊದಲು ಪೂರ್ವಜನ್ಮ, ಸತ್ತನಂತರ ಪುನರ್ಜನ್ಮದ ಕಲ್ಪನೆಗಳು ಇದಕ್ಕೆ ಸಾಕ್ಷಿಯಾಗಿವೆ. ಈ ಜನ್ಮದಲ್ಲಿ ಸುಖ, ಸಂಭ್ರಮಗಳು ನಿರಾಯಾಸವಾಗಿ ಪ್ರಾಪ್ತಿಯಾದರೆ ಅದು ಪೂರ್ವಜನ್ಮದ ಸುಕೃತದ ಫಲ ಎಂದೇ ತಿಳಿಯುತ್ತಾರೆ. ಅದರ ಬದಲಿಗೆ ಕಷ್ಟ-ಕೋಟಲೆಗಳ ನಿರಂತರ ಯಾತನೆಯಿದ್ದರೆ ಮುಂದಿನ ಜನ್ಮದಲ್ಲಾದರೂ ಸುಖವಾಗಿರುವ ಭರವಸೆಯನ್ನು ತಂದುಕೊಳ್ಳುತ್ತಾರೆ. ಇನ್ನು ಈ ಬದುಕಿನ ಸಂದರ್ಭದ ಅನೇಕ ಬಗೆಯ ಆಚರಣೆ, ವ್ಯವಹಾರ, ಸಂಬಂಧ ಕುರಿತಾದ ಕ್ಷಣಗಳಲ್ಲಿ ಕೆಡುಕಾದೀತೆಂಬ ಆತಂಕದ ನೆರಳಲ್ಲೇ ಅಂತಹದ್ದೇನೂ ಆಗಲಾರದೆಂಬ ವಿಶ್ವಾಸವನ್ನು ಹೊಂದುತ್ತಾನೆ. ಅದು ಮನುಷ್ಯನ ಸ್ವಭಾವದಲ್ಲೇ ಇರುವ ಆಶಾವಾದ. ಬದುಕಿನ ಸುಖ ಸುಮ್ಮಾನ ಹಾಗೂ ದುಃಖ-ದುಮ್ಮಾನಗಳ ಸ್ವರೂಪ ಜ್ಞಾನವಿರುವಂಹವನೂ ಕೂಡ ಈ ಬಗೆಯ ನಂಬಿಕೆ, ನಿರೀಕ್ಷೆಗಳನ್ನು ಹೊಂದಿರುತ್ತಾನೆ. ಆದರೆ ಇಂಥ ನಂಬಿಕೆಗಳು ಅನೇಕ ಖೂಳರ ದೆಸೆಯಿಂದ ಜೀವವಿರೋಧಿ ಧೋರಣೆಯನ್ನು ತಳೆದಿರುವುದು ಮನುಷ್ಯ ಈ ಹಿನ್ನೆಲೆಯಲ್ಲಿ ಜವಾಬ್ದಾರಿಯಿಂದ ವರ್ತಿಸಿಲ್ಲ ಎನ್ನುವುದನ್ನು ಸೂಚಿಸುತ್ತದೆ. ಪಿಂಜಾರರಂಥ ಜನಾಂಗದಲ್ಲಿ ಕೂಡ ಆ ಬಗೆಯ ನಂಬಿಕೆಗಳಿವೆ ಮತ್ತು ಇವೆಲ್ಲ ಪಿಂಜಾರರ ಮೂಲ ಆಶ್ರಮದ ಸವೆಯಲಾರದ ಗುರುತುಗಳಾಗಿ ಸಂವೇದನೆಯ ಸ್ವರೂಪದಲ್ಲಿ ಉಳಿದುಬಿಟ್ಟವೆ ಎನ್ನುವುದು ಗಮನಾರ್ಹವಾದ ಸಂಗತಿಯಾಗಿದೆ.

ಪಿಂಜಾರರು ಹೆಣ್ಣು-ಗಂಡು ನೋಡುವ, ನೋಡಿ ಮಾತುಕತೆಯಾಡುವ ಸಲುವಾಗಿ ಹೊರಟಾಗ ಬೆಸಸಂಖ್ಯೆಯ ಜನ ಹೊರಡುವುದಿಲ್ಲ, ಅವರೆಲ್ಲ ಸಮಸಂಖ್ಯೆಯಷ್ಟಿದ್ದಾರೆ ಎನ್ನುವುದನ್ನು ಖಾತ್ರಿಪಡಿಸಿಕೊಳ್ಳುತ್ತಾರೆ. ಅಷ್ಟೇ ಅಲ್ಲ ಹಾಗೆ ಹೊರಡುವ ಮುನ್ನ ಬ್ರಾಹ್ಮಣ ಗುರುಗಳ ಹತ್ತಿರ ಹೋಗಿ ದಕ್ಷಿಣೆಯಿಟ್ಟು ಪಂಚಾಂಗ ನೋಡಿಸುತ್ತಾರೆ. ಆ ಬ್ರಾಹ್ಮಣ ಗುರುವಿನ ಸೂಚನೆ ಮೇರೆಗೆ ಇವರು ಹೊರಡುವ ಸಮಯ, ಜನ ಎಷ್ಟಿರಬೇಕು ಎನ್ನುವುದನ್ನು ನಿಷ್ಕರ್ಷಿಸುತ್ತಾರೆ. ಹಾಗೆ ಹೊರಟಾಗ ಯಾರಾದರೂ ಎಲ್ಲಿಗೆ ಹೊರಟಿರಿ ? ಎಂದು ಕೇಳಿದರೆ ಅದು ಅಪಶಕುನವೆಂದು ಭಾವಿಸಿ ಹಿಂತಿರುಗಿ ಒಳಬಂದು ಅರೆಕ್ಷಣ ಕೂತು ಮತ್ತೆ ಹೊರಡುತ್ತಾರೆ. ಅವರ ಪ್ರಯಾಣದ ಹಾದಿಯಲ್ಲಿ ನಡೆಯುವಾಗ ನರಿ, ಮುಂಗುಸಿ, ಕತ್ತೆ, ಕೆಂಭೂತ ಕಾಣಿಸಿಕೊಂಡರೆ ಶುಭ ಶಕುನ. ಬೆಕ್ಕು, ಕ್ಷೌರಿಕ, ಒಂಟಿ ಬ್ರಾಹ್ಮಣ, ವಿಧವೆ, ಸಲಿಕೆ, ಹಾರೆ ಹೊತ್ತವರು, ಸೌದೆ ಹೊರೆ ಹೊತ್ತವರು ಅಡ್ಡ ಬಂದರೆ, ಎದುರು ಹಾದು ಹೋದರೆ ಅಪಶಕುನ. ಕಾಗೆ ತಲೆ ಮೇಲೆ ಹಾದು ಹೋದರಂತೂ ಮುಗಿದೇ ಹೋಯಿತು, ಯಾರಾದರೂ ಸತ್ತೇ ಹೋಗುತ್ತಾರೆ ಎಂದು ದೃಢವಾಗಿ ನಂಬುತ್ತಾರೆ. ಹಲ್ಲಿ ಲೊಚಗುಟ್ಟಿದರೆ ಆಗ ಮಾತಾಡುತ್ತಿದ್ದ ಮಾತು ನಿಜವಾಗುತ್ತದೆಂದು ಭಾವಿಸುತ್ತಾರೆ. ಒಲೆ ಕರೆದರೆ (ಒಲೆಯಲ್ಲಿರುವ ಉರುವಲು ಉರಿಯುವಾಗ ಸದ್ದು ಮಾಡಿದರೆ), ನೀರು ತುಂಬಿದ ಚಂಬು, ಕೊಡಪಾನ ಕೆಳಗೆ ಬಿದ್ದರೆ, ಮಕ್ಕಳು ಕಸಮರಿಗೆಯಿಂದ ಕಸಗುಡಿಸಿದರೆ ಯಾರಾದರೂ ನಂಟರು ಆಗಮಿಸುತ್ತಾರೆಂಬ ನಂಬಿಕೆಯಿದೆ. ಬಂಗಾರ ಸಿಕ್ಕರೆ ಕೆಡುಕು, ಬೆಳ್ಳಿ ಸಿಕ್ಕರೆ ಒಳ್ಳೆಯದು. ಬಂಗಾರ ಕಳೆದುಕೊಂಡರೆ ಭಂಗಹೋಯಿತು ಇತ್ಯಾದಿ ನಂಬಿಕೆಗಳು ಪಿಂಜಾರರಲ್ಲಿವೆ. ಮನೆಮಗಳನ್ನು ಮಂಗಳವಾರ ಗಂಡನ ಮನೆಗೆ ಕಳಿಸುವುದಿಲ್ಲ. ಹಾಗೆಯೇ ಶುಕ್ರವಾರದ ದಿನ ಸೊಸೆಯನ್ನು ಆಕೆಯ ತವರಿಗೆ ಕಳಿಸುವುದಿಲ್ಲ. ಕಾರಣ ಸೊಸೆ ಮನೆಯ ಲಕ್ಷ್ಮಿ ಎಂಬ ಭಾವನೆ. ರೈತಾಪಿ ಕೆಲಸದ ಪಿಂಜಾರರು ಎತ್ತುಗಳನ್ನು ಕೊಂಡು ತಂದಾಗ ಮನೆ ಒಳಗೆ ಬಿಡುತ್ತಾರೆ. ಹಾಗೆ ವಾಸದ ಮನೆಗೆ ಬಿಡುವಾಗ ಎತ್ತು ಎಡಗಾಲನ್ನು ಮೊದಲು ಇಟ್ಟು ಪ್ರವೇಶಿಸಿದರೆ ಅದು ಈ ಮನೆಯಲ್ಲಿ ಬಹಳ ಕಾಲ ಇರುವುದಿಲ್ಲ, ಬಲಗಾಲನ್ನಿಟ್ಟು ಪ್ರವೇಶಿಸಿದರೆ ಬಹಳ ದಿನ ಮನೆಗೆ ದುಡಿಯುತ್ತದೆ ಎಂದು ಭಾವಿಸಲಾಗುತ್ತದೆ. ಕನಸಿನಲ್ಲಿ ಯಾರಾದರೂ ಸತ್ತರೆ ಅಂತಹವರಿಗೆ ಆಯಸ್ಸು ಜಾಸ್ತಿ, ಹಾಗೇ ಕನಸಿನಲ್ಲಿ ನಿಧಿ ಸಿಕ್ಕರೆ, ಬೆಂಕಿ ಕಂಡರೆ ಒಳ್ಳೆಯದಲ್ಲ. ಪಿಂಜಾರರು ಬುಡಬುಡಿಕೆಯವರು, ಎಣ್ಣೆಜೋಗಿಗಳು, ಕುರುಮಾಮರು ಹೇಳುವ ಭವಿಷ್ಯವನ್ನು ಅಪಾರವಾಗಿ ನಂಬುತ್ತಾರೆ. ಒಂಟಿ ಆಲುವಕ್ಕಿ ಕೂಗಿದರೆ ಅದು ಅಪಾಯದ ಸಂಕೇತ. ಹಾಗೆ ಕೂಗಿದ ಅಕ್ಕಪಕ್ಕದ ಸ್ಥಳಗಳ ಜನರಲ್ಲಿ ಜಗಳ, ಹೊಡೆದಾಟ, ಸಾವು ಇಂತಹವು ಏನಾದರೂ ಸಂಭವಿಸುತ್ತದೆ ಎಂದು ಆಂತಕಪಡುತ್ತಾರೆ. ಹತ್ತಾರು ಕಾಗೆಗಳು ಒಟ್ಟಾಗಿ ಕಾಕಾ ಕೂಗುತ್ತಾ ಸುತ್ತಾಡಿದರೆ ಯಾರಾದರೂ ಸಾಯುತ್ತಾರೆ ಎಂದು ನಂಬಲಾಗುತ್ತದೆ. ಗರ್ಭಿಣಿಗೆ ಕಣ್ಣುಸರವಾಗದಿರಲೆಂದು ಆಗಾಗ್ಗೆ ಕಸಮರಿಗೆ, ಒಣಮೆಣಸಿನಕಾಯಿ, ಉಪ್ಪು ಹಿಡಿದು ನಿವಾಳಿಸಿ ಮೆಣಸಿನಕಾಯಿ, ಉಪ್ಪನ್ನು ಒಲೆಯಲ್ಲಿ ಹಾಕುತ್ತಾರೆ. ಮಗುವಿನ ಜನನದ ನಂತರವೂ ಈ ನಿವಾಳಿಸುವುದನ್ನು ಸೂಲಗಿತ್ತಿಯ ಮಾರ್ಗದರ್ಶನದಲ್ಲಿ ಮಾಡುತ್ತಾರೆ. ಮಗುವಿಗೆ ಜ್ವರ ಬಂದರೆ ಬಳೆಯ ಚೂರೊಂದರ ತುದಿಯನ್ನು ಹಣತೆಯ ಉರಿಯಲ್ಲಿ ಕಾಯಿಸಿ ಎದೆ, ನೆತ್ತಿ, ಹಣೆ, ಅಂಗಾಲು ಮುಂತಾದ

ಕಡೆ ಚುಟಿಕೆ ಹಾಕುತ್ತಾರೆ. ಮಗು ಚಂಡಿ ಹಿಡಿದು ಅಳುತ್ತಲೇ ಇದ್ದರೆ ಹುತ್ತದ ಮಣ್ಣು ತಂದು ಗೊಂಬೆ ಮಾಡಿ ಹಳೆಯ ಕಸ ಮರಿಗೆಯೊಂದರಿಂದ ನಿವಾಳಿಸಿ ಗೊಂಬೆ, ಕಸಮರಿಗೆ ಕಡ್ಡಿ, ಎಲೆ ಅಡಿಕೆ, ಐದು-ಹತ್ತು ಪೈಸೆಯ ನಾಣ್ಯವನ್ನು ಊರ ಹೊರಗೆ ದಾರಿಯ ನಡುವೆ ಇಡುತ್ತಾರೆ. ನಿವಾಳಿಯನ್ನು ಯಾರಾದರೂ ದಾಟಿದರೆ ಮಗುವಿಗೆ ಅಂಟಿಕೊಂಡಿದ್ದ ಕಾಯಿಲೆ ಕಸಾಲೆ ಹೊರಟು ಹೋಗುತ್ತದೆಂದೂ, ದಾಟಿದವರಿಗೆ ಅದು ಹತ್ತುತ್ತದೆಂದೂ ಪಿಂಜಾರರು ಭಾವಿಸುತ್ತಾರೆ. ಗಂಡು ಮಗು ಹುಟ್ಟಲೆಂದು ದಾದಾಪಾಡಿಗೆ, ಹಣಿಗೆರೆಕಟ್ಟೆಗೆ, ಹೊನ್ನೂರಲಿ, ಮಂಜುನಾಥ ಮುಂತಾದ ದೇವರಿಗೆ ಹರಕೆ ಕಟ್ಟುತ್ತಾರೆ. ಹಾಗೇ ಎಲ್ಲಮ್ಮ ಚೌಡಮ್ಮರಿಗೆ ಕೋಳಿಯ ಹರಕೆ ಹೊತ್ತುಕೊಳ್ಳುತ್ತಾರೆ. ಕುತೂಹಲಕರವಾದ ಪಿಂಜಾರರ ಇನ್ನೂ ಕೆಲವು ನಂಬಿಕೆಗಳಿವೆ. ಒಲೆಕರೆದರೆ, ಬಾಯಿಂದ ತುತ್ತು (ಗುಕ್ಕು) ಕೆಳಗೆ ಬಿದ್ದರೆ, ತುಂಬಿದ ಚಂಬು ಬಿದ್ದರೆ ಬೀಗರು ಬರುತ್ತಾರೆ ಎಂದೂ ಹಲ್ಲಿ ನುಡಿದರೆ ತಾವು ಆಗ ಮಾತಾಡಿದ್ದು ನಿಜವಾಗುತ್ತದೆಂದೂ ನಂಬುತ್ತಾರೆ. ಗೂಬೆ, ಆಲುವಕ್ಕಿ ನುಡಿದರೆ ಜಗಳವಾಗುತ್ತದೆ ಅಥವಾ ಯಾರಾದರೂ ಸಾಯುತ್ತಾರೆಂದು ಆತಂಕ ಪಡುತ್ತಾರೆ. ತುಂಬಿದಕೊಡ, ಹೂವು, ಬಳೆ, ಮುತ್ತೈದೆ, ಸೂಳೆ, ಹೆಡೆಯುಗಲಿಸಿದ ಹಾವು ಎದುರಾದರೆ ಶುಭಶಕುನವೆಂದೂ, ಕಟ್ಟಿಗೆ, ಮುಂಡೆ, ಸಲ್ಕೆ, ಬ್ರಾಹ್ಮಣ, ಹಜಾಮ, ಬೆಕ್ಕು ಎದುರು ಬಂದರೆ ಅಪಶಕುನವೆಂದೂ ನಂಬುತ್ತಾರೆ. ಯುಗಾದಿಯ ದಿನದ ಚಂದ್ರನನ್ನು ಕಂಡು ದವಸ-ಧಾನ್ಯಗಳ ದರ ಕಡಿಮೆ ಅಥವಾ ಹೆಚ್ಚಾಗುತ್ತದೆಂದು ಊಹಿಸುತ್ತಾರೆ.

ಪಿಂಜಾರರ ಬದುಕಿನಲ್ಲಿ ಹಾಸು ಹೊಕ್ಕಾಗಿರುವ ಈ ಬಗೆಯ ನಂಬಿಕೆಗಳು ಅವರ ಮೂಲನೆಲೆಯಿಂದ ಬಂದವುಗಳೇ ಆಗಿವೆ. ಮತ್ತು ಪಿಂಜಾರರು ಈ ನಂಬಿಕೆಗಳನ್ನು ಚಾಚೂ ತಪ್ಪದೇ ಪಾಲಿಸುತ್ತಾರೆ. ಜನಾಂಗವೊಂದರ ಈ ಬಗೆಯ ನಂಬಿಕೆಗಳು ಅವರವರ ಸಾಮಾಜಿಕ ಆರ್ಥಿಕ ಹಾಗೂ ಪಾರಮಾರ್ಥಿಕ ನಿಲುವುಗಳನ್ನು ಸೂಚಿಸುತ್ತಿರುತ್ತವೆ. ಇಲ್ಲಿ ಸೂಚಿಸಿರುವ ಕೆಲ ನಂಬಿಕೆಗಳು ಪಿಂಜಾರರು ಜೀವನವನ್ನು ಸ್ವೀಕರಿಸುವ ರೀತಿ, ಅವರ ಆಶಾವಾದ, ಹತಾಶೆಯನ್ನು ಕೂಡ ಹೇಳುತ್ತವೆ. ಒಂದು ಮುಖ್ಯವಾದ ವಿಚಾರವೆಂದರೆ ಇಸ್ಲಾಂಗೆ ನಿಷ್ಠವಾಗಿರುವ ಪಿಂಜಾರರು ಇಸ್ಲಾಂನ ವೈಚಾರಿಕ ಜೀವನ ವಿಧಾನವನ್ನು ಪೂರ್ತಿಯಾಗಿ ಒಪ್ಪಿಕೊಂಡಂತಿಲ್ಲ. ಯಾಕೆಂದರೆ ಇಸ್ಲಾಂನಲ್ಲಿ ಮೇಲೆ ತಿಳಿಸಿದಂತಹ ನಂಬಿಕೆಗಳಿಗೆ ಅವಕಾಶವಿಲ್ಲ. ಆದರೆ ಪಿಂಜಾರರಲ್ಲಿ ಈಗೀಗ ಈ ನಂಬಿಕೆಗಳಿಗೆ ಪೂರ್ಣ ವಿಶ್ವಾಸ ತೋರುವುದು ಕಡಿಮೆಯಾಗುತ್ತಿದೆ. ಬದುಕಿನ ಒತ್ತಡವೋ, ಆಧುನಿಕತೆಯ ವೇಗವೋ, ಜಾಗತೀಕರಣದ ಪರಿಣಾಮವೋ ಒಟ್ಟಿನಲ್ಲಿ ನಮ್ಮ ದೇಸೀ ಸಂಪ್ರದಾಯಗಳು, ನಂಬಿಕೆಗಳು ಅರ್ಥ ಕಳೆದುಕೊಳ್ಳುತ್ತಿವೆ. ಜನರು ಈ ಸಂಸ್ಕೃತಿ ರಕ್ಷಣೆಯ ಜವಾಬ್ದಾರಿಯಿಂದ ವಿಮುಖರಾಗುತ್ತಿದ್ದಾರೆ. ಇದೇ ರೀತಿ ನಮ್ಮ ವ್ಯವಸ್ಥೆ ಮುಂದುವರಿದರೆ ಮುಂದೊಂದು ದಿನ ಸಂಸ್ಕೃತಿ ರೂಪಗಳನ್ನು ಕೇವಲ ಇಂತಹ ಅಧ್ಯಯನಗಳಲ್ಲಿ ಮಾತ್ರ ನೋಡಬೇಕಾಗುತ್ತದೆ.



ಅಧ್ಯಾಯ - ೪

# ಆಚರಣೆಗಳು

## ೪.೧ ಜೀವನಾವರ್ತನ ಆಚರಣೆಗಳು

ಸಂಸ್ಕೃತಿ ಅಧ್ಯಯನದ ಸಂದರ್ಭದಲ್ಲಿ ಮಹತ್ವವಾದ ಆಚರಣೆಗಳನ್ನು ಕುರಿತ ಅಧ್ಯಯನ ವಿವರಣಾತ್ಮಕ ಸ್ವರೂಪದ್ದಾಗಿರುತ್ತದೆ. ಮನುಷ್ಯನ ಬದುಕಿನಲ್ಲಿ ಆಚರಣೆಗಳು ಮುಖ್ಯವಾಗಿ ಎರಡು ವಿಧವಾಗಿರುತ್ತವೆ. ಒಂದು, ಜೀವನದಲ್ಲಿ ಸ್ವಾಭಾವಿಕವಾಗಿ, ಅಂದರೆ ಜೈವಿಕ ಸ್ವರೂಪದಲ್ಲೇ ಇರುವ, ಬದಲಾವಣೆಗಳಾಗುವ ಸಂದರ್ಭದ ಆಚರಣೆಗಳು. ಇವು ಹುಟ್ಟು, ನಾಮಕರಣ, ಜವಳ, ಮುಂಜಿ, ಮದುವೆ, ಸಾವು ಮೊದಲಾದ ರೂಪಗಳಲ್ಲಿ ಕಂಡು ಬರುತ್ತವೆ. ಇವೆಲ್ಲವುಗಳಲ್ಲಿ ಮನುಷ್ಯನಿಗೆ ಅನಿವಾರ್ಯವಾದವುಗಳೆಂದರೆ ಹುಟ್ಟು ಮತ್ತು ಸಾವು. ಉಳಿದವುಗಳು ಮನುಷ್ಯ ತನ್ನ ಸಂತೋಷಕ್ಕೆ ಮಾಡಿಕೊಂಡಿರುವಂತಹವುಗಳು. ಹುಟ್ಟಿನಿಂದ ಸಾವಿನವರೆಗೆ ಬೇರೆ ಬೇರೆ ಹಂತಗಳಲ್ಲಿ ಮನುಷ್ಯ ಅನುಭವಿಸುವ ಈ ಬಗೆಯ ಆಚರಣೆಗಳ ಹಿನ್ನೆಲೆಯಲ್ಲಿರುವುದು ಮೂಲಭೂತವಾಗಿ ಜೀವನಪ್ರೀತಿ. ಸಾಯುವವರೆಗೆ ತೀವ್ರ ಭಾವನಾತ್ಮಕವಾಗಿ ಬದುಕುವ ಮನುಷ್ಯ ಈ ಆಚರಣೆಗಳನ್ನು ಸುಂದರ ನೆನಪುಗಳನ್ನಾಗಿ ಜೀವ ತುಂಬಿಕೊಳ್ಳುತ್ತಾನೆ. ಮತ್ತು ಇದರಿಂದೆಲ್ಲ ಬಿಡುಗಡೆ ಪಡೆಯುವ ಹಂತದಲ್ಲಿ ಅಪಾರವಾದ ನೋವನ್ನೂ ಅನುಭವಿಸುತ್ತಾನೆ. 'ಗೊನೆ ಮಾಗಿ ಬಾಳೆ ಹಿಗ್ಗುತಿದೆ ಹಿಂಡು-ಹಿಳ್ಳುಗಳಲ್ಲಿ ಪ್ರಾಣಪೂರಿ' ಎನ್ನುವ ಕವಿಮಾತಿನಂತೆ ತನಗಿರುವ ಬದುಕಿನ ಪೂರ್ಣಾವಧಿಯನ್ನು ಸಂತೋಷ - ಸಂಕಟಗಳ ಸಂಯೋಗದಲ್ಲಿ ನೀಗಿದ ಮನುಷ್ಯ ಸಾಯುವಾಗ ಕೂಡ ತನ್ನ ಹೆಜ್ಜೆ ಗುರುತುಗಳಾದ ಮಕ್ಕಳು-ಮರಿಗಳನ್ನು ಕಂಡು ನಗುನಗುತ್ತಲೇ ಕೊನೆಯಾಗುತ್ತಾನೆ. ಹಾಗೆ ನೋಡಿದರೆ ನಿಸರ್ಗದಲ್ಲಿನ ಯಾವುದೂ ಮನುಷ್ಯನಿಗೆ ಸುಖವನ್ನೇ ನೀಡುತ್ತದೆ. ಹೂವು ಅರಳಿದರೆ, ಮಿಂಚಿದರೆ, ಮಳೆ ಸುರಿದರೆ, ಹೊತ್ತು ಹುಟ್ಟಿದರೆ, ಗಾಳಿ ಬೀಸಿದರೆ, ಮನುಷ್ಯನನ್ನೂ ಸೇರಿದಂತೆ ಇಡೀ ಜೀವಸಮುದಾಯ ಆನಂದೋಲ್ಲಾಸದಿಂದ ಸಂಭ್ರಮಿಸುತ್ತದೆ. ಈ ಅವ್ಯಕ್ತ ಸಂಭ್ರಮವೇ ಆಚರಣೆಗಳ ಮೂಲ ನೆಲೆ. ಜೀವಸಮುದಾಯ ಆನಂದೋಲ್ಲಾಸದಿಂದ ಸಂಭ್ರಮಿಸುತ್ತದೆ. ಈ ಅವ್ಯಕ್ತ ಸಂಭ್ರಮವೇ ಆಚರಣೆಗಳ ಮೂಲ ನೆಲೆ. ಆರಂಭದಲ್ಲಿ ಈ ಆಚರಣೆಗಳು ಸಮುದಾಯಗಳೊಳಗಿನ ನಿರಾಡಂಬರ ಉತ್ಸವಗಳಾಗಿದ್ದಂತೆ ತೋರುತ್ತದೆ. ಹೆಣ್ಣು-ಗಂಡಿನ ಸಮಾಗಮದಷ್ಟೇ ಖುಷಿಯನ್ನು ಅದರ ಫಲವಾದ ಮಗು ನೀಡುತ್ತದೆ. ಆ ಮಗುವನ್ನು ಎತ್ತಿಕೊಂಡು ಮುತ್ತಿಟ್ಟು ಕುಣಿದಾಡುವುದು ಯಾವ ತಂದೆ-ತಾಯಿಗೆ ಸಾಧ್ಯವಿಲ್ಲ ? ಈ ಬಗೆಯ ಸಂತೋಷ - ಸಡಗರಗಳೇ ಮುಖ್ಯವಾದ ಆಚರಣೆಗಳು ಮನುಷ್ಯ ಸಹಜವಾದ ಅಭಿವ್ಯಕ್ತಿಯನ್ನು ಸಾಧ್ಯವಾಗಿಸಿವೆ. ಒಂದೊಮ್ಮೆ ಕೇವಲ ಸಂತಸದ ಸಂಕೇತಗಳಾಗಿದ್ದ ಆಚರಣೆಗಳು ಬರಬರುತ್ತಾ ಧಾರ್ಮಿಕತೆಯ ಭಾಗವಾಗಿ ಆಧುನಿಕ ಕಾಲದಲ್ಲಿ ಪ್ರತಿಷ್ಠೆ ಪ್ರದರ್ಶನದ ಆಡುಂಬೊಲದಂತಾಗಿರುವುದು ವಿಪರ್ಯಾಸ. ಈ ಬಗೆಯ ಜೀವನಾವರ್ತನದ ಆಚರಣೆಗಳು ಒಂದು ಕುಟುಂಬದ ಪರಿಧಿಯೊಳಗೆ

ನಡೆಯುತ್ತಿದ್ದ ಒಂದು ಕಾಲವಿತ್ತು. ಈಗ ಅದನ್ನು ಕುಟುಂಬದ ಹೊರಗೆ ಬಾಜಾ ಭಜಂತ್ರಿಯೊಡನೆ ಆಚರಿಸುವುದು ರೂಢಿಯಾಗಿದೆ. ಅಂದರೆ ಎಲ್ಲ ಜನಾಂಗಗಳಲ್ಲಿಯೂ ಈ ಬಗೆಯ ಆಚರಣೆಗಳಿಗೆ ವಿಚಿತ್ರವಾದ ಆಧುನಿಕತೆಯ ಗೀಳು ಅಂಟಿಕೊಂಡು ಬಿಟ್ಟಿದೆ. ಆದರೆ ಇನ್ನೂ ನಮ್ಮ ಬುಡಕಟ್ಟು ಸಮುದಾಯಗಳು ಇಂಥ ಆಚರಣೆಗಳನ್ನು ಅವರ ಬದುಕಿನ ವಿಧಿ ಬದ್ಧ ನಿಯಮಗಳಂತೆ ಆಡಂಬರದ ಸೋಂಕು ತಗುಲದಂತೆ ಆಚರಿಸಿಕೊಂಡು ಬರುತ್ತಿವೆ. ಎರಡನೆಯ ರೀತಿಯ ಆಚರಣೆಗಳು ಹೆಚ್ಚು ಧಾರ್ಮಿಕ ಸ್ವರೂಪದವುಗಳು. ಕಾಲಕ್ಕೆ ತಕ್ಕಂತೆ, ವೃತ್ತಿಗೆ ಅನುಸಾರವಾಗಿ ಪ್ರಕೃತಿಯ ಎಲ್ಲ ವಿಸ್ಮಯಗಳನ್ನು ಕಂಡು ಹೆದರಿ ಭಯ-ಭಕ್ತಿಯಿಂದ ಆಚರಣೆಗೆ ತಂದುಕೊಂಡ ಹಬ್ಬ-ಹರಿದಿನಗಳು ಈ ಭಾಗದಲ್ಲಿ ಸೇರುತ್ತವೆ. ಸೃಷ್ಟಿಯ ಕುರಿತಾಗಿ ಮನುಷ್ಯ ಯಾವಾಗಲೂ ಕುತೂಹಲ ಮತ್ತು ಭೀತಿ ಹೊಂದಿದ್ದಾನೆ. ಈ ಭೀತಿಯೇ ದೈವದ ಹುಟ್ಟಿಗೆ ಕಾರಣವಾಗಿದೆ. ಕಣ್ಣಿಗೆ ಕಾಣದಂತೆ ಆಕಾಶದಲ್ಲಿ ಭೀಕರ ಸದ್ದಿನೊಂದಿಗೆ ಬರುವ ಗುಡುಗು-ಸಿಡಿಲುಗಳು, ದಿಢೀರನೆ ಮಿಂಚು-ಗುಡುಗು-ಗಾಳಿಯೊಡನೆ ಸುರಿವ ಮಳೆ, ಹೊತ್ತಿ ಉರಿವ ಸೂರ್ಯ, ತಣ್ಣಗೆ ಕಣ್ಣು ತುಂಬುವ ಚಂದಿರ, ರಾತ್ರಿಯಷ್ಟೇ ಕಾಣುವ ನಕ್ಷತ್ರರಾಶಿ, ಯಾರ ಪ್ರಯತ್ನವೂ ಇಲ್ಲದೆ ಅರಳುವ ಹೂವು, ಹರಿವ ನೀರು, ಇವೆಲ್ಲಾ ಮನುಷ್ಯನಿಗೆ ಆಶ್ಚರ್ಯದಷ್ಟೇ ದಿಗಿಲು ಹುಟ್ಟಿಸಿವೆ. ಯಾವುದೋ ಅವ್ಯಕ್ತವಾದ, ಅಗೋಚರವಾದ ಸರ್ವನಿಯಾಮಕವಾದ ಶಕ್ತಿಯಿದೆ ಎಂದೂ, ತಾನೂ ಅದರ ನಿಯಂತ್ರಣದಲ್ಲಿರುವ ಅಲ್ಪಜೀವಿ ಎಂದೂ ಭಾವಿಸಿದ್ದಾನೆ. ಆ ಶಕ್ತಿಯ ದರ್ಶನಕ್ಕಾಗಿ ಬೇಡಿದ್ದಾನೆ, ಕಾಡಿದ್ದಾನೆ, ಹಾಡಿದ್ದಾನೆ ಕೊನೆಗೆ ಅದರ ಕೃಪೆಗಾಗಿ ಕಾತರಿಸಿದ್ದಾನೆ. ಈ ಮಣ್ಣು, ನೀರು, ಗಾಳಿ, ಬೆಳಕು ಆತನ ಔದಾರ್ಯ ಎಂದು ನಂಬಿದ್ದಾನೆ. ತನ್ನ ಆ ನಂಬಿಕೆಗೆ ತಕ್ಕಂತೆ ಕಲ್ಪನೆ, ಕತೆ, ಪುರಾಣ, ಅವತಾರ, ರೂಪಗಳೆಲ್ಲ ಹುಟ್ಟಿಕೊಂಡಿವೆ. ಅವನು ಈಶ್ವರ, ಅಲ್ಲಾ, ಏಸು - ಹೀಗೆ ನಾನಾ ರೂಪಗಳಾಗಿ ಭಿನ್ನ ಮನೋಧರ್ಮದ ಹುಟ್ಟಿಗೆ ಕಾರಣವಾಗಿದ್ದಾನೆ. ಅವನನ್ನು ಕುರಿತು ಭಜನೆ, ಪೂಜೆ, ನಮಾಜು, ಪ್ರಾರ್ಥನೆ - ಹೀಗೆ ವಿಭಿನ್ನ ಶೈಲಿಯ ಆರಾಧನೆ ವ್ಯಕ್ತವಾಗಿದೆ. ತನ್ನ ವೃತ್ತಿ ಕೂಡ ದೇವರ ಕರುಣೆ, ವೃತ್ತಿಯ ಸಲಕರಣೆಗಳು ಆತನ ಅವಯವಗಳು ಎಂದೇ ಭಾವಿಸಿದ ಮನುಷ್ಯ ಅವೆಲ್ಲವನ್ನು ಅತ್ಯಂತ ಪ್ರೀತಿ, ಪೂಜ್ಯ ಭಾವನೆಯಿಂದ ಕಾಪಾಡಿಕೊಂಡು ಬಂದಿದ್ದಾನೆ. ಈ ಬಗೆಯ ಆರಾಧನೆಯೇ ಹಬ್ಬ-ಹರಿದಿನಗಳ ಸ್ವರೂಪದಲ್ಲಿ ಕಂಡು ಬರುತ್ತವೆ. ಈ ಹಿನ್ನೆಲೆಯಲ್ಲಿ ಪಿಂಜಾರರ ಬದುಕಿನಲ್ಲಿ ಆಚರಣೆಗಳ ವಿವರ, ಅವುಗಳ ಪ್ರಾಮುಖ್ಯತೆ, ಹಿನ್ನೆಲೆ ಮುಂತಾದ ವಿಶ್ಲೇಷಣೆಯನ್ನು ಕೈಗೊಳ್ಳಬಹುದು. ಈ ಅಧ್ಯಾಯದಲ್ಲಿ ಕ್ರಮವಾಗಿ ಮೊದಲು ಪಿಂಜಾರರ ಬದುಕಿನ ಜೀವನಾವರ್ತನ ಆಚರಣೆಗಳನ್ನು ಆನಂತರ ಧಾರ್ಮಿಕ ಆಚರಣೆಗಳನ್ನು ಅಧ್ಯಯನ ಮಾಡಲಾಗಿದೆ.

### ೪.೧.೧ ಸೀಮಂತ

ಪಿಂಜಾರ ಜನಾಂಗದಲ್ಲಿ ಸೀಮಂತ ನಡೆಯುವುದು ಗರ್ಭಿಣಿಯಾದ ಏಳನೆಯ ತಿಂಗಳಿನಲ್ಲಿ ಮತ್ತು ಗಂಡನ ಮನೆಯಲ್ಲಿ. ಉರ್ದು ಬಲ್ಲ ಕೆಲವರು ಈ ಕಾರ್ಯಕ್ರಮಕ್ಕೆ 'ಸತ್ವಾಸ' ಎಂದು ಕರೆಯುತ್ತಾರೆ. ತಮ್ಮ ಮನೆಯ ಮಗಳು ಗರ್ಭಿಣಿಯಾದ ಸುದ್ದಿ ತಿಳಿದಾಗಿನಿಂದ ಆಗಾಗ್ಗೆ ಆಕೆಗೆ ವಿಶೇಷವಾದ ಅಡಿಗೆ ಅಂದರೆ

ಹೋಳಿಗೆ, ಕರ್ಜಿಕಾಯಿ, ಉಂಡೆ ಮೊದಲಾದವುಗಳನ್ನು ಮಾಡಿ ಕಳಿಸುವ ಸಂಪ್ರದಾಯ ಪಿಂಜಾರರಲ್ಲಿದೆ. ಗರ್ಭ ಧರಿಸಿದ ಏಳನೆಯ ತಿಂಗಳಲ್ಲಿ ಗಂಡಿನ ಮನೆಯಲ್ಲಿ ನಡೆಸಲಾಗುವ ಸೀಮಂತದ ಪೂರ್ಣ ಖರ್ಚು ಹಾಗೂ ಜವಾಬ್ದಾರಿ ಹೆಣ್ಣಿನ ಮನೆಯವರದೇ ಆಗಿರುತ್ತದೆ. ಏಳನೆಯ ತಿಂಗಳಲ್ಲಿ ಬರುವ ಯಾವುದಾದರೊಂದು ಸೋಮವಾರ, ಗುರುವಾರ ಅಥವಾ ಶುಕ್ರವಾರ ಸೀಮಂತದ ಕಾರ್ಯ ನಿಗದಿಯಾಗುತ್ತದೆ. ತವರಿನವರು ಅಂದು ತಮ್ಮ ಮಗಳ ಮಾವನ ಮನೆಗೆ ಬೇಳೆ, ಬೆಲ್ಲ, ಅಕ್ಕಿ, ಎಣ್ಣೆಯೊಡನೆ ಹಸಿರು ಸೀರೆ, ಕುಪ್ಪಸ, ಹತ್ತು ಹಲವು ಹಣ್ಣು-ಹಂಪಲು, ಹೂವುಗಳೊಂದಿಗೆ ಬರುತ್ತಾರೆ. ಮನೆಗೆ ಸುಣ್ಣ-ಬಣ್ಣ ಬಳಿದಿರುತ್ತಾರೆ. ಮೊದಲು ತವರಿನವರು ತಂದ ಅಡಿಗೆ ಸಾಮಾನುಗಳನ್ನು ಬಳಸಿ ಹೋಳಿಗೆ, ಅನ್ನ, ಸಾರು ತಯಾರು ಮಾಡುತ್ತಾರೆ. ಊಟದ ಅನಂತರವಷ್ಟೇ ಎರಡೂ ಕಡೆಯ ಗಂಡಸರು ಆರಾಮಾಗಿ ಎಲೆ-ಅಡಿಕೆ ಹಾಕಿಕೊಂಡು ಮಳೆ-ಬೆಳೆ, ಕಷ್ಟ-ಸುಖ ಮಾತಾಡುತ್ತಾ ಕುಳಿತುಕೊಳ್ಳುತ್ತಾರೆ. ಸೀಮಂತದ ಆಚರಣೆಯ ಶಾಸ್ತ್ರ ಮಾಡುವುದು ಹೆಣ್ಣುಮಕ್ಕಳ ಜವಾಬ್ದಾರಿ. ತುಂಬು ಬಸುರಿಯನ್ನು ಬಿಸಿ ನೀರಿನಿಂದ ಸ್ನಾನ ಮಾಡಿಸಿ ಅತ್ತರು, ಗಂಧ ಮೊದಲಾದ ಪರಿಮಳ ದ್ರವ್ಯಗಳನ್ನು ಪೂಸಿ ತವರಿನವರು ತಂದ ಹಸಿರು ಸೀರೆ, ಕುಪ್ಪಸ ತೊಡಿಸಿ, ತಲೆ ಬಾಚಿ, ಜಡೆ ಹಾಕಿ ಹೂವು ಮುಡಿಸುತ್ತಾರೆ. ಹಸಿರು ಬಳೆಗಳನ್ನು ಕೈತುಂಬ ತೊಡಿಸುತ್ತಾರೆ. ನಂತರ ಗರ್ಭಿಣಿಯನ್ನು ಅಕ್ಕಿಯ ಹಸೆಯಲ್ಲಿ ಕುಳ್ಳಿರಿಸಿ ಐದು ಜನ ಮುತ್ತೈದೆಯರು ಗಂಧ ಹಚ್ಚುತ್ತಾರೆ. ನಗುಮುಖದ ಗರ್ಭಿಣಿ, ನಗುಮುಖದ ಮುತ್ತೈದೆಯರತ್ತ ಕಣ್ಣಿಟ್ಟು ತಮಾಷೆ, ಅಣಕು ಮಾಡುತ್ತಾ ಕಾಲ ಕಳೆಯುವ ಗಂಡಸರು ಇಡೀ ವಾತಾವರಣವನ್ನು ಲವಲವಿಕೆಯಿಂದಿರುವಂತೆ ಮಾಡುತ್ತಾರೆ. ಮುತ್ತೈದೆಯರು ಒಬ್ಬೊಬ್ಬರಾಗಿ ಬಸುರಿಯ ಹೊಟ್ಟೆ, ಬೆನ್ನು, ಗಲ್ಲ, ಕೆನ್ನೆಗೆ ಗಂಧ ಹಚ್ಚಿ 'ಹೆರಿಗೆ ಸುಖವಾಗಲಿ, ಗಂಡು ಮಗುವನ್ನು ಹಡಿ' ಎಂದು ಹರಸಿ ಆಶೀರ್ವದಿಸುತ್ತಾರೆ. ತಂದೆ-ತಾಯಿ, ಅತ್ತೆ-ಮಾವ, ಇಡೀ ತನ್ನ ಪ್ರಿಯ ಬಂಧು-ಬಳಗ, ಎಲ್ಲಕ್ಕಿಂತ ಹೆಚ್ಚಿನದಾಗಿ ಈ ಸಂಭ್ರಮಕ್ಕೆಲ್ಲಾ ಕಾರಣನಾದ, ತನ್ನ ಹೆಣ್ತನವನ್ನು ಸಾರ್ಥಕ ಪಡಿಸಿದ ಗಂಡ- ಇವರೆಲ್ಲರ ಉಪಸ್ಥಿತಿಯಲ್ಲಿ ನಾಚಿಕೆ, ಉಲ್ಲಾಸಗಳಿಂದ ಗರ್ಭಿಣಿಯಾದವಳ ಆನಂದಕ್ಕೆ ಪಾರವೇ ಇರುವುದಿಲ್ಲ. ಇದರ ಜೊತೆ ಮುಂದಿನ ಐದಾರು ತಿಂಗಳು ತವರಿನ ವಾಸ, ಮಡಿಲಲ್ಲಿ ಬೆಚ್ಚಗೆ ಮಲಗಿ ಕಣ್ಣು ಪಿಳುಕಿಸುವ ಕಂದನ ನೆನಪು ಅವಳ ಸುಖವನ್ನು ಇಮ್ಮಡಿಗೊಳಿಸುತ್ತದೆ. ಅಣ್ಣ-ಅತ್ತಿಗೆಯವರು 'ಹೆಣ್ಣು ಹಡಿಯವ್ವ ನನ್ನ ಮಗನಿಗೆ ಮಾಡಿಕೊಳ್ಳುತ್ತೇನೆ' ಎಂದು ಭರವಸೆ ಕೊಡುತ್ತಾರೆ. ಎಲ್ಲವೂ ತಮಾಷೆ, ಪ್ರೀತಿಯ ವಾತಾವರಣದಲ್ಲಿ ಮುಗಿಯುತ್ತದೆ. ಈ ಸಂದರ್ಭದಲ್ಲಿ ಹಾಜರಿದ್ದವರಿಗೆ ಎಲೆ-ಅಡಿಗೆ ಸುಣ್ಣವನ್ನು ನೀಡಲಾಗುತ್ತದೆ.

ಪಿಂಜಾರರಲ್ಲಿ ಸೀಮಂತ ಹೀಗೆ ನಡೆಯುವುದು ಒಂದು ಸಾಂಪ್ರದಾಯಿಕ ಆಚರಣೆಯಾಗಿ ಮಾತ್ರ. ಕೆಲವು ಪಿಂಜಾರರಲ್ಲಿ ಸೀಮಂತದ ಪೂರ್ತಿ ಖರ್ಚನ್ನು ಗಂಡಿನ ಮನೆಯವರು ನಿರ್ವಹಿಸುವ ಸಂಪ್ರದಾಯವಿದೆ. ಇನ್ನು ಕೆಲವರು ಸೀಮಂತದ ಬಗ್ಗೆ ಹೆಚ್ಚು ಕಾಳಜಿ ತೋರುವುದಿಲ್ಲ. ಇಂತಹವರಿಗೆ ಅವರ ಆರ್ಥಿಕ ಸ್ಥಿತಿ ಅನುಕೂಲಕರವಾಗಿಲ್ಲದಿರುವುದೇ ಕಾರಣವಾಗಿದೆ. ಸೀಮಂತದ ಶಾಸ್ತ್ರ ಮುಗಿದ ಮರುದಿನ ಗರ್ಭಿಣಿ ಮಗಳೊಂದಿಗೆ ತವರಿನವರು ತಮ್ಮ ಮನೆಗೆ ಮರಳುತ್ತಾರೆ. ಅಂದಿನಿಂದ ಮಗಳನ್ನು

ಮಗುವಿನೊಂದಿಗೆ ತಿರುಗಿ ಗಂಡನ ಮನೆಗೆ ಕಳಿಸುವವರೆಗೆ ಆಕೆಯ ಪೂರ್ತಿ ಜವಾಬ್ದಾರಿ ತವರಿನವರದೇ ಆಗಿರುತ್ತದೆ. ಅದರಲ್ಲೂ ಚೊಚ್ಚಲು ಹೆರಿಗೆ ತವರು ಮನೆಯಲ್ಲೇ ಆಗಬೇಕೆಂಬ ನಿಯಮವಿದೆ. ಈ ಸಂದರ್ಭದಲ್ಲಿ ಗಂಡು ಮತ್ತು ಆತನ ಮನೆಯವರು ಆಗಾಗ್ಗೆ ಭೇಟಿ ಕೊಟ್ಟು ಕ್ಷೇಮ ಕುಶಲ ವಿಚಾರಿಸಿಕೊಂಡು ಹೋಗುತ್ತಾರೆ. ಈ ಅವಧಿಯಲ್ಲಿ ಹೆಣ್ಣು ಬಯಸಿದ ಅಡಿಗೆಯನ್ನು ಸಾಧ್ಯವಾದಷ್ಟು ಮಾಡಿಕೊಡುತ್ತಾರೆ. ಆರ್ಥಿಕವಾಗಿ ಉತ್ತಮವಾಗಿರುವವರು ಅವಳಿಗೆ ಹೊಸಬಟ್ಟೆ ಬರೆ, ಚಿನ್ನ ಬೆಳ್ಳಿಯ ಆಭರಣ, ವಿವಿಧ ಗೊಂಬೆಗಳನ್ನು ಕೊಡಿಸುವುದುಂಟು. ಬಹುಪಾಲು ಪಿಂಜಾರರು ಮಗಳನ್ನು ಹೆರಿಗೆಗಾಗಿ ತವರಿಗೆ ಕರೆದುಕೊಂಡು ಬರುವ ಶಾಸ್ತ್ರವನ್ನು ತಮ್ಮ ಆರ್ಥಿಕವಾದ ಸ್ಥಿತಿ-ಗತಿಗಳ ಹಿನ್ನೆಲೆಯಲ್ಲಿ ನಿಭಾಯಿಸುತ್ತಾರೆ. ತಂದೆ-ತಾಯಿ ಇಲ್ಲದ ಮನೆಗಳಲ್ಲಿ ತಮ್ಮ ಮನೆ ಮಗಳ ಹೆರಿಗೆ, ಬಾಣಂತನದ ಉಪಚಾರದ ವಿಚಾರವಾಗಿ ಅಣ್ಣ-ತಮ್ಮಂದಿರ ನಡುವೆ ಚೌಕಾಸಿ ನಡೆಯುತ್ತದೆ. ಕೆಲವೊಮ್ಮೆ ಇದನ್ನು ಅರಿತುಕೊಂಡ ಹೆಣ್ಣು ತಾನು ಗಂಡನ ಮನೆಯಲ್ಲೇ ಉಳಿಯುವ ನಿರ್ಧಾರ ಮಾಡುತ್ತಾಳೆ. ಇಂಥ ಕಾರಣಗಳಿಗಾಗಿಯೇ ಇರಬೇಕು ತಾಯಿ ಇಲ್ಲದ ತವರು ಹೆಣ್ಣಿಗೆ ನರಕದ ಹಾಗೆ ಕಂಡಿದೆ. ಮಗಳ ಬಾಣಂತನವನ್ನು ತಾಯಿಯಷ್ಟು ಪ್ರೀತಿ, ಮುತುವರ್ಜಿಯಿಂದ ಬೇರೆ ಯಾರೂ ಮಾಡುವುದು ಸಾಧ್ಯವಿಲ್ಲ ಎನ್ನುವುದು ಎಲ್ಲ ಹೆಣ್ಣುಮಕ್ಕಳ ಅನುಭವವಾಗಿದೆ.

### ೪.೧.೩ ಹೆರಿಗೆ, ಜನನ ಮತ್ತು ನಾಮಕರಣ

ಬಹುಪಾಲು ಪಿಂಜಾರರು ತಂತಮ್ಮ ಊರುಗಳಲ್ಲೇ ಇರುವ ತಮ್ಮವರ ನಡುವೆ ಬೀಗತನ ಮಾಡುತ್ತಾರೆ. ದೂರದೂರುಗಳ ಸಂಬಂಧ ಮಾಡುವುದರಿಂದ ಮಗಳು ಕಣ್ಣೆದುರಿಗೆ ಇದ್ದ ಹಾಗಾಗುವುದಿಲ್ಲ ಹಾಗೂ ಆ ಬಗೆಯ ಸಂಬಂಧಕ್ಕೆ ಅಗತ್ಯವಾದ ಖರ್ಚನ್ನು ನಿಭಾಯಿಸುವುದು ತಮ್ಮಿಂದ ಸಾಧ್ಯವಾಗುವುದಿಲ್ಲ ಎನ್ನುವುದೇ ಪಿಂಜಾರರು ಸ್ಥಳೀಯ ನಂಟಸ್ತಿಕೆ ಮಾಡುವುದಕ್ಕೆ ಕಾರಣವಾಗಿದೆ. ಸಂಬಂಧವೆಂದರೆ ಮದುವೆ, ಮುಂಜಿ ಮೊದಲಾದ ಕಾರ್ಯಕಟ್ಟಳೆಗಳು ಇದ್ದೇ ಇರುತ್ತವೆ, ಅವುಗಳಿಗೆ ಹೋಗದೇ ಇರಲಾಗುವುದಿಲ್ಲ. ಆದುದರಿಂದ ಸುಮ್ಮನೇ ಸ್ಥಳೀಯವಾದ ಬೀಗತನಕ್ಕೆ ಆಸಕ್ತಿ ತೋರುವುದು ರೂಢಿಯಾಗಿದೆ. ಕೆಲವರು ಇದ್ದ ಊರಿನ ಹಳೆಯ ಸಂಬಂಧಗಳ ಏಕತಾನತೆಯಿಂದ ಬೇಸತ್ತು ದೂರದೂರುಗಳ ಹೊಸ ಸಂಬಂಧವನ್ನು ಹುಡುಕಿ ಹೋದವರೂ ಇದ್ದಾರೆ. ಇದ್ದ ಊರಿನ ಹಳೆಯ ಸಂಬಂಧಗಳೇ ಆದರೆ ಹೆಚ್ಚು ಸಲಿಗೆ, ಭಾವನಾತ್ಮಕ ಸಂಬಂಧ, ಕಾಳಜಿ ಇರುತ್ತವೆ, ಅಲ್ಲದೆ ಮಗಳು ಕಣ್ಣಳತೆಯಲ್ಲಿರುವುದರಿಂದ ಎದ್ದುಬಿದ್ದು ಅವಳು ಕಾಣುವುದರಿಂದ ಅವಳ ಕಷ್ಟ-ಸುಖಕ್ಕೆ ಆಗಬಹುದು ಎಂಬ ಆಶಯ ಇಂಥ ಸಂಬಂಧಗಳ ಹಿನ್ನೆಲೆಯಲ್ಲಿ ಇದ್ದಂತಿದೆ.

ಪಿಂಜಾರರಲ್ಲಿ ಗರ್ಭಿಣಿಯನ್ನು ಆಕೆ ಗರ್ಭಿಣಿಯಾದ ಏಳನೆಯ ತಿಂಗಳಲ್ಲಿ ತವರಿಗೆ ಕರೆತರುವ ಸಂಪ್ರದಾಯವಿದೆ. ಸಾಮಾನ್ಯವಾಗಿ ಇಂಥ ಬೆಸಸಂಖ್ಯೆಯ ತಿಂಗಳನ್ನೇ ಮಗಳನ್ನು ಕರೆತರುವುದಕ್ಕಾಗಿ ಆಯ್ದುಕೊಳ್ಳಲಾಗುತ್ತದೆ. ಐದು, ಏಳು ಅಥವಾ ಒಂಬತ್ತನೆಯ ತಿಂಗಳಲ್ಲಿಯೂ ಕೆಲವರು ಕರೆದುಕೊಂಡು ಬರುವುದಿದೆ. ಈ ಹಿಂದೆ ಹೇಳಿದಂತೆ ಒಮ್ಮೆ ಹೆರಿಗೆಗೆಂದು ತವರಿಗೆ ಬಂದ ಬಸುರಿಯ ಎಲ್ಲ ಜವಾಬ್ದಾರಿ

ತವರು ಮನೆಯದೇ ಆಗಿರುತ್ತದೆ. ಹೆಣ್ಣು ತವರುಮನೆಯಲ್ಲಿದ್ದಷ್ಟೂ ದಿನ ಒಳ್ಳೆಯ ಅಡಿಗೆ ಮಾಡಿ ಆಕೆಗೆ ಉಣಬಡಿಸುತ್ತಾರೆ. ಆಕೆಯನ್ನು ಯಾವ ಕೆಲಸಕ್ಕೂ ಹಚ್ಚುವುದಿಲ್ಲ. ಅದೇ ಊರಿನಲ್ಲಿರುವ ಸೂಲಗಿತ್ತಿಯೊಬ್ಬಳು, ಅವಳು ಪಿಂಜಾರಳಾಗಿರಬಹುದು ಅಥವಾ ಯಾವುದೇ ಜನಾಂಗವಾಗಿರಬಹುದು, ಆಗಾಗ್ಗೆ ಬಂದು ಬಸುರಿ ಹೆಂಗಸನ್ನು ನೋಡಿ ಮಾತಾಡಿಸಿ, ನೋವು ಇತ್ಯಾದಿ ಬಗ್ಗೆ ವಿಚಾರಿಸುತ್ತಾಳೆ. ದಿನ ತುಂಬುತ್ತ ಬಂದಂತೆ ಬಸುರಿಯನ್ನು ನೋಡಿಕೊಳ್ಳುವುದಕ್ಕಾಗಿ ಸೂಲಗಿತ್ತಿ ಆ ಮನೆಯಲ್ಲೇ ಉಳಿಯುತ್ತಾಳೆ. ಸೂಲಗಿತ್ತಿಯಿಂದಲೇ ಮಗುವಿನ ಜನನ ಮತ್ತು ನಂತರದ ಪ್ರಕ್ರಿಯೆಗಳೆಲ್ಲ ನಡೆಯುತ್ತವೆ.

ಹೆಣ್ಣಿಗೆ ಮೆತ್ತನೆಯ ಹಾಸಿಗೆಯನ್ನು ಹಾಸಿರುತ್ತಾರೆ. ಹಳೆಯ ಹರಿದ ಸೀರೆ, ಬಟ್ಟೆಗಳನ್ನು ಹಾಸಿ ಆಕೆಯನ್ನು ಮಲಗಿಸಿರುತ್ತಾರೆ. ಹಳೆಯ ಸೀರೆ ಉಡಿಸಿ, ಹಳೆಯ ಬಟ್ಟೆಯ ತುಂಡೊಂದನ್ನು ತಲೆ, ಕಿವಿಗೆ ಸೀತವಾಗದಿರಲೆಂದು ಕಟ್ಟಿರುತ್ತಾರೆ. ಹೆರಿಗೆಯ ನೋವು ಕಾಣಿಸಿಕೊಂಡಂತೆ ಸೂಲಗಿತ್ತಿ, ಹೆಣ್ಣಿನ ತಾಯಿ, ಅಕ್ಕಪಕ್ಕದ ಮನೆಯ ಹೆಂಗಸರು ಬಂದು ಹೆರಿಗೆ ಸಲೀಸಾಗುವಂತೆ ನೆರವಾಗುತ್ತಾರೆ. ಸೂಲಗಿತ್ತಿ ಎಣ್ಣೆಯಿಟ್ಟುಕೊಂಡು ಹಣತೆ ಅಥವಾ ಲಾಟೀನು ಹತ್ತಿಸಿಕೊಂಡು ಸದಾ ಎಚ್ಚರವಾಗಿದ್ದು ಹೆರಿಗೆ ಮಾಡಿಸುತ್ತಾಳೆ. ಮಗು ಮತ್ತು ತಾಯಿಯ ಮೈಯನ್ನು ಬಿಸಿ ನೀರಿನಿಂದ ತೊಳೆಯುತ್ತಾರೆ. ಸೂಲಗಿತ್ತಿ ತನ್ನ ಕಾಲುಗಳೆರಡನ್ನೂ ಚಾಚಿ ಕುಳಿತುಕೊಂಡು ಮೊಣಕಾಲಿನಿಂದ ಕೆಳಗೆ ಎರಡೂ ಕಾಲುಗಳ ನಡುವೆ ಮಗುವನ್ನಿಟ್ಟುಕೊಂಡು ಮತ್ತೊಬ್ಬರು ಹಂಚಿದ ನೀರಿನಿಂದ ತೊಳೆಯುತ್ತಾಳೆ. ಮೈಯೊರಸಿದ ನಂತರ ತಾಯಿಯ ಪಕ್ಕದಲ್ಲೇ ಮೆತ್ತನೆಯ ಹಳೆಯ ಬಟ್ಟೆಗಳನ್ನು ಹಾಸಿ ಮಲಗಿಸುತ್ತಾರೆ. ಅಥವಾ ಕಂಬಕ್ಕೆ ಕಟ್ಟಿದ್ದ ಜೋಲಿಯಲ್ಲಿ ಬಿಳಿಯ ಬಟ್ಟೆ ಹಾಕಿ ಮಗುವನ್ನು ಮಲಗಿಸುತ್ತಾರೆ. ಆ ಜೋಲಿಯ ಕೆಳಗೆ ಗಂಧದಪುಡಿ ಮತ್ತು ಸಾಂಬ್ರಾಣಿಯ ಹೊಗೆ ಹಾಕುತ್ತಾರೆ. ತಕ್ಷಣ ಯಾರಾದರೊಬ್ಬರು ಮುಲ್ಲಾನನ್ನು ಕರೆದು ತರುತ್ತಾರೆ. ಮತ್ತೊಬ್ಬರನ್ನು ಕಳಿಸಿ ಜನನದ ಸುದ್ದಿಯನ್ನು ಗಂಡಿನ ಮನೆಯವರಿಗೆ ತಿಳಿಸಲಾಗುತ್ತದೆ. ಮುಲ್ಲಾ ಬಂದ ನಂತರ ಆತನಿಗೆ ಮಗುವನ್ನು ತೋರಿಸಿ ಮಗುವಿಗಾಗಿ ಪ್ರಾರ್ಥಿಸುವಂತೆ ಕೇಳಿಕೊಳ್ಳುತ್ತಾರೆ. ಮುಲ್ಲಾ ವಜೂ ಮಾಡಿಕೊಂಡು ಅಜಾನ್ ಕೊಡುತ್ತಾನೆ. ನಂತರ ಮಗುವಿನ ಕಿವಿಯಲ್ಲಿ ಒಂದೆರಡು ಸಲ ಬಾಯಿಯಿಂದ ಊದಿ ಹೆಸರೊಂದನ್ನು ಕರೆಯುತ್ತಾನೆ. ಇದು ಮಗುವಿನ ಮೊಟ್ಟಮೊದಲ ಹೆಸರಾಗುತ್ತದೆ. ಮಗು ಬೆಳೆದಂತೆ ಇದೇ ಹೆಸರನ್ನು ಉಳಿಸಿಕೊಳ್ಳಬಯಸುವವರು ಇದ್ದಾರೆ. ಆದರೆ ಬಹುಪಾಲು ಜನರು ತಮಗೆ ಇಷ್ಟವಾದ ಹೆಸರನ್ನು ಕರೆದುಕೊಳ್ಳುವ ಸಲುವಾಗಿ ಮೊದಲ ಹೆಸರನ್ನು ಕೈಬಿಡುತ್ತಾರೆ. ಹೀಗೆ ಹೊಸ ಹೆಸರನ್ನು ಕರೆಯುವುದಕ್ಕಾಗಿ ಹೆರಿಗೆಯಾದ ನಲ್ವತ್ತನೆಯ ದಿನದಲ್ಲಿ 'ಒಲ' ಅಥವಾ 'ಚಿಲ್ಲಾ' ಎಂದು ಕರೆಯುವ ಕಾರ್ಯಕ್ರಮವನ್ನು ಏರ್ಪಡಿಸುತ್ತಾರೆ. ಮಗುವಿನ ಜನನವಾದ ನಲ್ವತ್ತು ದಿನಗಳವರೆಗೆ ಬಾಣಂತಿ ಸೂತಕವಿರುತ್ತದೆ. ಬಾಣಂತಿ ಎದ್ದು ಓಡಾಡುವರೆಗೆ ಸೂಲಗಿತ್ತಿಯೇ ಬಂದು ಮಗುವಿನ ಮೈತೊಳೆಯುತ್ತಾಳೆ. ನಂತರ ಮಗುವಿನ ಅಜ್ಜಿ ಈ ಕೆಲಸ ಮಾಡುತ್ತಾಳೆ. ತಾಯಿ ಮಗುವಿನ ಪೂರ್ತಿ ಹಾರೈಕೆಯನ್ನು ಸೂಲಗಿತ್ತಿ ನೋಡಿಕೊಳ್ಳುತ್ತಾಳೆ. ತಾಯಿಗೆ ಹೆಚ್ಚು ಖಾರವಾದ ಊಟವನ್ನು ಕೊಡುವುದಿಲ್ಲ. ಹೆರಿಗೆಯಾದ ನಲ್ವತ್ತನೆಯ ದಿನದಲ್ಲಿ ಮಗುವಿಗೆ ನಾಮಕರಣ ಮಾಡಲಾಗುತ್ತದೆ.

ನಾಮಕರಣದ ದಿನ ಮನೆಗೆ ಸುಣ್ಣ, ಕೆಮ್ಮಣ್ಣು ಬಳಿದು, ನೆಲಸಾರಿಸಿ ಊರಿನ ಬಂಧುಬಳಗವನ್ನು ಕರೆಯುತ್ತಾರೆ. ಬಾಣಂತಿಯ ಮನೆಯ ಹಿರಿಯರೊಬ್ಬರು ಮಗುವಿನ ನಾಮಕರಣಕ್ಕಾಗಿ ಶಾಸ್ತ್ರ ಕೇಳಿಕೊಂಡು ಬರುತ್ತಾರೆ. ಮಗು ಹುಟ್ಟಿದ ನಕ್ಷತ್ರ ಇತ್ಯಾದಿ ತಿಳಿದುಕೊಂಡು ಇಡಬೇಕಾದ ಹೆಸರನ್ನು ಕೇಳಿಕೊಂಡು ಬರುತ್ತಾರೆ. ಕೆಲವು ಕಡೆ ಮಗು ಹುಟ್ಟಿದ ಒಂದೆರಡು ದಿನದಲ್ಲೇ ತಾತ್ಕಾಲಿಕವಾದ ಹೆಸರೊಂದನ್ನಿಡುತ್ತಾರೆ. ಅದು ಸಾಮಾನ್ಯವಾಗಿ ಆ ಮನೆಯ ಹಿರಿಯ ತಲೆಯ ಹೆಸರಾಗಿರುತ್ತದೆ. ನಾಮಕರಣದ ದಿನ ಹಿಂದೂ-ಮುಸ್ಲಿಂ ಎಂದು ನೋಡದೆ ಶಾಸ್ತ್ರ ಕೇಳಿಕೊಂಡು ಬರುತ್ತಾರೆ. ಸಂಜೆ ತಮ್ಮ ಬೀಗರು ಬಿಜ್ಜರೆಲ್ಲರನ್ನು ಕರೆದು, (ಆಪ್ತರಾದ ಸುತ್ತಮುತ್ತಲಿನ ಹಿಂದೂ ಬಾಂಧವರೂ ಬಂದಿರುತ್ತಾರೆ) ನಾಮಕರಣ ಮಾಡುತ್ತಾರೆ. ಶಾಸ್ತ್ರದಿಂದ ತಿಳಿದುಕೊಂಡು ಬಂದ ಹೆಸರನ್ನು ಮಗುವಿನ ಕಿವಿಯಲ್ಲಿ ಎಲ್ಲರಿಗೂ ಕೇಳುವಂತೆ ಹೇಳುತ್ತಾರೆ. ಸಾಮಾನ್ಯವಾಗಿ ಮಗುವಿನ ಸೋದರಮಾವ ಅಥವಾ ಸೋದರತ್ತೆಯರು ಈ ಹೆಸರನ್ನು ಹೇಳುತ್ತಾರೆ. ಮೂರು ಸಲ ಹೆಸರು ಹೇಳಿದ ನಂತರ ಎಲ್ಲರೂ ಊಟ ಮಾಡುತ್ತಾರೆ. ಮಗುವಿಗೆ ಹೊಸಬಟ್ಟೆ ತೊಡಿಸಿರುತ್ತಾರೆ. ತಾಯಿಗೂ ತವರುಮನೆಯವರು ತಂದ ಸೀರೆಯುಡಿಸಿರುತ್ತಾರೆ. ಎಲ್ಲರೂ ಊಟ ಮಾಡುವಂತೆ ಸಿಹಿಯೂಟವನ್ನು ಮಾಡಿಸಿರುತ್ತಾರೆ. ಸಾಮಾನ್ಯವಾಗಿ ಗೋಧಿ ಹುಗ್ಗಿ, ಅನ್ನ, ಸಾರು ಮಾಡಿಸಿರುತ್ತಾರೆ. ನಾಮಕರಣವನ್ನು ಮಾಡುವಾಗ ಗಂಡಿನ ಮನೆಯವರ ಅನುಮತಿಯನ್ನು ಕೇಳಲಾಗುತ್ತದೆ. 'ನಲ್ವತ್ತು ದಿನದ ನೀರು' ಹಾಕುವುದು ಎಂದು ಆ ದಿನ ತಾಯಿ ಮಗುವಿನ ಮೈತೊಳೆದಿರುತ್ತಾರೆ. ಮಗುವಿಗೆ ದೃಷ್ಟಿ (ಕಣ್ಣಸ್ರ) ಯಾದೀತೆಂದು ಒಂದು ಕೆನ್ನೆಯಲ್ಲಿ ಬೆರಳಿನ ತುದಿಯಿಂದ ಕಪ್ಪು ಮಸಿ ಹಚ್ಚಿರುತ್ತಾರೆ. ನಾಮಕರಣದ ನಂತರ ಹಾಡು ಹೇಳುವುದೂ ಇದೆ. ನಾಮಕರಣವಾದ ತಕ್ಷಣ ಸಕ್ಕರೆ, ಕಡ್ಲೆ, ಬೆಲ್ಲ, ಮಂಡಕ್ಕಿ ಬೆರಸಿ ಬಂದಿದ್ದವರಿಗೆ ಹಂಚುತ್ತಾರೆ. ಕೆಲವು ಕಡೆ ನಾಮಕರಣವಾದ ದಿನ ಮಾಂಸದಡಿಗೆ ಮಾಡಿಸುವುದೂ ಇದೆ. ಸಿಹಿ ಅಡಿಗೆಯನ್ನೇ ಹೆಚ್ಚಾಗಿ ಪಿಂಜಾರರು ತಮ್ಮ ಈ ಬಗೆಯ ಆಚರಣೆಗಳ ಸಂದರ್ಭದಲ್ಲಿ ಮಾಡಿಸುತ್ತಾರೆ. ಯಾಕೆಂದರೆ ಮಾಂಸಾಹಾರಿಗಳಲ್ಲದ ಹಿಂದೂ ಬಾಂಧವರು ಕೂಡ ಮುಜುಗರವಿಲ್ಲದಂತೆ ಭೋಜನ ಪಂಕ್ತಿಯಲ್ಲಿ ಕುಳಿತು ಉಣ್ಣುವುದು ಇದರಿಂದ ಸಾಧ್ಯವಾಗುತ್ತದೆ.

ಹೆರಿಗೆ ಮಾಡಿಸಿದ ಸೂಲಗಿತ್ತಿಗೆ ಹೆಣ್ಣಿನ ತಂದೆ-ತಾಯಿ ಹೊಸಬಟ್ಟೆ ಕೊಡಿಸುತ್ತಾರೆ. ಮಗುವಿಗೆ ಹೊಸಬಟ್ಟೆ, ಸಾಧ್ಯವಾದವರು ಚಿನ್ನದ ಉಂಗುರವನ್ನು ತವರಿನವರು ತರುತ್ತಾರೆ. ಬಾಣಂತನವನ್ನು ಮಾಡಿದ ಅತ್ತೆಗೆ ಅಳಿಯನಾದವನು ಹೊಸ ಸೀರೆ ತಂದುಕೊಡುವ ಸಂಪ್ರದಾಯ ಪಿಂಜಾರರಲ್ಲಿದೆ. ಹೆರಿಗೆಯ ನಂತರದ ಮೂರು ಅಥವಾ ಐದನೆಯ ತಿಂಗಳಲ್ಲಿ ತೊಟ್ಟಿಲು, ಹೊಸಸೀರೆ, ನಾನಾತರಹದ ಅಡಿಗೆ, ಕಾಳುಕಡಿಯೊಂದಿಗೆ ಮಗಳನ್ನು ಗಂಡನ ಮನೆಗೆ ಕಳಿಸಿಕೊಡಲಾಗುತ್ತದೆ. ಚೊಚ್ಚಲ ಹೆರಿಗೆಗೆ ಬಂದ ಮಗಳ ಉಪಚಾರವನ್ನು ಸಮಾಧಾನಕರವಾಗಿ ನಿರ್ವಹಿಸಿದ ತೃಪ್ತಿ ತಂದೆ-ತಾಯಿಯರಿಗಿದ್ದರೆ ಮಗಳು ಕಣ್ಣು ತುಂಬ ನೀರು ತುಂಬಿಕೊಂಡು ಕಡೆಯ ಸಲವೋ ಎಂಬಂತೆ ತಂದೆ-ತಾಯಿಗೆ ಕಾಲಿಗೆ ಬಿದ್ದು ಅವರ ಪಾದಗಳನ್ನು ಕಣ್ಣಿಗೆ ಒತ್ತಿಕೊಳ್ಳುತ್ತಾಳೆ. ಮಡಿಲಲ್ಲಿ ತನ್ನ ರಕ್ತ-ಮಾಂಸ ತುಂಬಿಕೊಂಡ ಮಗು,

ಮೈತುಂಬ ಸೀರೆ, ಹೂವಿನ ಮುಡಿ, ತವರಿನವರು ಕೊಟ್ಟ ಆಕಳು ಅಥವಾ ಎಮ್ಮೆಯ ಹೆಣ್ಣುಕರು, ಜೀವಚೈತನ್ಯ ಜೋಲಿಯಾಡುವ ತೊಟ್ಟಿಲು - ಇಷ್ಟೆಲ್ಲಾ ಇದ್ದೂ ಮಗಳು ದುಃಖಿಸುತ್ತಾಳೆ. ತಂದೆ ತಾಯಿಗೂ ಇದು ಅರ್ಥವಾಗುತ್ತದೆ. ಇಷ್ಟು ಪ್ರೀತಿಯಿಂದ ಕಾಣುವ ಅವ್ವ-ಅಪ್ಪ ಇನ್ನೆಷ್ಟು ದಿನ ನನ್ನ ಪಾಲಿಗಿದ್ದಾರು? ಎಂಬುದು ಮಗಳ ಚಿಂತೆ. ನಾವು ಇರುವವರೆಗೂ ನಿನ್ನನ್ನು ಒಂಟಿಯಾಗಿ ಬಿಡಲಾರೆವು ಎಂಬ ತಾಯಿ-ತಂದೆಯರ ಪ್ರೀತಿ, ಆಸರೆಯ ನುಡಿ. ಕರುಣೆಯ ಕಟ್ಟೆಯೊಡೆಯುವುದಕ್ಕೆ ಇನ್ನೇನು ಬೇಕು? ಆದಕ್ಕೆಂದೇ ಜನಪದ ಕವಿ 'ತೊಟ್ಟಿಲ ಹೊತ್ಕೊಂಡು, ತವರುಬಣ್ಣ ಉಟ್ಕೊಂಡು ಅಪ್ಪ ಕೊಟ್ಟೆಮ್ಮೆ ಹೊಡಕೊಂಡು ತಂಗೆಮ್ಮ ತಿಟ್ಹತ್ತಿ ತಿರುಗಿ ನೋಡ್ಯಾಳು' ಎಂದಿರುವುದು. ಮುಂದಿನ ಹೆರಿಗೆಗೆ ತವರಿಗೆ ಬರುತ್ತೀನೋ ಇಲ್ಲವೋ, ಅವ್ವ-ಅಪ್ಪ ಕರೆದರೂ ತನ್ನದೇ ಸಂಸಾರದ ಜವಾಬ್ದಾರಿಯಿರುತ್ತದೆ ಎಂದೆಲ್ಲಾ ಯೋಚಿಸುವ ಮಗಳು ಇಡೀ ತನ್ನ ತವರಿನ ನೆನಪನ್ನು ಕಣ್ಣಲ್ಲಿ ತುಂಬಿಕೊಳ್ಳುತ್ತಾಳೆ.

ಬಡವರು, ಅಸಹಾಯಕರೂ ಆದ ಪಿಂಜಾರರು ಈ ಬಗೆಯ ಅನುಭವಗಳಿಂದ ತುಂಬಿಹೋಗಿದ್ದಾರೆ. ಶ್ರೀಮಂತರಾದವರು, ನಾಗರಿಕ ಸೌಲಭ್ಯ ಪಡೆದವರು 'ಹುಟ್ಟ'ನ್ನು ಕಾಣುವುದು ಆಸ್ಪತ್ರೆಗಳಲ್ಲಿ! ಆದರೆ ಆರ್ಥಿಕವಾದ ಅಸಹಾಯಕತೆ ಗಾಳಿ ಬೆಳಕಿನ, ಸ್ವಚ್ಛಂದ ಬಯಲಿನ ಪ್ರೀತಿ, ಮಮತೆಯ ಹುಟ್ಟನ್ನು ಕೊಡುತ್ತದೆ. ಪಿಂಜಾರರು ತಮ್ಮ ಅಸಹಾಯಕತೆಯ ನಡುವೆಯೂ ಸಾಂಸ್ಕೃತಿಕ ಸಂಪತ್ತನ್ನು ಮುಂದುವರಿಸಿಕೊಂಡು ಬಂದಿದ್ದಾರೆ. ಈ ಜನಾಂಗದಲ್ಲಿ ಹೆರಿಗೆಯ ಸೂತಕದ ನಲ್ವತ್ತು ದಿನಗಳವರೆಗೂ ಹೆಣ್ಣಿನ ಕುರಿತಾಗಿ ತೋರುವ ನಿಗಾ ಅಸಾಧಾರಣವಾದುದು. ಈ ನಲ್ವತ್ತು ದಿನಗಳ ಕಾಲ ಗಂಡನಾದವನು ಬಂದು ಹೆಂಡತಿಯನ್ನು ನೋಡಿ ಮಾತನಾಡಿಸಿಕೊಂಡು ಹೋಗುತ್ತಾನೆ. ಆದರೆ ಈ ಸಂದರ್ಭದಲ್ಲಿ ಅವರು ಕೂಡುವುದಕ್ಕೆ ಪಿಂಜಾರರಲ್ಲಿ ಅವಕಾಶವಿಲ್ಲ. ಬಾಣಂತಿಯನ್ನು ಮೈಲಿಗೆ ಇತ್ಯಾದಿ ನೆವದಲ್ಲಿ ದೂರ ಇಟ್ಟಿರುವುದಿಲ್ಲ. ಹೆಣ್ಣು ಹಡೆದಿದ್ದಾಳೆಂದು ಆಕೆಗೆ ಹಿಂಸೆಯನ್ನು ಕೊಡುವುದಿಲ್ಲ. ಗಂಡು-ಹೆಣ್ಣು ಹೀಗೆ ಯಾವ ಮಗು ಹುಟ್ಟಿದರೂ ಅದು ದೇವರ ಫಲ ಎಂದುಕೊಂಡು ಪ್ರೀತಿಯಿಂದ ನೋಡಿಕೊಳ್ಳುತ್ತಾರೆ. ಈ ನಲ್ವತ್ತು ದಿನದ ನಂತರ ಹೆಣ್ಣನ್ನು ಯಾವಾಗಬೇಕಾದರೂ ಗಂಡನ ಮನೆಗೆ ಕಳಿಸಿಕೊಡುತ್ತಾರೆ. ಹಾಗೆ ಕಳಿಸುವಾಗ ಬಟ್ಟೆ ಬರೆ ಇತ್ಯಾದಿ ಉಡುಗೊರೆಯನ್ನು ಕೊಡುತ್ತಾರೆ. ಸಾಮಾನ್ಯವಾಗಿ ಪ್ರತಿ ಹೆರಿಗೆಯ ಸಮಯದಲ್ಲೂ ಹೆಣ್ಣನ್ನು ತವರಿಗೆ ಕರೆತರುತ್ತಾರೆ. ಚೊಚ್ಚಲ ಹೆರಿಗೆಯಂತೂ ಅಗತ್ಯವಾಗಿ ತವರು ಮನೆಯಲ್ಲೇ ನಡೆಯಬೇಕೆನ್ನುತ್ತಾರೆ. ನಲ್ವತ್ತು ದಿನಗಳ ನಂತರ ತಾಯಿ-ಮಗುವನ್ನು ಗಂಡನ ಮನೆಗೆ ಕಳಿಸಿದರೂ ಕೆಲವು ದಿನಗಳ ಕಾಲ ಹೆಣ್ಣಿನ ತಾಯಿ ಅವಳ ಜೊತೆ ಇದ್ದು ಬರುತ್ತಾಳೆ. ಬಾಣಂತಿಯ ಹಸಿ ಮೈ ಆರುವವರೆಗೂ ಅವಳಿಗೆ ಯಾವ ಕೆಲಸವನ್ನೂ ಮಾಡಗೊಡುವುದಿಲ್ಲ. ಮಗುವಿಗೆ ಎದೆಹಾಲನ್ನೇ ಹೆಚ್ಚಾಗಿ ಕೊಡುತ್ತಾರೆ.

### ೪.೧.೩ ಜವಳ ಅಥವಾ ಅಕೀಖಾ

ಪಿಂಜಾರರಲ್ಲಿ ಮಗುವಿನ ಹನ್ನೊಂದನೆಯ ತಿಂಗಳ ವಯಸ್ಸಿನಲ್ಲಿ ಜವಳ ತೆಗೆಸುವ ಸಂಪ್ರದಾಯವಿದೆ. ಉರ್ದು ಭಾಷೆ ಬಲ್ಲ ಕೆಲವರು ಈ ಸಂಪ್ರದಾಯಕ್ಕೆ 'ಅಕೀಖಾ' ಎಂದು ಕರೆಯುತ್ತಾರೆ. ಜವಳ ಅಥವಾ

ಅಕೀಖಾ ಎಂದರೆ ಮಗುವಿನ ತಲೆಗೂದಲನ್ನು ಕತ್ತರಿಸುವುದು ಎಂದರ್ಥ. ಮಗುವಿನ ಜನನದ ನಂತರ ಮೊಟ್ಟಮೊದಲನೆಯ ಕ್ಷೌರವಿದು. ಪಿಂಜಾರರಲ್ಲಿ ಕೆಲವರು ಈ ಕಾರ್ಯಕ್ರಮವನ್ನು ಮಗುವಿನ ಐದಾರು ವರ್ಷದವರೆಗೂ ಮಾಡುವ ರೂಢಿಯಿದೆ. ಅಲ್ಲಿಯವರೆಗೂ ಮಗುವಿನ ತಲೆಗೂದಲನ್ನು, ಗಂಡು ಮಗುವಾಗಿದ್ದರೂ ಸಹ, ಬಾಚಿ ಜಡೆ ಹಾಕಿ ಟೇಪು ಕಟ್ಟುತ್ತಾರೆ. ಅಂದರೆ ಮಗುವಿನ ಹನ್ನೊಂದನೆಯ ತಿಂಗಳ ವಯಸ್ಸಿನಿಂದ ಐದು ವರ್ಷದವರೆಗೂ ವಯಸ್ಸಿನ ನಿರ್ದಿಷ್ಟ ದಿನ, ಮುಹೂರ್ತ ಎಂದು ನೋಡದೆ ಆಚರಿಸುವ ಈ ಕಾರ್ಯಕ್ರಮ ಅವರವರ ಅನುಕೂಲದ ದಿನಗಳಲ್ಲಿ ನಡೆಯುತ್ತದೆ. ಪಿಂಜಾರರು ತಮ್ಮ ಆದಾಯದ ಸೀಸನ್‌ಗನುಗುಣವಾಗಿ, ಸಾಮಾನ್ಯವಾಗಿ ಬೇಸಿಗೆಯ ದಿನಗಳಲ್ಲಿ ಈ ಕಾರ್ಯಕ್ರಮವನ್ನು ನಡೆಸುತ್ತಾರೆ.

ಮಗು ಗಂಡಾಗಿರಲಿ, ಹೆಣ್ಣಾಗಿರಲಿ, ಮಗುವಿನ ಸೋದರಮಾವ ಅಂದರೆ ಮಗುವಿನ ತಾಯಿಯ ಅಣ್ಣ ಅಥವಾ ತಮ್ಮ ನಿಗಧಿಯಾದ ದಿನದಂದು ಸೋದರಿಯ ಮನೆಯ ವಿಶೇಷ ಅತಿಥಿ. ಈ ಆಚರಣೆಯಲ್ಲಿ ಎರಡೂ ಕಡೆಯ ಬಂಧುಗಳು, ಆಪ್ತೇಷ್ಟರು, ಮಿತ್ರರು ಬರುತ್ತಾರೆ. ಮಗುವನ್ನು ಒಂದು ಹೊಸ ಜಮಖಾನ ಹಾಸಿ ಅದರ ಮೇಲೆ ಕೂರಿಸುತ್ತಾರೆ. ಸೋದರ ಮಾವ ಕತ್ತರಿ ತೆಗೆದುಕೊಂಡು ಮಗುವಿನ ತಲೆಗೂದಲನ್ನು ಮೂರು ಕಡೆ ಮೂರು ಸಲ ಕತ್ತರಿಸಬೇಕು (ಹಾಗೆ ಕತ್ತರಿಸಿದ ಕೂದಲನ್ನು ವಿಶೇಷವಾದ ಕೆಂಪು ಬಟ್ಟೆಯಲ್ಲಿ ಕಟ್ಟಿ ಹರಿಯುವ ನೀರಿನಲ್ಲಿ ಹಾಕುತ್ತಾರೆ). ನಂತರ ಈ ಕಾರ್ಯಕ್ರಮಕ್ಕಾಗಿ ಕರೆಸಿದ ಕ್ಷೌರಿಕ ಮಗುವಿನ ಉಳಿದ ತಲೆಗೂದಲನ್ನು ಪೂರ್ತಿಯಾಗಿ ಬೋಳಿಸುತ್ತಾನೆ. ಸೋದರಮಾವ ಈ ಕ್ಷೌರ ಮುಗಿದ ನಂತರ ಮಗುವಿಗೆ ಬಿಸಿ ನೀರಿನಿಂದ ಸ್ನಾನ ಮಾಡಿಸಿ ತಾನೇ ತಂದ ಹೊಸಬಟ್ಟೆಯನ್ನು ತೊಡಿಸುತ್ತಾನೆ. ಮೊಟ್ಟಮೊದಲು ತಲೆಯ ಮೇಲೆ ಕತ್ತರಿಯಾಡುವುದರಿಂದ ತನಗೇನು ಮಾಡುತ್ತಾರೋ ಎಂದು ಮಗು ಅಳುತ್ತಿರುತ್ತದೆ. ಆ ಮಗುವಿಗೆ ಸಮಾಧಾನ, ಧೈರ್ಯ ಹೇಳಿ ಇಡೀ ಆಚರಣೆಯನ್ನು ಸೋದರಮಾವನೇ ಮುಗಿಸಿಕೊಡುತ್ತಾನೆ. ಈ ಸಂಪ್ರದಾಯದಲ್ಲಿ ಹೆಚ್ಚಾಗಿ ಶಾವಿಗೆ ಪಾಯಸದ ಸಿಹಿ ಊಟವಿರುತ್ತದೆ. ಕೆಲವರು ಉಳ್ಳವರು ಕೋಳಿ, ಕುರಿ ಕೊಯ್ದು ಅದ್ದೂರಿಯಾಗಿಯೇ ತಮ್ಮ ನೆಂಟರಿಷ್ಟರಿಗೆ ಉಣಬಡಿಸುತ್ತಾರೆ. ಈ ಕಾರ್ಯಕ್ರಮದ ವಿಶೇಷ ಅತಿಥಿಯಾದ ಸೋದರಮಾವನಿಗೆ ಹೊಸಬಟ್ಟೆ ಕೊಟ್ಟು ಗೌರವಿಸಲಾಗುತ್ತದೆ. ಬಡವರಾದವರು ಕಡೇ ಪಕ್ಷ ಒಂದು ಹೊಸ ಟವೆಲ್ಲನ್ನಾದರೂ ಕೊಟ್ಟು ಸತ್ಕರಿಸುತ್ತಾರೆ.

ಪಿಂಜಾರರಲ್ಲಿ ಹೆಣ್ಣು ಮಗುವಿಗೆ ಕಿವಿಗೆ ಮುರ ಚುಚ್ಚಿಸುವ ಸಂಪ್ರದಾಯವಿದೆ. ಈ ಸಂಪ್ರದಾಯ ಕೆಲವೊಮ್ಮೆ ಜವಳದೊಂದಿಗೇ ನಡೆದುಬಿಡುತ್ತದೆ. ಇನ್ನೂ ಕೆಲವೊಮ್ಮೆ ಪ್ರತ್ಯೇಕವಾಗಿ ನಡೆಯುತ್ತದೆ. ಹೆಣ್ಣು ಮಗುವಿಗೆ ಒಂದನೆಯ ವರ್ಷದ ವಯಸ್ಸು ದಾಟುತ್ತಿದ್ದಂತೆ ಸಾಮಾನ್ಯವಾಗಿ ಸೋದರಮಾವ ಈ ಮುರ ಚುಚ್ಚಿಸುವ ಕಾರ್ಯಕ್ರಮಕ್ಕಾಗಿ ಅಕ್ಕಸಾಲಿಗನನ್ನು ಕರೆದುಕೊಂಡು ಬರುತ್ತಾನೆ. ಮುರ ಸಾಮಾನ್ಯವಾಗಿ ಬಂಗಾರದ್ದೇ ಆಗಿರುತ್ತದೆ. ಇದರ ಖರ್ಚು ಸೋದರಮಾವನದ್ದೇ ಆಗಿರುವುದು ವಿಶೇಷ. ಹುಡುಗಿ ಅಳುವುದನ್ನು ಲೆಕ್ಕಿಸದೇ ಮುರ ಚುಚ್ಚಲಾಗುತ್ತದೆ. ಈ ಕಾರ್ಯ ಮಾಡಿದ ಅಕ್ಕಸಾಲಿಗನಿಗೆ ಅಕ್ಕಿ, ಬೆಲ್ಲ, ಎಲೆಅಡಿಕೆ, ತೆಂಗಿನಕಾಯಿ ಮತ್ತು ಹತ್ತೂಕಾಲು ರೂಪಾಯಿ ಕೊಟ್ಟು ಸತ್ಕರಿಸಲಾಗುತ್ತದೆ. ಈ

ಸಂದರ್ಭದಲ್ಲಿ ವಿಶೇಷ ಊಟದ ವ್ಯವಸ್ಥೆ ಇರುವುದಿಲ್ಲ. ಪಿಂಜಾರರಲ್ಲಿ ಹೆಣ್ಣು ಮಕ್ಕಳಿಗೆ ಎಂಟು-ಹತ್ತು ವರ್ಷದವರಾದಾಗ ಮೂಗು ಚುಚ್ಚಿಸುತ್ತಾರೆ. ಮೂಗು ಚುಚ್ಚಿಕೊಳ್ಳುವುದು ತೀರಾ ೧೫-೨೦ ವರ್ಷಗಳಿಂದ ಪೂರ್ತಿ ನಿಂತುಹೋಗಿದೆ. ಕಾರಣ ಆಧುನಿಕತೆಯಿಂದಾಗಿ ಜನರಲ್ಲಿ ಬೆಳೆದಿರುವ ಸೌಂದರ್ಯದ ಕಲ್ಪನೆ. ಮೂಗು ಚುಚ್ಚಿಕೊಂಡರೂ ಚೆನ್ನಾಗಿ ಕಾಣಬಲ್ಲ ಕೆಲವರು ಈ ಸಂಪ್ರದಾಯವನ್ನು ಬಿಟ್ಟಿಲ್ಲ.

ಸಾಮಾನ್ಯವಾಗಿ ಮಗುವಿನ ಈ ವಯಸ್ಸಿನಲ್ಲಿ ಮಗುವಿಗೆ ಹಲ್ಲು ಹುಟ್ಟುವ, ಉದುರುವ ಸಹಜವಾದ ಕ್ರಿಯೆಗಳು ನಡೆಯುತ್ತವೆ. ಪಿಂಜಾರ ಜನಾಂಗದಲ್ಲಿ ಮಗುವಿಗೆ ಮೊದಲು ಕೆಳಭಾಗದ ಹಲ್ಲುಗಳು ಹುಟ್ಟಿದರೆ ಮಗುವಿನ ಸೋದರಮಾವನ ಏಳಿಗೆಯಾಗುವುದಿಲ್ಲ ಎಂದೂ, ಮೇಲ್ಭಾಗದ ಹಲ್ಲುಗಳು ಮೊದಲು ಮೂಡಿದರೆ ಒಳ್ಳೆಯದು ಎಂದೂ ನಂಬಲಾಗುತ್ತದೆ. ಉದುರಿದ ಹಲ್ಲನ್ನು ಜೋಪಾನವಾಗಿಟ್ಟುಕೊಂಡು ಬಂದು ಅದನ್ನು ಸಗಣಿಯ ಉಂಡೆಯಲ್ಲಿ ಸೇರಿಸಿ ಮನೆಯ ಹಾರಿನ ಮೇಲೆ ಎಸೆಯಲಾಗುತ್ತದೆ. ಮಗುವಿನ ನಾಲಗೆ ಚೂಪಾಗಿದ್ದರೆ ಮಗು ಚೂಟಿಯಾಗುತ್ತದೆಂದೂ, ತುಂಬ ಮಾತನಾಡುತ್ತದೆಂದೂ ನಂಬುತ್ತಾರೆ. ಪಿಂಜಾರರಲ್ಲಿ ಎಲ್ಲ ಬಗೆಯ ಸ್ತರದ ಜನರಲ್ಲಿ ಈ ಬಗೆಯ ನಂಬಿಕೆ ಮತ್ತು ಆಚರಣೆಗಳು ಜಾರಿಯಲ್ಲಿವೆ.

### *೪.೧.೪ ಮುಂಜಿ ಮತ್ತು ಪ್ರೌಢ ಸಂಸ್ಕಾರ*

ಪಿಂಜಾರರಲ್ಲಿ ಗಂಡು ಮಗುವಿಗೆ ಮುಂಜಿ ಮಾಡಿಸಲಾಗುತ್ತದೆ. 'ಮುಂಜಿ' ಪಿಂಜಾರರಲ್ಲಿ ಕಡ್ಡಾಯವಾದ ಆಚರಣೆಯಾಗಿದೆ. ಇದು ಮುಸ್ಲಿಮರಲ್ಲಿರುವ ಮುಂಜಿಯ ಆಚರಣೆಯೇ. ಮುಸ್ಲಿಮರು ಮುಂಜಿ ಮಾಡಿಸುತ್ತೇವೆ ಅನ್ನುವುದಕ್ಕಿಂತ ಹೆಚ್ಚಿನ ಜ್ಞಾನ ಈ ಆಚರಣೆಗೆ ಸಂಬಂಧಿಸಿದಂತೆ ಪಿಂಜಾರರಿಗಿಲ್ಲ. ಪಿಂಜಾರರು ಎಷ್ಟೇ ತಮ್ಮ ಬದುಕಿನುದ್ದಕ್ಕೂ ಹಿಂದೂ ಸಮುದಾಯದವರ ಆಚರಣೆಗಳನ್ನಿಟ್ಟುಕೊಂಡರೂ ಅಂತಿಮವಾಗಿ ತಮ್ಮನ್ನು ಮುಸ್ಲಿಮರೆಂದೇ ಗುರುತಿಸಿಕೊಳ್ಳಬೇಕಾದಂತಹ ಅನಿವಾರ್ಯತೆಯಿದೆ. ಅವರೂ ಹಾಗೇ ಗುರುತಿಸಿಕೊಳ್ಳುತ್ತಾರೆ. ಮುಸ್ಲಿಂ ಧರ್ಮದ ಆಚರಣೆಗಳ ಮೂಲ ಮತ್ತು ಅರಿವು ಅವರಿಗಿಲ್ಲದಿದ್ದರೂ ಮುಂಜಿ, ಮದುವೆ, ಮುಸ್ಲಿಮರ ಹಬ್ಬ ಮತ್ತು ಸಾವಿನ ಸಂದರ್ಭದಲ್ಲಿ ಅವರ ಮಾರ್ಗದರ್ಶನದ ನೆರವನ್ನು ಪಡೆಯುತ್ತಾರೆ.

'ಮುಂಜಿ' ಎಂದರೆ ಗಂಡಿನ ಜನನಾಂಗದ ತುದಿಯ ಚರ್ಮವನ್ನು ಕತ್ತರಿಸುವುದು. ಈ ಆಚರಣೆಯ ಬಗ್ಗೆ ಏನಾದರೂ ನಂಬಿಕೆಗಳಿವೆಯೇ ಎಂದು ಪ್ರಶ್ನಿಸಿದರೆ ಕೆಲವರಿಗೆ ಸಿಟ್ಟು ಬರುತ್ತದೆ. ಮತ್ತೆ ಕೆಲವರು 'ಏನೋ ನಮ್ಮ ಧರ್ಮದವರು ಮಾಡ್ತಾರೆ ನಾವೂ ಅವರಂಗೆ ಮಾಡ್ತವಿ' ಎನ್ನುತ್ತಾರೆ. ಕೆಲವರಾದರೂ ಒಂದು ನಂಬಿಕೆಯನ್ನಿಟ್ಟುಕೊಂಡಿದ್ದಾರೆ. ಅದು ಹಿಂದೂ ಶೂದ್ರ ಸಮುದಾಯದಲ್ಲಿರುವ ನಂಬಿಕೆಯೇ ಆಗಿದೆ. ದೇವರು ಮನುಷ್ಯರನ್ನು ಸೃಷ್ಟಿ ಮಾಡಿದ ನಂತರ ತೂಕ ಹಾಕಿದನಂತೆ. ಆಗ ಮುಸ್ಲಿಮನು ಹೆಚ್ಚು ಭಾರ ಇದ್ದನಂತೆ. ಬ್ರಾಹ್ಮಣ ಮತ್ತು ಲಿಂಗಾಯ್ತರು ಕಡಿಮೆ ತೂಕ ಬಂದರಂತೆ. ಇವರಲ್ಲಿ ಸಮಾನತೆ ತರಲು ದೇವರು ಯೋಚಿಸಿ ಮುಸ್ಲಿಮನ ಜನನಾಂಗದ ತುದಿಯ ತೊಗಲನ್ನು ಕತ್ತರಿಸುವಂತೆಯೂ ಬ್ರಾಹ್ಮಣ ಜನಿವಾರವನ್ನು, ಲಿಂಗಾಯ್ತ ಲಿಂಗವನ್ನು ಹಾಕಿಕೊಳ್ಳುವಂತೆಯೂ ಆಜ್ಞಾಪಿಸಿದನತೆ. ದೇವರ

ಈ ಆಜ್ಞೆಯ ಪ್ರಕಾರ ಮುಸ್ಲಿಮರು ಮುಂಜಿ ಮಾಡಿಸಿಕೊಳ್ಳುತ್ತಾರೆ, ಬ್ರಾಹ್ಮಣರು ಜನಿವಾರವನ್ನು ಲಿಂಗಾಯ್ತರು ಲಿಂಗವನ್ನು ಧರಿಸುತ್ತಾರೆ.

ಹಾಗಾದರೆ ದೇವರ ಸೃಷ್ಟಿಯೇ ಆಗಿರುವ ಹೆಣ್ಣುಮಕ್ಕಳು ಮತ್ತು ಅಪಾರ ಶೂದ್ರ ಸಮುದಾಯದವರಿಗೆ ದೇವರು ಏನೂ ಹೇಳಲಿಲ್ಲವೇ ? ಅವರು ಸಮಾನ ತೂಕದವರಾಗಿದ್ದರೇ? ಎಂದು ಪ್ರಶ್ನಿಸಿದರೆ ನಕ್ಕು ಸುಮ್ಮನಾಗುತ್ತಾರೆ. ಆದರೆ ಆ ನಂಬಿಕೆಯ ಹಿಂದಿರುವ ಸಮಾನತೆಯ ಆಶಯ ಮಾತ್ರ ಕುತೂಹಲಕಾರಿಯಾದುದು.

ಈ ಮುಂಜಿ ಆಚರಣೆಯ ಕುರಿತು ಪಿಂಜಾರರಲ್ಲಿ ಇನ್ನೂ ಒಂದು ತಮಾಷೆಯ ಕತೆಯಿದೆ. 'ತುಂಬಾ ಹಿಂದಿನ ದಿನಗಳಲ್ಲಿ ಮನುಷ್ಯನ ಸಂಚಾರಕ್ಕೆ ವಾಹನಗಳಾಗಲೀ, ರಸ್ತೆ, ಸೇತುವೆಗಳಾಗಲೀ ಇರಲಿಲ್ಲ. ಆಗ ಮನುಷ್ಯ ಹಳ್ಳ, ಕಾಲುವೆಗಳನ್ನು ದಾಟಲು ತನ್ನದೇ ಆದ ವ್ಯವಸ್ಥೆ ಮಾಡಿಕೊಳ್ಳುತ್ತಿದ್ದ. ಇಂತಹ ಪರಿಸ್ಥಿತಿಯಲ್ಲಿ ಒಂದು ದಿನ ಹಳ್ಳವನ್ನು ದಾಟುವಾಗ ಒಬ್ಬ ಬ್ರಾಹ್ಮಣನೂ, ಒಬ್ಬ ಮುಸ್ಲಿಮನೂ ಪರಸ್ಪರ ಎದುರಾದರು. ಆ ಹಳ್ಳವನ್ನು ದಾಟುವ ಸಲುವಾಗಿ ಉದ್ದನೆಯ ಅಡಿಕೆಯ ಬೊಂಬನ್ನು ಎರಡೂ ದಡಗಳಿಗೆ ಹೊಂದಿಸಿ ಇಡಲಾಗಿತ್ತು. ಮತ್ತು ಅದರ ಮೇಲೆ ಒಬ್ಬರು ಮಾತ್ರ ನಡೆದುಕೊಂಡು ಹಳ್ಳವನ್ನು ದಾಟಬಹುದಾಗಿತ್ತು. ಹಳ್ಳ ದಾಟಲು ಎದುರಾದ ಮುಸ್ಲಿಮನಿಗೆ ಬ್ರಾಹ್ಮಣ ಹೇಳುತ್ತಾನೆ, 'ನಿಲ್ಲು, ನಾನು ಮಡಿವಂತ, ಮೊದಲು ನಾನು ದಾಟಿಬಿಡುತ್ತೇನೆ, ನಂತರ ನೀನು ದಾಟು' ಎಂದು. ಆದರೆ ಮುಸ್ಲಿಮನು ಪ್ರತ್ಯುತ್ತರವಾಗಿ, 'ಇಲ್ಲ, ಇಲ್ಲಿಗೆ ಮೊದಲು ಬಂದವನು ನಾನು, ನಾನೇ ಮೊದಲು ದಾಟುತ್ತೇನೆ' ಎನ್ನುತ್ತಾನೆ. ಇಬ್ಬರೂ ಜಗ್ಗುವುದಿಲ್ಲ, ಸೋಲುವುದಿಲ್ಲ. ಕಡೆಗೆ ಬ್ರಾಹ್ಮಣ ಅಡಿಕೆಯ ಬೊಂಬಿನ ಮೇಲೆ ದಡದಡ ಬಂದು ನಟ್ಟನಡುವೆ ಕೂತು 'ಅದು ಹೇಗೆ ಹೋಗುತ್ತೀಯೋ ಹೋಗು' ಎಂದು ಬಿಡುತ್ತಾನೆ. ಆಗ ಮುಸ್ಲಿಮನು ಕೂಡ ಆ ಕಡೆಯಿಂದ ಬಂದು ಬ್ರಾಹ್ಮಣನನ್ನು ಎರಡು ಕಾಲುಗಳ ನಡುವೆ ಮಾಡಿಕೊಂಡು ದಾಟಿ ಬಿಡುತ್ತಾನೆ. ಹಾಗೆ ದಾಟುವಾಗ ಮುಸ್ಲಿಮನ ಜನನಾಂಗ ಅಡಿಕೆಯ ಬೊಂಬಿನ ಮೇಲೆ ಕುಳಿತಿದ್ದ ಬ್ರಾಹ್ಮಣನ ಮುಂದಲೆಗೆ ತಾಕುತ್ತದೆ. ಬ್ರಾಹ್ಮಣನಿಗೆ ತನ್ನ ಮಡಿ, ಮುಡಿ ಹಾಳಾಯಿತಲ್ಲಾ ಅನ್ನಿಸಿ ಸಿಟ್ಟು ಬರುತ್ತದೆ. ಅದಕ್ಕೆ ಆತ 'ನಿನ್ನ ಜನನಾಂಗ ತಾಕಿದ ನನ್ನ ಮುಂದಲೆಯ ಕೂದಲನ್ನು ಶಾಶ್ವತವಾಗಿ ಕತ್ತರಿಸಿಬಿಡುತ್ತೇನೆಂದು' ಹಟತೊಟ್ಟ. ಮುಸ್ಲಿಮನು 'ನೀನು ಕೂದಲನ್ನು ಕತ್ತರಿಸಿದರೆ ನಿನ್ನ ತಲೆಗೆ ತಾಕಿದ ನನ್ನ ಜನನಾಂಗದ ಮುಂದೊಗಲನ್ನೇ ಕತ್ತರಿಸಿಬಿಡುತ್ತೇನೆಂದು' ಶಪಥ ಮಾಡಿದ. ಅದರ ಪರಿಣಾಮವಾಗಿ ಈಗಲೂ ಬ್ರಾಹ್ಮಣರು ಮುಂದಲೆಯ ಕೂದಲನ್ನು ಕತ್ತರಿಸಿಕೊಳ್ಳುತ್ತಾರೆ, ಮುಸ್ಲಿಮರು ಜನನಾಂಗದ ಮುಂದೊಗಲನ್ನು ಕತ್ತರಿಸುತ್ತಾರೆ.

ಈ ಕತೆ ತಮಾಷೆಯಾಗಿದೆ. ಇದು ಯಾವಾಗ ಹುಟ್ಟಿಕೊಂಡಿತು ? ಏನು? ಎಂಬುದು ತಿಳಿದಿಲ್ಲ. ಆದರೆ ಎರಡು ಜನಾಂಗಗಳ ನಡುವಿನ ಆಚರಣೆಯನ್ನು ಹೀಗೆ ತಮಾಷೆಯಾಗಿ ಮನರಂಜನೆಗಾಗಿ ಕತೆಕಟ್ಟಿ ಹೇಳಲಾಗಿದೆ ಎನ್ನುವುದಂತೂ ಸತ್ಯ.

ಪಿಂಜಾರರಲ್ಲಿ 'ಮುಂಜಿ' ಮಾಡಿಸುವುದು ಕಡ್ಡಾಯವಾಗಿದ್ದರೂ ಅದು ಮುಸ್ಲಿಮರ ಆಚರಣೆಯ ಅಂಧಾನುಕರಣೆ ಮಾತ್ರ. ಹುಡುಗ ಹತ್ತು ವರ್ಷದವನಾಗುವುದಕ್ಕಿಂತ ಮೊದಲೇ ಅಂದರೆ ಮೂರು

ವರ್ಷದಿಂದ ಒಂಬತ್ತು ವರ್ಷದ ನಡುವೆ ಮುಂಜಿ ಮಾಡಿಸುತ್ತಾರೆ. ಹತ್ತು ವರ್ಷದ ನಂತರದವನಿಗೆ ಮುಂಜಿ ಮಾಡಿಸುವುದಿಲ್ಲ. ಆಕಸ್ಮಿಕ ಮತ್ತು ಅನಿವಾರ್ಯ ಸಂದರ್ಭಗಳಲ್ಲಿ ಹತ್ತು ವರ್ಷ ದಾಟುವವರೆಗೂ ಮುಂಜಿ ಮಾಡಿಸಲಾಗದಿದ್ದರೆ ಅಂತಹವನನ್ನು ಕೂರಿಸಿ ಮುಲ್ಲನನ್ನು ಕರೆದುಕೊಂಡು ಬಂದು 'ಬಿಸ್ಮಿಲ್ಲಾ' ಹೇಳಿಸಿ ಒಂದು ವೀಳೆಯದೆಲೆಯನ್ನು ಕತ್ತರಿಸುತ್ತಾರೆ. ಹಾಗೆ ವೀಳೆಯದೆಲೆ ಕತ್ತರಿಸುವುದೇ ಅವನಿಗೆ ಮುಂಜಿಯ ಆಚರಣೆಯನ್ನು ಮುಗಿಸಿದಂತೆ. ಇಂಥ ಸಂದರ್ಭಗಳು ಕಡಿಮೆ. ಮುಂಜಿ ಮಾಡಿಸಿಕೊಳ್ಳುವ ಆ ಹುಡುಗ ಎಲ್ಲರಂತೆ ಆರಾಮವಾಗಿರುತ್ತಾನೆ. ಅವನಿಗೆ ಯಾರೂ ಯಾವ ಬಗೆಯ ಕಿರುಕುಳವನ್ನು ಕೊಡುವುದಿಲ್ಲ. ಹೀಗೆ ಹತ್ತು ವರ್ಷ ತುಂಬುವ ಮೊದಲೇ ಮಾಡಿಸುವುದರ ಉದ್ದೇಶ ಜನನಾಂಗ ಎಳೆಯದಾಗಿದ್ದಾಗಲೇ ಮಾಡಿಸಿದರೆ ಒಳ್ಳೆಯದು. ವಯಸ್ಸಾಗುತ್ತಿದ್ದಂತೆ ಜನನಾಂಗ ಗಡುಸಾಗುವುದರಿಂದ ಕತ್ತರಿಸಿದ ಗಾಯ ಬೇಗ ಮಾಯದೆ ಕೀವುಗಟ್ಟಿ ಏನಾದರೂ ತೊಂದರೆಯಾದೀತು ಎನ್ನುವ ತಿಳುವಳಿಕೆ ಮಾತ್ರ.

ಮುಂಜಿಗೆ ಒಳಪಡುವ ಹುಡುಗ ಸಾಮಾನ್ಯವಾಗಿ ಅತ್ಯಂತ ಭಯದಿಂದ ತತ್ತರಿಸುತ್ತಾನೆ. ದೊಡ್ಡವರು ಏನೂ ಆಗುವುದಿಲ್ಲವೆಂದೂ ಇರುವೆ ಕಡಿದಷ್ಟೇ ನೋವಾಗುತ್ತದೆಂದೂ ತಾವೆಲ್ಲ ಮಾಡಿಸಿಕೊಂಡಿರುವುದಾಗಿಯೂ ಹೇಳಿ ಆತನಲ್ಲಿ ಧೈರ್ಯ ತುಂಬುತ್ತಾರೆ. ಹುಡುಗನನ್ನು ಮನವೊಲಿಸುತ್ತಾರೆ. ಒಪ್ಪದಿದ್ದರೆ ಬಲವಂತವಾಗಿ ಹಿಡಿದುಕೊಂಡು ಬರುತ್ತಾರೆ. ಸಾಮಾನ್ಯವಾಗಿ ಬೇಸಿಗೆಯ ಕಾಲದಲ್ಲಿ ಮುಂಜಿ ಮಾಡಿಸಲಾಗುತ್ತದೆ. ಕಾರಣ ಸೀತವಾಗದಿರಲಿ ಎಂದಷ್ಟೇ.

ಸಾಮಾನ್ಯವಾಗಿ ಮುಂಜಿ ಮಾಡುವವನು ಮುಲ್ಲಾ ಆಗಿರುತ್ತಾನೆ. ಆತ ಪ್ರತಿ ಬೇಸಗೆಯ ಕಾಲದಲ್ಲಿ ಮುಂಜಿ ಕಾರ್ಯಕ್ಕಾಗಿ ತಿರುಗುತ್ತಿರುತ್ತಾನೆ. 'ಮುಂಜಿ ಸಾಬು' ಎಂದು ಪಿಂಜಾರರು ಆತನನ್ನು ಕರೆಯುತ್ತಾರೆ. ಆತ ಬಂದಾಗ ಹುಡುಗನ ಮೈತೊಳಿಸಿ ಚೆನ್ನಾಗಿ ಮೈ ಒರಸಿ ಬೆತ್ತಲೆಯಾಗಿ ಬೋರಲು ಹಾಕಿದ ಬಿಂದಿಗೆಯ ಮೇಲೆ ಹುಡುಗನನ್ನು ಕೂರಿಸುತ್ತಾರೆ. ಆತ ಒದ್ದಾಡದಂತೆ ಕೈಕಾಲು ತಲೆಯನ್ನೆಲ್ಲ ಕೆಲವು ಗಂಡಸರು ಹಿಡಿದುಕೊಳ್ಳುತ್ತಾರೆ. ಜನನಾಂಗದ ನೇರಕ್ಕೆ ಕೆಳಕ್ಕೆ ನೆಲದ ಮೇಲೆ ಒಂದು ಹಿತ್ತಾಳೆಯ ತಟ್ಟೆಯಲ್ಲಿ ಬೂದಿಹಾಕಿ ಇಟ್ಟಿರುತ್ತಾರೆ. ಜನನಾಂಗವನ್ನು ಕತ್ತರಿಸಿದ ತಕ್ಷಣ ರಕ್ತ ನೆಲದ ಮೇಲೆ ಬೀಳಬಾರದೆಂದು, ಈ ತಟ್ಟೆಯಲ್ಲಿಟ್ಟಿರುವ ಬೂದಿಯಲ್ಲಿ ಸುರಿಯಬೇಕೆಂದು ಈ ವ್ಯವಸ್ಥೆ ಮಾಡಲಾಗುತ್ತದೆ. ಮುಂಜಿ ಸಾಬು ಹರಿತವಾದ ಸಣ್ಣ ಕತ್ತಿ ಅಥವಾ ಕತ್ತರಿ ಹಿಡಿದು ಒಂದು ಕೈಯಲ್ಲಿ ಜನನಾಂಗದ ತುದಿಯ ತೊಗಲನ್ನು ಎಳೆದು ಹಿಡಿದು ಕಚಕ್ಕಂತ ಕೊಯ್ಯುತ್ತಾನೆ. ತಕ್ಷಣ ಚರ್ಮವನ್ನು ಹಿಂದಕ್ಕೆ ಸರಿಸಿ ರಕ್ತ ಜಾಸ್ತಿ ಹೋಗದಂತೆ ನಾಟಿ ಔಷಧಿಯ ಪುಡಿಯನ್ನು ಸುತ್ತಲೂ ಹಚ್ಚಲಾಗುತ್ತದೆ. ಕತ್ತರಿಸಿದ ಚರ್ಮದ ಭಾಗವನ್ನು ರಕ್ತಬಿದ್ದ ಬೂದಿಯನ್ನು ಒಟ್ಟಿಗೆ ಮನೆಯ ಮುಂಭಾಗ ಅಥವಾ ಹಿತ್ತಲಲ್ಲಿ ಹೂಳಲಾಗುತ್ತದೆ. ಎಂಥ ಔಷಧಿಯ ಪುಡಿ ಹಾಕುತ್ತಾರೆಂದೂ ಪಿಂಜಾರರಿಗೆ ಗೊತ್ತಿಲ್ಲ. ನಂತರ ಅಳುತ್ತಲೇ ಇರುವ ಹುಡುಗನನ್ನು ಒಂದು ಪಕಕ್ಕೆ ಎತ್ತಿಕೊಂಡು ಬಂದು ಜನನಾಂಗ ದೇಹದ ಇತರೆ ಭಾಗಕ್ಕೆ ಅಥವಾ ಬೇರೆ ವಸ್ತುಗಳಿಗೆ ತಾಗದಂತೆ ಆತನನ್ನು ಕಾಲು ಚಾಚಿಕೊಂಡೇ ಇರುವಂತೆ ಕೂರಿಸಲಾಗುತ್ತದೆ. ಆತನನ್ನು

ಸುಮ್ಮನಾಗಿಸಲು ದುಡ್ಡು, ಕೊಬರಿ, ಉತ್ತುತ್ತಿ ಹಣ್ಣು ಇತ್ಯಾದಿಯನ್ನು ಕೊಡುತ್ತಾರೆ. ಕೈಯಿಂದ ಜನನಾಂಗವನ್ನು ಮುಟ್ಟದಂತೇ, ಅದಕ್ಕೆ ತಾಗದಂತೆ ತೆಳುವಾದ ಬಟ್ಟೆಯೊಂದನ್ನು ಪಂಚೆಯ ರೀತಿಯಲ್ಲಿ ಸೊಂಟಕ್ಕೆ ಸುತ್ತಿ ಎಚ್ಚರ ವಹಿಸುತ್ತಾರೆ. ಲಾಡಿಯಿಂದ ಜನನಾಂಗವನ್ನು ಸ್ವಲ್ಪ ಮೇಲಕ್ಕೆತ್ತಿ ಸೊಂಟಕ್ಕೆ ಕಟ್ಟುತ್ತಾರೆ. ವೃಷಣದ ಚರ್ಮಕ್ಕೆ ಜನನಾಂಗದ ಗಾಯ ಒತ್ತಿ ಕೀವು, ಕಡಿತ ಉಂಟಾಗದಂತೆ ಎಚ್ಚರ ವಹಿಸಲಾಗುತ್ತದೆ. ಆತ ಮಲಮೂತ್ರ ವಿಸರ್ಜನೆಯನ್ನು ಗಾಯದ ನೋವು ಕಡಿಮೆಯಾಗುವವರೆಗೂ ನಿಂತುಕೊಂಡೇ ಮಾಡುತ್ತಾನೆ. ಆತನ್ನನು ನಡೆಸಿಕೊಂಡು ಹೋಗುವುದು, ಕೂರಿಸುವುದು ಮುಂತಾದ ಸಹಾಯವನ್ನು ಇತರರು ಮಾಡುತ್ತಾರೆ.

ಮುಂಜಿ ಮಾಡಿದ 'ಮುಂಜಿ ಸಾಬು'ಗೆ ಮಜೂರಿ ಕೊಡಲಾಗುತ್ತದೆ. ಐದರಿಂದ ಹತ್ತು ರೂಪಾಯಿಯವರೆಗೂ ಒಂದು ಖತನಕ್ಕೆ ಆತ ಮಜೂರಿ ಪಡೆಯುತ್ತಾನೆ. ಈಗ ಈ ಮಜೂರಿ ಒಂದು ನೂರರಿಂದ ನೂರೈವತ್ತು ರೂಪಾಯಿಗೆ ಹೆಚ್ಚಳವಾಗಿದೆ. ಒಂದು ಸೀಸನ್‌ಗೆ ಒಂದು ಊರಿನಲ್ಲಿ ಕನಿಷ್ಠ ೮ರಿಂದ ೧೦ ಹುಡುಗರು ಮುಂಜಿಗಾಗಿ ತಯ್ಯಾರಿರುತ್ತಾರೆ. ಒಂದು ಊರಿಗೆ ಬಂದನೆಂದರೆ ಆತ ಮುಂಜಿ ವಯಸ್ಸಿಗೆ ಬಂದ ಎಲ್ಲ ಹುಡುಗರ ಮುಂಜಿ ಮಾಡಿ ಇನ್ನೊಂದೂರಿಗೆ ಹೋಗುತ್ತಾನೆ. ನಗರದವರು ಈಗ ವೈದ್ಯರ ಬಳಿ ಮುಂಜಿ ಮಾಡಿಸಿದರೆ ಹಳ್ಳಿಗಳಲ್ಲಿ ಅದೇ ಮುಂಜಿಸಾಬು ಬರುವುದನ್ನು ಕಾಯುತ್ತಾರೆ.

ಮುಂಜಿ ಮಾಡಿಸಿದ ಹುಡುಗನನ್ನು ಅತ್ಯಂತ ಪ್ರೀತಿ, ಜವಾಬ್ದಾರಿ, ಎಚ್ಚರಿಕೆಯಿಂದ ನೋಡಿಕೊಳ್ಳಲಾಗುತ್ತದೆ. ಆತ ಬಯಸಿದ್ದೆಲ್ಲವನ್ನೂ ನಿರಾಕರಿಸದೆ ಪೂರೈಸುತ್ತಾರೆ. ಮುಂಜಿಯಾದ ಇಪ್ಪತ್ತು ದಿನಗಳವರೆಗೂ ಆತನಿಗೆ ಅನ್ನ ಕೊಡದೆ ಗೋಧಿ ಚಪಾತಿ, ತುಪ್ಪ, ಕೊಬ್ಬರಿ, ಸಕ್ಕರೆ, ಉತ್ತುತ್ತಿ ಹಣ್ಣು, ಗೋಡಂಬಿ-ದ್ರಾಕ್ಷಿ, ಬಾದಾಮಿ, ಮೊಟ್ಟೆ, ಮಾಂಸದ ಅಡಿಗೆ ಮುಂತಾದ ಅಪರೂಪದ ಅಡಿಗೆ ಪದಾರ್ಥಗಳನ್ನು ಕೊಡುತ್ತಾರೆ. ಶಾವಿಗೆ ಹುಗ್ಗಿಯನ್ನು ಆಗಾಗ್ಗೆ ಮಾಡಿ ಹಾಲು ಕೊಟ್ಟು ಉಣಿಸುತ್ತಾರೆ. ಇಪ್ಪತ್ತು ದಿನಗಳ ಕಾಲ ರಾಜೋಪಚಾರದ ನಂತರ (ಸಾಮಾನ್ಯವಾಗಿ ಗಾಯ ಆ ಹೊತ್ತಿಗೆ ನೋವಿಲ್ಲದಂತೆ ಮಾದಿರುತ್ತದೆ) ಆತನ ಸ್ನಾನ ಮಾಡಿಸಿ ಜನನಾಂಗದ ಸುತ್ತ ಬಳಿದಿದ್ದ, ಅಂಟಿಕೊಂಡಿದ್ದ ಪುಡಿ ಉದುರುವ ಹಾಗೆ ತೊಳೆದು ಹೊಸ ಜುಬ್ಬ, ಪೈಜಾಮ, ಟೋಪಿ ಹಾಕಿ ಆತನ ಕೈಲಿ ದುಡ್ಡು ಕೊಡುತ್ತಾರೆ. ಹೊಸ ಬಟ್ಟೆಯುಟ್ಟು ಲವಲವಿಕೆಯಿಂದಿರುವ ಹುಡುಗನಿಗೆ ಮಲ್ಲಿಗೆ ಹೂವಿನ ಹಾರ ಹಾಕಿ ಕುದುರೆಯ ಮೇಲೆ ಕೂರಿಸಿ ಮೆರವಣಿಗೆ ಒಯ್ಯುತ್ತಾರೆ. ವಾದ್ಯಮೇಳಗಳೂ ಇರುತ್ತವೆ. ಮಸೀದಿಗೆ ಹೋಗಿ ಅಲ್ಲಿ ಮುಲ್ಲಾ ಮಾಡಿದ ಹಾಗೆ ಆತನ ಮಾರ್ಗದರ್ಶನದಲ್ಲಿ ಹುಡುಗನಿಗೆ ನಮಾಜು ಮಾಡಿಸಿ ಮನೆಗೆ ಕರೆತರುತ್ತಾರೆ. ಕೆಲವರು ಸೈಕಲ್ ಮೇಲೂ ಮೆರವಣಿಗೆ ಹೋಗುತ್ತಾರೆ. ಮತ್ತೆ ಕೆಲವರು ನಡೆಸಿಕೊಂಡು ಹೋಗುತ್ತಾರೆ. ಇದೆಲ್ಲ ಅವರವರ ಆರ್ಥಿಕ ಸಾಮರ್ಥ್ಯಕ್ಕೆ ತಕ್ಕಂತೆ ನಡೆಯುತ್ತದೆ. ಬೇಸಿಗೆಯಲ್ಲೇ ಮುಂಜಿ ಮಾಡಿಸುವುದರಿಂದ ಆಪ್ತರಾದವರ ಹತ್ತಾರು ಹುಡುಗರ ಮೆರವಣಿಗೆ ಒಟ್ಟಿಗೆ ನಡೆಯುವುದುಂಟು. ನಮಾಜಿನ ನಂತರ ತಮ್ಮ ಬಾಂಧವರಿಗೆಲ್ಲ ಸಿಹಿಯೂಟ ಮಾಡಿ ಬಡಿಸುತ್ತಾರೆ. ಅವತ್ತು ಈ ಹುಡುಗನಿಗೆ ಶಾವಿಗೆ ಹುಗ್ಗಿ, ಮಾಂಸದೂಟ ಕೊಡುತ್ತಾರೆ. ಸಾಮಾನ್ಯವಾಗಿ ಕೋಳಿ ಅಥವಾ ಸ್ವಲ್ಪ ಸ್ಥಿತಿವಂತರು ಕುರಿಯನ್ನು ಕೊಯ್ದಿರುತ್ತಾರೆ. ಅಡಿಗೆಯಾದ ನಂತರ ಮುಲ್ಲಾನಿಂದ 'ಓದಿಕೆ' (ಫಾತೆಹ) ಮಾಡಿಸಿ

ಆತನಿಗೂ ಕೊಟ್ಟು ಉಳಿದವರಿಗೂ ಕೊಡುತ್ತಾರೆ. ಮಾಂಸದ ಕೆಲ ಮುಖ್ಯ ಭಾಗಗಳನ್ನು ಮುಂಜಿಯಾದ ಹುಡುಗನಿಗೆ ತಿನ್ನಿಸಲಾಗುತ್ತದೆ. ಆ ದಿನವೇ ಈ ಹುಡುಗನಿಗೆ ಇಂಥ ವಿಶೇಷ ಉಪಚಾರದ ಕೊನೆಯ ದಿನ. ಮತ್ತೆ ಮದುವೆಯವರೆಗೆ ಈತನಿಗೆ ಎಲ್ಲರಂತೆ ನೋಡಿಕೊಳ್ಳುತ್ತಾರೆ.

ಮುಸ್ಲಿಮರಲ್ಲಿ ಮೂತ್ರ ವಿಸರ್ಜನೆ ಮಾಡಿದ ನಂತರ ಮಣ್ಣು ಅಥವಾ ಇಟ್ಟಿಗೆ ಹೆಂಡೆಯನ್ನು ಜನನಾಂಗಕ್ಕೆ ಮುಟ್ಟಿಸಿಕೊಳ್ಳುತ್ತಾರೆ ಅಥವಾ ನೀರಿನಿಂದ ತೊಳೆದುಕೊಳ್ಳುತ್ತಾರೆ. ಇದಕ್ಕೆ ಕಾರಣ ಮೂತ್ರ ಅಪವಿತ್ರವಾದುದು. ಅದು ಶರೀರದ ಬೇರೆ ಭಾಗಕ್ಕೆ ತಾಗದಿರಲಿ ಎಂಬ ಭಾವನೆಯಿರಬೇಕು. ಬಹುಶಃ ಇದೇ ಕಾರಣಕ್ಕೆ ಮುಂಜಿ ಮಾಡಿಸುತ್ತಾರೆಂದು ಕಾಣುತ್ತದೆ. ಯಾಕೆಂದರೆ ಜನನಾಂಗದ ಮುಂದೊಗಲು ಇದ್ದರೆ ಮೂತ್ರ ನೇರವಾಗಿ ಹೊರಹೋಗದೆ ಅಡ್ಡಾದಿಡ್ಡಿಯಾಗಿ ದೇಹದ ಇತರೆ ಭಾಗಕ್ಕೆ ಸಿಡಿಯುವ ಸಾಧ್ಯತೆ ಇರುತ್ತದೆ. ಆ ಚರ್ಮವನ್ನೇ ಕತ್ತರಿಸಿದರೆ ಮೂತ್ರ ಸಲೀಸಾಗಿ ನೇರವಾಗಿ ಉಳಿಯದೆ ಹೋಗುತ್ತದೆ ಎಂಬ ನಂಬಿಕೆಯಿರಬೇಕೆಂದು ಕಾಣುತ್ತದೆ. ಬರಬರುತ್ತಾ ಇದೊಂದು ಧಾರ್ಮಿಕ ಆಚರಣೆಯಾಗಿರುವುದು ಸಾಧ್ಯವಿದೆ. ಮುಂಜಿ ಮಾಡಿಸಿದ ನಂತರವೂ ಮುಸ್ಲಿಮರು ಖಡ್ಡಾಯವಾಗಿ ಮೂತ್ರ ವಿಸರ್ಜನೆಯ ನಂತರ ಅಗತ್ಯವಾಗಿ ಹೆಂಡೆಯನ್ನು ಅಥವಾ ನೀರನ್ನು ಒಯ್ಯುತ್ತಾರೆ. ಮುಸ್ಲಿಮರು ಹೀಗೆ ಇರುವುದನ್ನು ನಿತ್ಯ ಅಭ್ಯಾಸ ಮಾಡಿಕೊಂಡಿದ್ದು ಅದು ಈಗ 'ಪಾಕಿ' ಅನ್ನುವ ಧರ್ಮಾಚರಣೆಯ ಮಟ್ಟಕ್ಕೆ ಬಂದಂತಿದೆ.

ಆದರೆ ಪಿಂಜಾರರಲ್ಲಿ 'ಮುಂಜಿ' ಮಾತ್ರ ಕಡ್ಡಾಯವಾಗಿದೆ. ಉಳಿದ ಹಾಗೆ ಮೂತ್ರವಿಸರ್ಜನೆಯ ನಂತರ ತೊಳೆದುಕೊಳ್ಳುವುದಾಗಲೀ, ಹೆಂಡೆಯನ್ನು ಮುಟ್ಟಿಸಿಕೊಳ್ಳುವುದಾಗಲೀ ಪಿಂಜಾರರು ಮಾಡುವುದಿಲ್ಲ. ಇದಕ್ಕೆ ಪಿಂಜಾರರು ಹಳ್ಳಿಗಳಲ್ಲಿರುವುದು ಮತ್ತು ರೈತಾಪಿ ಕೆಲಸಗಳಲ್ಲಿ ತೊಡಗಿಕೊಂಡಿರುವುದು ಮಾತ್ರ ಕಾರಣವಾಗಿರಲಾರದು. ಇತಿಹಾಸದ ಮತಾಂತರದ ಸಂದರ್ಭದಲ್ಲಿ ಒತ್ತಾಯಪೂರ್ವಕವಾಗಿ ಮುಂಜಿ ಮಾಡಿಸಲಾಯಿತು ಎಂದು ಪಿಂಜಾರರೇ ಹೇಳುತ್ತಾರೆ. ಹಾಗಾಗಿ 'ಮುಂಜಿ' ಅನ್ನುವುದು ಧರ್ಮದ ತಾಂತ್ರಿಕ ಆಚರಣೆಯಾಗಿ ಉಳಿಯಿತೇ ಹೊರತು ಅದರ ಮೂಲನಂಬಿಕೆ ಏನೂ ಇವರನ್ನು ಪ್ರಭಾವಿಸಿದಂತಿಲ್ಲ. ಪಿಂಜಾರರು 'ಪಾಕಿ' ಇರುವುದಿಲ್ಲ ಅನ್ನುವ ಕಾರಣಕ್ಕೂ ಮುಸ್ಲಿಮರಿಂದ ಅವಹೇಳನಕ್ಕೆ ಗುರಿಯಾಗುವುದು ಬಹುಶಃ ಈ ಸಂಗತಿಯಿಂದಲೇ ಮತ್ತು ಮುಸ್ಲಿಮರು ಪಿಂಜಾರರನ್ನು ಅಸಲಿ 'ಮುಸ್ಲಿಮ'ರೆಂದು ಒಪ್ಪಿಕೊಳ್ಳದಿರುವುದಕ್ಕೆ ಇದೂ ಒಂದು ಕಾರಣ.

ಇನ್ನು ಹೆಣ್ಣುಮಕ್ಕಳಲ್ಲಿ ಸ್ವಾಭಾವಿಕವಾಗಿರುವ ಋತುಮತಿಯಾಗುವ ಸಂದರ್ಭವನ್ನು ಪಿಂಜಾರರಲ್ಲಿ ವಿಶೇಷ ಮುತುವರ್ಜಿಯಿಂದ ಗಮನಿಸಲಾಗುತ್ತದೆ. ಪಿಂಜಾರರ ಭಾಷೆ ಕನ್ನಡವೇ ಆಗಿರುವುದರಿಂದ ಹೆಣ್ಣುಮಕ್ಕಳಿಗೆ ಅನುಭವಕ್ಕೆ ಬರುವ ಮೊಟ್ಟಮೊದಲ ಋತುಚಕ್ರದ ಈ ಘಟನೆಯನ್ನು ಋತುಮತಿ, ಪುಷ್ಪವತಿ, ಪ್ರೌಢಸಂಸ್ಕಾರ ಎಂದೆಲ್ಲಾ ಕರೆಯುವ ವಾಡಿಕೆಯಿಲ್ಲ, ಬದಲಾಗಿ 'ದೊಡ್ಡೋಕಿ' ಆದಳು ಎನ್ನುತ್ತಾರೆ. ಇದುವರೆಗೂ ಎಲ್ಲೆಂದರಲ್ಲಿ ಹೇಗೆಂದರೆ ಹಾಗೆ ಕುಣಿದು, ಕುಪ್ಪಳಿಸಿ ಆಡುತ್ತಿದ್ದ ಹುಡುಗಿ ತನ್ನ ದೇಹದಲ್ಲಿ ಆದ ಈ ಹೊಸ ಅನುಭವದಿಂದ ಹೆದರಿ, ನಾಚಿಕೊಂಡು ಮೂಲೆ ಸೇರಿ ಮೌನಿಯಾಗಿ ಬಿಡುತ್ತಾಳೆ. ಸಾಮಾನ್ಯವಾಗಿ ಮನೆಮಗಳ ಈ ತೆರನ ಸ್ಥಿತಿಯನ್ನು ಗಮನಿಸುವವಳು ತಾಯಿಯೇ. ಹುಡುಗಿ

೧೦-೧೧ ವರ್ಷಗಳಾದರೂ ಚೆಲ್ಲುಚೆಲ್ಲಾಗಿ ಆಡಿದರೆ ತಾಯಿ ಗದರುತ್ತಾಳೆ. ಇವತ್ತೋ ನಾಳೆಯೋ ದೊಡ್ಡೋಕಿ ಆಗ್ತೀಯಾ, ನಾಚಿಕೆ ಬೇಡವಾ? ಎಂದು ಬಯ್ಯುತ್ತಾಳೆ. ಹುಡುಗಿಗೆ ಹಾಗೆಂದರೇನೆಂದು ಆಗ ಗೊತ್ತಾಗುವುದಿಲ್ಲ. ಈಗ ಗೊತ್ತಾದ ಮೇಲೆ ತಾಯಿ ಯಾಕೆ ಹಾಗೆನ್ನುತ್ತಿದ್ದಳೆಂದು ಅರಿವಾಗುತ್ತದೆ. ತಾಯಿ ಇದನ್ನು ತಿಳಿದುಕೊಂಡವಳೇ ಮನೆಯ ಗಂಡಸರಿಗೆ ಸುದ್ಧಿ ಒಪ್ಪಿಸುತ್ತಾಳೆ. ಸೋದರತ್ತೆಗೆ ಬುಲಾವ್ ಹೋಗುತ್ತದೆ. ಸೋದರತ್ತೆ ಹುಡುಗಿಯ ಮೈತೊಳೆಯುತ್ತಾಳೆ. ಆಗ ಅವಳು ಧರಿಸಿದ ಉಡುಗೆಯನ್ನು ಅಗಸರನ್ನು ಕರೆಕಳಿಸಿ ಅವರಿಗೆ ಕೊಟ್ಟುಬಿಡುತ್ತಾರೆ. ಅಗಸರ ಮನೆಯ ಹೆಣ್ಣುಮಕ್ಕಳು ಇಂಥ ಬಟ್ಟೆಗಳನ್ನು ನಿತ್ಯ ಧರಿಸುತ್ತಾರೆ ಎನ್ನುವ ಪ್ರತೀತಿಯಿದೆ. ಹುಡುಗಿಗೆ ಬೇರೆ ಬಟ್ಟೆ ಉಡಿಸುತ್ತಾರೆ. ಆಕೆಯನ್ನು ಅಡಿಗೆ ಮನೆ ಒಳಗೆ ಬಿಟ್ಟುಕೊಳ್ಳುವುದಿಲ್ಲ. ಆಕೆಗೆ ಬೇರೆ ಏನೂ ಕೆಲಸವನ್ನು ಹೇಳುವುದಿಲ್ಲ. ಹೊರಗಡೆ ಮೊದಲಿನಂತೆ ತಿರುಗಾಡದಿರಲು ಹೇಳುತ್ತಾರೆ. ಹುಡುಗಿ ಋತುಮತಿಯಾದ ವಿಷಯವನ್ನು ಆಪ್ತರಾದವರಿಗೆ ತಿಳಿಸುತ್ತಾರೆ. ಉಳಿದಂತೆ ವಿಷಯವನ್ನು ರಹಸ್ಯವಾಗಿಡಲಾಗುತ್ತದೆ. ಹುಡುಗಿಯ ಚಲನ-ವಲನ, ಮಾತುಕತೆಯಲ್ಲಾದ ವ್ಯತ್ಯಾಸದಿಂದಲೇ ವಿಷಯ ಇತರರಿಗೆ ತಿಳಿದೂ ಬಿಡುತ್ತದೆ. ಋತುಮತಿಯಾದ ಒಂಬತ್ತು ದಿನಗಳವರೆಗೂ ಆಕೆಗೆ ನಿತ್ಯ ಮೈತೊಳೆಸುತ್ತಾರೆ. ಒಂಬತ್ತನೆಯ ದಿನದಂದು ವಿಶೇಷವಾಗಿ 'ಕುಂದುರಿಸುವ' ಕಾರ್ಯಕ್ರಮ. ಅವತ್ತು ಬೆಳಿಗ್ಗೆಯೇ ಹುಡುಗಿಗೆ ಸೋದರತ್ತೆ ಮತ್ತಿತರ ಮುತ್ತೈದೆಯರು ಸೇರಿ ಗುಸುಲ್‌ನೀರು ಹಾಕುತ್ತಾರೆ. ಹೊಸಬಟ್ಟೆ ತೊಡಿಸಲಾಗುತ್ತದೆ. ಅದರಲ್ಲೂ ವಿಶೇಷವಾಗಿ ಮೊದಲ ಸಲ ಸೀರೆ ರವಿಕೆ ತೊಡಿಸುತ್ತಾರೆ. ಇದು 'ಹುಡುಗಿ'ಯಾಗಿದ್ದವಳು 'ಹೆಂಗಸಾ'ದುದನ್ನು ಒತ್ತಿ ಹೇಳುವಂತಿರುತ್ತದೆ. ಅವಳಿಗಾಗಿ ಮಾಡಿಸಿದ ಆಭರಣಗಳ ಜೊತೆಗೆ ಮನೆಯಲ್ಲಿದ್ದ ಒಡವೆಗಳನ್ನು ಹಾಕಿ ಆಕೆಯನ್ನು ಮದುವಣಗಿತ್ತಿಯಂತೆ ಶೃಂಗರಿಸಲಾಗುತ್ತದೆ (ಈ ನಡುವೆ ಈ 'ಕುಂದುರಿಸುವ' ಕಾರ್ಯಕ್ರಮಕ್ಕೆ ನಂಟರಿಷ್ಟರು ಆಗಮಿಸತೊಡಗುತ್ತಾರೆ. ಎಲ್ಲರೂ ಸೇರಿದ ನಂತರ ಮೊದಲು ಊಟ, ಸಾಮಾನ್ಯವಾಗಿ ಸಿಹಿ ಊಟ. ಗೋಧಿ ರವೆ ಪಾಯಸ, ಅನ್ನ ಸಾರು ಇತ್ಯಾದಿ) ಕಾಲಿಗೆ ಬೆಳ್ಳಿ ಗೆಜ್ಜೆ, ಮೂಗುತಿ, ಕಿವಿಗೆ ಬೆಂಡೋಲೆ, ಜುಮುಕಿ ಹಾಕಿರುತ್ತಾರೆ. ತುರುಬಿಗೆ ಹೂ ಮುಡಿಸುತ್ತಾರೆ. ಮನೆಯ ಹಜಾರದಲ್ಲಿ ಜಮಖಾನ ಹಾಸಿ ಎಲ್ಲರನ್ನು ಕೂರಿಸುತ್ತಾರೆ. ಅವರಿಗೆ ಎದುರಾಗಿರುವಂತೆ ಎತ್ತರದಲ್ಲಿರುವಂತೆ ಕುರ್ಚಿಯಲ್ಲಿ ಹುಡುಗಿಯನ್ನು ಕೂರಿಸಿ, ಕೊರಳಿಗೆ ಹಾರ ಹಾಕುತ್ತಾರೆ. ಮುತ್ತೈದೆಯರು ಗಂಧ ಹಚ್ಚುತ್ತಾರೆ. ಈ ಸಂದರ್ಭದಲ್ಲಿ ಹುಡುಗಿಯನ್ನು ಕುರಿತಂತೆ ಹಾಡುಕಟ್ಟಿ ಹಾಡುವವರಿರುತ್ತಾರೆ. ಆಕೆ ಮುಂದೆ ಮದುವೆಯಾಗಿ ಗಂಡನ ಮನೆಯಲ್ಲಿ ಬಾಳೇವು ಮಾಡುವಾಗ, ಮಕ್ಕಳು ಮರಿ ಮಾಡಿಕೊಂಡು ಸಂಸಾರ ನಿಭಾಯಿಸುವಾಗ - ಹೀಗೆ ಆಕೆಯ ಮುಂಬರುವ ದಿನಗಳನ್ನು ಕಲ್ಪಿಸಿಕೊಂಡು ಕನಸಿನಲೋಕದಲ್ಲಿ ಆಕೆ ನಾಚಿ ನೀರಾಗುವಂತೆ ಮಾಡುತ್ತ ಹಾಡುತ್ತಾರೆ. ಅಲ್ಲಿ ಸೇರಿದ್ದ ಜನರಲ್ಲಿ ಆಕೆಯ ಸಂಬಂಧಿಗಳಿದ್ದರೆ ಅದರಲ್ಲೇ ಒಬ್ಬ ಮಾವನನ್ನು ತೋರಿಸಿ ಆತನೇ ಆಕೆಯ ಗಂಡನೆಂದು ಹೇಳಿ ರೇಗಿಸುತ್ತಾರೆ. ಮಾವನಾದವನು ಆಕೆಯನ್ನು ಕುರಿತು ಅಣಕು ಮಾಡುತ್ತಾನೆ. ಅತ್ತೆಯ ಮಗಳಾದ ಈಕೆಯನ್ನು ಚುಡಾಯಿಸುವ ರೀತಿಯಲ್ಲಿ ಕೆಲವರು ಸಿನಿಮಾ ಹಾಡುಗಳನ್ನೂ ಹೇಳುತ್ತಾರೆ. ಇಂಥದ್ದು ರಾತ್ರಿ ಸುಮಾರು ಹೊತ್ತಿನವರೆಗೂ ನಡೆಯುತ್ತದೆ. ಸಾಕಾಗಿ ಹೋಗುವವರು ಕೆಲವರು ಹುಡುಗಿಗೆ ರವಿಕೆಯ

ಕಣ, ತಟ್ಟೆ, ಲೋಟ, ದುಡ್ಡು - ಹೀಗೆ ಏನಾದರೊಂದು ಉಡುಗೊರೆ ಕೊಟ್ಟು ಹೋಗುತ್ತಾರೆ. ಮರುದಿನದಿಂದಲೇ ಹುಡುಗಿ ಎಂದಿನಂತೆ ಹೊಲಮನೆಯ ಕೆಲಸಗಳಲ್ಲಿ ತೊಡಗುತ್ತಾಳಾದರೂ ಮೊದಲಿನ ಲವಲವಿಕೆ ಮಾಯವಾಗಿ ಏನೋ ಒಂದು ರೀತಿಯ ಗಾಂಭೀರ್ಯ ಅವಳ ನಡವಳಿಕೆಯಲ್ಲಿ ವ್ಯಕ್ತವಾಗಲಾರಂಭಿಸುತ್ತದೆ. ತಂದೆ-ತಾಯಿಯಾದವರಿಗೆ ಅಂದಿನಿಂದಲೇ ಆಕೆಗೆ ಮದುವೆ ಮಾಡುವ ಕೊರಗು ಹುಟ್ಟಿಕೊಳ್ಳುತ್ತದೆ.

ಕೆಲವರು ಉಳ್ಳವರು ಈ ಕಾರ್ಯಕ್ರಮವನ್ನು ಚಪ್ಪರ ಮೈಕ್ ಹಾಕಿಸಿ ಅದ್ದೂರಿಯಾಗಿ ಮಾಡುವುದೂ ಇದೆ. ಆದರೆ ಬಹುಪಾಲು ಪಿಂಜಾರರ ಇಂಥ ಯಾವುದೇ ಆಚರಣೆಗಳ ಸಂದರ್ಭದಲ್ಲಿ ಸ್ಪಷ್ಟವಾಗಿ ಎದ್ದು ಕಾಣುವುದು ಬಡತನ ಮತ್ತು ಮುಸ್ಲಿಂ ಧಾರ್ಮಿಕ ತಿಳುವಳಿಕೆಯ ಕೊರತೆ. ಆದರೆ ಎಲ್ಲ ಜಾತಿಯ ಜನ ಜಾತೀಯ ಭಾವನೆಗಳನ್ನೆಲ್ಲ ಬಿಟ್ಟು ಇಂಥ ಸಂದರ್ಭಗಳಲ್ಲಿ ಬೆರೆಯುತ್ತಾರೆ. ಮನರಂಜನೆ, ದುಃಖ, ಹಸಿವು, ಹಬ್ಬ - ಹೀಗೆ ಯಾವುದೇ ಕ್ರಿಯೆ ಯಾವುದೋ ಒಂದು ಜನಾಂಗದವರಿಂದ ತುಂಬಿಕೊಂಡಿರುವುದಿಲ್ಲ. ಪಿಂಜಾರರ ಆಚರಣೆಗಳಲ್ಲಿ ಮುಸ್ಲಿಮರ ಹಾಜರಾತಿ ಅತ್ಯಂತ ಕಡಿಮೆಯಿರುತ್ತಾದಾದರೂ ಅವರು ಕೂಡ ಪಿಂಜಾರರಿಗೆ ಹೊಂದಿಕೊಂಡು ನಡೆಯುವ ಅನೇಕ ಉದಾಹರಣೆಗಳು ಸಿಗುತ್ತವೆ. ಗಂಡಿಗೆ 'ಮುಂಜಿ'ಯ ಆಚರಣೆ, ಹೆಣ್ಣು ಋತುಮತಿಯಾದಾಗ ನಡೆಸುವ ಆಚರಣೆಯನ್ನು ಹೋಲಿಸಿದರೆ ಗಂಡು-ಹೆಣ್ಣಿನ ನಡುವೆ ಕೂಡ ಪಿಂಜಾರರು ಅಷ್ಟಾಗಿ ಭೇದ ತೋರುವಂತೆ ಕಾಣುವುದಿಲ್ಲ.

### ೪.೧.೫ *ಮದುವೆ ಮತ್ತು ವಿಚ್ಛೇದನ*

ಪಿಂಜಾರ ಜನಾಂಗದಲ್ಲಿ 'ಮದುವೆ'ಯು ಸಂಪ್ರದಾಯವು ಇಸ್ಲಾಂ ಧರ್ಮಾನುಸಾರವೇ ನಡೆಯುತ್ತದೆ. ಆದರೆ ಇದು ಮುಖ್ಯವಾಗಿ ಮುಲ್ಲಾನ ಉಸ್ತುವಾರಿ, ಮಾರ್ಗದರ್ಶನವನ್ನು ಅವಲಂಬಿಸಿರುತ್ತದೆ. ಆತ ತಾಂತ್ರಿಕವಾಗಿ ಇಸ್ಲಾಂನ ಆಚರಣೆಗಳನ್ನು ನಡೆಸಿಕೊಡುವ ಪುರೋಹಿತನಾಗಿರುತ್ತಾನೆ. ಉಳಿದಂತೆ ಪಿಂಜಾರರ ಮಾತು-ನಡವಳಿಕೆಗಳೆಲ್ಲವೂ ಸಹಜವಾಗಿ ಕನ್ನಡದಲ್ಲೇ ಇರುವುದರಿಂದ ಮುಲ್ಲಾ ಕೂಡ ಅವರೊಂದಿಗೆ ಕನ್ನಡ ಮಾತಾಡಲೇಬೇಕಾದ ಅನಿವಾರ್ಯತೆ ಉಂಟಾಗುತ್ತದೆ. ಪಿಂಜಾರರ ಈ ನಡವಳಿಕೆಯ ಕಾರಣದಿಂದಲೇ ಮುಸ್ಲಿಮರ ಮದುವೆಗಳಿಗಿಂತ ಪಿಂಜಾರರ ಮದುವೆಗಳಲ್ಲಿ ಹಿಂದೂಗಳ ಪಾಲುದಾರಿಕೆ ಹೆಚ್ಚಿರುತ್ತದೆ. ಮದುವೆಯ ವಿಚಾರದಲ್ಲಿ ಇಸ್ಲಾಂನ ಅನುಕರಣೆ, ಅನುಸರಣೆ ಮಾಡುವ ಪಿಂಜಾರರು ವಿಚ್ಛೇದನದ ವಿಚಾರದಲ್ಲಿ ವಿಭಿನ್ನವಾಗಿದ್ದಾರೆ. ಗಂಡ-ಹೆಂಡತಿಯರ ನಡುವಿನ ವಿರಸ, ಅಸಹನೆ, ಮಕ್ಕಳಾಗದೇ ಇರುವುದು, ಅಕಾಲಿಕ ಮರಣ ಇತ್ಯಾದಿ ಕಾರಣಗಳಿಂದ ಹೆಂಡತಿಯನ್ನು ಬಿಡುವ, ಮರುಮದುವೆಯಾಗುವ ಅವಶ್ಯಕತೆ ಬಂದಾಗ ಇಸ್ಲಾಂನಲ್ಲಿನ 'ತಲಾಖ್' ಪದ್ಧತಿಯನ್ನು ಅನುಸರಿಸುವುದಿಲ್ಲ, ಅಥವಾ ಅದು ಪಿಂಜಾರರಿಗೆ ಗೊತ್ತಿಲ್ಲ. ಅಲ್ಲದೇ ಹಾಗೆ ಸಣ್ಣಪುಟ್ಟ ಕಾರಣಗಳಿಗಾಗಿ ಹೆಂಡತಿಯನ್ನು ಬಿಡುತ್ತಾ ಹೋದರೆ 'ಜೀವನ' ಎನ್ನುವುದಕ್ಕೆ ಅರ್ಥವೇ ಇರುವುದಿಲ್ಲ ಎಂಬ ತಿಳುವಳಿಕೆಯಿಂದ ಆ ಬಗೆಯ ವಿಚ್ಛೇದನದ ಪದ್ಧತಿಯನ್ನು ಪಿಂಜಾರರು ತೀವ್ರವಾಗಿ

ವಿರೋಧಿಸುತ್ತಾರೆ. ಪಿಂಜಾರರಲ್ಲಿ ಏಕಪತ್ನಿ ವ್ಯವಸ್ಥೆಯ ಬಗ್ಗೆ ಇರುವ ಒಲವು ಅವರ ಆ ಬಗೆಯ ನಿಲುವಿಗೆ ಪ್ರೇರಣೆಯಿರಬಹುದು. ಹೆಂಡತಿ ಬಿಟ್ಟವನು, ಗಂಡನನ್ನು ಬಿಟ್ಟವಳು ಎಂಬ ಕಾರಣಕ್ಕೆ ಅವರ ಬಗ್ಗೆ ಪಿಂಜಾರರಲ್ಲಿ ಪ್ರೀತಿ, ಕರುಣೆ ಹುಟ್ಟುವುದಿಲ್ಲ, ಬದಲಾಗಿ ಅವರನ್ನು ಸಾಮಾಜಿಕವಾಗಿ ತೀವ್ರ ಉಪೇಕ್ಷೆಯಿಂದ ನೋಡಲಾಗುತ್ತದೆ. ವಿಧವಾ ವಿವಾಹ, ಸೀರುಡಿಕೆಯಂಥ ಪದ್ಧತಿಗಳಿಗೂ ಪಿಂಜಾರರಲ್ಲಿ ವಿರೋಧವಿದೆ. ಆದರೆ ಅವರಲ್ಲಿ ವಿಧುರನ ಪುನರ್‌ವಿವಾಹಕ್ಕೆ ಅಂತಹ ಅಡ್ಡಿಯೇನಿಲ್ಲ. ಅದೂ ಅವನಿಗೆ ಮದುವೆ ಮಾಡಿಕೊಳ್ಳುವ ವಯಸ್ಸಿದ್ದರೆ ಮಾತ್ರ ! ಗಂಡ-ಹೆಂಡತಿಯ ನಡುವೆ ನಾನಾ ಕಾರಣಗಳಿಗಾಗಿ ಮನಸ್ತಾಪ ಬಂದು ಅವರು ಬೇರೆಯಾಗಲೇಬೇಕಾದಂತಹ ಸಂದರ್ಭ ಒದಗಿದರೆ ಎರಡೂ ಕಡೆಯ ಮನೆಯವರು ಸೇರಿ ಇಬ್ಬರಿಗೂ ಬಯ್ದು ಹೊಂದಿಕೊಂಡು ಹೋಗುವಂತೆ ಬುದ್ಧಿವಾದ ಹೇಳಲಾಗುತ್ತದೆ. ಸಾಂಸಾರಿಕವಾದ ಕಲಹಗಳಿಗೆ ಸಿದ್ಧೌಷಧಿ ಎಂದರೆ ಸಹನೆ ಮತ್ತು ಹೊಂದಾಣಿಕೆ. ಬದುಕು ಅದನ್ನು ಕಲಿಸಬೇಕು. ಮನುಷ್ಯರಾದವರು ಕಲಿಯುತ್ತಾ ಹೋಗಬೇಕು. ಕಲಿಯಲೊಲ್ಲದವರು ಮಾತ್ರ ಸದಾ ನೋವುಣ್ಣಬೇಕಾಗುತ್ತದೆ. ಪಿಂಜಾರ ಜನಾಂಗದ ಆರ್ಥಿಕ ಸ್ಥಿತಿ-ಗತಿಗಳು ಸಂಸಾರವಂದಿಗರಲ್ಲಿ 'ತಲಾಖ್'ನಂತಹ ತಣ್ಣನೆಯ ಕ್ರೌರ್ಯ ಹುಟ್ಟಿಸುವ ಬದಲು ಸಹನೆ, ಪ್ರೀತಿಯನ್ನೇ ಬಿತ್ತುತ್ತವೆ. ಹಾಗಾಗಿ ಪಿಂಜಾರರಲ್ಲಿ ಕಷ್ಟವೋ, ನಿಷ್ಠುರವೋ ವಿಚ್ಛೇದನಗಳು ನಡೆಯುವುದಿಲ್ಲ. ಅದಕ್ಕೆ ಈ ಸಮುದಾಯದವರಲ್ಲಿ ಅಪೇಕ್ಷೆಯೂ ಇದ್ದಂತಿಲ್ಲ. ಈ ಬಗೆಯ ತಿಳುವಳಿಕೆಗೆ ಕಾರಣ ಪಿಂಜಾರರ ಜೀವನಪ್ರೀತಿ ಮತ್ತು ಸಾಮಾಜಿಕ ಬದ್ಧತೆ. ಧಾರ್ಮಿಕ ಶಾಸ್ತ್ರ-ಕಟ್ಟಳೆಗಳಿಗಿಂತ ಸಮಾಜದ ಬಗೆಗಿನ ಒಂದು ರೀತಿಯ ಅಲಿಖಿತವಾದ ನೈತಿಕ ಪ್ರಜ್ಞೆ ಅವರನ್ನು ಕಾಡುತ್ತದೆ. ಪಿಂಜಾರರ ಜನಾಂಗದ ಒಟ್ಟು ಆಚರಣೆಗಳು ಈ ಹಿನ್ನೆಲೆಯಲ್ಲಿ ಅರ್ಥಪೂರ್ಣವೆನಿಸುತ್ತವೆ. ಈ ಜನಾಂಗದ ಮದುವೆಯ ಸಂಪ್ರದಾಯದ ವಿವರಗಳನ್ನು ನೋಡುವಾಗ ಸಾಮಾಜಿಕವಾಗಿ ಪಿಂಜಾರರ ನೆಲೆಯನ್ನು ಸೂಚಿಸುವಂತಹ ವಿಶ್ಲೇಷಣೆ ಸಾಧ್ಯವಾಗಬೇಕೆಂಬ ಆಶಯದಿಂದ ಮೇಲಿನ ಮಾತುಗಳನ್ನು ಹೇಳಬೇಕಾಯಿತು.

ಪಿಂಜಾರರಲ್ಲಿ ಹುಡುಗಿ ಋತುಮತಿಯಾದ ನಂತರ ಮದುವೆ ಮಾಡುವುದು ರೂಢಿಯಲ್ಲಿದೆ. ಒಂದೆರಡು ತಲೆಮಾರಿನ ಹಿಂದೆ ಋತುಮತಿಯಾಗುವುದಕ್ಕಿಂತ ಮೊದಲೇ ಮದುವೆ ಮಾಡುವುದೂ ಇತ್ತೆಂದು ತಿಳಿದು ಬರುತ್ತದೆ. ಸಂಬಂಧದವರು ಹೆಣ್ಣು ಕೈಬಿಟ್ಟು ಹೋದೀತೆಂದು ಚಿಕ್ಕವಳೇ ಅಂದರೆ ಎಂಟು, ಒಂಬತ್ತು, ಹತ್ತು ವರ್ಷದ ಹುಡುಗಿಯನ್ನು 'ಇಳೇವು' ಮಾಡಿಕೊಂಡು ಅಥವಾ ಮದುವೆಯನ್ನೇ ಮಾಡಿಕೊಂಡು ಹೋಗುತ್ತಿದ್ದರಂತೆ. ಇಂತಹ ಹುಡುಗಿಗೆ ಹದಿನೆಂಟರಿಂದ ಇಪ್ಪತ್ತರ ವಯಸ್ಸಿನ ಹುಡುಗನನ್ನು ಗೊತ್ತು ಮಾಡುವುದು ಹೆಚ್ಚು ಕಡಿಮೆ ಬಾಲ್ಯವಿವಾಹದ ಪದ್ಧತಿಯನ್ನೇ ಹೋಲುತ್ತದೆ. ಇದು ಕಡಿಮೆಯಾಗುತ್ತಿದ್ದಂತೆ ಹುಡುಗಿ ದೊಡ್ಡೋಕಿಯಾದ ನಂತರದ ಒಂದೆರಡು ವರ್ಷದಲ್ಲಿ ಮದುವೆ ಮಾಡುವುದು ರೂಢಿಗೆ ಬಂದಂತೆ ತೋರುತ್ತದೆ. ಮೊದಲು ಗಂಡಿನವರೇ ಕನ್ಯಾನ್ವೇಷಣೆಗಾಗಿ ತಿರುಗಾಡುತ್ತಿದ್ದು ಅದಕ್ಕಾಗಿ ಜೊತೆ ಚಪ್ಪಲಿ ಸವೆಯುತ್ತಿದ್ದವು ಅನ್ನುವವರಿದ್ದಾರೆ. ಕನ್ಯೆಯನ್ನು ಹುಡುಕಿ ತಮ್ಮದನ್ನಾಗಿ ಮಾಡಿಕೊಳ್ಳುವ ಮುನ್ನ ಮಾತುಕತೆಯಾಗುತ್ತಿದ್ದವು. ಹೆಣ್ಣಿಗೆ ತೆರ ಕೊಟ್ಟು ಮದುವೆಯಾಗಬೇಕಿತ್ತು. ತೆರದ ಜೊತೆಗೆ ಹೆಣ್ಣಿಗೆ ಕೊಡಬೇಕಾದ ವಸ್ತ್ರ, ಒಡವೆ ಮತ್ತು ಮದುವೆಯನ್ನು

ಯಾವಾಗ ಮಾಡಿಕೊಳ್ಳುವುದು ಇತ್ಯಾದಿಯಾಗಿ 'ಇಳೇವು' ಮಾಡುವಾಗಲೇ ನಿರ್ಧಾರವಾಗುತ್ತಿತ್ತು. ಇಳೇವು ಆದ ನಂತರದ ಆರು ತಿಂಗಳಿಂದ ವರ್ಷದೊಳಗಾಗಿ ಮದುವೆ ಮುಗಿಯಬೇಕಿತ್ತು. ಮೊದಮೊದಲು ಹೆಣ್ಣಿಗಾಗಿ ಅಲೆದಾಡುತ್ತಿದ್ದ ಪಿಂಜಾರರು ಬರುಬರುತ್ತ ಆಯಾ ಊರಿನಲ್ಲೆ ಇರುವ ಸಂಬಂಧಿಗಳಿಗೆ ಕೊಡುವುದು. ಅಲ್ಲಿಂದ ತರುವುದು ಮಾಡಿಕೊಂಡಂತೆ ಕಾಣುತ್ತದೆ. 'ತೆರ' ಕೊಟ್ಟು ಮದುವೆಯಾಗುತ್ತಿದ್ದ ಕಾಲವೂ ಬದಲಾಗಿ ಈಗ ಹೆಣ್ಣಿನವರು ವರಾನ್ವೇಷಣೆ ಮಾಡಿ ವರದಕ್ಷಿಣೆ ಕೊಟ್ಟು ಮದುವೆ ಮಾಡಿ ಕನ್ಯಾಸೆರೆಯನ್ನು ಬಿಡಿಸಿಕೊಳ್ಳುವಂತಹ ಸ್ಥಿತಿ ಬಂದಿದೆ. ಪಿಂಜಾರರಲ್ಲಿ ಈ ಬದಲಾವಣೆ ಸಹಜವೇ ಆಗಿದೆ.

ಗಂಡಿನ ಕಡೆಯ ಒಂದಿಷ್ಟು ಜನ, ಮುತ್ತೈದೆಯರನ್ನು ಒಳಗೊಂಡಂತೆ, ಇಳೇವಿನ ದಿನ ಹೆಣ್ಣಿನ ಮನೆಗೆ ಹೋಗುತ್ತಾರೆ. ಈ ಮೊದಲೇ ನಡೆದ ಮಾತುಕತೆಯಲ್ಲಿ ಈ ದಿನದ ನಿರ್ಧಾರವಾಗಿರುತ್ತದೆ. ಹುಡುಗಿಗೆ ಹಸಿರು ಸೀರೆ, ಕುಬುಸ, ಹಸಿರು ಬಳೆ ತೊಡಿಸುತ್ತಾರೆ. ಇವುಗಳ ಜೊತೆಗೆ ಎಡೆಅಕ್ಕಿ, ಉತ್ತುತ್ತಿಹಣ್ಣು, ಬಾಳೆಹಣ್ಣು, ತೆಂಗಿನಕಾಯಿ ಮುಂತಾದುವನ್ನು ಗಂಡನ ಕಡೆಯವರು ತಂದಿರುತ್ತಾರೆ. ಈ ಸಂದರ್ಭದಲ್ಲಿ ಗಂಡಿನ ಉಪಸ್ಥಿತಿ ಅನಿವಾರ್ಯವೇನೂ ಇಲ್ಲ. ಯಾಕೆಂದರೆ ಮೊದಲೇ ನೋಡಿರುತ್ತಾನೆ. ಆತನ ಒಪ್ಪಿಗೆಯನ್ನು ಕೇಳಿರುತ್ತಾರೆ. ಹುಡುಗಿಯ ಇಷ್ಟಾನಿಷ್ಟಗಳನ್ನು ಕೇಳುವುದಿಲ್ಲ. ತಾವು ತಂದ ವಸ್ತ್ರೋಪಕರಣಗಳನ್ನು ಹುಡುಗಿಗೆ ತೊಡಿಸಿ ಐದು ಜನ ಮುತ್ತೈದೆಯರು ಹುಡುಗಿಯ ಕುತ್ತಿಗೆಗೆ ಗಂಧವನ್ನು ಹಚ್ಚುತ್ತಾರೆ. ತಟ್ಟೆಯಲ್ಲಿ ಉತ್ತುತ್ತಿ, ಹಣ್ಣುಕಾಯಿ, ಎಲೆ ಅಡಿಕೆ, ಸುಣ್ಣದೊಂದಿಗೆ ಹಸುರಿಳೆ ಸೀರೆಯನ್ನು ಇಟ್ಟು ಹೆಣ್ಣಿನ ತಂದೆಗೆ ಗಂಡಿನ ತಂದೆ ಕೊಡುತ್ತಾನೆ. ಗಂಧ ಹಚ್ಚಿದ ಮುತ್ತೈದೆಯರು ಆಶೀರ್ವದಿಸಿದ ನಂತರ ಎಲ್ಲರೂ ಊಟಕ್ಕೆ ಏಳುತ್ತಾರೆ. ಬಂದ ಬೀಗರಿಗೆ ಗೋಧಿ ಹುಗ್ಗಿ ಮಾಡಿ ಅನ್ನ ಬಸಿದಿರುತ್ತಾರೆ. ಊಟದ ನಂತರ ಎಲೆ ಅಡಿಕೆ ಹಾಕುತ್ತಾ ಲೋಕಾಭಿರಾಮವಾಗಿ ಮಾತನಾಡಿ ಗಂಡಿನ ಮನೆಯವರು ಹೊರಡುತ್ತಾರೆ. ಸ್ವಲ್ಪ ದೂರದವರೆಗೆ ಹೆಣ್ಣಿನ ಮನೆಯ ಗಂಡಸರು ಅವರನ್ನು ಕಳಿಸಿಬರಲು ಹೋಗುತ್ತಾರೆ. ಈ 'ಇಳೇವು' (ಈಗಿನ ನಿಶ್ಚಿತಾರ್ಥ) ಕಾರ್ಯಕ್ರಮದ ನಂತರ ಹುಡುಗಿ ಆಗಲೇ ಬೀಗರ ಸೊಸೆ ಎನ್ನುವಂತೆ ಅಣಕಿಸುತ್ತಿರುತ್ತಾರೆ. ಹುಡುಗಿ ಕೂಡ ಗಂಡನ ಮನೆಯ ಪರವಾಗಿ ವಾದಿಸುತ್ತಾಳೆ. ಒಕ್ಕಲಿನ ಸಮಯ, ಎರಡೂ ಮನೆಯವರಿಗೆ ಸಂಬಂಧಿಸಿದಂತೆ ಯಾರಾದರೂ ಸತ್ತಿದ್ದ ಮೊದಲ ವರ್ಷದಲ್ಲಿ, ಮೊಹರಂ ನಂತರದ ಒಂದು ತಿಂಗಳಿನಲ್ಲಿ ಸಾಮಾನ್ಯವಾಗಿ ಮದುವೆ ಮಾಡುವುದಿಲ್ಲ.

ಪಿಂಜಾರರಲ್ಲಿ 'ಇಳೇವು' ಶಾಸ್ತ್ರ ಮಾಡುವಾಗಲೇ ಮದುವೆ ಮುಹೂರ್ತ ಕುರಿತು ಚರ್ಚಿಸುತ್ತಾರೆ. ಎರಡೂ ಕಡೆಯವರಿಗೆ ಅನುಕೂಲವಾಗಬಹುದಾದ ದಿನಾಂಕವನ್ನು ಗುರುತು ಮಾಡುತ್ತಾರೆ. ಮತ್ತು ಈ ಬಗ್ಗೆ ಬ್ರಾಹ್ಮಣ ಪುರೋಹಿತರಲ್ಲಿ, ಕೆಲವೊಮ್ಮೆ ಮುಲ್ಲಾ ಬಳಿ ಹೋಗಿ ಶುಭಲಗ್ನದ ಮುಹೂರ್ತವನ್ನು ಗೊತ್ತು ಮಾಡಿಕೊಂಡು ಬಂದಿರುತ್ತಾರೆ. ಅದರಂತೆ ದಿನಾಂಕವನ್ನು ನಿಗದಿ ಮಾಡಿ ಆ ಸಂಬಂಧವಾಗಿ ಆಹ್ವಾನಪತ್ರಿಕೆಯನ್ನು ಮುದ್ರಿಸಿ ಹಂಚುವ ಕಾರ್ಯಭಾರವನ್ನು ಗಂಡಿನ ಕಡೆಯವರಿಗೆ ವಹಿಸಲಾಗುತ್ತದೆ. ಕೆಲವರಲ್ಲಿ ಎರಡೂ ಕಡೆಯವರಿಗೆ ಸಮಾನ ಕಾರ್ಯಭಾರ ಹಂಚಲಾಗುತ್ತದೆ. ಪಿಂಜಾರರಲ್ಲಿ ಮೊದಲು

ಆಹ್ವಾನ ಪತ್ರಿಕೆಯನ್ನು ಮುದ್ರಿಸುವುದು ಕಂಡು ಬರುತ್ತಿರಲಿಲ್ಲ. ಆದರೆ ಈಗೀಗಂತೂ ಇದು ಅವಶ್ಯಕವಾಗಿದೆ. ಪಿಂಜಾರರು ಸಾಮಾನ್ಯವಾಗಿ ಕನ್ನಡದಲ್ಲಿ ಆಹ್ವಾನಪತ್ರಿಕೆಗಳನ್ನು ಮುದ್ರಿಸಲು ಹೇಳುತ್ತಾರೆ. ಅವರಿಗೆ ಉರ್ದು, ಅರಬ್ಬಿ ಭಾಷೆಗಳು ಬರುವುದಿಲ್ಲ ಮತ್ತು ಪಿಂಜಾರರ ಮದುವೆಗಳಿಗೆ ಹಿಂದೂ ಸಮುದಾಯದವರೂ ಹಾಜರಾಗುವುದರಿಂದ ಆಹ್ವಾನ ಪತ್ರಿಕೆಗಳು ಕನ್ನಡದಲ್ಲಿರುವುದು ಸಹಜವಾಗಿದೆ. ಆದರೆ ಆಹ್ವಾನ ಪತ್ರಿಕೆಗಳಲ್ಲಿ 'ಅಲ್ಲಾ'ನ ದಯೆಯನ್ನು ನೆನೆಸಿಕೊಳ್ಳುವುದು, ಶಾದಿ ಮುಬಾರಕ್, ನಿಖಾಃ, ೭೮೬ ಮೊದಲಾದ ಇಸ್ಲಾಂ ಸಂಪ್ರದಾಯಗಳ ಸ್ಮರಣೆ ಮಾತ್ರ ಇದ್ದೇ ಇರುತ್ತದೆ. ಇನ್ನೂ ಕೆಲವರಲ್ಲಿ ಮದುವೆ, ಮುಹೂರ್ತ ಎಂಬ ಕನ್ನಡ ಪದಗಳೇ ಇರುತ್ತವೆ. ಇದು ಪಿಂಜಾರರ ಸಾಂಸ್ಕೃತಿಕ ಅನನ್ಯತೆಗೆ ನಿದರ್ಶನವಾಗಿರುವುದರಿಂದ ಉದಾಹರಣೆಗಾಗಿ ಒಂದು ಆಹ್ವಾನ ಪತ್ರಿಕೆಯ ಮಾದರಿಯನ್ನು ಇಲ್ಲಿ ಕೊಡಲಾಗಿದೆ.

ಮೆಹಂದಿ:
ದಿನಾಂಕ 01-05-2004 ನೇ
ಶನಿವಾರ ರಾತ್ರಿ 08-30 ಕ್ಕೆ

ನಿಖಾ :
02-05-2004 ನೇ ಭಾನುವಾರ
ಸಮಯ : ಬೆಳಗ್ಗೆ 11-30 ಕ್ಕೆ
ಸ್ಥಳ : ಶ್ರೀ ರಂಗನಾಥ ಬಜಾರ್,
ಮಿನಿ ವಿಧಾನಸೌಧದ ಎದುರು,
ಹೆಚ್. ಎಸ್. ಇಮಾಂಹುಸೇನ್ ಇವರ
ತೋಟದಲ್ಲಿ, ಜಗಳೂರು.

ವಲೀಮಾ : 03-05-2004ನೇ
ಸೋಮವಾರ ಮಧ್ಯಾಹ್ನ 1-00
ಗಂಟೆಗೆ.ವರನ ಸ್ವಗೃಹ, ಜಗಳೂರು.

ಪರಮ ದಯಾಮಯಿ ಕರುಣಾನಿಧಿ ಆದ ಅಲ್ಲಾಹ್‌ನ ನಾಮದಿಂದ
ಸಾಹುಕಾರ್ ಜೆ.ಕೆ. ಖಾಸಿಂ ಸಾಹೇಬರ ಮಕ್ಕಳು
**ಶ್ರೀ ಜೆ.ಕೆ.ಬಷೀರ್ ಅಹಮದ್ ಮತ್ತು ಸಹೋದರರು**
ಇವರು ಮಾಡುವ ಸಲಾಂಗಳು

ಜನಾಬ್ ಸಾಹುಕಾರ್ ಜೆ.ಕೆ. ಖಾಸಿಂ ಅಲಿ ರವರ ಸುಪುತ್ರ
**ಜೆ.ಕೆ.ಮಹಮದ್ ಹುಸೇನ್**
ಮತ್ತು
**ಎಸ್.ಸೀಮಾ ತಬಸುಮ್**
ಜನಾಬ್ ಎಸ್.ಎಂ.ಇಮಾಂಹುಸೇನ್ ಸಾಬ್
ಗ್ರಾಮ.ಪಂಚಾಯಿತಿ ಕಾರ್ಯದರ್ಶಿ ಇವರ ಸುಪುತ್ರಿ

ಇವರ ನಿಖಾ ಮಹೋತ್ಸವವನ್ನು ನೆರವೇರಿಸಲು ಗುರು-ಹಿರಿಯರು ನಿಶ್ಚಯಿಸಿರುವುದರಿಂದ
ತಾವುಗಳು ಸಕುಟುಂಬ ಸಮೇತ ಆಗಮಿಸಿ ನೂತನ ವಧೂ-ವರರನ್ನು
ಆಶೀರ್ವದಿಸಬೇಕಾಗಿ ಕೋರುವ,

ತಮ್ಮ ಆಗಮನಾಭಿಲಾಷಿಗಳು,
ಜನಾಬ್ ಜೆ.ಕೆ. ಬಷೀರ್ ಅಹಮದ್ ಹಾಗೂ ಸಹೋದರರು.
ತಮ್ಮ ಶುಭಾಗಮನ ಬಯಸುವವರು : ಬಂಧು-ಮಿತ್ರರು

ಮದುವೆಯ ಆಹ್ವಾನ ಪತ್ರಿಕೆಗಳನ್ನು ನಂಟರಿಗೆ ಹಂಚುವಾಗ ಪತ್ರಿಕೆಗಳ ನಾಲ್ಕೂ ಮೂಲೆಗೆ ಅರಿಶಿಣ ಹಚ್ಚಿ ಕೊಡಲಾಗುತ್ತದೆ.

ಮದುವೆಗೆ ಎರಡು ಮೂರು ದಿನಗಳಿವೆ ಎನ್ನುವಾಗ ಎರಡೂ ಮನೆಯವರು ಚಪ್ಪರ ಹಾಕುತ್ತಾರೆ. ಮನೆಯ ಮುಂದೆ ಚಪ್ಪರ ಹಾಕುವ ಮೊದಲು ಚಲ್ಕೆ, ಹಾರೆಕೋಲಿಗೆ ಗಂಧ ಹಚ್ಚುತ್ತಾರೆ. ಅಟ್ಟಕ್ಕೆ ಹಾಕುವ ಉದ್ದನೆಯ ಬೊಂಬು, ಈಚು, ದಂಡರ ನೊಗ ಮುಂತಾದುವನ್ನು ಇಸಿದುಕೊಂಡು ಬಂದು ಮನೆಯ ಅಂಗಳದಲ್ಲಿ ಚೌಕಾಕಾರವಾಗಿ ನೆಡುತ್ತಾರೆ. ಸಾಮಾನ್ಯವಾಗಿ ಐದು ಇಲ್ಲವೇ ಒಂಬತ್ತು ಕಂಬಗಳನ್ನು ನೆಡುತ್ತಾರೆ. ಮೇಲೆ ಗಳುಗಳನ್ನುಬಿಗಿದು ತೆಂಗಿನಗರಿಗಳನ್ನು ಹೊದಿಸಲಾಗುತ್ತದೆ. ಪ್ರತಿ ಕಂಬಕ್ಕೂ ತೆಂಗಿನಗರಿಯನ್ನು ಸುತ್ತುತ್ತಾರೆ. ಅವೆಲ್ಲಾ ಹಸಿಯ ಗರಿಗಳು, ಕಂಬಗಳಿಗೆ, ಮನೆಯ ಬಾಗಿಲಿಗೆ ಮಾವಿನ ಎಲೆಯ ತೋರಣವನ್ನು ಕಟ್ಟುತ್ತಾರೆ. ಪ್ರತಿ ಕಂಬಕ್ಕೂ ಕೆಂಪನೆಯ ತುಂಡು ಬಟ್ಟೆಯೊಂದರಲ್ಲಿ ಅರಿಸಿಣ ಹಚ್ಚಿದ ಅಕ್ಕಿ, ಅರಸಿಣದ ಕೊಂಬು, ಅಡಿಕೆಯನ್ನಿಟ್ಟು ದುಂಡಗೆ ಮಾಡಿ ಕಟ್ಟುತ್ತಾರೆ. ಇದನ್ನು ಕಟ್ಟುವ ಹುಡುಗಿಗೆ ಮುಖದ ತುಂಬ ಮುಸುಕು ಹೊದಿಸಿರುತ್ತಾರೆ. ಹುಡುಗನ ಮನೆಯ ಹೆಣ್ಣು ಮಗಳೊಬ್ಬಳಿಗೆ ಓಗೆ ಕಟ್ಟಲು ಹೇಳುತ್ತಾರೆ. ಪಿಂಜಾರರ ಮದುವೆಗಳು ಸಾಮಾನ್ಯವಾಗಿ ಹೆಣ್ಣಿನ ಮನೆಯಲ್ಲಿ ನಡೆಯುತ್ತವೆ.

ಮದುವೆಯ ಹಿಂದಿನ ರಾತ್ರಿಯೇ ಗಂಡಿನ ಕಡೆಯವರೆಲ್ಲ ಹೆಣ್ಣಿಗೆ ಕೊಡಬೇಕಾದ ವಸ್ತ್ರಾಭರಣ ಮತ್ತಿತರ ಪದಾರ್ಥಗಳೊಂದಿಗೆ ಹೆಣ್ಣಿನ ಊರಿಗೆ ಬರುತ್ತಿದ್ದಂತೆ ಹೆಣ್ಣಿನವರು ವಾದ್ಯಸಮೇತವಾಗಿ ಅವರನ್ನು ಎದುರುಗೊಳ್ಳುತ್ತಾರೆ. ಅವರನ್ನು ಹೆಣ್ಣಿನ ಕಡೆಯವರದೇ ಆದ ಪ್ರತ್ಯೇಕವಾದ ಮನೆಯಲ್ಲಿ ಬಿಟ್ಟು ಅವರ ಊಟೋಪಚಾರದ ವ್ಯವಸ್ಥೆ ಮಾಡುತ್ತಾರೆ. ಗಂಡಿನವರಿಗೆ ಕೊಟ್ಟ ಆ ಮನೆಗೆ 'ಬಿಡದಿ ಮನೆ' ಎನ್ನುತ್ತಾರೆ. ಅದು ಹೆಣ್ಣಿನ ಮನೆಗೆ ಸ್ವಲ್ಪ ಹತ್ತಿರದಲ್ಲೇ ಇರುತ್ತದೆ. ಗಂಡು ಮತ್ತು ಹೆಣ್ಣಿನ ಮನೆಯಲ್ಲಿ ಅವರಿಬ್ಬರಿಗೆ ಸಂಬಂಧಪಟ್ಟವರು ಮಾಡಬೇಕಾದ ಶಾಸ್ತ್ರಗಳ ಏರ್ಪಾಡಿನಲ್ಲಿ ತೊಡಗುತ್ತಾರೆ.

ಒಂದು ಗೂಡೆಯಲ್ಲಿ ಹೆಣ್ಣಿಗೆ ಏಳು, ಗಂಡಿಗೆ ಒಂಬತ್ತರಂತೆ ಮಣ್ಣಿನ ಕುಡಿಕೆಗಳನ್ನಿಟ್ಟು ಅವುಗಳಲ್ಲಿ ಅಕ್ಕಿಕಾಳು ಹಾಕಿ ಹೆಣ್ಣಿನ ತಲೆಯ ಮೇಲಿರಿಸಿಕೊಂಡು ಹೆಣ್ಣುಮಕ್ಕಳು ಸೋನೆಯ (ಸೋನೆಯದವರು ಎಂದರೆ ಚಲುವಾದಿ ಜನಾಂಗದವರನ್ನೇ ಇಂತಹ ಶುಭಕಾರ್ಯಗಳಿಗೆ ಪಿಂಜಾರರು ಕರೆದುಕೊಂಡು ಬರುತ್ತಾರೆ. ಊದುವ, ಬಡಿಯುವ ಹಲವು ಸಾಧನಗಳೊಂದಿಗೆ ಏಳೆಂಟು ಮಂದಿ ವಾದ್ಯದವರಿರುತ್ತಾರೆ)ದ ಸಮೇತ ಬಾವಿಗೆ ಕರೆದೊಯ್ಯುತ್ತಾರೆ. ಬಾವಿಯಿಂದ ನೀರನ್ನೆಳೆದು ಆ ಎಲ್ಲ ಕುಡಿಕೆಗಳನ್ನು ವಧುವಿನ ಕೈಯಿಂದ ತೊಳೆಸುತ್ತಾರೆ. ಹಾಗೆ ಮತ್ತೆ ಮನೆಗೆ ಬರುತ್ತಾರೆ. ನಂತರ ಹೆಣ್ಣಿನ ಮನೆಯಲ್ಲಿ ಅರಿಸಿನ ಹಚ್ಚಿದ ಅಕ್ಕಿಯನ್ನು ಚೌಕಾಕಾರದಲ್ಲಿ ಹರಡಿ ಹೆಣ್ಣನ್ನು ಅದರ ಮೇಲೆ ಕೂರಿಸುತ್ತಾರೆ. ಇದೇ ರೀತಿ ಬಿಡದಿ ಮನೆಯಲ್ಲಿ ಗಂಡನ್ನೂ ಕೂರಿಸುತ್ತಾರೆ. ಹೆಣ್ಣಿಗೆ ಹೊಸ ಸೀರೆ, ಕುಬುಸ ತೊಡಿಸಿದ್ದರೆ ಗಂಡಿಗೆ ಹೊಸ ಪಂಚೆಯನ್ನು ಉಡಿಸುತ್ತಾರೆ. ಹೆಣ್ಣಿನ ಕಡೆಯ ಐದು ಜನ ಮುತ್ತೈದೆಯರು ಬಿಡದಿ ಮನೆಗೆ ಹೋಗಿ ಗಂಡಿಗೆ ಅರಿಶಿಣ ಹಚ್ಚಿ ಅಕ್ಕಿಕಾಳನ್ನು ಕೈಯಲ್ಲಿ ಹಿಡಿದುಕೊಂಡು ಎರಡೂ ಕೈಯಿಂದ ಗಂಡಿನ ಮೊಣಕಾಲು, ಭುಜ ಮತ್ತು ತಲೆಗೆ ಮುಟ್ಟಿಸಿ ಅಕ್ಕಿಕಾಳನ್ನು ಉದುರಿಸುತ್ತಾರೆ. ಇದಾದ ನಂತರ ಗಂಡಿನ ಕಡೆಯ ಐದು ಜನ ಮುತ್ತೈದೆಯರು ಹೆಣ್ಣಿನ ಮನೆಗೆ ಬಂದು ಹೆಣ್ಣಿಗೆ ಅರಿಶಿನ ಹಚ್ಚುತ್ತಾರೆ. ಪಾದದಿಂದ ಮೊಣಕಾಲವರೆಗೆ, ಭುಜದಿಂದ ಅಂಗೈಯವರೆಗೆ, ಕೆನ್ನೆಗಳಿಗೆ ಅರಿಸಿಣವನ್ನು ಹಚ್ಚಿ ತೀಡುತ್ತಾರೆ. ಹೀಗೆ ಒಬ್ಬರಾದ ನಂತರ ಒಬ್ಬರಂತೆ ಅರಿಶಿಣ ಹಚ್ಚುತ್ತಾ, ಬೆಳಗಾಗುವವರೆಗೆ ಸುಮಾರು ಗಂಡಿಗೆ ಒಂಬತ್ತು ಸಲ, ಹೆಣ್ಣಿಗೆ ಏಳು ಸಲ ಅರಿಸಿಣ ಹಚ್ಚುವ ಕಾರ್ಯಕ್ರಮ ನಡೆಯುತ್ತದೆ. ಈ ಇಡೀ ಕಾರ್ಯಕ್ರಮ ಹೆಣ್ಣು ಮಕ್ಕಳದ್ದು. ಯಾರೂ ನಿದ್ದೆ ಮಾಡದೆ ಅತ್ಯಂತ ಸಡಗರದಿಂದ ಎಲ್ಲ ಹೆಣ್ಣುಮಕ್ಕಳು ಇದರಲ್ಲಿ ಪಾಲ್ಗೊಳ್ಳುತ್ತಾರೆ. ಗಂಡಸರು ಬೀಡಿ ಸೇದಿಕೊಂಡು ಅದೂ ಇದೂ ಮಾತನಾಡುತ್ತ, ಆಗಾಗ್ಗೆ ಹೆಣ್ಣು ಮಕ್ಕಳಿಗೆ ಸಹಕರಿಸುತ್ತ, ಮತ್ತೆ ಕೆಲವರು ನೀರು ತರುವುದು, ಮರುದಿನದ ನಿಖಾ ಸಮಯಕ್ಕೆ ಬೇಕಾದ್ದನ್ನೆಲ್ಲ ಜೋಡಿಸುವುದು. ಬೀಗರು ಯಾರು ಬರಲಿಲ್ಲ, ಯಾರು ಬಂದರು ಇತ್ಯಾದಿ ಹರಟುತ್ತ ಇರುತ್ತಾರೆ ಇಡೀ ರಾತ್ರಿ ಹೆಣ್ಣುಮಕ್ಕಳು ಸಂಭ್ರಮದಲ್ಲಿ, ಗಂಡು-ಹೆಣ್ಣು ಪ್ರತ್ಯೇಕವಾಗಿದ್ದರೂ ಪರಸ್ಪರರ ಬಗ್ಗೆ ತಿಳಿಯುವ ಕಾತರದಲ್ಲಿರುತ್ತಾರೆ. ಅರಿಶಿಣ ಹಚ್ಚುವ ಮುತ್ತೈದೆಯರು ಹೆಣ್ಣಿನ ಬಗ್ಗೆ ಗಂಡಿನ ಹತ್ತಿರ ಗಂಡಿನ ಬಗ್ಗೆ ಹೆಣ್ಣಿನ ಹತ್ತಿರ ಸೊಗಸಾಗಿ ಹೇಳುತ್ತಿರುತ್ತಾರೆ. ಗಂಡಿಗೆ ಹೆಣ್ಣಿನ ಮನೆಯವರು ವಿಶೇಷ ಅಡಿಗೆ ಮಾಡಿರುತ್ತಾರೆ. ಆತನ ಜೊತೆಯಲ್ಲಿ ನಾಲ್ಕು ಜನ ಗಂಡಿನ ಕಡೆಯವರು ಅಥವಾ ಗೆಳೆಯರು ಕೂತು ಅದನ್ನು ಉಣ್ಣಬೇಕು. ಖರ್ಜಿಕಾಯಿ, ತುಪ್ಪ, ಅನ್ನ, ಸಾರನ್ನು ಅವರಿಗೆ ವಿಶೇಷ ಮುತುವರ್ಜಿಯಿಂದ ಬಡಿಸಲಾಗುತ್ತದೆ. ಇದೇ ರೀತಿ ಹೆಣ್ಣಿಗೂ ಊಟವಿರುತ್ತದೆ. ರಾತ್ರಿಯೆಲ್ಲ ಅರಿಶಿಣ

ಹಚ್ಚಿಕೊಂಡು ನಿದ್ದೆಯಿಲ್ಲದೆ ಬಳಲಿದಂತಿದ್ದ ಗಂಡು-ಹೆಣ್ಣಿಗೆ ಪ್ರತ್ಯೇಕವಾಗಿಯೇ ಬಿಸಿ ನೀರಿನಲ್ಲಿ ಬೆಳಿಗ್ಗೆ ಮೈತೊಳೆಯಲಾಗುತ್ತದೆ. ಗಂಡಿನ ಮಾವ ಅಥವಾ ಅಳಿಯಂದಿರು ಗಂಡಿಗೆ, ಹೆಣ್ಣಿನ ಅತ್ತೆ ಅಥವಾ ಗಂಡಿನ ಕಡೆಯ ಹೆಂಗಸರು ಹೆಣ್ಣಿನ ಸ್ನಾನ ಮಾಡಿಸುತ್ತಾರೆ. ಆಗಲೇ ಪರಸ್ಪರರು ಕೊಡಬೇಕಾದ ವಸ್ತ್ರಾಭರಣಗಳ ವಿನಿಮಯವಾಗುತ್ತದೆ. ಮಾವ ಅಥವಾ ಅಳಿಯಂದಿರಿಂದ ಮೈ ತೊಳಸಿಕೊಂಡು ಗಂಡು ಒಂಬತ್ತು ಅಥವಾ ಹದಿನೈದು ರೂಪಾಯಿಗಳನ್ನು ಅವರಿಗೆ ಕೊಡುತ್ತಾನೆ. ಗಂಡಿಗೆ ಬಿಳಿಯ ಉದ್ದನೆಯ ತೋಳಿನ ಅಂಗಿ, ಒಂದು ಟವೆಲ್ಲು, ಬಿಳಿಯ ಪಂಚೆಯನ್ನು ಕೊಡುತ್ತಾರೆ. ಅವನಿಗೆ ಬಟ್ಟೆ ತೊಡಿಸಿ ತಲೆಗೆ ರುಮಾಲು ಕಟ್ಟಿ ಕೂರಿಸುತ್ತಾರೆ. ಹೆಣ್ಣಿನ ಮನೆಯಿಂದ ಶಾವಿಗೆ ಹುಗ್ಗಿ, ಮೊಟ್ಟೆಸಾರು, ಅನ್ನ ಎಲ್ಲ ತೆಗೆದುಕೊಂಡು ವಾದ್ಯಮೇಳದೊಂದಿಗೆ ಗಂಡಿಗೆ ಒಯ್ದುಕೊಡುತ್ತಾರೆ. ಹೆಣ್ಣಿನ ಮನೆಯ ಇಬ್ಬರು ಗಂಡಸರು ಮತ್ತು ಗಂಡಿನ ಮನೆಯ ಇಬ್ಬರೊಂದಿಗೆ ಆತ ಊಟ ಮಾಡಬೇಕು. ನಂತರ ಆತನಿಗೆ ಉಂಗುರ, ಕೊರಳಸರ, ಚಪ್ಪಲಿ ಎಲ್ಲ ಕೊಟ್ಟು ತೊಡಿಸಿ 'ಸೇರ' ಕಟ್ಟಿ ಕುದುರೆಯ ಮೇಲೆ ಕೂರಿಸಿ ವಾದ್ಯದೊಂದಿಗೆ ಮಸೀದಿಗೆ ಆತನನ್ನು ಕರೆಯೊಯ್ಯಲಾಗುತ್ತದೆ. ಈ ಮದಲಿಂಗನಿಗೆ ಮುಲ್ಲಾ ನಮಾಜು ಹೇಳಿಕೊಡುತ್ತಾನೆ. ಮುಲ್ಲಾ ಹೇಳಿದಂತೆ, ಮಾಡಿತೋರಿಸಿದಂತೆ ಗಂಡು ಅನುಕರಿಸುತ್ತಾನೆ. ಅವನೊಂದಿಗೆ ಎರಡೂ ಕಡೆಯ ಗಂಡಸರೂ ಮಸೀದಿಗೆ ಹೋಗಿದ್ದರೂ ಎಲ್ಲರೂ ನಮಾಜು ಮಾಡುವುದಿಲ್ಲ. ನಮಾಜಿನ ನಂತರ ನೇರವಾಗಿ ಬಂದು ಹೆಣ್ಣಿನ ಮನೆಯ ಮುಂದಿನ ಚಪ್ಪರದ ಕೆಳಗೆ ಹಾಕಿದ ಮಂಚದ ಮೇಲೆ ಮದಲಿಂಗನನ್ನು ಕೂರಿಸಲಾಗುತ್ತದೆ.

ಈ ಕಡೆ ಗಂಡಿನ ಕಡೆಯ ಹೆಂಗಸರು ಖರ್ಜಿಕಾಯಿ, ಹಣ್ಣು, ಕೊಬ್ಬರಿ, ಉತ್ತುತ್ತಿ, ಮದುವೆ ಸೀರೆ, ಉಡುತಾರದ ಸೀರೆ, ಹಸುರಿಳೆ ಸೀರೆ, ಕುಬುಸ, ಎಲೆ, ಅಡಕೆ, ತಾಳಿಯನ್ನಿಟ್ಟುಕೊಂಡು ಬಂದು ಹೆಣ್ಣಿನ ಸಿಂಗಾರದಲ್ಲಿ ತೊಡಗುತ್ತಾರೆ. ಹೆಣ್ಣಿಗೆ ಒಟ್ಟು ಐದು ಬಗೆಯ ಸೀರೆಯನ್ನು ಕೊಡುತ್ತಾರೆ. ಮದುವೆ ಸೀರೆ, ಉಡುತಾರದ ಎರಡು ಸೀರೆ, ಹಸುರಿಳೆ ಸೀರೆ, ಸಾಲಿಜೋಡು (ಹೆಣ್ಣಿನ ತಂಗಿಗೆ ಕೊಡುವ ಸೀರೆ) ಸೀರೆಯ ಜೊತೆಗೆ ಧಾರೆ ಸೀರೆ ಪ್ರತ್ಯೇಕವಾದದ್ದು, ವಧುವಿನ ಹೊರತಾಗಿ ಉಳಿದ ಹೆಣ್ಣುಮಕ್ಕಳು ಚಪ್ಪರದಡಿಯಲ್ಲಿ ಮದಲಿಂಗನ ಮುಂಭಾಗದಲ್ಲಿ ಕುಳಿತಿರುತ್ತಾರೆ. ಊರಿನ ಎಲ್ಲ ಜನಾಂಗದ ಆಪ್ತರು ಬಂದು ಸೇರಿರುತ್ತಾರೆ. ತಲೆಗೆ ಸೇರ ಕಟ್ಟಿಕೊಂಡು ಮುಖದ ತುಂಬ ಮಲ್ಲಿಗೆಯ ಸರವನ್ನು ಮರೆಮಾಡಿಕೊಂಡು ಕುಳಿತ ಮದಲಿಂಗನ ಬಳಿ ಮುಲ್ಲಾ ಗುರುವಿನ ಸ್ಥಾನದಲ್ಲಿ ಕೂರುತ್ತಾನೆ. ಆತನ ಕೈಯಲ್ಲಿ ಪುಸ್ತಕವೊಂದಿರುತ್ತದೆ. ಅದರಿಂದ ಏನನ್ನೋ ಆತ ಓದುತ್ತಾನೆ. ಎಲ್ಲ ಜನ ನಿಶ್ಶಬ್ದರಾಗಿ ಅದನ್ನು ಕೇಳುತ್ತಾರೆ. ಅದು ಅರಬ್ಬಿ / ಉರ್ದುವಾದ್ದರಿಂದ ಪಿಂಜಾರರಿಗೆ ಅದೇನೆಂದು ತಿಳಿಯುವುದಿಲ್ಲ. ಮದಲಿಂಗನ ಮುಂದೆ ಚಿತ್ತಾರದ ಓತ್ತಾಳೆಯ ತಟ್ಟೆಯೊಂದರಲ್ಲಿ ದಸ್ತರ್‌ಖಾನಿ ಹಾಸಿ ಅದರ ಮೇಲೆ ಹೆಣ್ಣಿನ ಧಾರೆಸೀರೆ, ತಾಳಿ ಮತ್ತೊಂದು ತಟ್ಟೆಯಲ್ಲಿ ಉತ್ತುತ್ತಿ, ದ್ರಾಕ್ಷಿ, ಕೊಬ್ಬರಿ, ಕಲ್ಲುಸಕ್ಕರೆ, ಬಾದಾಮಿಗಳಿರುತ್ತವೆ. ಐದಾರು ನಿಮಿಷದ ಓದಿನ ನಂತರ ಮುಲ್ಲಾ ಲೆಡ್ಜರ್ ತರದ ಪುಸ್ತಕವೊಂದರಲ್ಲಿ ಹೆಣ್ಣು ಮತ್ತು ಗಂಡಿನ ತಂದೆ-ತಾಯಿಗಳ ಹೆಸರು, ವಧು-ವರರ ಹೆಸರು ಮತ್ತು ಸಾಕ್ಷಿಯಾಗಿ ಮೂರು-ನಾಲ್ಕು ಜನರ ಹೆಸರನ್ನು ಬರೆದು ಮದುವೆಯನ್ನು ರಿಜಿಸ್ಟರ್ ಮಾಡುತ್ತಾನೆ. ಈ ರಿಜಿಸ್ಟರ್ ಮಾಡುವಾಗಲೇ, ಇದೆಲ್ಲ ಎಲ್ಲರಿಗೂ ಕೇಳುವಂತೆ ಹೇಳಲಾಗುತ್ತದೆ. ಗಂಡು ಮುಂದೆ ಹೆಣ್ಣನ್ನು ಬಿಡುವಂತಹ ಸಂದರ್ಭದಲ್ಲಿ ಇಂತಿಷ್ಟು ಮೊತ್ತದ ಹಣವನ್ನು ಹೆಣ್ಣಿಗೆ

ಜೀವನಾಂಶದ ರೂಪದಲ್ಲಿ ಕೊಡಬೇಕೆಂದು ತೀರ್ಮಾನಿಸಿ ಗಂಡಿನ ಒಪ್ಪಿಗೆಯನ್ನು ಕೇಳಲಾಗುತ್ತದೆ. ಆ ಹಣವನ್ನು 'ಮಹರ್' ಎಂದು (ಪಿಂಜಾರರ ಮಾತಿನಲ್ಲಿ ಮಾರಿನ ಹಣ) ಕರೆಯುತ್ತಾರೆ. ಗಂಡು ಒಪ್ಪಿದ ನಂತರ ವಧುವನ್ನು ಕೂಡ ಹೆಂಡತಿಯಾಗಿ ಒಪ್ಪಿದ ಬಗ್ಗೆ ಆತನ ಅಭಿಪ್ರಾಯವನ್ನು ಕೇಳುತ್ತಾರೆ. ಈ ಗಂಡಿಗೆ ಉರ್ದು ಉಚ್ಚಾರಣೆ ಕಷ್ಟಕರವಾದ್ದರಿಂದ ಮುಲ್ಲಾ ಗಂಡು ಹೇಳಬೇಕಾದ ಅಭಿಪ್ರಾಯವನ್ನು ಮಕ್ಕಳಿಗೆ ಹೇಳಿಕೊಟ್ಟಂತೆ ಹೇಳಿಕೊಡುತ್ತಾನೆ. ಮುಲ್ಲಾ ಹೇಳಿದಂತೆ ಮದಲಿಂಗ ಆ ಮಾತುಗಳನ್ನು ಮೂರು ಬಾರಿ ಹೇಳಿದರೆ ನಿಖಾಃ ಮುಗಿಯುತ್ತದೆ. ಮುಲ್ಲಾ ಮೊದಲು ಉರ್ದುವಿನಲ್ಲಿ ಹೀಗೆನ್ನುತ್ತಾನೆ. 'ನಜೀರ್‌ಸಾಬ್‌ಕೆ ನೇಕ್ ದುಕ್ತರ್ ಜೋ ದೋ ಹಜರತ್ ಕೆ ಗವಾಯಿಸೆ ರಫಿಯಾ ಕೆ ಸಾತ್ ತುಮಾರ ಜೋಡ ಕಿಯಾ ಔರ್ ನಿಖಾಃ ಕಿಯಾ, ಕ್ಯಾ ತುಮ್ ಕುಬುಲ್ ಕಿಯಾ' (ಉದಾಹರಣೆಗಾಗಿ ಆ ಹೆಸರುಗಳನ್ನು ಕೊಡಲಾಗಿದೆ ಅಷ್ಟೆ). ಅದಕ್ಕೆ ಹೇಳುವ ಉತ್ತರವನ್ನು ಮುಲ್ಲಾ ಗಂಡಿಗೆ ಹೇಳಿಕೊಡುತ್ತಾನೆ. ಅದು ಹೀಗಿದೆ ; 'ಅಲ್ಲಹಮ್ದುಲ್ಲಿಲ್ಲ ಮೈನೆ ಕುಬುಲ್ ಕಿಯಾ' ಈ ಮಾತನ್ನು ಮೂರು ಸಲ ಹೇಳಿದ ತಕ್ಷಣ ತಟ್ಟೆಯಲ್ಲಿದ್ದ ಬಿಸ್ಕತ್ತು, ಉತ್ತುತ್ತಿ, ಕಲ್ಲುಸಕ್ಕರೆ, ದ್ರಾಕ್ಷಿ, ಕೊಬರಿಗಳನ್ನೆಲ್ಲ ಚಪ್ಪರದಡಿಯಲ್ಲಿ ಕುಳಿತಿದ್ದ ಜನರ ಕಡೆ ತೂರಲಾಗುತ್ತದೆ. ಜನ ಕೂಡ ತಮ್ಮ ಕೈಲಿದ್ದ ಅರಿಶಿಣ ಹಚ್ಚಿದ ಅಕ್ಕಿಕಾಳನ್ನು ಮದಲಿಂಗನ ಕಡೆ ತೂರುತ್ತಾರೆ. ಉತ್ತುತ್ತಿ ಇತ್ಯಾದಿಗಳನ್ನು ಆರಿಸಿಕೊಂಡು ತಿನ್ನುತ್ತಾರೆ. ಗಂಡಿನ ಒಪ್ಪಿಗೆಯ ನಂತರ ಪುಸ್ತಕದಲ್ಲಿ ಆತನ ಸಹಿ ಹಾಕಿಸಿಕೊಳ್ಳುತ್ತಾನೆ (ಅಕ್ಷರಸ್ಥನಲ್ಲದಿದ್ದರೆ ಹೆಬ್ಬಟ್ಟು ಗುರುತು ಹಾಕಿಸಿಕೊಳ್ಳಲಾಗುತ್ತದೆ). ತಕ್ಷಣ ಅದೇ ಪುಸ್ತಕದೊಂದಿಗೆ ಹೆಣ್ಣಿನ ತಾಳಿ, ಧಾರೆಸೀರೆಯಿರುವ ತಟ್ಟೆಯನ್ನು ಹೆಣ್ಣಿನ ಬಳಿ ಅತ್ತೆಯರಾದವರ ಕೈಲಿ ಕಳಿಸಿಕೊಡಲಾಗುತ್ತದೆ. ಆಗ ಹೆಣ್ಣಿಗೆ ಮದುವೆ ಸೀರೆ ಉಡಿಸಿ ಅಕ್ಕಿಯ ಹಸೆ ಬರೆದು ಆಕೆಗೆ ಸೇರ ಕಟ್ಟಿ ಐದು ಜನ ಮುತ್ತೈದೆಯರು ಗಂಧ ಹಚ್ಚಿ ತಾಳಿಯನ್ನು ಅಲ್ಲಿ ನೆರೆದಿದ್ದ ಹೆಣ್ಣು ಮಕ್ಕಳಿಗೆಲ್ಲ ತೋರಿಸಿ ಒಪ್ಪಿಗೆ ಪಡೆಯುತ್ತಾರೆ. ನಂತರ ಅತ್ತೆಯಾದವಳು ಅಥವಾ ನಾದಿನಿಯರು ಹೆಣ್ಣಿಗೆ ತಾಳಿ ಕಟ್ಟುತ್ತಾರೆ ಮತ್ತು ಪುಸ್ತಕದಲ್ಲಿ ಸಹಿ ಹಾಕಿಸಿಕೊಳ್ಳುತ್ತಾರೆ.

ಮಸೀದಿಯಿಂದ ನಮಾಜು ಮುಗಿಸಿಕೊಂಡು ಹೆಣ್ಣಿನ ಮನೆಯತ್ತ ಬಂದಾಗ ಗಂಡಿಗೆ ಅಡ್ಡವಾಗಿ ಒನಕೆ ಹಿಡಿಯುವುದು ಮತ್ತು ನಿಖಾಃದ ನಂತರ ಜಡೆ ಬಿಚ್ಚುವ ಶಾಸ್ತ್ರ ಎಂದು ಮಾಡುವ ಆಚರಣೆಗಳು ಪಿಂಜಾರರ ಮದುವೆಯ ವಿಶಿಷ್ಟತೆಯ ಕುರುಹಾಗಿವೆ. ಗಂಡು ನಮಾಜಿನ ನಂತರ ವಾದ್ಯಮೇಳಗಳೊಂದಿಗೆ ಚಪ್ಪರದಡಿ ಬರುತ್ತಿದ್ದಂತೆ ಆತನಿಗೆ ಅಳಿಯರಾದವರು ಒನಕೆಯನ್ನು ತಂದು ಆತ ಬರದಂತೆ ತಡೆಯುತ್ತಾರೆ. ಉಳಿದ ಜನಾಂಗದದವರಿಗೆ ಇದು ಆಶ್ಚರ್ಯಕರವಾಗಿ ಕಾಣುತ್ತದೆ. ವರನಾದವನು ಹೆಣ್ಣನ್ನು ಮದುವೆಯಾಗಬೇಕಾದರೆ ಈ ಒನಕೆಯನ್ನು ತಳ್ಳಿಕೊಂಡು ನುಗ್ಗಿ ಬರಬೇಕು. ಇಲ್ಲವಾದರೆ ಹಾಗೆ ಒನಕೆ ಹಿಡಿದವರಿಗೆ ಐದೋ ಹತ್ತೋ ರೂಪಾಯಿ ಕೊಟ್ಟು ದಾರಿ ಬಿಡುವಂತೆ ಅವರ ಮನ ಒಲಿಸಬೇಕು. ಸಾಮಾನ್ಯವಾಗಿ ರೊಕ್ಕ ಕೊಟ್ಟುಬರುತ್ತಾರೆ. ಈ ಒನಕೆಯ ಶಾಸ್ತ್ರ ಏನನ್ನು ಸಂಕೇತಿಸುತ್ತದೆ ಅನ್ನುವುದು ಕುತೂಹಲಕಾರಿಯಾದುದು.

ನಿಖಾಃದ ನಂತರ ಮತ್ತೆ ಅದೇ ಅಳಿಯಂದಿರು ಒಂದು ಚಂಬಿನಲ್ಲಿ ನೀರು ತುಂಬಿಕೊಂಡು ಅಗಲವಾದ ಪಾತ್ರೆಯಂತಹದರ ಮೇಲೆ ದಸ್ತರಖಾನಿ (ಚಿತ್ರಾಕಾರದ, ಬಣ್ಣ ಬಣ್ಣದ ದಾರದಿಂದ ಹೆಣೆದಬಟ್ಟೆ)

ಮುಚ್ಚಿಕೊಂಡು ಮಾವನ (ಮದುಮಗ) ಬಾಯಿ ತೊಳೆಸುವುದಕ್ಕೆ ಬರುತ್ತಾರೆ. ಇದು ಬಾಯಿ ತೊಳೆಸುವ ಶಾಸ್ತ್ರ. ಅಳಿಯರು ಕೊಟ್ಟ ನೀರನ್ನು ಬಾಯಲ್ಲಿ ಹಾಕಿಕೊಂಡು ಮುಕ್ಕಳಿಸಿ ದಸ್ತರಖಾನಿಯಲ್ಲಿ ಆತ ಉಗುಳಬೇಕು. ಹಾಗೆ ಉಗುಳುವಾಗ ಬರೀ ನೀರನ್ನು ಉಗುಳಿದರೆ ಅಳಿಯಂದಿರು ಸುಮ್ಮನಿರುವುದಿಲ್ಲ. 'ರೊಕ್ಕ ಉಗುಳು' ಎಂದು ಕೇಳುತ್ತಾರೆ. ಆತ ಬಾಯಲ್ಲಿ ನಾಲ್ಕಾಣೆ, ಎಂಟಾಣೆ ನಾಣ್ಯವನ್ನಿಟ್ಟುಕೊಂಡು ನೀರಿನೊಂದಿಗೆ ಮುಕ್ಕಳಿಸಿ ಉಗುಳುತ್ತಾನೆ. ದಸ್ತಾರಖಾನಿಯ ಮೇಲೆ ಉಳಿದ ನಾಣ್ಯವನ್ನು ಅಳಿಯಂದಿರು ತೆಗೆದುಕೊಳ್ಳುತ್ತಾರೆ. ಇದಾದ ನಂತರ ಸಾಮೂಹಿಕ ಭೋಜನ ನಡೆಯುತ್ತದೆ. ಪಿಂಜಾರರ ಮದುವೆಯಲ್ಲಿ ಸಾಮಾನ್ಯವಾಗಿ ಗೋಧಿ ಹುಗ್ಗಿ, ಅನ್ನ ಬೇಳೆಸಾರು ಮಾಡಿರುತ್ತಾರೆ. ಈ ಅಡಿಗೆ ಮಾಡುವುದು ಕೂಡ ಪಿಂಜಾರರ ಮೂಲಾಶ್ರಮದ ಆಚರಣೆಯ ಕಾರಣದಿಂದಾಗಿ ಎನಿಸುತ್ತದೆ. ಪಿಂಜಾರರ ಮದುವೆಗೆ ಹಿಂದೂ ಜನಾಂಗದ ಅನೇಕ ಪಂಗಡದವರು ಸ್ವಯಂ ಆಸಕ್ತಿಯಿಂದ ಬರುತ್ತಾರೆ. ಅದರಲ್ಲಿ ಸಸ್ಯಾಹಾರಿಗಳೂ ಇರುತ್ತಾರೆ. ಅಲ್ಲದೆ ಬಂದವರಿಗೆಲ್ಲ ಮಾಂಸದೂಟ ಹಾಕುವಂತಹ ಸ್ಥಿತಿವಂತಿಕೆಯೂ ಪಿಂಜಾರರಿಗಿಲ್ಲ. ಹಾಗಾಗಿ ಸವಿಯೂಟ ಅವರ ಮದುವೆಯಲ್ಲಿ ತೀರಾ ಸಾಮಾನ್ಯ. ಎಲ್ಲ ಜನಾಂಗದವರೂ ಒಟ್ಟಿಗೆ ಕೂತು ಊಟ ಮಾಡುತ್ತಾರೆ. ಕೆಲವು ಮಡಿವಂತ ಹಿಂದೂ ಬಾಂಧವರು ಊಟ ಮಾಡದಿದ್ದರೂ ಉತ್ಸಾಹದಿಂದ ಓಡಾಡಿಕೊಂಡು ಊಟ ಬಡಿಸುತ್ತಾರೆ. ಮನೆಯ ಒಳಗೇ ಎಲೆಯಲ್ಲಿ ಊಟ ಬಡಿಸುತ್ತಾರೆ, ಹೊರಗೆ ಕೈತೊಳೆಯಲು ನೀರಿಟ್ಟಿರುತ್ತಾರೆ. ಮದಲಿಂಗನ ಹತ್ತಿರದಲ್ಲೇ ತಟ್ಟೆಯಲ್ಲಿ ಎಲೆಅಡಿಕೆ ಸುಣ್ಣ ಇಟ್ಟಿರುತ್ತಾರೆ. ಊಟ ಮುಗಿಸಿದವರು ಮದಲಿಂಗನನ್ನು ಮಾತಾಡಿಸಿ, ಉಡುಗೊರೆ ಕೊಡುವವರು ಕೊಟ್ಟು ಎಲೆ ಅಡಿಕೆ ಹಾಕುತ್ತ ಹರಟುತ್ತ ಹೊರಡುತ್ತಾರೆ.

ಎಲ್ಲರ ಊಟದ ನಂತರ ಒಂದು ಕುತೂಹಲಕರ ಮನರಂಜನೆ ನಡೆಯುತ್ತದೆ. ಮದಲಿಂಗ ಸೇರ ಬಿಚ್ಚಿ ಸಾಧಾರಣ ಉಡುಪಿನಲ್ಲಿ ಚಪ್ಪರದಡಿಯಲ್ಲಿ ಕುಳಿತಿರುತ್ತಾನೆ. ನೆರೆದಿದ್ದವರು ಹೆಂಡತಿಯನ್ನು ಕರೆತರುವಂತೆ ಆತನಿಗೆ ಒತ್ತಾಯಿಸುತ್ತಾರೆ. ಆಕೆ ಬರದಿದ್ದರೆ ಹೊತ್ತುತರಲು ಹೇಳುತ್ತಾರೆ. ಈ ಕಡೆ ಒಳಗೆ ಗಂಡಸೊಬ್ಬನಿಗೆ ಸೀರೆ ಉಡಿಸಿ ಕೆಂಪನೆಯ ಬಟ್ಟೆಯೊಂದನ್ನು ಮುಚ್ಚಿ ಕೂರಿಸಿರುತ್ತಾರೆ. ಮದಲಿಂಗ ಒಳಗೆ ಹೋದವನೆ ಸೀರೆಯುಟ್ಟು ಕುಳಿತಿದ್ದ ವ್ಯಕ್ತಿಯನ್ನು ಹೊರುತ್ತಾನೆ. ಹೊತ್ತು ತಂದು ಹೊರಗೆ ಜನರ ನಡುವೆ ಎತ್ತಿ ಬಿಡುತ್ತಾನೆ. ಎಲ್ಲರೂ ನಗುತ್ತಾರೆ. ಹಾಗೆ ಅಳಿಯನನ್ನು ಬೇಸ್ತು ಬೀಳಿಸುವಂತೆ ಸೀರೆಯುಟ್ಟುಕೊಂಡ ವ್ಯಕ್ತಿ ಸಾಮಾನ್ಯವಾಗಿ ಸೋದರ ಮಾವನಾಗಿರುತ್ತಾನೆ. ಕೆಳಗೆ ದಪ್ಪಂತ ಬಿದ್ದರೂ ಈತ ಖುಷಿಯಿಂದ ನಗುತ್ತಾನೆ.

ಇದಾದ ನಂತರ ಕೆಂಪನೆಯ ವಸ್ತ್ರವೊಂದನ್ನು ಮುಚ್ಚಿಕೊಂಡ ವಧುವನ್ನು ಮದಲಿಂಗನ ಹತ್ತಿರ ಕರೆತರುತ್ತಾರೆ. ಹೆಣ್ಣಿಗೆ ಎರಡೂ ಕೆನ್ನೆಗಳ ಮೇಲ್ಭಾಗದಲ್ಲಿ ಒಂದು ಕಡೆ ಐದು ಮತ್ತೊಂದು ಕಡೆ ನಾಲ್ಕು ಚಿಕ್ಕ ಜಡೆಗಳನ್ನು ಹೆಣೆದಿರುತ್ತಾರೆ. ಹೆಣ್ಣನ್ನು ಗಂಡಿನ ಎದುರಿಗೆ ಕೂರಿಸಿ ನಡುವೆ ಮುಖ ಕಾಣದಂತೆ ಪರದೆ ಹಿಡಿಯುತ್ತಾರೆ. ಉಡಿದಾರಕ್ಕೆ ಉಂಗುರ ಕಟ್ಟಿ ಅದರ ಒಂದು ತುದಿಯನ್ನು ಗಂಡಿನ ಕೈಯಲ್ಲಿ ಕೊಡುತ್ತಾರೆ. ಆತ ಉಂಗುರವನ್ನು ಪರದೆಯಾಚೆ ಇರುವ ಹೆಣ್ಣಿನ ಕಡೆಗೆ ತೂರುತ್ತಾನೆ. ಹೆಣ್ಣು ಅದೇ ರೀತಿ

ಉಂಗುರವನ್ನು ಗಂಡಿನ ಕಡೆಗೆ ತೂರುತ್ತಾಳೆ. ಹೀಗೆ ಸ್ವಲ್ಪ ನಡೆಯುತ್ತದೆ. ಪರದೆ ತೆಗೆಯುತ್ತಾರೆ. ಸುಮಾರು ಒಂಬತ್ತು ಅಡಕೆಯನ್ನು ಗಂಡಿನ ಕೈಯಲ್ಲಿ ಕೊಟ್ಟು ಹೆಣ್ಣಿನ ಬೈತಲೆಗೇರಿಸುವಂತೆ ಹೇಳುತ್ತಾರೆ. ಬಲಗೈಯಲ್ಲಿ ಅಡಕೆಯನ್ನು ಹೆಣ್ಣಿನ ಬೈತಲೆಗೇರಿಸುತ್ತಲೇ ಎಡಗೈಯಲ್ಲಿ ಹೆಣ್ಣಿಗೆ ಹಾಕಿರುವ ಪುಟ್ಟ ಜಡೆಗಳಲ್ಲಿ ಒಂದು ಭಾಗದ ಜಡೆಗಳನ್ನು ಬಿಚ್ಚಬೇಕು. ಏಕಕಾಲಕ್ಕೆ ಎರಡು ಕೈಯಿಂದ ಬೇರೆ ಬೇರೆ ಕೆಲಸಗಳನ್ನು ನಿರ್ವಹಿಸಲಾಗದ ಗಂಡು ನಾಚುತ್ತಲೇ ಮತ್ತೆ ಮತ್ತೆ ಪ್ರಯತ್ನಿಸುತ್ತಾನೆ. ಕೊನೆಗೂ ಅವನಿಂದಾಗುವುದಿಲ್ಲ. ಹೆಂಗಸರು ಜಡೆಬಿಚ್ಚಲಾಗದ ಗಂಡನ್ನು ಜರೆಯುತ್ತಾರೆ. ಅಳಿಯಂದಿರು ಜಡೆ ಬಿಚ್ಚಲಾಗದ ಮಾವನ ಕೈಯಿಗೆ ವಸ್ತ್ರವೊಂದರಿಂದ ಕಟೆಯುತ್ತಾರೆ. ಎರಡೂ ಕೈಗಳನ್ನೂ ಬಳಸಿದಾಕ್ಷಣ ಕೈಗೆ ಹೊಡೆಯುತ್ತಾರೆ. ಕಡೆಗೆ ಹೆಂಗಸರು ಗಂಡನ್ನು ಚುಡಾಯಿಸುತ್ತ ತಾವೇ ಜಡೆಗಳನ್ನು ಬಿಚ್ಚುತ್ತಾರೆ. ಹೆಣ್ಣಿನ ಮುಖ ಮಾತ್ರ ಕಾಣುವಂತೆ ಗಂಡನ ಎದುರು ಕುಳಿಸಿರುತ್ತಾರೆ. ಇದೆಲ್ಲ ಸರಸ, ಮನರಂಜನೆ ಮುಗಿದ ನಂತರ ಹುಡುಗಿಯನ್ನು ಗಂಡಿನ ಪಕ್ಕ ಕೂರಿಸಿ ಗಂಡು-ಹೆಣ್ಣಿನ ತಂದೆ-ತಾಯಿಗಳನ್ನು ಕರೆಸುತ್ತಾರೆ. ಹೆಣ್ಣಿನ ತಾಯಿ-ತಂದೆಯರು ಗಂಡಿನ ತಾಯಿ-ತಂದೆಯರ ಕೈಮೇಲೆ ಎರಡೂ ಕೈಯಿಟ್ಟು 'ಇವಳು ನಮ್ಮ ಮಗಳಲ್ಲ, ನಿಮ್ಮ ಮಗಳು, ಏನಾರ ತಪ್ಪು ಕಂಡು ಬಂದ್ರೆ ಹೊಟ್ಟೆಗಾಕ್ಕಳ್ರಿ, ವಿಶ್ವಾಸದಿಂದ ನೋಡ್ಕಳ್ರಿ' ಎನ್ನುತ್ತಾರೆ. ಹಾಗೆ ಹೇಳುವಾಗ ಹೆಣ್ಣು ಮತ್ತು ಹೆಣ್ಣಿನ ತಾಯ್ತಂದೆಯರ ಕಣ್ಣಲ್ಲಿ ನೀರು ತುಂಬಿರುತ್ತದೆ. ದನಿ ನಡುಗುತ್ತಿರುತ್ತದೆ. ಅತ್ಯಂತ ದುಃಖದಿಂದ ತಮ್ಮ ಮಗಳನ್ನು ಅವರಿಗೆ ಒಪ್ಪಿಸುತ್ತಾರೆ. ಗಂಡಿನ ತಾಯಿ-ತಂದೆಯವರು ತಮ್ಮ ಸೊಸೆಯನ್ನು ಮಗಳಂತೆಯೇ ಪ್ರೀತಿಯಿಂದ ನೋಡಿಕೊಳ್ಳುವುದಾಗಿ ಭರವಸೆ ಕೊಡುತ್ತಾರೆ.

ಇಷ್ಟೊತ್ತಿಗೆ ಆಗಲೇ ಸಂಜೆಯಾಗಿರುತ್ತದೆ. ಗಂಡಿನ ಕಡೆಯವರು ಅನೇಕರು ಹೋಗಿರುತ್ತಾರೆ. ಹೆಣ್ಣನ್ನು ಕರೆದುಕೊಂಡು ಹೋಗುವ ಮೊದಲು ಗಂಡು-ಹೆಣ್ಣಿಗೆ ಜೊತೆಯಲ್ಲಿ, ಗಂಡಿನ ಮನೆಯವರಿಗೆಲ್ಲ ಶಾವಿಗೆ ಹುಗ್ಗಿ, ಕೋಳಿಸಾರು ಬಡಿಸಿ ಊಟ ಕೊಡುತ್ತಾರೆ. ಹೆಣ್ಣು ಹೊರಡುವಾಗ ಅವ್ವ-ಅಪ್ಪರಿಗೆಲ್ಲ ಕಾಲಿಗೆ ಬಿದ್ದು ಅಳುತ್ತಾಳೆ. ಅವರೂ ಅಳುತ್ತಳುತ್ತಲೇ ಮಗಳನ್ನು ಸಮಾಧಾನಪಡಿಸುತ್ತಾರೆ. ಒಡಹುಟ್ಟಿದವರನ್ನೆಲ್ಲ ಇದ್ದಕ್ಕಿದ್ದ ಹಾಗೆ ಅಗಲಿ ಹೋಗಬೇಕಾದ ಹೆಣ್ಣು ಎಲ್ಲರಿಗೂ 'ಹೋಗಿ ಬರುತ್ತೇನೆಂದು' ಹೇಳುತ್ತಾಳೆ. ಇಡೀ ಸನ್ನಿವೇಶ ಪ್ರೀತಿಯ ಭಾವುಕತೆಯಿಂದ ತುಂಬಿರುತ್ತದೆ. ಗಂಡ ಹೆಂಡತಿಯನ್ನು ಹೊತ್ತುಕೊಂಡು ಬಂದು ಗಾಡಿಯಲ್ಲಿ ಕೂರಿಸುತ್ತಾನೆ. ಹೆಣ್ಣಿನ ಕಡೆಯ ಕೆಲವರೂ ಹೊರಡುತ್ತಾರೆ. ಮಾಮನೆ ಅಥವಾ ಮಾವನ ಮನೆಯ ಪ್ರಯಾಣ ಸಾಗುತ್ತಿದ್ದಂತೆಯೇ ಹೆಣ್ಣಿನ ಮನೆ ಅರಣ್ಯರೋದನದಲ್ಲಿ, ಅಗಲಿದ ಮನೆಮಗಳ ಗುಣಗಾನದಲ್ಲಿ ಮುಳುಗುತ್ತದೆ.

ಇತ್ತ ಗಂಡಿನ ಮನೆಯನ್ನು ತಲುಪುತ್ತಿದ್ದಂತೆಯೇ ಗಂಡಿನ ತಂಗಿಯರು ದಂಪತಿಗಳ ಕಾಲು ತೊಳೆಯುತ್ತಾರೆ. ಅಣ್ಣ-ಅತ್ತಿಗೆಯರನ್ನು ಒಳಗೆಬಿಡುವ ಮೊದಲು ಇಬ್ಬರ ಕಾಲಿನ ಹೆಬ್ಬೆರಳುಗಳನ್ನು ಹೊಸಿಲ ಮೇಲೆ ಕೂಡಿಸಿ ಹಿಡಿದು ಅದರ ನಡುವೆ ಮೊಳೆ ಬಡಿಸುತ್ತಾರೆ. ಮೊಳೆ ಬಡಿದ ನಂತರವೂ ಹಿಡಿದ ಹೆಬ್ಬೆರಳುಗಳನ್ನು ತಂಗಿಯರಾದವರು ಬಿಡುವುದಿಲ್ಲ. ಅಣ್ಣ 'ಯಾಕವ್ವ ಕಾಲು ಹಿಡ್ಕಂಡೀದೀಯ ಬಿಡವ್ವ

ತಾಯಿ' ಅನ್ನುತ್ತಾರೆ. ತಂಗಿ 'ಹೆಣ್ಣು ಕೊಡಪ್ಪ' ಎಂದು ಕೇಳುತ್ತಾಳೆ. ಅಣ್ಣ 'ಇನ್ನು ಈಗ್ಲೇ ಹೆಣ್ಣೆಲ್ಲಿದ್ದವವ್ವ, ಒಂದು ಬೆಕ್ಕಿನ್‌ಮರಿ ಕೊಡ್ತೀನಿ' ಎನ್ನುತ್ತಾನೆ. ತಂಗಿ 'ಇಲ್ಲ ನನಗೆ ಹೆಣ್ಣೇ ಬೇಕು' ಎಂದು ಕೇಳುತ್ತಾಳೆ. ಅಣ್ಣ ಮತ್ತೆ 'ಹೆಣ್ಣಲ್ಲವ್ವ, ಒಂದಿಲಿ ಮರಿ ಕೊಡ್ತೀನಿ' ಅನ್ನುತ್ತಾಳೆ. ಮತ್ತೆ ತಂಗಿಯ ಹಟ. ಕಡೆಗೆ 'ಆಯ್ತು ಬಿಡವ್ವ ಕಾಲ್‌ನ, ಹೆಣ್ ಕೊಡ್ತೀನಿ' ಅಂತ ಅಣ್ಣ ಅಂದರೂ ತಂಗಿ 'ನೀನೊಬ್ಬನು ಒಪ್ಪಿದ್ರೆ ಆಯ್ತ, ನಿನ್ಹೆಂಡ್ತಿಗೂ ಒಪ್ಪಿಸಪ್ಪ,' ಅಂತ ಹೇಳ್ತಾಳೆ. ಅಣ್ಣನಿಗೆ ಏನೋ ನಾಚಿಕೆ. ಮೊದಲ ಸಲ ಹೆಂಡತಿಯನ್ನು ಮಾತಾಡಿಸಬೇಕು. ಸಂಕೋಚ, ತಂಗಿಯ ಒತ್ತಾಯಕ್ಕೆ ಮಣಿದು ಕೇಳುತ್ತಾನೆ. 'ನನ್‌ತಾಯಿ ಹೆಣ್ಣು ಕೇಳ್ತಾಳೆ ಕೊಡಾನೇನೆ' ಎಂದು ಹೆಂಡತಿಯನ್ನು ಕೇಳಿದರೆ ಆಕೆ ಮುಖ ತಿರುವಿ ಮುಚ್ಚಿಕೊಳ್ಳುತ್ತಾಳೆ. ಪಕ್ಕದಲ್ಲಿದ್ದ ಹೆಂಗಸರು 'ಮಾತಾಡೇ ತಾಯಿ' ಅಂತಾರೆ. 'ನೀವು ಕೊಡ್ತನೀ ಅಂದ್ರೆ ನಾನೇನು ಬ್ಯಾಡ ಅಂತಾನ ಅಂತ ಹೇಳೇ ತಾಯಿ' ಎಂದು ಹೇಳಿಕೊಡುತ್ತಾರೆ. ಕೊನೆಗೆ ಎಲ್ಲರ ಒತ್ತಾಯಕ್ಕೆ ಸೋತು ಹೆಣ್ಣು ಕೇಳಿಸಿತೋ ಇಲ್ಲವೋ ಅನ್ನುವ ಹಾಗೆ 'ನೀವು ಕೊಡ್ತನಿ ಅಂದ್ರೆ ನಾನೇನ್ ಬ್ಯಾಡ ಅಂತೀನಾ?' ಅನ್ನುತ್ತಾಳೆ. ಎಲ್ಲರೂ ನಗುತ್ತಾರೆ. ತಂಗಿ ಕಾಲುಬಿಟ್ಟು ಅವರನ್ನು ಒಳಗೆ ಕರೆದುಕೊಳ್ಳುತ್ತಾಳೆ.

ಮಾವನ ಮನೆಯಲ್ಲಿ ಆಗಲೇ ಬೇಳೆಬೆಲ್ಲ ಬೇಯಿಸಿ ಹುರಾಣ (ಹೂರಣ) ತಿರುವಿ ಇಟ್ಟಿರುತ್ತಾರೆ. ಹೊಸ ದಂಪತಿಗಳನ್ನು ಅಕ್ಕಪಕ್ಕ ಕೂರಿಸಿ ಚಾಪೆಹಾಸಿ ಹುರಾಣವನ್ನು, ಕಲಿಸಿದ ಮೈದಾಹಿಟ್ಟನ್ನು ಕೊಡುತ್ತಾರೆ. ಗಂಡ ಎಲೆ ಉದ್ದಿದ ಹಾಗೆ ಹೆಂಡತಿ ಅದರಲ್ಲಿ ಹುರಾಣ ತುಂಬಿ ಹೋಳಿಗೆ ಮಾಡಬೇಕು. ನಂತರ ಹಸಿ ಹೋಳಿಗೆ ತೆಗೆದುಕೊಂಡು ಒಲೆಮುಂದೆ ಬರಬೇಕು. ಗಂಡ ಒಲೆಯ ಮೇಲೆ ಎಣ್ಣೆಯ ಬಾಂಡಲಿಯನ್ನಿಟ್ಟು ಉರಿಕಾಯಿಸಿ ಎಣ್ಣೆ ಬಿಸಿಯಾದ ತಕ್ಷಣ ಎಣ್ಣೆಯಲ್ಲಿ ಹೋಳಿಗೆ ಹಾಕಿದರೆ ಹೆಂಡತಿ ಅದನ್ನು ಕರಿಯುತ್ತಾಳೆ. ಇಬ್ಬರೂ ಸೇರಿ ಮಾಡಿದ ಹೋಳಿಗೆಯನ್ನು ತಿನ್ನಲು ಮನೆಯ ಮಕ್ಕಳು ಸತಾಯಿಸುತ್ತವೆ. ಗಂಡ-ಹೆಂಡತಿ ಅವರಿಗೆ ಹೋಳಿಗೆ ಕೊಟ್ಟು ಸಮಾಧಾನಪಡಿಸಬೇಕು. ಈ ಕ್ರಿಯೆ ಪಿಂಜಾರರಲ್ಲಿ ಶಾಸ್ತ್ರವೆಂಬಂತಹ ರೀತಿಯಲ್ಲಿ ನಡೆಯುತ್ತದೆ. ಮರುದಿನದ ಬೆಳಿಗ್ಗೆಯವರೆಗೂ ಇದ್ದು ಹೆಣ್ಣಿನ ಮನೆಯವರು ತಮ್ಮೂರಿನ ಕಡೆ ಹೊರಡುತ್ತಾರೆ.

ಪಿಂಜಾರರ ಮದುವೆಯ ಒಂದು ಹಂತ ಇಲ್ಲಿಗೆ ಮುಗಿಯುತ್ತದೆ. ನಂತರ ಪಿಂಜಾರರು 'ಶುಕ್ರವಾರ' ಎಂದು ಐದು ವಾರಗಳ ಕಾಲ ಆಚರಿಸುತ್ತಾರೆ. ಮೊದಲ ಎರಡು ಶುಕ್ರವಾರ ಗಂಡಿನ ಮನೆಯಲ್ಲಿ, ನಂತರದ ಎರಡು ಶುಕ್ರವಾರ ಹೆಣ್ಣಿನ ಮನೆಯಲ್ಲಿ, ಕಡೆಯ ಶುಕ್ರವಾರ ಗಂಡಿನ ಮನೆಯಲ್ಲಿ ನಡೆಯುತ್ತದೆ. ಈ ಐದೂ ಶುಕ್ರವಾರಗಳ ಆಚರಣೆಯ ನಂತರವೇ ಪಿಂಜಾರರಲ್ಲಿ ಮೊದಲ ರಾತ್ರಿಯನ್ನು ಆಚರಿಸುವುದಾಗಿ ತಿಳಿದುಬರುತ್ತದೆ. ಇದು ಈಗಾಗಲೇ ೭೦-೮೦ ವರ್ಷದವರು ಹೇಳುವ ಮಾತು. ಆದರೆ ಈಗ ಪಿಂಜಾರರಲ್ಲಿ ನಿಖಾಃ ನಡೆದ ರಾತ್ರಿಯೇ ಗಂಡಿನ ಮನೆಯಲ್ಲಿ ಹೆಣ್ಣು-ಗಂಡಿನ ಸಮಾಗಮ ನಡೆಯುತ್ತದೆ. ಪ್ರಥಮ ರಾತ್ರಿಯಲ್ಲಿ ಹೆಣ್ಣಿನವರು ಕೊಡಮಾಡಿದ 'ಹಾಸಿಗೆ'ಯನ್ನು ಹಾಸಿ ಅದರ ಮೇಲೆ ಮಲ್ಲಿಗೆ ಹೂವುಗಳನ್ನು ಚೆಲ್ಲಿರುತ್ತಾರೆ. ಅನೇಕ ಪಿಂಜಾರರ ಮನೆಗಳಲ್ಲಿ ಹೊಸದಂಪತಿಗಳಿಗಾಗಿ ಪ್ರತ್ಯೇಕ ಕೊಠಡಿಗಳಿರುವುದಿಲ್ಲ. ಗೋಡೆಗಳಿಗೆ ತಂತಿ ಕಟ್ಟಿ ಪರದೆ ಇಳಿಬಿಟ್ಟು ಮರೆಮಾಡಿರುತ್ತಾರೆ. ನಿಖಾಃ ನಡೆದ ಆ ರಾತ್ರಿಯಲ್ಲಿ ಹೆಣ್ಣಿನ

ಕಡೆಯ ಒಂದಿಬ್ಬರು ಹೆಣ್ಣು ಮಕ್ಕಳು ಮದುಮಗಳನ್ನು ಬಿಸಿಯಾದ ಹಾಲಿನೊಂದಿಗೆ ಗಂಡನ ಸಮೀಪಕ್ಕೆ ಕಳಿಸುತ್ತಾರೆ. ಎಂದೂ ಪರಸ್ಪರ ಮಾತನಾಡಿರದ, ಭಾವನೆಗಳನ್ನು ಅರ್ಥಮಾಡಿಕೊಳ್ಳದ ಗಂಡು-ಹೆಣ್ಣು ದೈಹಿಕವಾಗಿ ಸೇರುವ ಮೂಲಕವೇ ಅವರಿಬ್ಬರ ನಡುವೆ ಹೊಂದಾಣಿಕೆ, ಆತ್ಮೀಯತೆ ಉಂಟಾಗಬೇಕಾದ ಅನಿವಾರ್ಯ ಸಂದರ್ಭವಿದು. ಮೊದಲ ರಾತ್ರಿ ಅಷ್ಟೇ ಭಯ, ಮುಜುಗರಗಳು ವಿಶೇಷವಾಗಿ ಹೆಣ್ಣಿಗೆ ಕಾಡುತ್ತವೆ. ಕ್ರಮೇಣ ಅವೆಲ್ಲ ಕಡಿಮೆಯಾಗಿ ನಂತರದ ಶುಕ್ರವಾರದ ಆಚರಣೆಗಳಲ್ಲಿ, ಬೀಗರು-ಬಿಜ್ಜರ ಮನೆಗಳಿಗೆ ಓಡಾಡುವುದರಲ್ಲಿ ಇಬ್ಬರಲ್ಲೂ ಮಾತು, ಸರಸ ಮೊದಲಾದ ಆತ್ಮೀಯ ಭಾವನೆಗಳು ಸಹಜವಾಗುತ್ತವೆ.

ಶುಕ್ರವಾರದ ಆಚರಣೆಯಲ್ಲಿ ದಂಪತಿಗಳ ಮೈತೊಳೆಸಿ ಮದುವೆ ಬಟ್ಟೆ ತೊಡಿಸಿ ಅಕ್ಕಿಯ ಹಸೆ ಬರೆದು ಇಬ್ಬರನ್ನೂ ಕೂರಿಸುತ್ತಾರೆ. ಸಾಮಾನ್ಯವಾಗಿ ಸಂಜೆ ಮತ್ತು ರಾತ್ರಿಯ ಹೊತ್ತು ಮನೆಯ ಒಳಗೇ ನಡೆಯುವ ಕಾರ್ಯಕ್ರಮ ಇದು. ಬಂಧುಗಳು, ಹಿತೈಷಿಗಳೆಲ್ಲ ಇಲ್ಲಿ ನೆರೆದಿರುತ್ತಾರೆ. ಮುತ್ತೈದೆಯರು ಹೊಸ ದಂಪತಿಗಳಿಗೆ ಗಂಧ ಹಚ್ಚಿ ಆಶೀರ್ವಾದ ಮಾಡುತ್ತಾರೆ. ಇಲ್ಲಿ ಕೂಡ ಎಲ್ಲ ಜನಾಂಗದವರು ಸೇರುವುದರಿಂದ ಸೋಬಾನೆ ಪದಗಳು ಮತ್ತು ಮುಸ್ಲಿಂ ಹೆಣ್ಣುಮಕ್ಕಳು ಹಾಡುವ ಉರ್ದು ಪದಗಳನ್ನು ಹತ್ತಾರು ಜನರೆಲ್ಲ ಕೂಡಿ ಹಾಡುತ್ತಾರೆ. ಈ ಕಾರ್ಯಕ್ರಮ ಸಾಮಾನ್ಯವಾಗಿ ಊಟದ ನಂತರ ನಡೆಯುತ್ತದೆ. ಪ್ರತಿ ಶುಕ್ರವಾರ ಒಂಬತ್ತು ಮಣ್ಣಿನ ಸಣ್ಣ ಕುಡಿಕೆಗಳನ್ನು ಅಡಕಲಿನಂತೆ ಏರಿಸಿ ಇಳಿಸಬೇಕಾದ ಆಚರಣೆಯೂ ಇದೆ, ಗಂಡು-ಹೆಣ್ಣು ಕೂಡಿ ಈ ಕುಡಿಕೆಗಳನ್ನು ಒಂಬತ್ತು ಬಾರಿ ಏರಿಸಿ ಇಳಿಸುತ್ತಾರೆ, ಹೆಣ್ಣು ಮತ್ತು ಗಂಡಿನ ಮನೆಯಲ್ಲಿ ನಡೆಯುವ ಈ ಆಚರಣೆಯ ದಿವಸ ಪರಸ್ಪರರ ಮನೆಯವರು ಇರಲೇಬೇಕೆಂದಿಲ್ಲ. ಕಡೆಯ ಶುಕ್ರವಾರದಂದು ಕೋಳಿ ಕೊಯ್ದು ಬಂದವರಿಗೆಲ್ಲ ಊಟ ಹಾಕುತ್ತಾರೆ. ಈ ಶುಕ್ರವಾರದ ಆಚರಣೆಯಲ್ಲಿ ಆಪ್ತರಾದ ಕೆಲವೇ ಜನರ ಉಪಸ್ಥಿತಿಯಿರುತ್ತದೆ. ವಿಶೇಷವಾಗಿ ಈ ಶುಕ್ರವಾರಗಳಲ್ಲಿ ನಡುವಿನ ಯಾವುದಾದರೊಂದು ಅಥವಾ ಎರಡು ವಾರಗಳನ್ನು ಗಂಡು ಮತ್ತು ಹೆಣ್ಣಿನ ಅಕ್ಕಂದಿರು ಅಥವಾ ಸೋದರತ್ತೆಯರ ಮನೆಯಲ್ಲಿ ಆಚರಿಸುವುದೂ ಇದೆ, ಇನ್ನೂ ವಿಶೇಷವೆಂದರೆ ಇವರ ಶಾಸ್ತ್ರಾಚರಣೆಯ ಪ್ರಕಾರವಿರುವ ಐದು ಶುಕ್ರವಾರಗಳನ್ನು, ಅಂದರೆ ಒಟ್ಟು ಅವಧಿಯನ್ನು ಕಡಿಮೆ ಮಾಡಿಕೊಳ್ಳುವ ರೀತಿಯೊಂದಿದೆ. ಮೊದಲ ಶುಕ್ರವಾರವೇ ಎರಡು ಮತ್ತು ನಂತರದ ಶುಕ್ರವಾರ ಮತ್ತೆರಡರಂತೆ ಆಚರಿಸಿ ಕಡೆಯಲ್ಲಿ ಒಂದನ್ನು ಮುಗಿಸುವ ಪದ್ಧತಿಯೂ ಕ್ವಚಿತ್ತಾಗಿ ನಡೆಯುತ್ತದೆ. ಅಂದರೆ ಮೂರೇ ವಾರದಲ್ಲಿ ಐದು ಶುಕ್ರವಾರಗಳನ್ನು ಆಚರಿಸಿಬಿಡುವ ಈ ರೂಢಿಯ ಹಿನ್ನೆಲೆಯಲ್ಲಿ ಮುಖ್ಯವಾಗಿ ಎರಡು ರೀತಿಯ ಕಾರಣಗಳಿರುವಂತೆ ಕಾಣುತ್ತದೆ. (೧) ಐದು ಶುಕ್ರವಾರಗಳನ್ನು ಮೂರೇ ವಾರದಲ್ಲಿ ಮುಗಿಸಬೇಕೆನ್ನುವಾಗ ಮುಂಬರುವ ಯಾವುದೋ ಕೆಟ್ಟದಿನಗಳನ್ನು ಗಮನದಲ್ಲಿಟ್ಟುಕೊಂಡಿರಬೇಕು. ಆ ಕೆಟ್ಟ ದಿನಗಳು ಬರುವ ಮೊದಲೇ ಈ ಶುಭಕಾರ್ಯ ಮುಗಿದು ಬಿಡಲಿ ಎಂಬಂತಹ ತಿಳುವಳಿಕೆ ಮೊದಲ ಕಾರಣ. (೨) ಐದು ಶುಕ್ರವಾರಗಳೆಂದರೆ ಒಂದು ತಿಂಗಳಿಗೂ ಹೆಚ್ಚಿನ ಅವಧಿಯವರೆಗೂ ಕಾಯದೆ ಕೇವಲ ಇಪ್ಪತ್ತು ದಿನಗಳಲ್ಲಿ ಐದೂ ವಾರಗಳನ್ನು ಆಚರಿಸಿಬಿಡುವ ಅವಸರದ ಹಿಂದೆ ಗಂಡು-ಹೆಣ್ಣಿನ ಸಮಾಗಮದ

ಬಯಕೆಯ ಒತ್ತಡವಿರಬೇಕು. ಇದು ಗಂಡು-ಹೆಣ್ಣಿನ ನಡವಳಿಕೆಯಲ್ಲಿ ಕಾಣುವ ಲಕ್ಷಣ ಮಾತ್ರವಲ್ಲದೇ ಸುಮ್ಮನೇ ಬಹಳ ದಿನಗಳ ಕಾಲ ದಂಪತಿಗಳನ್ನು ದೂರ ಇಡುವುದರಲ್ಲಿ ಅರ್ಥವಿರಲಾರದೆನ್ನುವ ಹಿರಿಯರ ವಿವೇಕವೂ ಇರಬಹುದು. ಯಾಕೆಂದರೆ ಈ ಐದೂ ಶುಕ್ರವಾರಗಳ ಆಚರಣೆಯ ನಂತರವೇ ಮೊದಲ ರಾತ್ರಿಯನ್ನು ಪಿಂಜಾರರು ಆಚರಿಸುತ್ತಿದ್ದುದಾಗಿ ತಿಳಿದು ಬರುತ್ತದೆ. ಸಾಮಾನ್ಯವಾಗಿ ಮಗಳನ್ನು ಗಂಡನ ಮನೆಗೆ ಮಂಗಳವಾರ, ಪಿಂಜಾರರು ಕಳಿಸುವುದಿಲ್ಲ.

ಇಲ್ಲಿಗೆ ಪಿಂಜಾರರ ಮದುವೆಯ ಆಚರಣೆಗಳು ತಾಂತ್ರಿಕವಾಗಿ ಮುಗಿಯುತ್ತವೆ. ಈವರೆಗೆ ತಿಳಿಸಿದ ಆಚರಣೆಗಳಲ್ಲಿ ಮುಖ್ಯವಾಗಿ ನಾವು ಹಿಂದೂ-ಮುಸ್ಲಿಂ ಆಚರಣೆಯ ವೈಶಿಷ್ಟ್ಯಗಳನ್ನೂ, ಅಲ್ಲದೆ ಪಿಂಜಾರರ ಧಾರ್ಮಿಕ ಗುರುವಾದ ಮುಲ್ಲಾನ ಅಲ್ಪಕಾಲದ ಉಪಸ್ಥಿತಿಯನ್ನು, ಪಿಂಜಾರರ ಒಟ್ಟಾರೆ ಇತಿಹಾಸದ ಹಿನ್ನೆಲೆಯಲ್ಲಿ ನೋಡುವುದು ಒಳ್ಳೆಯದು. ಮುಸ್ಲಿಂ ಧರ್ಮದ ತಿಳುವಳಿಕೆಯ ಸ್ಪಷ್ಟ ಕೊರತೆಯಿರುವ ಪಿಂಜಾರರಿಗೆ ಅದನ್ನು ಒಳಗೊಳ್ಳುವ ಸಾಮಾಜಿಕ ಒತ್ತಡವಿದ್ದಂತಿದೆಯಲ್ಲದೆ ಅದು ಅನಿವಾರ್ಯವೂ ಆಗಿದೆ. ಮದುವೆಯ ಒಟ್ಟಾರೆ ಖರ್ಚನ್ನು ಎರಡೂ ಮನೆಯವರು ಸಮನಾಗಿ ವಹಿಸುತ್ತಾರೆ. ಒಂದೊಮ್ಮೆ ತೆರ ಕೊಟ್ಟು ಹೆಣ್ಣನ್ನು ಮದುವೆ ಮಾಡಿಕೊಳ್ಳುತ್ತಿದ್ದ ಪಿಂಜಾರರು ನಾಗರಿಕತೆಯ ಅನಿಷ್ಟವಾಗಿರುವ ವರದಕ್ಷಿಣೆಯಿಂದಲೂ ಪ್ರಭಾವಿತರಾಗಿದ್ದಾರೆ. ಇತರೆ ಜನಾಂಗಗಳಿಗೆ ಹೋಲಿಸಿದರೆ ಪಿಂಜಾರರಲ್ಲಿ ವರದಕ್ಷಿಣೆಯ ಉದಾಹರಣೆಗಳು ಕಡಿಮೆ ಎಂದೇ ಹೇಳಬೇಕು, ಇದಕ್ಕೆ ಅವರ ಆರ್ಥಿಕ ಸ್ಥಿತಿಯಂತೆಯೇ ಅವರೊಳಗೇ ಸಂಬಂಧವನ್ನು ಅವರು ಹುಡುಕಿಕೊಳ್ಳುವುದರಿಂದ ಪಿಂಜಾರರ ಹೆಚ್ಚು ಮದುವೆಗಳು ಪ್ರೀತಿ ವಿಶ್ವಾಸಗಳ ನೆಲೆಯಲ್ಲಿಯೇ ನಡೆಯುತ್ತವೆ. ಪಿಂಜಾರರ ಮದುವೆಯಲ್ಲಿ ವಾದ್ಯ ಅಗತ್ಯವಾಗಿರುತ್ತದೆ. ಅದರ ಖರ್ಚನ್ನು ಹೆಣ್ಣಿನ ಮನೆಯವರೇ ವಹಿಸುತ್ತಾರೆ. ಗಂಡಿನ ಮನೆಯವರನ್ನು ಮದುವೆಯ ಹಿಂದಿನ ರಾತ್ರಿ ಎದುರುಗೊಳ್ಳುವುದರಿಂದ ಹಿಡಿದು ನಿಖಾಃ ಮುಗಿಯುವವರೆಗೂ ವಾದ್ಯದವರ ಮೇಳ ಇರುತ್ತದೆ.

ಪಿಂಜಾರರ ಮತಾಂತರ ಒತ್ತಡದಿಂದಾಗಿದೆ ಎನ್ನುವುದನ್ನು ಸಮರ್ಥಿಸಲು ಬದುಕಿನ ಅತ್ಯಂತ ಮಹತ್ವದ ಘಟ್ಟವಾದ ಮದುವೆ ಸಮಾರಂಭದ ಆಚರಣೆಗಳನ್ನು ಸೂಕ್ಷ್ಮವಾಗಿ ಗಮನಿಸಬೇಕು. ಜನನದ ಸಂದರ್ಭದಲ್ಲಿ ಜಾತಕವನ್ನು ಬರೆಸುವ ಹಾಗೆಯೇ ಮದುವೆಗಾಗಿ ಮುಹೂರ್ತವನ್ನು ಬ್ರಾಹ್ಮಣರಿಂದ ಪಿಂಜಾರರು ತಿಳಿದುಕೊಂಡು ಬರುತ್ತಾರೆ. ಅತ್ಯಂತ ತಾಂತ್ರಿಕ ಕಾರಣಗಳಿಗಾಗಿ ಮುಲ್ಲಾನನ್ನು ಆಮಂತ್ರಿಸುವ, ಅವಲಂಬಿಸುವ ಪಿಂಜಾರರು ಆತನನ್ನು ಗೌರವಿಸುತ್ತಾರೆ, ಸತ್ಕರಿಸುತ್ತಾರೆ. ಉಡುಗೊರೆಗಳನ್ನು ಕೊಡುತ್ತಾರೆ. ಆತ ಮದುವೆಯನ್ನು ರಿಜಿಸ್ಟರ್ ಮಾಡುವ ಸಂದರ್ಭದಲ್ಲಿ ಪಿಂಜಾರರು ಮೂಕ ಪ್ರೇಕ್ಷಕರಾಗಿರುತ್ತಾರೆ. ಆತನ ನಿರ್ದೇಶನ, ಮಾರ್ಗದರ್ಶನದಂತೆ ನಡೆಯುತ್ತಾರೆ. ಉಳಿದಂತೆ ಮದುವೆಯ ಇತರೆ ಸಂದರ್ಭದಲ್ಲಿ, ಅಂದರೆ ಮಸೀದಿಯಲ್ಲಿ ಗಂಡಿಗೆ ನಮಾಜು ಮಾಡಿಸಿ, ಚಪ್ಪರದಡಿಯಲ್ಲಿ ಮದುವೆಯನ್ನು ರಿಜಿಸ್ಟರ್ ಮಾಡುವುದನ್ನು ಬಿಟ್ಟರೆ, ಮುಲ್ಲಾನ ಉಪಸ್ಥಿತಿಯಿರುವುದಿಲ್ಲ. ಮದುವೆಯನ್ನು ರಿಜಿಸ್ಟರ್ ಮಾಡಿದುದಕ್ಕಾಗಿ ಮುಲ್ಲಾನಿಗೆ ನಗದು ರೂಪದ ಮಜೂರಿಯೂ ಇರುತ್ತದೆ.

ಹಾಗೆ ರಿಜಿಸ್ಟರ್ ಮಾಡಿದಾಗಲೇ ಗಂಡು ಹೆಣ್ಣನ್ನು ಬಿಡಬೇಕಾಗಿ ಬಂದರೆ ಇಂತಿಷ್ಟು ಮೊತ್ತದ ಹಣವನ್ನು ಹೆಣ್ಣಿಗೆ ಕೊಡಬೇಕೆಂಬ ಕರಾರನ್ನು ಮಾಡುತ್ತಾರೆ. ಇದಕ್ಕೆ ಎಲ್ಲರ ಒಪ್ಪಿಗೆ ಮತ್ತು ಸಾಕ್ಷಿಯೂ ಇರುತ್ತದೆ. ಆದರೆ ಈ ಕರಾರನ್ನು ಪಾಲಿಸುವವರು ಕಡಿಮೆ. ಮದುವೆಯಂತಹ ಶುಭ ಸಮಾರಂಭದಲ್ಲಿ ಈ ಬಗೆಯ ಕರಾರನ್ನು ಮಾಡುವುದು ಎಷ್ಟರಮಟ್ಟಿಗೆ ಒಳ್ಳೆಯದೋ ಏನೋ ! ಆದರೆ ಪಿಂಜಾರರಲ್ಲಿ ಬಹುಪತ್ನಿತ್ವ ಇಲ್ಲವಾದ್ದರಿಂದ ಈ ಕರಾರನ್ನು ದುರುಪಯೋಗಪಡಿಸಿಕೊಳ್ಳುವಂತಹ ಸಂದರ್ಭ ಅವರಲ್ಲಿ ಬರುವುದಿಲ್ಲ. ಹೆಂಡತಿ ತೀರಿಹೋದರೆ ಅಥವಾ ಬಿಟ್ಟುಹೋದರೆ ಅಥವಾ ಮೊದಲ ಹೆಂಡತಿಗೆ ಮಕ್ಕಳಾಗದಿದ್ದರೆ ಗಂಡಸು ಮತ್ತೆ ಮದುವೆಯಾಗುತ್ತಾನೆ. ಆದರೆ ಇವೇ ಅವಕಾಶ ಹೆಣ್ಣಿಗಿಲ್ಲ. ಅಂಥ ಸಂದರ್ಭದಲ್ಲಿ ಹೆಣ್ಣು ತವರು ಮನೆಯಲ್ಲಿರುವುದೇ ಹೆಚ್ಚು. ಮತ್ತು ಕೆಲವು ಕಡೆ ಒಬ್ಬಳೇ ಸ್ವತಂತ್ರವಾಗಿ ಕೂಲಿ, ಗೀಲಿ ಮಾಡಿಕೊಂಡಿರುತ್ತಾಳೆ. ಹೆಣ್ಣಿನ ಪುನರ್ ವಿವಾಹಕ್ಕೆ ಸಮ್ಮತಿಯಿಲ್ಲ. ಗಂಡಸು ಹೆಂಡತಿ ಮಕ್ಕಳಿದ್ದೂ ಇನ್ನೊಬ್ಬಳನ್ನು ಮದುವೆಯಾಗುವುದನ್ನು ವಿರೋಧಿಸುತ್ತಾರೆ. ಇಂತಹ ಅಪರೂಪದ ಘಟನೆಗಳಲ್ಲಿ ಕಳ್ಳಸಂಸಾರ ನಡೆಸುವುದು ಅಲ್ಲಲ್ಲಿ ಇದ್ದೇಇದೆ. ಒಬ್ಬರಿಗಿಂತ ಹೆಚ್ಚು ಹೆಂಡತಿಯರನ್ನಿಟ್ಟುಕೊಂಡವರನ್ನು ಪಿಂಜಾರರು ತೀವ್ರ ತಾತ್ಸಾರದಿಂದ ಕಾಣುತ್ತಾರೆ. ಸ್ವಂತ ಅಕ್ಕ-ತಂಗಿಯರ ಮಗಳನ್ನು ಮತ್ತು ಚಿಕ್ಕಪ್ಪ-ದೊಡ್ಡಪ್ಪರ ಮಕ್ಕಳನ್ನು ಮದುವೆಯಾಗುವುದಿಲ್ಲ. ಹಿರಿಯರು ನಂಟಸ್ತನ ಮಾಡಿಕೊಂಡಿದ್ದ ಕಡೆಯೇ ಇವರ ಸಂಬಂಧ ಹೆಚ್ಚು. ಇವರ ಹಿರಿಯರಾದವರಿಗೆ ಬೀಗರೆನಿಸಿದವರೆಲ್ಲ, ಅಂದರೆ ಅವರ ಕಳ್ಳು-ಬಳ್ಳಿಯೆಲ್ಲ, ನಂಟರೇ ಆಗಿರುತ್ತಾರೆ. ಅದೇ ಸಲುವಳಿಯ ಜಾಡು ಹಿಡಿದು ಬೀಗತನ ಕುದುರಿಸುತ್ತಾರೆ. ಮುಸ್ಲಿಮರು ಇವರಿಗೆ ಹೆಣ್ಣು ಕೊಡುವುದಿಲ್ಲ. ಆದರೆ ಅಪರೂಪಕ್ಕೆ ಇವರ ಹೆಣ್ಣನ್ನು ಮದುವೆಯಾಗುತ್ತಾರೆ. ಪಿಂಜಾರರು ಮುಸ್ಲಿಂ ಸಂಬಂಧವನ್ನು ಇಷ್ಟಪಡುವುದಿಲ್ಲ. ಅವರಿಗೆ ಹೆಣ್ಣು ಕೊಡುವುದಿಲ್ಲ, ಅಲ್ಲಿಂದ ಹೆಣ್ಣನ್ನು ತರುವುದೂ ಇಲ್ಲ. ಈ ವಿಚಾರದಲ್ಲಿ ಮುಸ್ಲಿಮರು ಪಿಂಜಾರರನ್ನು ಜರೆದಷ್ಟೇ ತೀವ್ರವಾಗಿ ಪಿಂಜಾರರು ಮುಸ್ಲಿಮರನ್ನು ಜರಿಯುತ್ತಾರೆ. ಇದಕ್ಕೆ ಮುಸ್ಲಿಮರು ಮಾತನಾಡುವ ಉರ್ದು ಪಿಂಜಾರರಿಗೆ ಬಾರದಿರುವುದು, ಮುಸ್ಲಿಮರ ಕಂದಾಚಾರಗಳು ಪಿಂಜಾರರಿಗೆ ಇಷ್ಟವಾಗದಿರುವುದು ಕಾರಣವಾಗಿದೆ. ಇದೇ ಕಾರಣಕ್ಕೇ ಮುಸ್ಲಿಮರು ಕೂಡ ಪಿಂಜಾರರನ್ನು ಕಡೆಗಣಿಸುವುದು. ಇವತ್ತಿಗೂ ಇದೇ ಪರಿಸ್ಥಿತಿ ಮುಂದುವರಿದಿದೆ.

### ೪.೧.೭ ಸಾವು

ಭಾರತೀಯ ತತ್ವಶಾಸ್ತ್ರವು 'ಸೃಷ್ಟಿ'ಯ ಕುರಿತು ಮಾತನಾಡುವಾಗ ಸೃಷ್ಟಿ, ಸ್ಥಿತಿ, ಲಯ ಎಂಬ ಮೂರು ಅವಸ್ಥೆಗಳನ್ನು ಮುಖ್ಯವಾಗಿ ಹೇಳುತ್ತದೆ. ಈ ತತ್ವಕ್ಕೆ ಭೌತವಾದಿ ದೃಷ್ಟಿಕೋನದ ನೆಲೆಯು ಸಹಾಯವಿದ್ದಂತಿಲ್ಲ. ಇಡೀ 'ಬ್ರಹ್ಮಾಂಡ'ವನ್ನು (ಬ್ರಹ್ಮಾಂಡ ಎನ್ನುವ ಪದವೇ ಧಾರ್ಮಿಕ ಸ್ವರೂಪದ್ದಾಗಿದೆ) ವೈಜ್ಞಾನಿಕ ನೆಲೆಯಲ್ಲಿ ವಿಶ್ಲೇಷಿಸುವುದಕ್ಕಿಂತ ಸೃಷ್ಟಿಶಕ್ತಿಯ ಅಗಾಧ ಸ್ವರೂಪವನ್ನು ಧಾರ್ಮಿಕ ನೆಲೆಯಲ್ಲಿ ವ್ಯಾಖ್ಯಾನಿಸುವುದು ಭಾರತೀಯ ತತ್ವಶಾಸ್ತ್ರದ ಆಸಕ್ತಿಯಾಗಿದೆ. ಸೃಷ್ಟಿಗೆ ಅತಿಮಾನುಷ ಶಕ್ತಿಯ ಕಲ್ಪನೆ ಮತ್ತು ಸೃಷ್ಟಿಯ ಆವರಣದಲ್ಲಿ ಬರುವ ಎಲ್ಲ ಚರಾಚರ ವಸ್ತುಗಳೂ ಆ

ಶಕ್ತಿಯ ಅಗೋಚರ ನಿಯಂತ್ರಣದಲ್ಲಿ, ಅಧೀನದಲ್ಲಿ ಕ್ರೀಯಾಶೀಲವಾಗಿರುತ್ತದೆ. ಅಂತಿಮವಾಗಿ ಈ ಎಲ್ಲವುಗಳ ಪಯಣ ಕೂಡ ಆ ಅವ್ಯಕ್ತ ಶಕ್ತಿಯಲ್ಲಿ ಲೀನವಾಗುವುದರೊಂದಿಗೆ ಪರ್ಯಾವಸಾನವಾಗುತ್ತದೆ. ಆದೊಂದು ಬಗೆದು ಅಕ್ಷಯ ಶಕ್ತಿಯಂತೆ ವರ್ಣನೆಯಾಗಿದೆ. ಅಂದರೆ ಸೃಷ್ಟಿಯ ಒಳಗಿನ ಜೀವ ತನ್ನ ಸಾವಿನ ನಂತರ ಕೂಡ ಅದು ನಾಶವಾಗದೆ ಅದರ 'ಆತ್ಮ' ಪುನರ್ಜನ್ಮಕ್ಕಾಗಿ ಕಾಯುತ್ತದೆ. ಈ ಬಗೆಯ ತತ್ವಶಾಸ್ತ್ರದಲ್ಲಿ ದೇಹ, ರಕ್ತಮಾಂಸ, ನರಗಳು, ಹೃದಯ ಮೊದಲಾದ ಅವಯವಗಳು ಕಾಲಕಳೆದಂತೆ ಮುಪ್ಪಿಗೊಳಗಾಗುತ್ತವೆ, ಇವೆಲ್ಲ ಶಾಶ್ವತವಲ್ಲ, ಆದರೆ ಈ ದೇಹಕ್ಕೆ ಚೈತನ್ಯ ತುಂಬುವುದು ಈ ಯಾವ ಅವಯವಗಳೂ ಅಲ್ಲ. ಅದು ಆತ್ಮ. ಈ ಆತ್ಮದ ವಾಸಕ್ಕೆ ಇರುವ ಒಂದು 'ಗೂಡು' ಮಾತ್ರ ಈ ದೇಹ ಎಂದೇ ಈ ತತ್ವಶಾಸ್ತ್ರ ಪ್ರತಿಪಾದಿಸುತ್ತದೆ. ಇದರೊಂದಿಗೆ ಈ ದೇಹದ ಸುಖ ಕ್ಷಣಿಕ, ಅದರ ಪೋಷಣೆಗಾಗಿ ಮಾಡುವ ಎಲ್ಲ ಪ್ರಯತ್ನಗಳೂ ವ್ಯರ್ಥ ಎಂಬಂತಹ ನೆಲೆಯಲ್ಲಿಯೇ ಈ ವಾದ ಮುಂದುವರಿಯುತ್ತದೆ. ಕೊನೆಗೆ ಇದು ಎಂತಹ ಅತಿರೇಕಕ್ಕೆ ಹೋಗುತ್ತದೆ ಎಂದರೆ 'ಜಗನ್ಮಿಥ್ಯ ಬ್ರಹ್ಮ ಸತ್ಯ' ಎಂಬ ನೆಲೆಗೆ ಬಂದು ನಿಂತುಬಿಡುತ್ತದೆ. ವಾಸ್ತವವಾಗಿ ಈ ವಾದದ ಹಿನ್ನೆಲೆಯಲ್ಲಿ ಅತ್ಯಂತ ಕ್ರೂರವಾದ ಸಾಮಾಜಿಕ - ಆರ್ಥಿಕ ಹಿತಾಸಕ್ತಿಗಳಿರುವಂತೆ ತೋರುತ್ತದೆ. ಲೌಕಿಕ ಸುಖದ ನಿರಾಕರಣೆಯನ್ನು ತತ್ವವೆಂಬಂತೆ ಮಾಡಿ ಮುಗ್ಧರನ್ನೂ, ಅಸಹಾಯಕರನ್ನೂ ನಿರಂತರವಾಗಿ ಆ ಸುಖದಿಂದ ದೂರವಿಡುವ ಹುನ್ನಾರವಿದು. ಭಾರತೀಯ ಸಾಮಾಜಿಕ ಇತಿಹಾಸವನ್ನು ಗಮನಿಸಿದರೆ ಇದು ಅರ್ಥವಾಗುತ್ತದೆ. ಅಲ್ಲದೆ ಈ ಲೋಕದ ಬದುಕು ಕನಿಷ್ಠತಮವಾದುದು ಎಂದು ನಂಬಿಸುತ್ತಲೇ ಈ ಲೋಕದ ಎಲ್ಲ ಬಗೆಯ ಭೋಗವನ್ನು ತಾವೇ ಅನುಭವಿಸುವ ಪುರೋಹಿತಶಾಹಿಯ ಸ್ವಾರ್ಥ ಇಲ್ಲಿ ಅಡಗಿದೆ. ಹಾಗಾಗಿಯೇ ಇಲ್ಲಿ ಮನುಷ್ಯನಿಗೆ ಮಾತ್ರ ಈ ಅಲೌಕಿಕದ ಆಸೆ ತೋರಿಸಿ ಇದೇ ಮನುಷ್ಯನಿಗೂ ಪಶುಗಳಿಗೂ ಇರುವ ವ್ಯತ್ಯಾಸವೆಂದು ಹೇಳಲಾಗಿದೆ. ಆದ್ದರಿಂದ ಮನುಷ್ಯ ಸಾವಿರಾರು ವರ್ಷಗಳಿಂದಲೂ ಇಂಥ ಭಾವನಾತ್ಮಕ ನಿಲುವುಗಳ ಬೆನ್ನು ಹತ್ತಿ ಪರಲೋಕದ ಶಾಶ್ವತ ಸುಖ ನೆಮ್ಮದಿಗಾಗಿ ಇಲ್ಲಿನ, ಈ ಲೋಕದ ಅವಮಾನ, ಅಸಹಾಯಕತೆ, ಅಸಮಾನತೆಯನ್ನು ಉಪೇಕ್ಷಿಸುತ್ತಾ ಬಂದಿದ್ದಾನೆ. ಅನ್ನ, ಅಕ್ಷರ, ಆರೋಗ್ಯದಂತಹ ಮೂಲಭೂತ ಅವಶ್ಯಕತೆಗಳಿಗಿಂತಲೂ ದೇವರು, ಧರ್ಮ, ಸ್ವರ್ಗದಂತಹ ಅನವಶ್ಯಕ ಸಂಗತಿಗಳು ಮನುಷ್ಯನನ್ನು ತೀವ್ರವಾಗಿ ಭಾವುಕನನ್ನಾಗಿ ಮಾಡುತ್ತವೆ. ಇಂಡಿಯಾದಂತಹ ಸಾಮಾಜಿಕ ಪರಿಸರ ಸ್ವಾತಂತ್ರ್ಯ ಬಂದು ಅರ್ಧ ಶತಮಾನ ದಾಟಿದರೂ ಇಂಥ ವಿಚಾರಗಳಿಗೆ ಉದ್ರೇಕಗೊಳ್ಳುವುದು ನಿಂತಿಲ್ಲ. ಯಾಕೆಂದರೆ ಇಲ್ಲಿನ ಬುದ್ಧಿವಂತ ಪುರೋಹಿತಶಾಹಿ ಪರಂಪರೆ ಎಂದಿಗಿಂತ ಕಳೆದ ಐವತ್ತು ವರ್ಷಗಳಲ್ಲಿ ಹೆಚ್ಚು ಕ್ರಿಯಾಶೀಲವಾಗಿದೆ. ಇದರ ಹಿನ್ನೆಲೆ ಸ್ಪಷ್ಟ ಸ್ವಾತಂತ್ರ್ಯ ವ್ಯವಸ್ಥೆಯಲ್ಲಿ ತಮ್ಮ ಸ್ವಾರ್ಥ ಕೇಂದ್ರಿತ ತತ್ವಶಾಸ್ತ್ರವನ್ನು ಹೇರುವುದು ಕಷ್ಟವಾಗುತ್ತಿದೆ. ಆದ್ದರಿಂದ ಅದು ತನ್ನ ಸಾವಿರಾರು ವರ್ಷಗಳ ಸಮಾಜ ವಿರೋಧಿ ಮೌಲ್ಯಗಳನ್ನು ಹೆಚ್ಚು ಆಕ್ರಮಣಕಾರಿಯಾಗಿ ಪ್ರತಿಪಾದಿಸುತ್ತಿದೆ. ಈ ಪ್ರತಿಪಾದನೆಯ ಸಂದರ್ಭದಲ್ಲಿ ಅದು ಎಲ್ಲ ಬಗೆಯ ಮಾನವ ಸಹಜ ಗುಣಗಳನ್ನು ಅಲಕ್ಷಿಸಿ ಪೈಶಾಚಿಕವಾಗಿದೆ. ಅಲ್ಲದೆ ತನ್ನ ಯಾವುದೇ ಕ್ರಿಯೆಗಳನ್ನು ಮಾತೃಭೂಮಿಯ, ಸ್ವಧರ್ಮದ ರಕ್ಷಣೆಗಾಗಿ ಮಾಡುತ್ತಿರುವುದಾಗಿ ಹೇಳುತ್ತದೆ. ಮತ್ತು ಅನ್ಯದೇಶೀಯ, ಅನ್ಯಧರ್ಮೀಯರ ಸಾಮೂಹಿಕ ಹತ್ಯೆಗಾಗಿ ಕರೆಕೊಡುತ್ತಾ ಅದಕ್ಕಾಗಿ

ಪರಿತಪಿಸುವುದು ಹೇಡಿತನ ಎಂದೂ ಸಾರುತ್ತದೆ. ಈ ಅಬ್ಬರದಲ್ಲಿ ಸಾಮಾನ್ಯ ಮನುಷ್ಯನ ಸಮಸ್ಯೆಗಳು ಮಹತ್ವ ಕಳೆದುಕೊಂಡಿವೆ. ಇದು ಇಂಡಿಯಾದ ಸಾಮಾಜಿಕ ಇತಿಹಾಸದುದ್ದಕ್ಕೂ ನಿರಂತರವಾಗಿ ನಡೆದುಕೊಂಡು ಬಂದ ಪರಿಣಾಮವಾಗಿ ಇಲ್ಲಿನ ಅನೇಕ ಜನಾಂಗಗಳು ತಮ್ಮ ಬದುಕಿನ ಅತಿಮುಖ್ಯ ಘಟನೆಗಳನ್ನು ತಮ್ಮ ಧಾರ್ಮಿಕ ಆಚರಣೆಯ ಭಾಗವಾಗಿ ಪಾಲಿಸಿಕೊಂಡು ಬಂದಿವೆ. ಹುಟ್ಟು, ಮುಂಜಿ, ಮದುವೆಯಂತಹ ಸಂಭ್ರಮದ ಕ್ಷಣಗಳನ್ನು ಧರ್ಮದ ಆವರಣದಲ್ಲಿ ಮತೀಯ ಆಚರಣೆಯೆಂಬಂತೆ ಅನುಕರಿಸಿಕೊಂಡು ಬಂದ ಜನಾಂಗಗಳು ಸಾವಿನ ವಿಚಾರದಲ್ಲಿ ಅವೆಲ್ಲವುಗಳಿಗಿಂತ ತೀವ್ರ ನಿಷ್ಠೆಯನ್ನು ತೋರಿವೆ. ಹಾಗೆ ನೋಡಿದರೆ ಹುಟ್ಟು, ಮದುವೆಯಂತಹ ಘಟನೆಗಳು ಲೌಕಿಕ ಬದುಕಿನ ಸುಖ-ಭೋಗದ ನಿಜವಾದ ಮಜಲುಗಳು ಎಂಬಂತೆ ಆಚರಿಸಲ್ಪಡುತ್ತವೆ. ಆದರೆ ಅಷ್ಟೇ ಸಹಜ ಘಟನೆಯಾದ ಸಾವು ಮನುಷ್ಯನಲ್ಲಿ ಎಂದೂ ಇಲ್ಲದ ಪಾರಮಾರ್ಥಿಕ ಆಸಕ್ತಿಯನ್ನು ಹುಟ್ಟಿಸಿಬಿಡುತ್ತದೆ. ಈ ಕಾರಣದಿಂದಲೇ ಸಾವಿಗೆ ಮನುಷ್ಯ ಹೆದರುತ್ತಾನೆ. ಮತ್ತೆ ಮನುಷ್ಯನಾಗಿ ಹುಟ್ಟಲು ಅಪೇಕ್ಷಿಸುತ್ತಾನೆ. ಈ ಆಸೆಯ ಈಡೇರಿಕೆಗಾಗಿ ಪ್ರಾರ್ಥಿಸುತ್ತಾನೆ. ಸತ್ತವನ ಆತ್ಮಶಾಂತಿಗಾಗಿ ಆತನ ಮಕ್ಕಳು, ಮರಿಗಳು, ಹಿತವರು ಎಲ್ಲ ಸೇರಿ ಈ ತಿಥಿ, ಸಮಾರಾಧನೆಯಂತಹ ಕಾರ್ಯಕ್ರಮಗಳ ಮೂಲಕ ಹಾರೈಸುತ್ತಾರೆ .ಇದು ಬಹುಪಾಲು ಎಲ್ಲ ಜನಾಂಗಗಳವರ ಪಾಲಿಗೆ ಅತ್ಯಂತ ಶ್ರದ್ಧೆಯ ಸಂಪ್ರದಾಯವಾಗಿ ಉಳಿದುಕೊಂಡು ಬಂದಿದೆ.

ಪಿಂಜಾರರಲ್ಲಿ 'ಸಾವಿನ' ಆಚರಣೆ ಕೂಡ ಇಂಥ ಸಂಪ್ರದಾಯವಾಗಿದ್ದು ಇಸ್ಲಾಂನ ಅನುಸಾರವಾಗಿ ಇದು ನಡೆಯುತ್ತದೆ. ಉಳಿದೆಲ್ಲ ಸಂಪ್ರದಾಯಗಳಂತೆ ಇಲ್ಲಿಯೂ ಪಿಂಜಾರರು ಇಸ್ಲಾಂ ಧಾರ್ಮಿಕ ಅರಿವಿರುವವರ ಮಾರ್ಗದರ್ಶನವನ್ನು ಪಡೆದೇ ಮುಲ್ಲಾನ ಸಹಾಯದೊಂದಿಗೆ ಸಾವಿಗೆ ಸಂಬಂಧಿಸಿದ ಕ್ರಿಯೆಗಳನ್ನು ಪೂರೈಸುತ್ತಾರೆ. ಪಿಂಜಾರರಲ್ಲಿನ ಈ ಆಚರಣೆಗೆ ಸಂಬಂಧಪಟ್ಟ ವಿವರಗಳನ್ನು ಇಲ್ಲಿ ದಾಖಲಿಸಲಾಗಿದೆ. ಪಿಂಜಾರರು ಸಾವಿನ ಸಂದರ್ಭವನ್ನು ಅತ್ಯಂತ ದುಃಖಮಯವಾಗಿ ಅನುಭವಿಸುತ್ತಾರೆ. ಸತ್ತ ತಕ್ಷಣ ಹತ್ತಿರದ ಊರುಗಳಲ್ಲಿರುವ ಸಂಬಂಧಿಕರಿಗೆ ಸುದ್ದಿ ಕಳಿಸುತ್ತಾರೆ. ಪಿಂಜಾರರ ಸಂಬಂಧಿಕರು ಭಾರಿ ದೂರವೂ ಇರುವುದಿಲ್ಲ. ಸಂಬಂಧಿಕರು, ಆಪ್ತರು, ಮನೆಯವರು ಗೋಳಾಡಿ ಎದೆ ಬಡಿದುಕೊಂಡು, ಸತ್ತವರನ್ನು ಕೂಗಿ ಕೂಗಿ, ಅವರು ಬದುಕಿದ್ದುದನ್ನು ನೆನೆದು ಹಾಡಿ ಹೊಗಳಿ ಅಳುತ್ತಾರೆ. ಕೆಲವರು ಅವರನ್ನು ಸಮಾಧಾನಿಸುತ್ತಾರೆ. ಇದು ನಡೆಯುತ್ತಿದ್ದಂತೆ ಹಿರಿಯರಾದವರು ಶವಸಂಸ್ಕಾರಕ್ಕೆ ಆಗಬೇಕಾದ ಏರ್ಪಾಡುಗಳು ವ್ಯವಸ್ಥಿತವಾಗಿ ಆಗುವಂತೆ ಜವಾಬ್ದಾರಿ ವಹಿಸುತ್ತಾರೆ. ಹತ್ತಿರದ ಪಟ್ಟಣಕ್ಕೆ ಹೋಗಿ ಶವಕ್ಕೆ ಮುಚ್ಚುವ ಬಟ್ಟೆಯನ್ನು ತರುತ್ತಾರೆ. ಈ ಬಟ್ಟೆಗೆ ಅಲವಾನ್ ಬಟ್ಟೆ ಎನ್ನುತ್ತಾರೆ. ಹೆಣ್ಣು ಸತ್ತರೆ ಹನ್ನೆರಡು ಗಜ, ಗಂಡಸಾದರೆ ಹದಿನೈದು ಗಜ ಬಟ್ಟೆಯನ್ನು ತರುತ್ತಾರೆ. ನೆಲಸಾರಿಸಿ ಶವವನ್ನು ಅಂಗಾತ ಮಲಗಿಸಿರುತ್ತಾರೆ. ಶವದ ಸುತ್ತ ಕರ್ಪೂರ ಉದುರಿಸಿ, ತಲೆಯ ಹಿಂಭಾಗ ಊದಿನಕಡ್ಡಿ ಹಚ್ಚಿರುತ್ತಾರೆ. ಕಿವಿಗೆ ಮೂಗಿನ ಸೊಳ್ಳೆಗಳಿಗೆ ಹತ್ತಿ ಅರಳೆ ತುಂಬಿ ಕಣ್ಣುಮುಚ್ಚಿ, ಕೈಕಾಲು ಸೆಟೆದುಕೊಳ್ಳದಂತೆ ಉದ್ದಕ್ಕೆ ಚಾಚಿಕೊಳ್ಳುವಂತೆ ಮಾಡಿ, ಕೈಬೆರಳುಗಳನ್ನು ಮಡಿಸಿರುತ್ತಾರೆ. ಶವದ ಹತ್ತಿರ ಸಂಬಂಧಿಕರ, ಮನೆಯ ಆಪ್ತ ಹೆಂಗಸರು ಅಳುತ್ತಿರುತ್ತಾರೆ. ಮನೆಯ ಹೊರಗಡೆ ಬಾಗಿಲ ಪಕ್ಕದಲ್ಲಿ ಶವದ ಉದ್ದದಷ್ಟು ಕಾಲುವೆಯ ಗುಂಡಿತೋಡಿ ಅದರ ಮೇಲೆ ಹಲಗೆಯನ್ನಿಡುತ್ತಾರೆ. ಹಲಗೆಯ ಮೇಲೆ ಹೊಸಬಟ್ಟೆಯನ್ನು

ಹಾಸಿರುತ್ತಾರೆ. ಹೆಣದ ಸ್ನಾನಕ್ಕಾಗಿ ಸಿದ್ಧತೆ ನಡೆಸುತ್ತಾರೆ. ಚೆನ್ನಾಗಿ ಕಾಯಿಸಿದ ನೀರಲ್ಲಿ ಕಿತ್ತಳೆ, ದಾಳಿಂಬೆ, ನಿಂಬೆ ಸೊಪ್ಪನ್ನು ಹಾಕುತ್ತಾರೆ. ಅಂಟ್ವಾಳದ ಕಾಯನ್ನು ಪುಡಿ ಮಾಡಿ ನೀರಿನಲ್ಲಿ ಉದುರಿಸುತ್ತಾರೆ. ಸೀಗೆಪುಡಿ, ಸೋಪು ಎಲ್ಲ ಸಿದ್ದ ಮಾಡಿಕೊಂಡು ಮುಲ್ಲಾನನ್ನು ಕರೆದುಕೊಂಡು ಬರುತ್ತಾರೆ. ಹೆಣವನ್ನು ಸಾಗಿಸಲು ಬೇಕಾದ ಜನಾಜ (ಡೋಲಿ ಅಥವಾ ಸಿದಿಗೆ ಎಂತಲೂ ಕರೆಯುತ್ತಾರೆ) ಮುಲ್ಲಾನ ಉಸ್ತುವಾರಿಯಲ್ಲಿರುತ್ತದೆ. ಅದನ್ನು ಹೊತ್ತುಕೊಂಡು ಬರುತ್ತಾರೆ. ಮುಲ್ಲಾನ ಮಾರ್ಗದರ್ಶನದಂತೆ ಹೆಣದ ಮೈ ತೊಳೆಯುತ್ತಾರೆ. ಸತ್ತವರು ಗಂಡುಸಾದರೆ ಗಂಡಸರು, ಹೆಣ್ಣಾದರೆ ಹೆಂಗಸರು ಈ ಕಾರ್ಯನಿರ್ವಹಿಸುತ್ತಾರೆ. ಗಂಡಸು ಸತ್ತಿದ್ದರೆ, ಬಿಳಿಬಟ್ಟೆ, ಹೆಣ್ಣು ಸತ್ತಿದ್ದರೆ ಕೆಂಪು ಬಟ್ಟೆ ತಂದಿರಲಾಗುತ್ತದೆ. ಸೊಂಟದಿಂದ ಕಾಲಿನ ಆಚೆಯವರೆಗೆ, ಸೊಂಟದಿಂದ ತಲೆಯ ಆಚೆತುದಿಯವರೆಗೆ ಬಟ್ಟೆಯನ್ನು ಸುತ್ತಿ ಕಟ್ಟುತ್ತಾರೆ. ತಲೆಯ ಸುತ್ತಲೂ ಬಟ್ಟೆ ಸುತ್ತಿ ಕುತ್ತಿಗೆಯ (ಗದ್ದದಲ್ಲಿ) ಕೆಳಗೆ ಕಟ್ಟುತ್ತಾರೆ. ಮತ್ತೆ ಹೆಣದ ಕೆಳಗೊಂದು ಮೇಲೊಂದು ಬಟ್ಟೆ ಹಾಕಿ ಕಾಲಿನ ಕೆಳಗೆ ಜುಟ್ಟಿನಾಕಾರದಲ್ಲಿ ಕಟ್ಟುತ್ತಾರೆ. ಅದೇ ಬಟ್ಟೆಯನ್ನು ಕುತ್ತಿಗೆಯವರೆಗೂ ಕಟ್ಟಿ ಮುಖ ಮಾತ್ರ ಕಾಣುವಂತೆ ಬಿಟ್ಟಿರುತ್ತಾರೆ. ಬಂದವರು, ಮುಖದರ್ಶನ ಮಾಡಲೆಂಬುದೇ ಆ ವ್ಯವಸ್ಥೆ.

ಮೇಲಿನದೆಲ್ಲ ನಡೆಯುತ್ತಿರುವಾಗಲೇ ಕೆಲವು ತುಂಡು ಹುಡುಗರನ್ನು ಹಾರೆ, ಚಲ್ಕೆ, ಪುಟ್ಟಿಯೊಂದಿಗೆ ಗುದ್ದು ತೆಗೆಯಲು ಖಬರಸ್ತಾನಕ್ಕೆ ಗೋರಿಗಳ ಹತ್ತಿರ ಕಳಿಸಿರುತ್ತಾರೆ. ಹಿರಿಯರೊಬ್ಬರ ಮಾರ್ಗದರ್ಶನದಂತೆ ಹೆಣವನ್ನು ಆಳದಲ್ಲಿಡಲು ಬೇಕಾದ ಉದ್ದ, ಅಗಲವನ್ನು ಊಹಿಸಿ ಗುದ್ದು ಕೊಡುತ್ತಾರೆ. ಪಿಂಜಾರರು ಉತ್ತರ ದಕ್ಷಿಣಕ್ಕೆ ಉದ್ದ, ಪೂರ್ವ ಪಶ್ಚಿಮಕ್ಕೆ ಅಗಲವಿರುವ ಹಾಗೆ ಗುದ್ದು ತೋಡಿ ಹೆಣ ಬರುವವರೆಗೂ ಕಾಯುತ್ತಾರೆ. ಈ ಗುದ್ದು ತೋಡುವ ಕೆಲಸದಲ್ಲಿ ಅವರಿವರೆನ್ನದೆ ಆಪ್ತರಾಗಿರುವ ಯಾವುದೇ ಜನಾಂಗದ ತಿಗುಡಾಗಿರುವ ಹುಡುಗರಿರುತ್ತಾರೆ.

ಸತ್ತವರಿಗೆ ಸಂಬಂಧಪಟ್ಟವರೆಲ್ಲರೂ ಬರುವವರೆಗೆ ಹೆಣವನ್ನು ಡೋಲಿಯಲ್ಲಿಡದೆ ಮನೆಯ ಹೊರಗೆ ಚಾಪೆ ಹಾಸಿ ಮಲಗಿಸಿರುತ್ತಾರೆ. ಅಪರೂಪಕ್ಕೆ ದೂರದೂರಿನವರು ತಕ್ಷಣ ಬರಲಾಗದಿದ್ದರೆ, ಅವರು ಬರಲೇಬೇಕೆಂಬುದಿದ್ದರೆ ಅವರಿಗಾಗಿ ಕಾಯುತ್ತಾರೆ. ಹೆಣವನ್ನು ಮುಂದಿಟ್ಟುಕೊಂಡು ರಾತ್ರಿ, ಕತೆ, ಪುರಾಣ ಹೇಳಿಸುವುದು ಮಾಡುತ್ತಾರೆ. ಕೆಲವು ಕಡೆ ಕುರಾನ್ ಓದಿಸುವುದಾದರೆ ಕನ್ನಡದಲ್ಲಿ ಅದರ ಅರ್ಥವನ್ನು ಹೇಳುವವರೊಬ್ಬರಿರುತ್ತಾರೆ. ಕೆಲವರು ಹೆಣವನ್ನು ಹೆಚ್ಚು ಹೊತ್ತು ಕಾಯಿಸುವುದಿಲ್ಲ. ಯಾರೇ ಬರಬೇಕಿದ್ದರೂ ತಡೆಯದೆ, ಹೆಣ ಇದ್ದಷ್ಟು ದುಃಖ ಹೆಚ್ಚಾಗುತ್ತದೆಂದು ಹೊತ್ತುಕೊಂಡು ಹೋಗಿ ದಫನ್ ಮಾಡುತ್ತಾರೆ. ಆದರೆ ಇದು ಅಪರೂಪವಷ್ಟೇ.

ಶವವನ್ನು ಇನ್ನೇನು ಗೋರಿಯ ಕಡೆ ತೆಗೆದುಕೊಂಡು ಹೋಗಬೇಕೆನ್ನುವಾಗ ಹೆಂಗಸರು ಅಬ್ಬರಿಸಿಕೊಂಡು ಅಳುತ್ತಾರೆ. ಅವರನ್ನೆಲ್ಲ ಗಟ್ಟಿಯಾಗಿ ಹಿಡಿದುಕೊಂಡು ಗಂಡಸರು ಶವವನ್ನು ಡೋಲಿಗೆ ಹಾಕುತ್ತಾರೆ. ಡೋಲಿಯನ್ನು ರಿಪೀಸಿನಂತಹ ಕಟ್ಟಿಗೆಯ ನುಣುಪಾದ ತುಂಡುಗಳನ್ನು ಅಡ್ಡ ಉದ್ದವಾಗಿಟ್ಟು ಮಾಡಿರುತ್ತಾರೆ. ಒಂದು ಶವವನ್ನು ಒಯ್ಯಬಹುದಾದಷ್ಟು ಅಳತೆಯದಾಗಿರುತ್ತದೆ. ಮೇಲ್ಭಾಗದ

ಮುಚ್ಚಳದ ರೀತಿಯ ಕದವನ್ನು ಕೂಡ ಅಡ್ಡ ಉದ್ದ ಪಟ್ಟಿಗಳಿಂದ ತಯಾರಿಸುತ್ತಾರೆ. ಹೆಣವನ್ನು ಕಡೆಯ ಬಾರಿಗೆ ನೋಡುವವರಿಗೆಲ್ಲ ಅವಕಾಶ ಕೊಟ್ಟು ಕುತ್ತಿಗೆಯವರೆಗೂ ಕಟ್ಟಿ ಉಳಿದಿದ್ದ ಬಟ್ಟೆಯ ಭಾಗವನ್ನು ಮುಖದ ತುಂಬ ತಲೆಯ ಹಿಂದಿನವರೆಗೂ ಮುಚ್ಚಿ ಜುಟ್ಟಿನಂತೆ ಹಿಂದಕ್ಕೆ ಕಟ್ಟುತ್ತಾರೆ. ಮುಲ್ಲಾ ಹೇಳಿದಂತೆ ಹಿರಿಯರಾದವರು ಕಟ್ಟುತ್ತಾರೆ. ಕಡೆಯ ಬಾರಿ ಮುಖದರ್ಶನ ಮಾಡುವಾಗ ಸಾಮಾನ್ಯವಾಗಿ ಮುಲ್ಲಾ ತಟ್ಟೆಯೊಂದನ್ನು ಹಿಡಿದು ಜನರ ಹತ್ತಿರ ಒಯ್ದಂತೆ ಜನರು ಚಿಲ್ಲರೆ ನಾಣ್ಯಗಳನ್ನು ಹಾಕುತ್ತಾರೆ. ಮುಲ್ಲಾ ಹೇಳಿದ ನಂತರ ನಾಲ್ಕು ಜನ ಡೋಲಿಯ ಒಳಭಾಗದಲ್ಲಿ ಶವವನ್ನು ಇಟ್ಟು ಮೇಲ್ಭಾಗದ ಮುಚ್ಚಳವನ್ನು ಮುಚ್ಚಿ ಹೊತ್ತುಕೊಳ್ಳುತ್ತಾರೆ. ಹೊತ್ತುಕೊಳ್ಳುತ್ತಿದ್ದಂತೆ ಹೆಣ್ಣುಮಕ್ಕಳ ಅಳು ಜೋರಾಗುತ್ತದೆ. ಗಂಡಸರು ಡೋಲಿಯ ಹಿಂದೆ ಹೊರಡುತ್ತಾರೆ. ಮುಂದೆ ಮುಂದೆ ಮುಲ್ಲಾ ಹೋದಂತೆ ಆತನ ಹಿಂದೆ ಡೋಲಿ, ನಂತರ ಜನರು ಅತ್ಯಂತ ಮೌನದಿಂದ ನಡೆದು ಹೋಗುತ್ತಾರೆ. ಹೋಗುವಾಗ ಡೋಲಿಯನ್ನು ಆರಂಭದಲ್ಲಿ ಮನೆಯ ಗಂಡಸರು, ನಂತರ ಆಪ್ತರಾದವರು ಹೊರುತ್ತಾರೆ. ಗೋರಿ ಹತ್ತಿರ ಬಂದ ನಂತರ ಡೋಲಿ ಇಳಿಸುತ್ತಾರೆ. ಮುಲ್ಲಾ ಪಶ್ಚಿಮಕ್ಕೆ ತಿರುಗಿ ನಮಾಜು ಮಾಡುತ್ತಾನೆ. ಮುಖ್ಯರಾದ ಕೆಲವರೂ ನಮಾಜು ಮಾಡುತ್ತಾರೆ. ಗೋರಿಯ ಹತ್ತಿರ ನೋಡುವವರಿದ್ದರೆ ಮತ್ತೊಮ್ಮೆ ಅಂತಿಮವಾಗಿ ಮುಖ ನೋಡಲು ಅವಕಾಶ ಮಾಡಿಕೊಡಲಾಗುತ್ತದೆ. ಶವವನ್ನು ಎತ್ತಿ ನಿಧಾನವಾಗಿ ಗೋರಿಯ ಒಳಗೆ ಉತ್ತರಕ್ಕೆ ತಲೆಯಿರುವಂತೆ, ಆದರೆ ಮುಖ ಪಶ್ಚಿಮಕ್ಕೆ ತಿರುಗಿರುವಂತೆ ಗೋಡಿಯಾಗಿಡುತ್ತಾರೆ. ಶವದ ಬಲಭಾಗ ಭೂಮಿಯ ಕೆಳಭಾಗಕ್ಕೆ ಹೊಂದಿಕೊಂಡಂತಿದ್ದು ಎಡಭಾಗವನ್ನು ಮೇಲ್ಮುಖವಾಗಿರಿಸುತ್ತಾರೆ. ನಂತರ ಬಂದಿದ್ದವರಿಗೆಲ್ಲ ಮೂರು ಮೂರು ಹಿಡಿ ಮಣ್ಣನ್ನು ಕೊಡಲು ಮುಲ್ಲಾ ಹೇಳುತ್ತಾನೆ. ಎಲ್ಲರೂ ಮೂರು ಹಿಡಿ ಮಣ್ಣನ್ನು ಹಾಕುತ್ತಾರೆ. ನಂತರ ಚಲ್ಕೆಯಿಂದ ಮಣ್ಣನ್ನೆಳೆದು ಮುಚ್ಚಲಾಗುತ್ತದೆ. ಮುಚ್ಚಿದ ಮೇಲೆ ಸುತ್ತಲೂ ಸಣ್ಣಪುಟ್ಟ ಕಲ್ಲುಗಳನ್ನು ನೆಟ್ಟು ಮೇಲ್ಭಾಗದಲ್ಲಿ ಹೂವುಗಳನ್ನು ಹೊದಿಸಲಾಗುತ್ತದೆ. ಎಲ್ಲರೂ ಹಿಂತಿರುಗುವಾಗ ಸತ್ತವರ ಬಗ್ಗೆ ಮಾತಾಡಿಕೊಳ್ಳುತ್ತಾ ಅವರವರ ಕೆಲಸಗಳನ್ನು ನೋಡಿಕೊಳ್ಳಲು ಹೊರಡುತ್ತಾರೆ. ಡೋಲಿಯನ್ನು ಮುಲ್ಲಾನ ಬಳಿಕೊಟ್ಟು ಆತನಿಗೆ ವಂದಿಸಿ ಬರುತ್ತಾರೆ.

ಪಿಂಜಾರರಲ್ಲಿ ಹೆಂಗಸರು ಮತ್ತು ಮಕ್ಕಳನ್ನು ಶವದ ಹಿಂದೆ ಮತ್ತು ಗೋರಿಯ ಹತ್ತಿರ ಕಳಿಸುವುದಿಲ್ಲ. ಪಿಂಜಾರರ ಮತ್ತು ಮುಸ್ಲಿಮರ ಗೋರಿಗಳು ಒಟ್ಟಾಗಿರುತ್ತವೆ. ಇತ್ತ ಗಂಡಸರೆಲ್ಲ ಗೋರಿಯ ಬಳಿ ಬಂದಾಗ ಸತ್ತವನು ಗಂಡನಾಗಿದ್ದರೆ ಹೆಣ್ಣಿಗೆ ಬಳೆ ಒಡೆದು ಕರಿಮಣಿ ಅಥವಾ ತಾಳಿ ತೆಗೆಸಿ ಶವವನ್ನು ಮೈತೊಳೆದ ಜಾಗದಲ್ಲಿ ಹಾಕಿ ಆ ಗುಂಡಿಯನ್ನು ಮುಚ್ಚುತ್ತಾರೆ. ಹೆಣ್ಣಿಗೂ ಸ್ನಾನ ಮಾಡಿಸಿ ನಿತ್ಯ ಉಡುವಂತಹ ಉಡುಪನ್ನೇ ಕೊಡುತ್ತಾರೆ. ಶವವನ್ನು ದಫನ್ ಮಾಡಿದ ಒಂದೆರಡು ದಿನ ಸತ್ತವರ ಮನೆಯಲ್ಲಿ ಅರಣ್ಯಮೌನವಿರುತ್ತದೆ. ಒಲೆ ಹಚ್ಚಿರುವುದಿಲ್ಲ. ಅಕ್ಕಪಕ್ಕದವರು, ಆಪ್ತರು, ಸಂಬಂಧಿಕರೆಲ್ಲ ಊಟ ತಂದುಕೊಟ್ಟು ಸಂತೈಸಿ ಉಣ್ಣುವಂತೆ ಜುಲುಮೆ ಮಾಡುತ್ತಾರೆ. ಸತ್ತವರ ಗುಣಗಾನ ನಡೆಯುತ್ತದೆ. ಸತ್ತನಂತರದ ದಿನ ಕರ್ಮಗಳನ್ನು ಮಾಡುವ ವ್ಯವಸ್ಥೆಗೆ ಗಂಡಸರು ಓಡಾಡುತ್ತಾರೆ (ಪಿಂಜಾರರ ಶವಸಂಸ್ಕಾರಕ್ಕೆ ಹೋದವರೆಲ್ಲರೂ ಸತ್ತವರ ಮನೆಗೇ ಬಂದು ಕೈಕಾಲು ಮುಖ ತೊಳೆದುಕೊಂಡು ಹೋಗುವುದು ರೂಢಿ) ವಿಶೇಷವೆಂದರೆ ಶವ ಸಂಸ್ಕಾರಕ್ಕೆ ಊರಿನಲ್ಲಿರುವ ಪ್ರತಿ ಜನಾಂಗದವರೂ

ಸಾಮಾನ್ಯವಾಗಿ ಹೋಗುತ್ತಾರೆ. ಪಿಂಜಾರರ ಬದುಕಿನ ಅತಿಮಹತ್ವದ ಸಂದರ್ಭಗಳನ್ನೂ ಒಳಗೊಂಡಂತೆ ಸಾಮಾನ್ಯ ಸಂದರ್ಭಗಳಲ್ಲೆಲ್ಲ ಎಲ್ಲ ಜನಾಂಗದವರ ಒಡನಾಟ ಮಾತ್ರ ಅವರ ಜಾತ್ಯಾತೀತ ಸಂಸ್ಕೃತಿಯ ದ್ಯೋತಕವಾಗಿದೆ. ಪಿಂಜಾರರ ಪೂರ್ವಿಕರು ಮೊದಲು ಸಿದಿಗೆಯನ್ನೂ ತಾವೇ, ಉದ್ದನೆಯ ಎರಡು ಬಿದಿರುಗಳನ್ನಿಟ್ಟು ಅಡ್ಡವಾಗಿ ಅಡಿಕೆಪಟ್ಟಿ ಬಿಗಿದು ತಯಾರು ಮಾಡಿ ಶವಸಂಸ್ಕಾರಕ್ಕೆ ತೆಗೆದುಕೊಂಡು ಹೋಗುತ್ತಿದ್ದರೆಂದೂ ತಿಳಿದು ಬರುವುದರಿಂದ ಪಿಂಜಾರರ ಜೀವನಸಂಸ್ಕೃತಿಯ ಹಿನ್ನೆಲೆ ಸ್ಪಷ್ಟವಾಗುತ್ತದೆ.

ಪಿಂಜಾರರಲ್ಲಿ ವ್ಯಕ್ತಿ ಸತ್ತ ನಂತರದ ತಿಥಿ ಕರ್ಮಗಳು ವಿಶಿಷ್ಟವಾದವುಗಳು. ಸತ್ತ ಮೂರನೆಯ ದಿನದಲ್ಲಿ ಚೀಲಗಟ್ಟಲೆ ಮಂಡಕ್ಕಿ ತಂದು ಅದರಲ್ಲಿ ಬೆಲ್ಲ, ಕೊಬ್ಬರಿ ಚೂರುಗಳು, ಉತ್ತುತ್ತಿ, ಹಣ್ಣು, ಕಿತ್ತಳೆತೊಳೆ, ಬಿಸ್ಕತ್ತು, ಕಡ್ಲೆ, ಪೆಪ್ಪರಮೆಂಟು ಬೆರೆಸುತ್ತಾರೆ. ಊರಿನ ಜನರಿಗೆಲ್ಲ ಗೋರಿಯ ಹತ್ತಿರ ಬರಲು ಹೇಳುತ್ತಾರೆ. ಹೆಣ್ಣುಮಕ್ಕಳೆಲ್ಲ ಸತ್ತವರ ಮನೆಯ ಹತ್ತಿರವೇ ಸೇರುತ್ತಾರೆ. ಹೆಣ್ಣುಮಕ್ಕಳಿಗೆಂದು ದೊಡ್ಡ ಗೂಡೆಯಂತಹ ಪುಟ್ಟಿಯಲ್ಲಿ ಸಿಹಿ ತಿನಿಸು ಬೆರೆಸಿದ ಮಂಡಕ್ಕಿಯನ್ನಿಟ್ಟು ಉಳಿದದ್ದನ್ನೆಲ್ಲ ಜಲ್ಲೆಯಲ್ಲಿ ತುಂಬಿಕೊಂಡು ಗೋರಿ ಹತ್ತಿರ ತರುತ್ತಾರೆ. ಮುಲ್ಲಾನನ್ನು ಅಲ್ಲಿಗೆ ಕರೆಸಲಾಗುತ್ತದೆ. ಮುಲ್ಲಾ 'ಫಾತೆಹ' ಮಾಡಿದ ಮೇಲೆ ಮಂಡಕ್ಕಿಯನ್ನು ಎಲ್ಲರಿಗೆ ಹಂಚುತ್ತಾರೆ. ಇಲ್ಲಿ ವಿಶೇಷವಾಗಿ ಎಲ್ಲ ಜನಾಂಗದವರು, ಮಕ್ಕಳು ಮರಿಸಮೇತ ಸೇರಿರುತ್ತಾರೆ. ಈ ಕಾರ್ಯ ಬೆಳಿಗ್ಗೆ ನಡೆಯುತ್ತದೆ. ಮನೆಯಲ್ಲಿದ್ದ ಹೆಣ್ಣುಮಕ್ಕಳೂ ಮಂಡಕ್ಕಿ ತಿನ್ನುತ್ತಾರೆ. ಗೋರಿ ಹತ್ತಿರ ಹಂಚಿದ ಮಂಡಕ್ಕಿಯನ್ನು ಅಲ್ಲೇ ತಿಂದು ಬರುತ್ತಾರೆ.

ಸಾವಿನ ನಂತರದ ಒಂಭತ್ತನೆಯ ದಿನ ಪಿಂಜಾರರು ತಿಥಿ ಆಚರಿಸುತ್ತಾರೆ. ಇದನ್ನು ಅತ್ಯಂತ ಖರ್ಚಿನಿಂದ, ಶ್ರದ್ಧೆ ಜವಾಬ್ದಾರಿಯಿಂದ ನಿರ್ವಹಿಸಲಾಗುತ್ತದೆ. ಒಂಭತ್ತನೆಯ ದಿನದ ಬೆಳಿಗ್ಗೆಯೇ ಮುಲ್ಲಾನನ್ನು ಕರೆಸಿ ಎಲ್ಲರಿಗೂ 'ದಾವತ್ತಿ'ಗೆ ಹೇಳಲು ತಿಳಿಸುತ್ತಾರೆ. ಅದರಂತೆ ಮುಲ್ಲಾ ಪ್ರತಿಯೊಬ್ಬ ಪಿಂಜಾರ, ಮುಸ್ಲಿಮರ ಮನೆಗೂ ಹೋಗಿ 'ದಾವತ್ತು' ಹೇಳಿ ಬರುತ್ತಾನೆ. ಆವತ್ತಿನ ಅಡುಗೆಗಾಗಿ ಕುರಿಯನ್ನು ಹೊಸದಾಗಿ ಕೊಂಡು ತಂದಿರುತ್ತಾರೆ. ಈ ಕುರಿ ತಂದು ಕೊಯ್ದು ಅಡುಗೆ ಮಾಡಿಸುವುದು ಅವರವರ ಶಕ್ತ್ಯಾನುಸಾರ ನಡೆಯುತ್ತದೆ. ಸ್ಥಿತಿವಂತರು ಮೂರು-ನಾಲ್ಕು ಕುರಿ ಕೊಯ್ಯುಸ್ತಾರೆ. ಬಡವರು ಸಾಲ ಮಾಡಿಯಾದರೂ ಕುರಿ ತರುತ್ತಾರೆ. ಆವತ್ತು ಬೆಳಿಗ್ಗೆಯಿಂದಲೇ ಇದಕ್ಕಾಗಿ ಅವಸರದ ಓಡಾಟ ನಡೆಯುತ್ತದೆ. ಕಟ್ಟಿಗೆ ಒಡೆಸುತ್ತಾರೆ. ಬಳಗದವರ ಹತ್ತಿರ ಹೋಗಿ ಅಗತ್ಯವಾದ ಪಾತ್ರೆ, ಗಂಗಾಳ, ಲೋಟ ಹಂಡೇವುಗಳನ್ನು ತರುತ್ತಾರೆ. ಮನೆಯ ಹೊರಗೆ ಸುತ್ತಲೂ ಕಂಬ ನೆಟ್ಟು ದುಪ್ಪಡಿ ಕಟ್ಟಿಕೊಂಡು ಮೂರು ಕಲ್ಲುಗಳನ್ನಿಟ್ಟು ಒಲೆಮಾಡಿ ದೊಡ್ಡ ಹಂಡೇವುಗಳಲ್ಲಿ ಅಡಿಗೆ ಮಾಡುವ ವ್ಯವಸ್ಥೆ ಮಾಡುತ್ತಾರೆ. ಒಳ್ಳೆಯ ಅಕ್ಕಿ, ಗೋಧಿ ತಂದು ಗೋಧಿ ಹುಗ್ಗಿ, ಅನ್ನ ಮಾಡುತ್ತಾರೆ. ಕುರಿಯನ್ನು ಮುಲ್ಲಾನಿಂದ ಹಲಾಲ್ ಮಾಡಿಸಿ ಕೊಯ್ದು ಖಲೀಜ ಮುಂತಾದ ಕೆಲವು ಭಾಗಗಳನ್ನು ಆತನಿಗೆ ಕೊಡುತ್ತಾರೆ. ಕುರಿಯ ಚರ್ಮ ಸುಲಿದು ಮಾರುತ್ತಾರೆ. ದೊಡ್ಡ ತಟ್ಟೆಯಾಕಾರದ ಹಿತ್ತಾಳೆ ಅಥವಾ ಚಿಲವಾರದ ಸೀನಿನಲ್ಲಿ ಕುರಿಯ ತಲೆಯಿಟ್ಟು ಗಟ್ಟಿಯಾಗಿ ಅದುಮಿಕೊಂಡು ಕುರಿಯ ಬಾಯಲ್ಲಿ ನೀರು ಬಿಟ್ಟು ಮುಲ್ಲಾ ಹರಿತವಾದ ಚಾಕುವಿನಿಂದ

ಕುರಿಯ ಕುತ್ತಿಗೆಯ ಒಳನಾಳಗಳನ್ನು ಕತ್ತರಿಸುತ್ತಾನೆ. ರಕ್ತಪೂರ್ತಿ ಸೀನಿನಲ್ಲಿ ಉಳಿಯುವ ಹಾಗೆ ಮಾಡಿ ಕುರಿಯನ್ನು ತೊಲೆಗೆ ಕಟ್ಟಿ ಚರ್ಮ ಸುಲಿಸುತ್ತಾರೆ. ಜಠರದ ಭಾಗವನ್ನು ಪೂರ್ತಿ ಪುಟ್ಟಿಗೆ ಹಾಕಿ ಅದರೊಳಗಿರುವ ಕಳ್ಳು ಪಚ್ಚಿ ಇಕ್ಕೆಯನ್ನು ತಿಕ್ಕಿ ತೊಳೆದು ತರುತ್ತಾರೆ. ಕುರಿ ಮಾಂಸದ ಅಡಿಗೆ ಮಾಡುವ ಹೆಂಗಸರು ಮತ್ತು ಗಂಡಸರು ಇರುತ್ತಾರೆ. ಹುಗ್ಗಿ, ಅನ್ನ, ಸಾರು ಆದ ನಂತರ ಒಂದು ತಟ್ಟೆಯಲ್ಲಿ ಅದನ್ನು ತೆಗೆದಿಟ್ಟು ಮುಲ್ಲಾನನ್ನು ಕರೆಸಿ 'ಓದಿಕೆ' ಮಾಡಿಸುತ್ತಾರೆ. ಸತ್ತವರ ಮನೆಯ ಯಾರಾದರೊಬ್ಬರನ್ನು ಮತ್ತೊಮ್ಮೆ ಸಂಬಂಧಿಕರು, ಆಪ್ತರು ಮುಂತಾದವರನ್ನು ಊಟಕ್ಕೆ ಕರೆತರಲು ವಿಶೇಷವಾಗಿ ಕಳಿಸುತ್ತಾರೆ. ಮಾಂಸಾಹಾರದ ಇತರೆ ಜನಾಂಗದವರೂ ಬರುತ್ತಾರೆ. ಸಸ್ಯಾಹಾರದ ಬೇರೆ ಜನಾಂಗದ ಆಪ್ತರೂ ಬಂದು ಊಟ ಮಾಡುವ ಜನರಿಗೆ ಬಡಿಸುತ್ತಾರೆ. ಊಟಕ್ಕೆ ಬಂದ ಜನರು 'ಓದಿಕೆ' ಮಾಡಿಸಿದ ಆಹಾರದ ತಟ್ಟೆಯ ಬಳಿ ಇಟ್ಟಿರುವ ಕುಡಿಕೆಯಲ್ಲಿ ಲೋಬಾನ ಹಾಕಿ (ಹಾಗೆ 'ಓದಿಕೆ' ಮಾಡುವ ಮುನ್ನ ಶವವನ್ನು ಮನೆಯಲ್ಲಿ ಮಲಗಿಸಿದ್ದ ಜಾಗದಲ್ಲಿ ಒಂದು ಕಡೆ ಕೆಮ್ಮಣ್ಣಿನಿಂದ ಬಳಿದು ತಟ್ಟೆಯನ್ನಿಟ್ಟು ಆಹಾರದಲ್ಲಿ ಊದಿನಕಡ್ಡಿ ಹಚ್ಚಿರುತ್ತಾರೆ) ಊಟಕ್ಕೆ ಸಾಮೂಹಿಕವಾಗಿ ಕುಳಿತುಕೊಳ್ಳುತ್ತಾರೆ. ಊಟದ ನಂತರ ಎಲೆ ಅಡಿಕೆ ಹಾಕಿಕೊಂಡು ಹೊರಡುತ್ತಾರೆ. ಪಿಂಜಾರರಲ್ಲಿ ಸಾಮಾನ್ಯವಾಗಿ 'ದಾವತ್ತು' ಹೇಳಿದ ಈ ದಿನದ ಸಂಜೆ ಮನೆಗೊಬ್ಬರು ಬಂದೇ ಬರುತ್ತಾರೆ. ಕಳ್ಳುಬಳ್ಳಿ, ಸಂಬಂಧಿಕರಲ್ಲಿ ಒಲೆ ಹಚ್ಚಿರುವುದಿಲ್ಲ. ಉಪವಾಸವಾದರೂ ಇದ್ದು ಈ ದಿನ ಬಂದು ಒಂಭತ್ತನೆಯ ದಿನದ ಊಟ ಮಾಡಿ ಮನೆಗೆ ಹೋಗುತ್ತಾರೆ. ಮಾಂಸದ ಚೂರುಗಳನ್ನು ಪ್ರತಿಯೊಬ್ಬರಿಗೂ ಹಂಚಿಕೊಡುವವರಿರುತ್ತಾರೆ. ಮಾರನೆಯ ದಿನ ತಲೆಸಾರು, ರಕ್ತದ ಸಾರನ್ನು ಮಾಡಿಕೊಂಡು ಆಪ್ತರಾದವರೆಲ್ಲ ಉಣ್ಣುತ್ತಾರೆ. ಹೆಣ್ಣುಮಕ್ಕಳು ಕೊನೆಯಲ್ಲಿ ಉಣ್ಣುತ್ತಾರೆ.

ಒಂಭತ್ತನೆಯ ದಿನದ ತಿಥಿಯ ಕಾರ್ಯಕ್ರಮ (ಪಿಂಜಾರರು 'ತಿಥಿ' ಅನ್ನುವುದಿಲ್ಲ. ಬದಲಾಗಿ 'ದಿನ' ಎನ್ನುತ್ತಾರೆ) ಪಿಂಜಾರರ ಪಾಲಿಗೆ ಸಾಮಾಜಿಕ ಪ್ರತಿಷ್ಠೆಯ ದಿನ. ಅವತ್ತು ಊಟ ಹಾಕುವುದರ ಆಧಾರದ ಮೇಲೆ ಜನ ಸತ್ತವರ ಮನೆಯವರನ್ನು ಹೊಗಳುವ, ಮೆಚ್ಚಿಕೊಳ್ಳುವ ಅಥವಾ ಆಡಿಕೊಳ್ಳುವ ರೀತಿಯಲ್ಲಿ ಮಾತನಾಡಿಕೊಳ್ಳುತ್ತಾರೆ. ಇವರಲ್ಲೂ ಸ್ವರ್ಗ ನರಕದ ಕಲ್ಪನೆಯಿರುವುದರಿಂದ ಜನ ಹಾಡಿ ಹೊಗಳಿದಷ್ಟು ಸತ್ತವರಿಗೆ ಸದ್ಗತಿ ದೊರೆಯುತ್ತದೆಂದು ಪಿಂಜಾರರು ನಂಬುತ್ತಾರೆ. ಅದಕ್ಕಾಗಿಯೇ ಎಂಥ ಬಡ ಪಿಂಜಾರನೂ ಕೂಡ ಈ ದಿನವನ್ನು ತನ್ನ ಶಕ್ತಿ ಮೀರಿ ಆಚರಿಸುತ್ತಾನೆ. ಮತ್ತು ಕಡ್ಡಾಯವಾಗಿ ಮಾಂಸದೂಟವನ್ನು ಕೊಡುತ್ತಾನೆ. ಪಿಂಜಾರನ ಈ ಬಗೆಯ ಮನೋಭಾವ ಆತನ ಧಾರ್ಮಿಕ ಹಿನ್ನೆಲೆ ಮತ್ತು ಅವಲಂಬನೆಯನ್ನು ತೋರುವುದಲ್ಲದೆ ಮುಖ್ಯವಾಗಿ ಸಾಮಾಜಿಕ ಭಯವನ್ನು ತೋರುತ್ತದೆ. ಯಾಕೆಂದರೆ ಮದುವೆಯಂತಹ ಸಂತೋಷದ ಸಂದರ್ಭದಲ್ಲಿ ಕೂಡ ಮಾಂಸವನ್ನು ಕೊಡಲಾರದ ಪಿಂಜಾರರು ಸಾವಿನ ಹಿನ್ನೆಲೆಯ ವಿಧಿಕ್ರಿಯೆಗಳಲ್ಲಿ ಅದನ್ನು ಕಡ್ಡಾಯವಾಗಿಸಿಕೊಂಡಿದ್ದಾರೆ. ಮೊದಮೊದಲು ಈ 'ದಿನ'ದಲ್ಲಿ ಮಾಂಸಾಹಾರದ ಜೊತೆಗೆ ಪಾಯಸ ಮಾಡುತ್ತಿದ್ದರೂ ಈಗೀಗ ಪಾಯಸವನ್ನು ಕೈಬಿಟ್ಟಿದ್ದಾರೆ. ಅನ್ನ, ಮಾಂಸಾಹಾರದ ಸಾರು ಮಾತ್ರ ಈಗಿನ ದಿನಗಳಲ್ಲಿ ಮಾಮೂಲಿಯಾಗಿದೆ.

ಒಂಭತ್ತನೆಯ ದಿನದ ಅದ್ದೂರಿ ಊಟದ ನಂತರ ಇಪ್ಪತ್ತನೆಯ ದಿನಾಚರಣೆ. ಅಂದು ಶವವನ್ನು ವೈತೊಳೆದ ಜಾಗದಲ್ಲಿ ಕಲ್ಲುಗುಂಡು ಹೂಡಿ ಒಲೆ ಮಾಡಿ ಗೋಧಿ ಚಪಾತಿ ಮತ್ತು ರವೆ ಬೆಲ್ಲ ಹಾಕಿ ಹಲ್ವಾ ರೀತಿಯ ಸಿಹಿ ಮಾಡುತ್ತಾರೆ. ಹತ್ತಿಪ್ಪತ್ತು ಸಣ್ಣ ಮಕ್ಕಳನ್ನು ಕರೆದು ಈ ತಿನಿಸನ್ನು ಮಕ್ಕಳಿಗೆ ಹಂಚಲಾಗುತ್ತದೆ. ಇದು ಅಷ್ಟು ಮಹತ್ವದ, ಮಾಡಲೇಬೇಕಾದ ಆಚರಣೆಯಾಗಿಲ್ಲ.

ಇಪ್ಪತ್ತನೆಯ ದಿನವಾದ ಮೇಲೆ ನಲ್ವತ್ತನೆಯ ದಿನವನ್ನು ಸ್ವಲ್ಪ ವಿಶೇಷವಾಗಿ ಆಚರಿಸುತ್ತಾರೆ. ಈ ದಿನದಲ್ಲಿ ಮಾಂಸದ ಅಡಿಗೆಯನ್ನು ಒಳಗೊಂಡಂತೆ ನಲ್ವತ್ತು ನಮೂನೆಯ ಅಡಿಗೆಯನ್ನೇ ಮಾಡುತ್ತಾರೆ. ಹೋಳಿಗೆ, ಖರ್ಜಿಕಾಯಿ, ದೋಸೆ, ಚೋಂಗಿ, ಜುಲೇಬಿ, ಬೋಂದ್ಯ, ಕಾರ, ಮಂಡಕ್ಕಿ, ವಡೆ, ಗಾರಿಗೆ, ಹೀಗೆ ಎಲ್ಲ ತಿನಿಸುಗಳ ಜೊತೆಗೆ ಅನೇಕ ಬಗೆಯ ತಿನಿಸು, ಹಣ್ಣು ಹಂಪಲುಗಳನ್ನು ತಂದಿರುತ್ತಾರೆ. ಇದೆಲ್ಲವನ್ನು ಶವವನ್ನು ಇಟ್ಟಿದ್ದ ಜಾಗದಲ್ಲಿ ಕೆಮ್ಮಣ್ಣಿನಿಂದ ಸಾರಿಸಿಟ್ಟು 'ಒದಿಕೆ' ಮಾಡಿಸುತ್ತಾರೆ. ಹೆಸರುಬೇಳೆ, ಕಡ್ಲೆಬೇಳೆ, ಗೋಧಿ, ಶಾವಿಗೆ ಹುಗ್ಗಿ, ಮಾಂಸದ ಸಾರು, ಅನ್ನ ಎಲ್ಲವನ್ನೂ ಒದಿಕೆಯಾದ ನಂತರ ಆಪ್ತರಾದ ಕೆಲವರನ್ನು ಕರೆದುಕೊಂಡು ಬಂದು ಸಹ ಭೋಜನ ನಡೆಸುತ್ತಾರೆ.

ಕಡೆಯದಾಗಿ ವರ್ಷದ ದಿನ - ಎಂದು ಹನ್ನೊಂದು ತಿಂಗಳಿಗೆ ಒಂದು ಆಚರಣೆ ಮಾಡುತ್ತಾರೆ. 'ಸತ್ತವರಿಗೆ ಕಡಿಮೆ' ಎಂದು ವರ್ಷದ ದಿನವನ್ನು ವರ್ಷ ತುಂಬುವ ಮೊದಲೇ ಆಚರಿಸುತ್ತಾರೆ. ಆವತ್ತು ಕೋಳಿ ಕೊಯ್ದು ಅಡಿಗೆ ಮಾಡಿ ಎಂದಿನಂತೆ ಒದಿಕೆ ಮಾಡಿಸಿ ಕಳ್ಳುಬಳ್ಳಿ, ಬೀಗರು ಬಿಜ್ಜರನ್ನು ಕರೆದು ಉಣ್ಣುತ್ತಾರೆ. ಕೆಲವರು ಬಡವರಿಗೆ ಬಟ್ಟೆಬರೆ, ದುಡ್ಡು ಮೊದಲಾದ ದಾನ ಮಾಡುತ್ತಾರೆ. ಇಲ್ಲಿಗೆ ತಾಂತ್ರಿಕವಾಗಿ ಸತ್ತ ನಂತರದ ಕಾರ್ಯಕ್ರಮಗಳು ಮುಗಿಯುತ್ತವೆ. ಆದರೆ ಪಿಂಜಾರರು ವಿಶೇಷವಾಗಿ ಆಚರಿಸುವ ಹಿರಿಯರ ಹಬ್ಬದಲ್ಲಿ ಸತ್ತವರ ಬಗೆಗಿನ ಭಾವನೆಗಳನ್ನು ವ್ಯಕ್ತಪಡಿಸುತ್ತಾರೆ. ಹಬ್ಬಗಳ ಆಚರಣೆಯ ಸಂದರ್ಭದಲ್ಲಿ ಅದನ್ನು ವಿವರವಾಗಿ ನೋಡಬಹುದು.

ಕೆಲವು ಊರುಗಳಲ್ಲಿ ಪಿಂಜಾರರ ವ್ಯಕ್ತಿ ಸತ್ತಾಗ ಯಾರೂ ಅಳುವುದಿಲ್ಲ ಅನ್ನುವ ಸಂಗತಿ ತಿಳಿದುಬಂದಿತು. ಇದು ಬಹುಸಂಖ್ಯಾತ ಪಿಂಜಾರರಿಗಿಂತ ವಿಶೇಷವಾದದ್ದು. ಯಾಕೆ ಅಳುವುದಿಲ್ಲ ? ಅನ್ನುವ ಪ್ರಶ್ನೆಗೆ ಅಂತಹ ಪಿಂಜಾರರು ಕುತೂಹಲಕರ ಉತ್ತರವನ್ನು ಕೊಡುತ್ತಾರೆ. ಸತ್ತಂಥ ವ್ಯಕ್ತಿಯ ಆತ್ಮ ಸ್ವರ್ಗವನ್ನು, ಪರಮಾತ್ಮ ಅಥವಾ ಶಿವನ ಪಾದವನ್ನು ಸೇರುತ್ತದೆ. ಆತನಿಗೆ ಸದ್ಗತಿ ದೊರೆಯುತ್ತದೆ. ಭೂಮಿಯ ಬದುಕಿಗಿಂತ ಉತ್ತಮವಾದ ಜೀವನವನ್ನು ಆತ ಅಥವಾ ಅವಳು ಅಲ್ಲಿ ಅನುಭವಿಸುತ್ತಾರೆ. ಇದಕ್ಕಾಗಿ ಸಂತೋಷಪಡಬೇಕು ವಿನಾಃ ದುಃಖ ಪಡಬಾರದು. ಇಲ್ಲಿ ಬದುಕಿದ್ದವರು ದುಃಖಪಟ್ಟಷ್ಟೂ ಸತ್ತ ವ್ಯಕ್ತಿಯ ಸದ್ಗತಿಗೆ ಅಷ್ಟರಮಟ್ಟಿಗೆ ಬಾಧಕವಾಗುತ್ತದೆ ಇತ್ಯಾದಿಯಾಗಿ ಅವರ ಮಾತುಗಳು ಸರಳ ಧಾರ್ಮಿಕ ನೆಲೆಯನ್ನು ಮೀರಿ ಆಧ್ಯಾತ್ಮಿಕ ಅರ್ಥವನ್ನು ಪಡೆದುಕೊಳ್ಳುತ್ತವೆ.

ಆದರೆ ಬಹಳಷ್ಟು ಪಿಂಜಾರರು ಅಳುತ್ತಾರೆ. ಅಳದೇ ಇರುವುದಕ್ಕೆ ಪಿಂಜಾರರು ಕೊಟ್ಟ ಕಾರಣದ ಹಿನ್ನೆಲೆಯಿಂದ ನೋಡುವುದಾದರೆ ಅಳುವ ಪಿಂಜಾರರು ಹೆಚ್ಚು ಸ್ವಾಭಾವಿಕ ಮತ್ತು ವೈಜ್ಞಾನಿಕ ನೆಲೆಯಲ್ಲಿದ್ದಾರೆ ಎನ್ನಬಹುದು. ಇದುವರೆಗೂ ಜೊತೆಯಲ್ಲಿ ಎಲ್ಲ ಬಗೆಯ ಕಷ್ಟ ಸುಖಗಳನ್ನುಂಡು

ಬದುಕಿದ್ದ ಜೀವ, ಈಗ ತಾನೇ ನಕ್ಕಿದ್ದ ಜೀವವೊಂದು ನಿಶ್ಚಲವಾದಾಗ ಸಹಜವಾಗಿಯೇ ಆಘಾತವಾಗುತ್ತದೆ. ಭಾವಕೋಶ ಆರ್ದ್ರವಾಗುತ್ತದೆ. ಕಣ್ಣೀರು ಬರುತ್ತದೆ. ದುಃಖ ಉಮ್ಮಳಿಸುತ್ತದೆ, ಆ ಜೀವದ ಅನುಪಸ್ಥಿತಿ ಪ್ರೇಮದ ವಿರಹದಷ್ಟೇ ಸಂಕಟಮಯವಾಗುತ್ತದೆ. ಎಲ್ಲರೂ ಒಂದಲ್ಲ ಒಂದು ದಿನ ಸಾವನ್ನು ಎದುರಿಸಲೇಬೇಕೆಂಬ ಕಟ್ಟ ಸತ್ಯ ಗೊತ್ತಿದ್ದರೂ ಜೀವ ಯಾಕಾಗಿ ಇನ್ನೊಂದು ಜೀವಕ್ಕಾಗಿ ಕಾತರಿಸುತ್ತದೆ ? ಅಳುತ್ತದೆ? ಬಹುಶಃ ಈ ಅಳುವಿನ ಸ್ವಾಭಾವಿಕ ಕ್ರಿಯೆ ಭೂಮಿಯ ಮೇಲಿನ ನಿಕಟವಾದ ಬದುಕಿನ ಬಗ್ಗೆ ಇರುವ ಮೋಹವನ್ನು ಶ್ರೇಷ್ಠ ಎಂಬಂತಹ ಪರಿವೇಷದಲ್ಲಿ ಕಟ್ಟಿಕೊಡುತ್ತದೆನಿಸುತ್ತದೆ. ಅನುಭವಕ್ಕೆ ಬಾರದ ಬೇರೆ ಯಾವುದೋ ಒಂದು ಲೋಕದ ಬದುಕಿನ ಬಗ್ಗೆ ಭ್ರಮೆಗಳನ್ನಿಟ್ಟುಕೊಳ್ಳುವುದರ ಬದಲು ಹೀಗೆ ನಿಸರ್ಗ ಕೊಟ್ಟ ಗಾಢವಾದ ನೋವನ್ನು ಅನುಭವಿಸುವುದರಲ್ಲೇ ನಿಜವಾದ ಬದುಕಿನ ತಾತ್ವಿಕತೆ ಇದೆ ಎನಿಸುತ್ತದೆ.

## ೪.೨ ಧಾರ್ಮಿಕ ಆಚರಣೆ

ಸಂಸ್ಕೃತಿ ಅಧ್ಯಯನದ ವಿಷಯ ಬಂದಾಗ 'ಧರ್ಮ'ದ ಪರಿಕಲ್ಪನೆಯ ಚರ್ಚೆಗಿಂತ ಅದರ ಆಚರಣೆಗಳ ಮಹತ್ವವನ್ನು ವಿಶ್ಲೇಷಿಸುವುದು ರೂಢಿಯಾಗಿದೆ. ಇದು ಈ ಅಧ್ಯಯನದ ಶಿಸ್ತುಗಳಲ್ಲಿ ಒಂದು ನಿಜ. ಈ ಬಗೆಯ ಅಧ್ಯಯನ ನಡೆಯುವುದೂ ಅವಶ್ಯಕ. ಇದರಿಂದ ಮನುಷ್ಯನ ಇತಿಹಾಸದಲ್ಲಿ ಆತ ರೂಢಿಸಿಕೊಂಡ ವೈಶಿಷ್ಟ್ಯತೆ, ಕಟ್ಟಿಕೊಂಡ ವಿಭಿನ್ನ ಸ್ವರೂಪದ ಸಂಸ್ಕೃತಿ ಮತ್ತು ಅವುಗಳ ರಚನೆಯ ಹಿಂದಿನ ಉದ್ದೇಶಗಳು ತಿಳಿಯುತ್ತವೆ. ಆದರೆ 'ಧರ್ಮ' ಎಂದರೇನು ? ಅದು ಯಾತಕ್ಕೆ ಬರುತ್ತದೆ ? ಅದು ಯಾರಿಗಾಗಿ ಮಾಡಿದ್ದು ? ಅದರ ಅವಶ್ಯಕತೆ ಯಾರಿಗಿದೆ ? ಇತ್ಯಾದಿ ಚರ್ಚೆಗಳು ಈ ಅಧ್ಯಯನದ ಒಂದು ಭಾಗವಾಗಿರಬೇಕೇ ಬೇಡವೇ ಯೋಚಿಸಬೇಕಾಗಿದೆ. ಧರ್ಮ ಎಂಬ ಪದಕ್ಕೆ ಕನ್ನಡದ ನಿಘಂಟಿನಲ್ಲಿ 'ಧಾರಣ ಮಾಡಿದುದು, ನಿಯಮ, ಆಚಾರ, ಪುಣ್ಯ, ನಾಲ್ಕು ಪುರುಷಾರ್ಥಗಳಲ್ಲಿ ಒಂದು, ಕರ್ತವ್ಯ, ಗುಣ, ಸ್ವಭಾವ, ನ್ಯಾಯ, ನಿಷ್ಠೆ, ಶ್ರದ್ಧೆ, ಮತ, ದಯೆ, ಕರುಣೆ' ಮೊದಲಾದ ಇಪ್ಪತ್ನಾಲ್ಕು ಅರ್ಥಗಳನ್ನು ಕೊಡಲಾಗಿದೆ. (ನೋಡಿ ಪುಟ-622, ಸಂಕ್ಷಿಪ್ತ ಕನ್ನಡ ನಿಘಂಟು (ಪರಿಷ್ಕೃತ) ಪ್ರಕಟಣೆ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು (2001)) ಈ ಅರ್ಥಗಳ ಧರ್ಮ ಮುಖ್ಯವಾಗಿ ಮನುಷ್ಯ ಸಮುದಾಯಕ್ಕೆ ಸಂಬಂಧಪಟ್ಟದ್ದು. ವಿಶಾಲವಾದ ಅರ್ಥದಲ್ಲಿ ಧರ್ಮ ಎಂದರೆ 'ಜೀವನವಿಧಾನ' ಎಂದು ಕರೆಯುವ ರೂಢಿಯಿದೆ. ಭಾರತದಂತಹ ಸಾಮಾಜಿಕ ರಚನೆಯಲ್ಲಿ ಈ ಧರ್ಮದ ಆಚಾರ ಭಾಗವನ್ನು ಮಾತ್ರ ತಮ್ಮ ಅನುಕೂಲಕ್ಕೆ ತಕ್ಕಂತೆ ಹಿಗ್ಗಿಸಿಕೊಳ್ಳಲಾಗಿದೆ. ಅದರಂತೆ ಮನುಷ್ಯನಿಗೆ ಬದುಕುವ ಕೆಲವು ನಿಯಮಗಳನ್ನು ವಿಧಿಸಲಾಗಿದೆ. ಬುದ್ಧಿವಾದ ಹೇಳಲಾಗಿದೆ. ಹೇಗೆ ನಡೆದುಕೊಳ್ಳಬೇಕು ಎನ್ನುವ ನಿಯಮಗಳಷ್ಟೇ ಹೇಗೆ ನಡೆದುಕೊಳ್ಳಬಾರದು ಎಂಬ ನಿಯಮಗಳೂ ಇವೆ. ಅಂದರೆ ಮನುಷ್ಯ ತನ್ನೊಳಗೇ ಎಲ್ಲೋ ದಾರಿತಪ್ಪಿ ಅದರಿಂದ ಇತರರಿಗೆ ಅನ್ಯಾಯವಾದ ಸಂದರ್ಭದಲ್ಲಿ ಧರ್ಮ ಹುಟ್ಟಿಕೊಂಡಿತು ಎಂದು ತೀರ್ಮಾನಿಸಿಬಿಡಬಹುದೇ? ವಾಸ್ತವವಾಗಿ ಜೀವನ ಮನುಷ್ಯನಿಗೆ ಪ್ರೀತಿ, ವಿಶ್ವಾಸ, ಮಮತೆ, ಕರುಣೆ ಮುಂತಾದವನ್ನೆಲ್ಲಾ ಕಲಿಸುವುದು ಸಹಜವಾಗಿದೆ. ಇದನ್ನೆಲ್ಲಾ ಮನುಷ್ಯ ಯಾವ ಧರ್ಮದಿಂದಾಗಲೀ,

ಧರ್ಮಗ್ರಂಥ, ಧರ್ಮಾಚಾರ್ಯರಿಂದಾಗಲೀ ಕಲಿಯುವ ಅವಶ್ಯಕತೆಯಿಲ್ಲ. ಧರ್ಮಗ್ರಂಥ, ಪುರಾಣಗ್ರಂಥಗಳನ್ನು ಓದಿ ಅರಗಿಸಿಕೊಂಡವನು ಮಾತ್ರ ತನ್ನ ಮನೆಗೆ ಬಂದ ಅತಿಥಿಯನ್ನು ಉಪಚರಿಸುವುದಿಲ್ಲ. ಎಂಥ ಪಾಮರನಿಗೂ ಅದು ಸಹಜವಾಗಿ ತಿಳಿದಿರುತ್ತದೆ. ಹಾಗಾಗಿ ಧರ್ಮದ ಅರ್ಥ ಹಾಗೂ ನಿಯಮಗಳನ್ನು ತಿಳಿದುಕೊಳ್ಳಬೇಕಾದ ಅವಶ್ಯಕತೆ ಅನೈತಿಕವಾಗಿ ಸಮಾಜ ಕಂಟಕನಾಗಿ ಬದುಕುವವನಿಗೆ ಹೆಚ್ಚಾಗಿರುತ್ತದೆ. ಅವುಗಳನ್ನು ಪಾಲಿಸಬೇಕಾದವನೂ ಅವನೇ. ಆದರೆ 'ಧರ್ಮ' ಇವತ್ತು ಏನಾಗಿದೆ? ಜಾಗತಿಕವಾಗಿ ಅನೇಕ ಧರ್ಮಗಳು ಹುಟ್ಟಿಕೊಂಡಿವೆ. ಅವುಗಳನ್ನು ಪಾಲಿಸುವವರ ನಡುವೆ ಸಾಮರಸ್ಯವಿಲ್ಲ. ಒಂದೇ ಧರ್ಮದ ಭಿನ್ನ ಜಾತಿಗಳಲ್ಲಿ ಹೊಂದಾಣಿಕೆಯಿಲ್ಲ. ವಿಭಿನ್ನ ಧರ್ಮಗಳ ನಡುವೆ ಕನಿಷ್ಠ ಸಂವಾದಗಳು ಸಾಧ್ಯವಾಗುತ್ತಿಲ್ಲ. ಈ ಧರ್ಮಗಳ ಅನುಯಾಯಿಗಳ ಜೀವರಕ್ಷಣೆಗಿಂತ ಧರ್ಮ ರಕ್ಷಣೆ ಮುಖ್ಯವಾಗಿದೆ. ಕನ್ನಡದ ನಿಘಂಟಿನಲ್ಲಿ ಧರ್ಮ ಪದಕ್ಕೆ ಕೊಟ್ಟಿರುವ 24 ಅರ್ಥಗಳಲ್ಲಿ 'ವಿಷ' ಎಂಬ ಅರ್ಥವೂ ಇದೆ. ವಾಸ್ತವವಾಗಿ ಈ ಅರ್ಥದಲ್ಲಿ ಮಾತ್ರ ಅದು ಜೀವಂತವಾಗಿದೆ ಎನಿಸುತ್ತದೆ. ಧರ್ಮ ಎನ್ನುವುದು ಮುಗ್ಧ ಅಸಹಾಯಕರ ಬದುಕಿಗೆ ವಿಷವಾಗಿ ಅಫೀಮಾಗಿ ಕಾಡುತ್ತಿದೆ. ಇನ್ನಾದರೂ ಮನುಷ್ಯ ಧರ್ಮದ ವಿಚಾರಭಾಗವನ್ನು ತಿಳಿಯುವ ಕೆಲಸವಾಗಬೇಕು. ಧರ್ಮದ ಆಚಾರಭಾಗ ಕುಟುಂಬದ ಅಥವಾ ಒಂದು ಜನಾಂಗದ ಸಂದರ್ಭದಲ್ಲಿ ಅಧ್ಯಯನದ ವಿಷಯವಾಗಿಯೋ, ಆಯಾ ಕುಟುಂಬ, ಜನಾಂಗಕ್ಕಷ್ಟೇ ಸೀಮಿತವಾದ ಶ್ರದ್ಧೆಯನ್ನು ವ್ಯಕ್ತಪಡಿಸುವುದಕ್ಕಾಗಿಯೋ ಉಪಯೋಗವಾಗುತ್ತದೆ. ಆದರೆ ಧರ್ಮದ ವಿಚಾರಭಾಗ ಇಡೀ ಮನುಕುಲದ ನಡುವಿನ ಸಾಮರಸ್ಯ, ಪ್ರೀತಿ, ಸೌಹಾರ್ದಗಳನ್ನು ಹೇಳುತ್ತದಾದ್ದರಿಂದ ಧರ್ಮದ ನಿಜನೆಲೆಗಳನ್ನು ಹುಡುಕುವ ಪ್ರಾಮಾಣಿಕ ಪ್ರಯತ್ನ ಮಾಡುವುದು ಪ್ರಜ್ಞಾವಂತ ಜನಸಮುದಾಯದ ಜವಾಬ್ದಾರಿಯಾಗಿದೆ.

ಪಿಂಜಾರರ ಧಾರ್ಮಿಕ ಆಚರಣೆಗಳನ್ನು ಗುರುತಿಸುವುದೆಂದರೆ ಅವರ ಸಾಂಸ್ಕೃತಿಕ ಅನನ್ಯತೆ ಹಾಗೂ ಸಾಮಾಜಿಕ ಸ್ಥಾನಮಾನಗಳನ್ನು ಅರಿಯುವುದಾಗಿದೆ. ಹುಟ್ಟಿನಿಂದ ಸಾವಿನವರೆಗೆ ಅನೇಕ ಸಂದರ್ಭದಲ್ಲಿ ಮತ್ತು ಹಬ್ಬಗಳಲ್ಲಿ ಪಿಂಜಾರರ ಆಚರಣೆಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಆ ಆಚರಣೆಗಳ ಕಲಾವಂತಿಕೆ ಅರ್ಥವಾಗುತ್ತದೆ. ಅಲ್ಲದೆ ಕಲೆ ಅನ್ನುವುದನ್ನು ಭಾರತೀಯ ಪರಂಪರೆಯಲ್ಲಿ 'ಧಾರ್ಮಿಕ' ಅನ್ನುವ ಅರ್ಥದಲ್ಲಿಯೇ ವ್ಯಾಖ್ಯಾನ ಮಾಡುತ್ತ ಬಂದಿರುವುದನ್ನು ನೋಡಿದರೆ ಕಲೆಗೂ ಧರ್ಮಕ್ಕೂ ಇರುವ ಸಂಬಂಧ ಸ್ವರೂಪದ ಅರಿವಾಗುತ್ತದೆ. ಒಂದೊಂದು ಧರ್ಮವೂ ವಿಶಿಷ್ಟ ಆಚರಣೆಗಳನ್ನು ಒಳಗೊಂಡಿದ್ದು ಆ ಹಿನ್ನೆಲೆಯ ಜಾತಿ, ಉಪ ಪಂಗಡಗಳಲ್ಲಿ ಅಂಥ ಆಚರಣೆಗಳು ಇನ್ನೂ ವಿಶೇಷ ರೀತಿಯಲ್ಲಿರುವುದರಿಂದ ಪ್ರಧಾನ ಸಂಸ್ಕೃತಿಗಳಿಗಿಂತ ಭಿನ್ನವಾದ ರೂಢಿ ಪರಂಪರೆಯೊಂದನ್ನು ನಾವು ಉಪ ಸಂಸ್ಕೃತಿಗಳಲ್ಲಿ ಕಾಣಬಹುದಾಗಿದೆ. ಹಾಗಾಗಿ ಪಿಂಜಾರರ ಆಚರಣೆಗಳಲ್ಲಿ ನಾವು ಮುಖ್ಯವಾಗಿ ಎರಡು ಧರ್ಮಗಳ ಸಂಯೋಜನೆಯನ್ನು ಗುರುತಿಸಬಹುದಾಗಿದೆ. ಈ ಬಗೆಯ ಸಂಯೋಜನೆಯಿಂದ ಸಾಧ್ಯವಾಗುವ ಸಾಮಾಜಿಕ ಪರಿಸರದ ಆರೋಗ್ಯವನ್ನು ಮತ್ತು ಅದಕ್ಕೆ ಕಾರಣವಾಗಿರುವ ಸಾಮಾಜಿಕ, ರಾಜಕೀಯ ಇತಿಹಾಸದ ಸ್ಥಿತ್ಯಂತರಗಳನ್ನು ನಾವು ಮತ್ತಷ್ಟು ಕುತೂಹಲದಿಂದ ನೋಡುವ ಅಗತ್ಯವಿದೆ.

ಸ್ಥಳೀಯ ದೇವರುಗಳಿಂದ ಹಿಡಿದು ಬೇರೆ ಬೇರೆ ಭಾಗದ ದೇವರುಗಳ ಬಗ್ಗೆ ಕೂಡ ಪಿಂಜಾರರು ತೋರುವ ಆದರ, ಭಕ್ತಿಯನ್ನು ಬಹುಶಃ ಈ ಹಿನ್ನೆಲೆಯಲ್ಲಿ ವಿಶ್ಲೇಷಿಸಬೇಕಾಗುತ್ತದೆ. ಪಿಂಜಾರರ ಈ ಬಗೆಯ ಆಚರಣೆಗೆ ಮತಾಂತರ ಕಾರಣವಾಗಿರುವಂತೆಯೇ ಅವರ ಭಾಷೆ ಕೂಡ ಕಾರಣವಾಗಿದೆ. ಅವರು ಯಾವುದೇ ರಾಜ್ಯದಲ್ಲಿದ್ದರೂ ಅಲ್ಲಿನ ನಾಡು-ನುಡಿಯೇ ಅವರ ಜೀವನಾಡಿಯಾಗಿರುವುದರಿಂದ ಆ ಪ್ರಾದೇಶಿಕತೆಯ ಆವರಣದಲ್ಲಿ ಜೀವಂತವಾಗಿದ್ದುದೆಲ್ಲವೂ ಅವರ ಬದುಕನ್ನು ಒಂದಲ್ಲ ಒಂದು ಬಗೆಯಲ್ಲಿ ತುಂಬಿಕೊಂಡಿದೆ. ಮೊಹರಂ ಹಬ್ಬದಲ್ಲಿನ ಪಿಂಜಾರರ ಆಚರಣೆಗಳು ಅವರ ಒಟ್ಟಾರೆ ಉತ್ಸಾಹ ಮತ್ತು ನಂಬಿಕೆಯನ್ನು ಏಕಕಾಲಕ್ಕೆ ವ್ಯಕ್ತಪಡಿಸುತ್ತವೆ. ಕಲೆಯನ್ನು ನಾವು ಹೊಸದಾಗಿ ಅರ್ಥೈಸಬೇಕಾಗಿರುವ ಅನಿವಾರ್ಯತೆಯಿರುವುದರಿಂದ ಧಾರ್ಮಿಕ ಮತ್ತು ಜನಾಂಗೀಯ ಆಚರಣೆಗಳ ಕಲೆಯ ಅಭಿವ್ಯಕ್ತಿಯನ್ನು ಒಪ್ಪಿಕೊಂಡೇ ಅವು ಮಂಡಿಸುವ, ಪ್ರತಿನಿಧಿಸುವ ಧರ್ಮನಿರಪೇಕ್ಷ ದೃಷ್ಟಿಕೇಂದ್ರವನ್ನು ಕೂಡ ಕಲೆಯ ಮಾನದಂಡವನ್ನಾಗಿ ಪರಿಗಣಿಸುವ ಅವಶ್ಯಕತೆಯಿದೆ. ಹಾಗಾಗಿ ಮತಾಂತರಕ್ಕೆ ಒಳಗಾದ ಕೆಳಜಾತಿಯ ಜನರು ತಮ್ಮ ಬದುಕಿನ ಬಹುಭಾಗವನ್ನು ಮತಧರ್ಮ ನಿರಪೇಕ್ಷತೆಯ ನೆಲೆಯಲ್ಲಿ ಸವೆಸುವುದಕ್ಕಿರುವ ಸಾಮಾಜಿಕ ಅಡ್ಡಿ, ಆತಂಕಗಳನ್ನು ನಿವಾರಿಸುವ ದಿಕ್ಕಿನಲ್ಲಿ ನಮ್ಮ ಸಾಂಸ್ಕೃತಿಕ ಅಧ್ಯಯನಗಳು ಕ್ರಿಯಾಶೀಲವಾಗಬೇಕಾಗಿದೆ. ದುರಂತದ ಸಂಗತಿ ಎಂದರೆ ಮೂಲಭೂತವಾದ ಮತ್ತು ಆಳುವ ವರ್ಗದವರ ನಿರಂತರ ಸಂಚಿಗೆ ಗುರಿಯಾಗುತ್ತಿರುವ ಕೆಳಜಾತಿ ಮತ್ತು ವರ್ಗದ ಜನರು ಇನ್ನೂ ಸಂಘಟಿತ ಹೋರಾಟದಲ್ಲಿ ತೊಡಗಿಸಿಕೊಳ್ಳದಿರುವುದು. ರಾಷ್ಟ್ರಪ್ರೇಮ ಮತ್ತು ಏಕಸಂಹಿತೆಯ ಚರ್ಚೆ ಬಂದಾಗಲೆಲ್ಲ ಅನುಮಾನ ಮತ್ತು ಅವಮಾನಕ್ಕೆ ಗುರಿಯಾಗುವ ಮುಸ್ಲಿಮರನ್ನೂ ಒಳಗೊಂಡು ಎಲ್ಲ ಧರ್ಮಗಳನ್ನು ಪೋಷಿಸುತ್ತಲೇ ಬಂದಿರುವ ಶೋಷಿತ, ನಿರ್ಲಕ್ಷಿತ ಜನಾಂಗಗಳು ಸಾಮೂಹಿಕ ಹೋರಾಟ ಮತ್ತು ಅಸ್ತಿತ್ವ ಸ್ಥಾಪನೆಯ ಮೂಲಕ ತಮ್ಮ ಆಚರಣೆ ಮತ್ತು ಕಲೆಗಳಲ್ಲಿರುವ ನಿಜವಾದ ಧಾರ್ಮಿಕತೆಯನ್ನು, ಅಂದರೆ ಎಲ್ಲವನ್ನೂ, ಎಲ್ಲರನ್ನೂ, ಒಳಗೊಳ್ಳುವಂತಹ ಧರ್ಮವನ್ನು ಕಟ್ಟಿಕೊಡಬೇಕಾದ ಅಗತ್ಯವಿದೆ.

ಮದುವೆ, ಸಾವು ಮತ್ತು ಹಬ್ಬಗಳಲ್ಲಿ, ವಿಶೇಷವಾಗಿ ಮೊಹರಂ ಹಬ್ಬದಲ್ಲಿ, ಪಿಂಜಾರರೊಂದಿಗೆ ಬೆರೆಯುವ ಹಿಂದೂ ಶೂದ್ರ ಸಮುದಾಯದವರು ಪಿಂಜಾರರನ್ನು 'ಮುಸ್ಲಿಮ'ರೆಂದು ನೋಡುವುದೇ ಇಲ್ಲ. ಅದರಲ್ಲಿ ಮೊಹರಂ ಹಬ್ಬದಲ್ಲಿ ದೇವರನ್ನು ಹೊತ್ತುಕೊಂಡು ಕುಣಿಯುವವರು, ಕೆಂಡ ತುಳಿಯುವವರು, ವೇಷ ತರುವವರು, ಚೋಂಗಿ ಮಾಡಿಕೊಂಡು ತಿನ್ನುವವರು - ಹೀಗೆ ಎಲ್ಲದರಲ್ಲೂ ಅವರು ತಮ್ಮದೇ ಹಬ್ಬದಂತೆ ಉತ್ಸಾಹದಿಂದ ಬೆರೆಯುತ್ತಾರೆ. ಬದುಕಿನ ಮೂಲಭೂತ ಉಲ್ಲಾಸ ಮತ್ತು ದುಃಖದ ಸಂದರ್ಭಗಳು ನಿಜಕ್ಕೂ ಮಾನವೀಯವಾಗಿರುತ್ತವೆ, ಜಾತ್ಯಾತೀತವಾಗಿರುತ್ತವೆ ಎನ್ನುವುದಕ್ಕೆ ಇದು ಉತ್ತಮ ಉದಾಹರಣೆಯಾಗಿದೆ. ವೈವಾಹಿಕ ಸಂಬಂಧಗಳು ಇಲ್ಲ ಅನ್ನುವುದನ್ನು ಬಿಟ್ಟರೆ ಪಿಂಜಾರರು ಮತ್ತು ಹಿಂದೂ ಶೂದ್ರ ಜನಾಂಗದವರ ಆಚರಣೆಗಳಲ್ಲಿ, (ಪಿಂಜಾರರು ಮುಸ್ಲಿಮರ ಹೆಸರಿಟ್ಟುಕೊಂಡಿದ್ದಾರೆ ಮತ್ತು ಅವರ ಧರ್ಮಕ್ಕೆ ಸೇರಿದವರು ಅನ್ನುವ ತಾಂತ್ರಿಕ ಕಾರಣದ ಹೊರತಾಗಿ) ವ್ಯತ್ಯಾಸವನ್ನು ಗುರುತಿಸುವುದು ಕಷ್ಟ. ಈ ಕಾರಣಕ್ಕಾಗಿಯೇ ಪಿಂಜಾರರ ಧಾರ್ಮಿಕ ಆಚರಣೆಗಳು ಕಲೆಯ ದೃಷ್ಟಿಯಿಂದಲೂ ಅಧ್ಯಯನ ಯೋಗ್ಯವಾದವುಗಳು.

### ೪.೨.೧ ದೈವದ ಬಗೆಗಿನ ನಂಬಿಕೆ, ಮೂರ್ತಿ ಪೂಜೆ

ಪಿಂಜಾರರು ಪೂರ್ಣ ಪ್ರಮಾಣದ ಆಸ್ತಿಕರಾಗಿದ್ದಾರೆ. ಆಸ್ತಿಕತೆ ಭಾರತೀಯ ತತ್ವಶಾಸ್ತ್ರದ ಪ್ರಧಾನಧಾರೆ. ದೈವದ ಬಗೆಗಿನ ಕಲ್ಪನೆ ಮತ್ತು ಗ್ರಹಿಕೆಗಳು ಭಾರತೀಯ ಸಮಾಜದ ಸ್ಥಿತಿಗತಿಗಳನ್ನು ತೆರೆದಿಡುತ್ತವೆ ಮತ್ತು ಮನುಷ್ಯನ ಮೂಲಭೂತವಾದ ಭಯ, ವಿಸ್ಮಯಗಳು ದೈವದ ಸೃಷ್ಟಿಗೆ ಕಾರಣವಾಗಿವೆ. ಸೃಷ್ಟಿಗೆ ಸಂಬಂಧಪಟ್ಟ ವಾದಗಳಲ್ಲಿ ಲೋಕಾಯುತವಾದವು ತನ್ನ ಭೌತವಾದೀ ನೆಲೆಯಿಂದಾಗಿ ಹೆಚ್ಚು ವೈಜ್ಞಾನಿಕವಾಗಿದೆ. ಆಸ್ತಿಕವಾದ ಮತ್ತು ನಿರೀಶ್ವರವಾದದ ನಡುವಿನ ತರ್ಕ-ವಿತರ್ಕಗಳೇನೇ ಇರಲಿ ಇಲ್ಲಿನ ಬಹುಸಂಖ್ಯಾತರು ದೈವದ ಅಸ್ತಿತ್ವವನ್ನು ನಂಬುತ್ತಾರೆ. ಇವರೆಲ್ಲ ಮುಗ್ಧರಾಗಿರುವುದು ಲೋಕಾಯತವಾದದ ಕುರಿತಾದ ಗೌರವಕ್ಕೆ ಕಾರಣವಾಗಿದೆ. ಲೌಕಿಕ ಬದುಕಿನ ಕಷ್ಟ-ನಿಷ್ಠುರಗಳ ನಿರ್ವಹಣೆಯ ಸಂದರ್ಭದಲ್ಲಿ ಉಂಟಾಗುವ ತೀವ್ರ ಒತ್ತಡಗಳ ದೆಸೆಯಿಂದಾಗಿ ಹಾಗೂ ಜೀವನದಲ್ಲಿ ಎದುರಾಗುವ ಅಪಾರವಾದ ಸಾವು-ನೋವುಗಳು ಮನುಷ್ಯನ ನಿರೀಕ್ಷೆಗಳನ್ನು ಮೀರಿ ಅನಿಯಂತ್ರಿತವಾಗಿ ಮುಂದುವರೆಯುವುದರಿಂದಾಗಿ ಮನುಷ್ಯ ದೈವದ ಮೊರೆ ಹೋಗುವಂತೆ ಕಾಣುತ್ತದೆ. ಸದ್ಯದ ಒತ್ತಡಗಳಿಂದ ಪಾರಾಗುವುದಕ್ಕೆ ದೇವರ ಪೂಜೆ, ಭಕ್ತಿ, ಆರಾಧನೆ ಅತ್ಯಂತ ಸುಲಭ ಮಾರ್ಗವಾಗಿದೆ. ಇದು ಆರಂಭದಲ್ಲಿ ವ್ಯಕ್ತಿಗತವಾಗಿದ್ದು ನಿಸರ್ಗದ ಸೂರ್ಯ, ಚಂದ್ರ, ನಕ್ಷತ್ರ, ನೀರು, ಗಾಳಿ, ಮರ, ಮಣ್ಣು ಕಲ್ಲುಗಳೇ ದೇವರ ಪ್ರತಿರೂಪವೆಂದು ಗ್ರಹಿಸಲಾಗಿತ್ತು. ಈ ಕಲ್ಪನೆ ಸುಂದರವಾಗಿದೆ. ಮನುಷ್ಯನಿಗೆ ಅಗತ್ಯವಾದ ಗಾಳಿ, ನೀರು, ಬೆಳಕು ನೀಡುವ ಪಂಚಭೂತಗಳೇ ದೇವರ ಸ್ವರೂಪದ ಚಲನಶೀಲ ಸಂಕೇತಗಳಾಗಿದ್ದು ಅವುಗಳ ಬಗೆಗಿನ ಆರಾಧನೆ ಆತ ಸಲ್ಲಿಸುವ ಕೃತಜ್ಞತೆಯಂತಿತ್ತು. ಇಂತಹ ದೈವದ ಗ್ರಹಿಕೆ ಮೂಲಭೂತವಾಗಿ ಜೀವಪರವಾದುದೂ ಆಗಿತ್ತು. ಯಾವಾಗ ಈ ಗ್ರಹಿಕೆ ಸ್ಥಾವರರೂಪ ಪಡೆಯಿತೋ ಅಂದಿನಿಂದಲೇ ದೇವರು 'ಬಂಡವಾಳ'ದಂತೆ ಬಳಕೆಯಾದ ಇತಿಹಾಸ ಶುರುವಾಯಿತು. ದೇವರ ಹೆಸರಿನಲ್ಲಿ ಉಳ್ಳವರು ಶೋಷಣೆ ಮಾಡಿದರೆ ಇಡೀ ಸಮಾಜ ನಿರ್ದಿಷ್ಟವಾಗಿ ಹೋಳಾಗುತ್ತ ಹೋಯಿತು. ಬರಬರುತ್ತ ದೇವರ ಬಗ್ಗೆಯಿದ್ದ ಅನಾಥ ಬಂಧು, ದೀನರಕ್ಷಕ, ಪತಿತಪಾವನ, ಮೊದಲಾದ ಭಾವನೆಗಳು ಕಲುಷಿತಗೊಂಡು ಆ ದೇವರು ಬಡವರ ಪಾಲಿನ ಹಸಿವು, ಅನ್ಯಾಯಗಳನ್ನು ಪರಿಹರಿಸಲಾರದವನಾಗಿಬಿಟ್ಟ. ದೇವರ ಬಗ್ಗೆ ಅವತಾರಗಳು, ಪುರಾಣಗಳು ಅವನ ಲೀಲೆಯನ್ನು ವರ್ಣಿಸುತ್ತಿದ್ದರೆ ಕತೆ, ಕಾವ್ಯಗಳು ಮನುಷ್ಯ ಮತ್ತು ದೈವದ ನಡುವಿನ ಸಂಬಂಧಗಳನ್ನು ಕಲಾತ್ಮಕವಾಗಿ ವಿಶ್ಲೇಷಿಸಿವೆ. ಇದರಿಂದಾಗಿ ಮನುಷ್ಯ ಪರಂಪರೆಯುದ್ದಕ್ಕೂ ದೈವದ ಕುರಿತಾಗಿ ಅಗಾಧ ನಂಬಿಕೆಯನ್ನು ಮುಂದುವರಿಸಿಕೊಂಡು ಬಂದಿದ್ದಾನೆ. ಆಧುನಿಕ ಕಾಲದಲ್ಲಿ 'ದೇವರು' ರಾಜಕೀಯ ಅಧಿಕಾರ ಪಡೆಯುವ ಸಾಧನವಾಗಿ ಬಳಕೆಯಾಗುತ್ತಿರುವುದನ್ನು ನೋಡಿದರೆ ಇಂಡಿಯಾದ ಇತಿಹಾಸವನ್ನು ಅನುಮಾನದ ಕಣ್ಣುಗಳಿಂದ ನೋಡಲೇಬೇಕಾದ ಅನಿವಾರ್ಯತೆಯಿದೆ. ಎಲ್ಲ ಕಾಲಕ್ಕೂ ಸಾಮಾನ್ಯ ಮನುಷ್ಯ ಉಳ್ಳವರ ಅಧಿಕಾರ ಗದ್ದುಗೆಯ ಮೆಟ್ಟಿಲುಗಳಂತೆ ಬಳಕೆಯಾಗಿದ್ದಾನೆ. 'ದೇವರು' ಅನ್ನುವ ಅಮೂರ್ತ, ಅಗೋಚರ ವಸ್ತುವೊಂದನ್ನು ಬುದ್ಧಿವಂತ ಮನುಷ್ಯ ತನ್ನ ಸುಖಕ್ಕೆ, ಸಮಾಧಾನ, ನೆಮ್ಮದಿಗೆ, ಸಣ್ಣತನಕ್ಕೆ, ಸ್ವಾರ್ಥಕ್ಕೆ, ಸೇಡಿಗೆ ಬಳಸಿಕೊಂಡಿರುವುದನ್ನು ನೆನೆದರೆ ಆಶ್ಚರ್ಯವಾಗುತ್ತದೆ. ದೇವರು ಭಕ್ತಿಯ ನಿರಪೇಕ್ಷ ಸಾಧನವೂ

ಆಗಿ ಸುಲಿಗೆಯ ಕೇಂದ್ರವೂ ಆಗಿ ಮನುಷ್ಯ ಸಮುದಾಯದ ಅಪಾರ ವೈವಿಧ್ಯತೆಯ ಅಪರಾವತಾರವಾಗಿ ಬಿಟ್ಟಿದೆ.

'ದೇವರ' ಕುರಿತಾದ ನಂಬಿಕೆ, ಗ್ರಹಿಕೆಯನ್ನು ಅಧ್ಯಯನ ಮಾಡುವ ಮೂಲಕ ಆ ಜನಾಂಗದ ಸಾಂಸ್ಕೃತಿಕ-ಸಾಮಾಜಿಕ-ಆರ್ಥಿಕ ಹಿನ್ನೆಲೆಯನ್ನು ಗುರುತಿಸಿಕೊಳ್ಳುವುದು ಸಾಧ್ಯವಿದೆ. ಪಿಂಜಾರರಂಥ ಉಭಯ ಸಾಂಸ್ಕೃತಿಕ ಪ್ರತಿನಿಧಿಯಾದ ಜನಾಂಗವೊಂದು 'ದೇವರ' ಕುರಿತಾಗಿ ಎಂಥ ನಂಬಿಕೆಗಳನ್ನು ಒಳಗೊಂಡಿದೆ ? ಅದರಿಂದ ಆ ಜನಾಂಗದ ಅನನ್ಯ ಸಾಂಸ್ಕೃತಿಕ ವ್ಯಕ್ತಿತ್ವ ದರ್ಶನ ಹೇಗಾಗುತ್ತದೆ ? ಎನ್ನುವುದು ಕುತೂಹಲಕರವಾಗಿದೆ.

ಪಿಂಜಾರರು ಸದ್ಯ ನಿಷ್ಠರಾಗಿರುವ ಇಸ್ಲಾಂ ಧರ್ಮ ಏಕದೇವೋಪಾಸನೆಯನ್ನು ಬೋಧಿಸುತ್ತದೆ. 'ಅಲ್ಲಾಹ್' ಇಸ್ಲಾಂ ಅನುಯಾಯಿಗಳ ಪಾಲಿನ ದಯಾಮಯನೂ ಪ್ರಶ್ನಾತೀತನೂ ಆದ ಪರಮದೈವ. ಇಸ್ಲಾಂ ಎಂದರೆ 'ಶರಣುಹೋಗುವುದು' ಎಂದೇ ಅರ್ಥ. ಈ ಧರ್ಮ ತನ್ನೆಲ್ಲ ಅನುಯಾಯಿಗಳಿಗೆ ನಿಯಮಿಸಿದ ಆಚಾರ ಸಂಹಿತೆಗಳು ಪ್ರಕಟವಾಗಿರುವುದು ದೈವೀ ಆವೇಶದಲ್ಲಿ ಪ್ರವಾದಿ ಮೂಲಕ ಪ್ರಕಟವಾದವು ಎನ್ನಲಾದ ಸೂಕ್ತಗಳುಳ್ಳ ಪರಮಪವಿತ್ರವೂ ಪೂಜ್ಯವೂ ಆದ 'ಕುರಾನ್' ಗ್ರಂಥದಲ್ಲಿ. ದೇವರು ಒಬ್ಬನೇ, ಬೇರೆ ದೇವರಿಲ್ಲ, ಮಹಮ್ಮದನು ದೇವರ ಪ್ರವಾದಿ ಎಂದು ನಂಬುವ 'ಕಲ್ಮಾ' ಇಸ್ಲಾಂ ಅನುಯಾಯಿಗಳ ಮೂಲಮಂತ್ರ. ಉಳಿದಂತೆ ಇಸ್ಲಾಂ ಧರ್ಮದಲ್ಲಿ ಆಚರಣೆಯ ಮೂಲಸೂತ್ರಗಳಾದ ನಮಾಜ್, ರೋಜಾ, ಜಕಾತ್, ಹಜ್‌ಗಳ ಪರಿಪಾಲನೆ ಕಡ್ಡಾಯವಾಗಿದೆ. ಪಿಂಜಾರರ ವಿಚಾರ ಬಂದಾಗ ಇಸ್ಲಾಂ ಧಾರ್ಮಿಕ ಜ್ಞಾನದ ಕೊರತೆ ಎದ್ದು ಕಾಣುವ ಸಂಗತಿಯಾಗಿದೆ. ಈ ಸಂಗತಿಯನ್ನು ವಿಶ್ಲೇಷಿಸುವ ಸಲುವಾಗಿ ಇಸ್ಲಾಂ ಧರ್ಮದ ಪರಂಪರೆ, ನಂಬಿಕೆ, ಆಚರಣೆಗಳನ್ನು ಕುರಿತ ಪ್ರಾಥಮಿಕ ಪರಿಚಯವನ್ನು ಇಲ್ಲಿ ಕೊಡಲಾಗಿದೆ.

ಅರಬ್ಬಿ ಭಾಷೆಯಲ್ಲಿ ಇಸ್ಲಾಂ ಶಬ್ದಕ್ಕೆ ಅನುಸರಣೆ, ಆತ್ಮ ಸಮರ್ಪಣೆ ಅಥವಾ ಅಲ್ಲಾಹನ ಆಜ್ಞೆಯ ಮುಂದೆ ತಲೆಬಾಗಿಸುವುದು ಎಂಬ ಅರ್ಥಗಳುಂಟು. ಅಲ್ಲಾಹನ ಆದೇಶದ ಮೇರೆಗೆ ಮನುಷ್ಯ ತನ್ನ ಜೀವನವನ್ನು ಸಾಗಿಸಬೇಕು. ಇದೇ ಇಸ್ಲಾಂ ಧರ್ಮದ ಗುರಿ. ಮಾನವನನ್ನು ಸೃಷ್ಟಿಸಿದ ಅಲ್ಲಾಹನು ಜಗತ್ತಿನಲ್ಲಿ ಶಾಂತಿ ಮತ್ತು ಸುಖಜೀವನ ನಡೆಯಿಸಲೆಂದು ತನ್ನ ಪ್ರವಾದಿಗಳ ಮುಖಾಂತರ ಆದೇಶಗಳನ್ನು ಕಳುಹಿಸಿದನು. ಈ ಆದೇಶಗಳಂತೆ ಜೀವನ ಮಾಡುವುದರಲ್ಲಿಯೇ ಮಾನವನ ಕಲ್ಯಾಣ ಅಡಗಿದೆ. ಮಾನವರಲ್ಲಿಯೇ ಸತ್ಯವಂತ ಪುಣ್ಯಶೀಲರಾದ ವ್ಯಕ್ತಿಗಳನ್ನು ಆರಿಸಿ ಅವರನ್ನು ಪ್ರವಾದಿಗಳನ್ನಾಗಿ ಮಾಡಿ ತನ್ನ ಆದೇಶಗಳನ್ನು ಮಾನವ ಜನಾಂಗಕ್ಕೆ ಬೋಧಿಸಲು ಹೇಳಿದನು. ಆದರೆ ಅಲ್ಲಾಹನು ಎಂದಿಗೂ ಮಾನವರೂಪದಲ್ಲಿ ಅವತರಿಸಿಲ್ಲ ಹಾಗೂ ಅವತರಿಸುವುದಿಲ್ಲವೆಂದು ಇಸ್ಲಾಂ ನಂಬಿಕೆ.

ಅಲ್ಲಾಹನು ತನ್ನ ಆದೇಶಗಳ ಮೂಲಕ ಪೈಗಂಬರರ ಜೀವನವನ್ನು ಆದರ್ಶಪೂರ್ಣ ಮಾಡಿದನು. ಅಷ್ಟೇ ಅಲ್ಲ ಮಾನವ ಜನಾಂಗಕ್ಕೆ ಸನ್ಮಾರ್ಗ ತೋರಿಸಲು ಜಗತ್ತಿಗೇ ತನ್ನ ಪ್ರವಾದಿಗಳನ್ನು ಕಳುಹಿಸಿದನು. ಈ ಪ್ರವಾದಿಗಳು ತಮ್ಮ ಜನಾಂಗಕ್ಕೆ ತಮ್ಮ ಭಾಷೆಗಳಲ್ಲಿ ಅಲ್ಲಾಹನ ಆಜ್ಞೆಗಳನ್ನು ಬೋಧಿಸಿದರು.

ಇಸ್ಲಾಂ ಸಂಪ್ರದಾಯದ ಪ್ರಕಾರ ಹ।ಆದಮ್ ಅವರು ಪ್ರಥಮ ಮಾನವರು ಮತ್ತು ಪ್ರಥಮ ಪೈಗಂಬರರು. ಅವರ ಸ್ವಭಾವ ಸಹಜಧರ್ಮ ಇಸ್ಲಾಂ ಧರ್ಮವೇ ಆಗಿದ್ದಿತು. ಅವರ ನಂತರ ಪ್ರತಿ ಜನಾಂಗದಲ್ಲಿಯೂ ಸನ್ಮಾರ್ಗ ತೋರಿಸಲೆಂದು ಪ್ರವಾದಿಗಳು ಉದ್ಭವಿಸಿ ತಮ್ಮ ತಮ್ಮ ಕಾಲದಲ್ಲಿ ಇಸ್ಲಾಂ ಧರ್ಮವನ್ನು ಪ್ರತಿಪಾದಿಸಿದರು. ಕಾಲಾನುಗುಣವಾಗಿ ಇಸ್ಲಾಂ ಧರ್ಮವು ಮಾನವಕುಲದ ಭೌತಿಕ ಮತ್ತು ಆಧ್ಯಾತ್ಮಿಕ ಪ್ರಗತಿಗಾಗಿ ತತ್ವಶಃ ಬೆಳವಣಿಗೆ ಹೊಂದುತ್ತಾ ಸಾಗಿತು. ಇದನ್ನು ಪರಿಪೂರ್ಣಗೊಳಿಸಲು ಹ। ಆದಮ್ ಅವರಿಂದ, ಹ। ಮುಹ್ಮದ (ಸೊ.ಅ) ಪೈಗಂಬರರಿಗೆ ಸುಮಾರು 12400 ಪೈಗಂಬರರು ಅವತರಿಸಿದರು. ಪೈಗಂಬರರ ಪರಂಪರೆಯಲ್ಲಿ ಕೊನೆಯವರಾದ ಹ।। ಮುಹ್ಮದ್ ಪೈಗಂಬರರು ಮಾನವತೆಯ ತುತ್ತತುದಿಯನ್ನು ಮುಟ್ಟಿ ಪರಿಪೂರ್ಣತೆ ಹೊಂದಿದವರು. ಅಂತೆಯೇ ಅವರು ವಿಶ್ವಪೈಗಂಬರರು. ಇದು ಪವಿತ್ರ ಕುರಾನ್‌ನಲ್ಲಿ ಬರುವ ದೇವವಾಣಿಗಳಿಂದ ಸ್ಪಷ್ಟವಾಗುತ್ತದೆ.

ಕುರ್ ಆನ್ : ಕುರ್ ಆನ್ ಶಬ್ದ 'ಯಕರಾ' ಎಂಬ ಅರಬ್ಬೀ ಶಬ್ದದಿಂದ ಬಂದಿದೆ. 'ಯಕರಾ' ಎಂದರೆ ಓದು, ಪಠಿಸು ಎಂದರ್ಥ. ಇದಕ್ಕೆ 'ಅಲ್‌ಪುರಖಾನ್' 'ಕಲಾಮೇ ಅಲ್ಲಾಹ್' (ದೇವರನುಡಿ) ನೂರ್ (ಬೆಳಕು) ಮುಂತಾದ ಹೆಸರುಗಳುಂಟು. ಕುರ್ ಆನ್ ದೇವವಾಣಿಯುಳ್ಳ ಅಪೌರುಷೇಯ ಗ್ರಂಥವಾಗಿದೆ. ಸಮಗ್ರ ಕುರ್ ಆನ್ ದೇವರಿಂದ ಏಕಕಾಲದಲ್ಲಿಯೇ ರಚಿತವಾಗಿ ಸ್ವರ್ಗದಲ್ಲಿದ್ದು 23 ವರ್ಷಗಳ ಅವಧಿಯಲ್ಲಿ ಬೇರೆ, ಬೇರೆ ಪ್ರಸಂಗಗಳಲ್ಲಿ ಅವಶ್ಯಕತೆಗನುಗುಣವಾಗಿ ಪ್ರವಾದಿ ಹ। ಮುಹ್ಮದ್ ಅವರ ಮೇಲೆ ಅಲ್ಲಾಹನು ಅದನ್ನು ಅವತೀರ್ಣಗೊಳಿಸಿದನು. ಪ್ರಾರಂಭದ ಎಂಟು ಒಂಬತ್ತು ವರ್ಷಗಳ ಅವಧಿಯಲ್ಲಿ ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಅವತೀರ್ಣಗೊಂಡ ಕುರಾನಿನ ಹೆಚ್ಚು ಭಾಗಗಳು ಸಾಮಾನ್ಯವಾಗಿ ಸಾಮಾಜಿಕ ಮತ್ತು ರಾಜಕೀಯ ವಿಷಯಗಳ ಮೇಲೆ ಪ್ರಕಾಶ ಬೀರುತ್ತವೆ. ಹ। ಮುಹ್ಮದ್ ಪೈಗಂಬರರು ಒಂದೊಂದು 'ಸೂರಾ' ಅವತೀರ್ಣವಾದೊಡನೇ ಹ। ಜೈದಬಿನ್ ಸಾದತ್ ಅನ್‌ಸಾರಿ ಅವರಿಂದ ಅದನ್ನು ಬರೆಯಿಸುತ್ತಿದ್ದನು. ಸಂಪೂರ್ಣ ಕುರಾನ್ ಅವತೀರ್ಣವಾದ ದಿನ ಅಲ್ಲಾಹನ ಆದೇಶದ ಪ್ರಕಾರ ಕುರ್ ಆನ್, 'ಸೂರಾ' ಮತ್ತು ಆಯತ್‌ಗಳನ್ನು ವ್ಯವಸ್ಥಿತ ಕ್ರಮದಲ್ಲಿ ಸಂಕಲನ ಮಾಡಲಾಯಿತು. ಹ।। ಮುಹ್ಮದ್ ಪೈಗಂಬರರ ಮರಣಾನಂತರ ಹ। ಅಬೂಬ್‌ಕರ್ ಅವರು ಪೈಗಂಬರರು ಬರೆಯಿಸಿದ ಕುರ್ ಆನ್‌ನ ಎಲ್ಲಾ ಭಾಗಗಳನ್ನು ಕ್ರೋಢೀಕರಿಸಿ ಸಂಪೂರ್ಣ ಕುರ್ ಆನ್‌ನ ಮೂಲ ಪ್ರತಿಯನ್ನು ಸಿದ್ಧಪಡಿಸಿದರು (ಕ್ರಿ.ಶ. 7ನೆಯ ಶತಮಾನ). ಅನಂತರ ಹ। ಉಸ್ಮಾನ್ ಅವರು ಕುರ್ ಆನ್‌ನ ಮೂಲ ಪ್ರತಿಯನ್ನು ನಕಲುಗೊಳಿಸಿ ಇಜಿಪ್ತ್, ಸಿರಿಯಾ, ಮಾರಿಶಸ್, ಯೆಮನ್, ಬಹರೈನ್, ಮೆಕ್ಕಾ, ಮದೀನಾ, ಡಮಾಸ್ಕಸ್ ದೇಶಗಳ ರಾಜ್ಯಪಾಲರಿಗೆ ಕಳುಹಿಸಿಕೊಟ್ಟರು. ಇಂದಿಗೂ ಅಲ್ಲಿ ಹ। ಉಸ್ಮಾನರು ಕಳುಹಿಸಿದ್ದ ಕುರ್ ಆನ್ ಪ್ರತಿಗಳನ್ನು ಕಾಣಬಹುದಾಗಿದೆ. ಮೂಲದಲ್ಲಿ ಅರಬ್ಬಿ ಭಾಷೆಯಲ್ಲಿದ್ದ 'ಕುರ್ ಆನ್' ಸುಮಾರು 40 ವಿವಿಧ ಭಾಷೆಗಳಿಗೆ ಅನುವಾದವಾಗಿದೆ.

ಕುರ್ ಆನ್ 30 ಪಾರಾ (ವಿಭಾಗ) 114 ಸೂರಾ (ಅಧ್ಯಾಯ) 6,666ರಷ್ಟು ಪದ್ಯಗಳಿಂದ ಕೂಡಿದೆ. ಕೆಲವು ಅಧ್ಯಾಯಗಳು ದೊಡ್ಡವು, ಕೆಲವು ಚಿಕ್ಕವು ಆಗಿದ್ದು ವಿಷಯಾನುಸಾರ ಅದನ್ನು ಕ್ರೋಢೀಕರಿಸಲಾಗಿದೆ. ಪದ್ಯವೂ ಅಲ್ಲದ ಗದ್ಯವೂ ಅಲ್ಲದ ಕುರ್ ಆನ್ ವಾಕ್ಯಗಳು ಪ್ರಾಸ ಅನುಪ್ರಾಸಗಳಿಂದ ಕೂಡಿದೆ. ಶೈಲಿ

ಬಹು ಸುಂದರವೂ, ಗಂಭೀರವೂ ಆಗಿದ್ದು ಕೆಲವು ಭಾಗಗಳು ಸಂವಾದ ರೂಪದಲ್ಲಿದೆ. ಇಸ್ಲಾಂ ಧರ್ಮದ ತಳಪಾಯುವೇ ಕುರ್ ಆನ್ ಆಗಿದ್ದು ನಿತ್ಯಜೀವನದ ಮೂಲ ಸೂತ್ರಗಳನ್ನು ಅದು ನಿರ್ಧಾರ ಮಾಡುವುದಲ್ಲದೆ ಸಾಮಾಜಿಕ, ರಾಜಕೀಯ, ಆರ್ಥಿಕ ರಂಗಗಳಿಗೆ ಸಂಬಂಧಿಸಿದ ಕಾನೂನು ನಿಯಮಗಳ ಮೇಲೂ ಬೆಳಕು ಚೆಲ್ಲುತ್ತದೆ. ಅಲ್ಲಾಹನು ಒಬ್ಬನೇ ಮಾನವರೆಲ್ಲರೂ ಸಹೋದರರು ಮತ್ತು ಸಮಾನರು ಎಂದು ಆದರಲ್ಲಿ ಹೇಳಲಾಗಿದೆ. ಹ। ಮುಹ್ಮದ್ ಪೈಗಂಬರರು ಬೋಧಿಸಿದ ವಚನಗಳ ಗ್ರಂಥಕ್ಕೆ 'ಹದೀಸ್' ಎಂದು ಕರೆಯುತ್ತಾರೆ.

ಅರೇಬಿಯದ 'ಕುರೇಷು' ಬುಡಕಟ್ಟಿಗೆ ಸೇರಿದ 'ಫೆಹರ್' ಸಂತತಿಯ ಕುಸ್ಸಾಯ್ ಎಂಬುವರ ಮಗ ಅಬ್‌ದೇ ಮುನಾಫ್. ಇವರ ಮೊಮ್ಮಗ ಅಬ್ದುಲ್ ಮುತಾಲಿನ್. ಅಬ್ದುಲ್ ಮುತಾಲಿಬ್‌ರಿಗೇ 12 ಜನ ಗಂಡು ಮಕ್ಕಳು 6 ಜನ ಹೆಣ್ಣುಮಕ್ಕಳು. ಹ। ಮುಹ್ಮದ್ (ಸೊ.ಅ) ರ ತಂದೆ ಅಬ್ದುಲ್ ಅವರು ಹನ್ನೆರಡು ಜನ ಗಂಡು ಮಕ್ಕಳಲ್ಲಿ ಒಬ್ಬರು. ಇವರು ಹ॥ ಬೀಬಿ ಅಮೀನಾರನ್ನು ಮದುವೆಯಾಗಿದ್ದರು. ಇವರ ಏಕಮಾತ್ರ ಪುತ್ರ ಮುಹ್ಮದ. ಇವರು ಕ್ರಿ.ಶ. 571 ರಲ್ಲಿ ಮೆಕ್ಕಾದಲ್ಲಿ ಜನಿಸಿದರು. 8 ವರ್ಷದವರಾಗುವ ಹೊತ್ತಿಗೇ ತಂದೆ, ತಾಯಿ, ಅಜ್ಜನನ್ನು ಕಳೆದುಕೊಂಡು ಕಕ್ಕ ಅಬುತಾಲಿಬ್‌ರ ಆಶ್ರಯದಲ್ಲಿ ಬೆಳೆದರು. ಇವರು 25 ವರ್ಷದ ಯುವಕರಾಗಿದ್ದಾಗ, ಇವರ ಘನತೆ, ಗಾಂಭೀರ್ಯ, ಪ್ರಾಮಾಣಿಕತೆಗಳನ್ನು ಮೆಚ್ಚಿಕೊಂಡ 40 ವರ್ಷದ ವಿಧವೆ ಖದೀಜಾ ಇವರನ್ನು ಮದುವೆಯಾದರು. ಸ್ತ್ರೀಕಲ್ಯಾಣ, ಸಮಾಜ ಸುಧಾರಣೆ, ಶಾಂತಿ ಸಾಧನೆ, ಇತ್ಯಾದಿ ಒಳ್ಳೆಯ ಉದ್ದೇಶಗಳಿಗಾಗಿ, ವಯಸ್ಕ, ವಿಧವೆ, ವಿವಾಹವಿಚ್ಛೇದಿತ ಹನ್ನೆರಡು ಜನ ಸ್ತ್ರೀಯರನ್ನು ಪೈಗಂಬರರು ಮದುವೆಯಾಗಿದ್ದರು. ಇವರ ಆರು ಜನ ಮಕ್ಕಳಲ್ಲಿ ಹ। ಫಾತಿಮಾ ಅವರನ್ನು ಹೊರತುಪಡಿಸಿ ಎಲ್ಲರೂ ಚಿಕ್ಕವಯಸ್ಸಿನಲ್ಲಿಯೇ ಮರಣ ಹೊಂದಿದರು.

ಅಧೋಗತಿಗಿಳಿದ ಮಾನವಕುಲಕ್ಕೆ ಸನ್ಮಾರ್ಗ ತೋರಲು ಪ್ರವಾದಿತ್ವದ ಕರೆಬರುವ ಪೂರ್ವದಲ್ಲಿ ಹ। ಮುಹ್ಮದ ಪೈಗಂಬರರು ಅವ್ಯಾಹತವಾಗಿ 'ಹಿರಾ' ಗುಹೆಯಲ್ಲಿ ಧ್ಯಾನಾಸಕ್ತರಾಗಿ ಕುಳಿತು ಧೀರ್ಘ ಚಿಂತನೆ ಮಾಡುತ್ತಿದ್ದರು. ತಮ್ಮ 40ನೆಯ ವಯಸ್ಸಿನಲ್ಲಿ 'ಹಿರಾ' ಗುಹೆಯಲ್ಲಿ ಧ್ಯಾನಾಸಕ್ತರಾದಾಗ ರಮ್‌ಜಾನ್ ತಿಂಗಳ 27ನೆಯ ಮಧ್ಯರಾತ್ರಿ (ಕ್ರಿ.ಶ. 609), ಸಮಯದಲ್ಲಿ ಹ। ಜಿಬ್ರಾಯಿಲ್‌ರ ಮುಖಾಂತರ ವಿಶ್ವ ಪೈಗಂಬರರೆಂದು ಅಧಿಕಾರ ಸೂತ್ರಗಳನ್ನು ವಹಿಸಿಕೊಂಡಂತೆ ಅನುಭವವಾಯಿತು.

ಹ। ಖದೀಜಾ ಅವರು ಪೈಗಂಬರರ ಪ್ರಥಮ ಶಿಷ್ಯರಾದರು. ಅನಂತರ ಹ। ಅಲಿ, ಹ। ಉಸ್ಮಾನ್, ಹ। ಅಬೂಬಕ್ಕರ್, ಜಯ್‌ದ, ಬಿಲಾಲ, ಯಾಸಿರ, ಆಬ್ದುಲ್‌ಬಿನ್ ಮಸಜಿದ್, ಹಮಜಾ, ಉಮರ ಮುಂತಾದವರು ಪೈಗಂಬರರ ಶಿಷ್ಯರಾದರು. ಇಸ್ಲಾಂ ಧರ್ಮದ ತತ್ವ ಮತ್ತು ಸಂದೇಶಗಳನ್ನು ಪ್ರಸಾರ ಮಾಡುತ್ತಾ ಕ್ರಿ.ಶ. 632 ರಲ್ಲಿ ಜೂನ್ 2 ರಂದು ಸೋಮವಾರ ಮುಂಜಾವಿನಲ್ಲಿ ತಮ್ಮ 63ನೆಯ ವರ್ಷದಲ್ಲಿ ಕೊನೆ ಉಸಿರೆಳೆದರು.

ಹ। ಮುಹ್ಮದ್ ಪೈಗಂಬರರು ತಮಗಿಂತಲೂ ಪೂರ್ವದಲ್ಲಿದ್ದ ಇಸ್ಲಾಂ ಧರ್ಮಕ್ಕೆ ಒಂದು ನಿಶ್ಚಿತ ಸ್ವರೂಪ ನೀಡಿ ಅಲ್ಲಾಹನು ನೀಡಿದ ಸಂದೇಶಗಳನ್ನು ಜನಮನದಲ್ಲಿ ಬಿತ್ತಿದರು. ಅಷ್ಟೇ ಅಲ್ಲ ಗಜಾಖ್

(ಅನ್ನದಾತ) ಗಫಾರ್ (ಕ್ಷಮಾದಾತ) ರಹೀಮ್ (ದಯಾಮಯಿ) - ಮುಂತಾದ 99 ಸದ್ಗುಣ ಸೂಚಕ ಹೆಸರುಗಳಿಂದ ಪ್ರಸಿದ್ಧಿ ಪಡೆದರು.

ಹ। ಮುಹ್ಮದ್ ಪೈಗಂಬರರು ತಮ್ಮ ಮೇಲೆ ಅವತೀರ್ಣಿಸಿದ ಪವಿತ್ರ ಕುರ್ ಆನ್‌ನಲ್ಲಿಯ ವಾಣಿಗಳನ್ನು 23 ವರ್ಷಗಳ ಪರ್ಯಂತ ಬೋಧಿಸಿ ಅವುಗಳನ್ನೇ ತಾವೂ ನಡೆದು ತೋರಿಸಿದರು. ಅವುಗಳಲ್ಲಿ ಪ್ರಮುಖವಾದವುಗಳನ್ನು ಸಂಗ್ರಹವಾಗಿ ಕೆಳಗೆ ವಿವರಿಸಿದೆ.

ಇಸ್ಲಾಂ ನಿಂತಿರುವುದು ನಂಬಿಕೆಯ ಮೇಲೆ. ಇದನ್ನೇ 'ಇಮಾನ್' ಎಂದು ಕರೆಯಲಾಗಿದೆ. 1) ಅಲ್ಲಾಹ್, 2) ಅಲ್ಲಾಹ್‌ನ ದೂತರು, 3) ದೈವಿ ಗ್ರಂಥಗಳು, 4) ಅಲ್ಲಾಹನು ಕಳುಹಿಸಿದ ಪೈಗಂಬರರು, 5) ಕಯಾಮತ್, 6) ಅಲ್ಲಾಹ್‌ನ ನಿರ್ಣಯ ಮತ್ತು ಸಾವಿನ ನಂತರದ ಕಲ್ಪನೆ. ಇವುಗಳಲ್ಲಿ ಪ್ರತಿಯೊಬ್ಬನೂ ನಂಬಿಕೆಯಿಡಬೇಕೆಂದು 'ಕುರ್ ಆನ್'ನಲ್ಲಿ ಸ್ಪಷ್ಟಪಡಿಸಲಾಗಿದೆ.

ಅಲ್ಲಾಹ್‌ನಲ್ಲಿ ಅಚಲ ನಂಬಿಕೆ : ಅಲ್ಲಾಹ್‌ನು ಒಬ್ಬನೇ ಒಬ್ಬ. ಅವನೇ ಬ್ರಹ್ಮಾಂಡದ ಸೃಷ್ಟಿಕರ್ತ. ಸೂರ್ಯ, ಚಂದ್ರ, ಪೃಥ್ವಿ, ನಕ್ಷತ್ರಗಳೆಲ್ಲವೂ ಅವನಿಂದಲೇ ಹುಟ್ಟಿವೆ. ಎಲ್ಲಾ ಜೀವರಾಶಿಗಳಿಗೂ ಅವನೇ ಜೀವದಾನ ಜೀವನೋಪಾಯ ಕಲ್ಪಿಸಿರುವನು. ಹುಟ್ಟು ಮತ್ತು ಸಾವು ಅಲ್ಲಾಹನ ಅಧೀನ. ಮಾನವ ಜನಾಂಗಕ್ಕೆ ಸನ್ಮಾರ್ಗ ತೋರಿಸಲು ಅಲ್ಲಾಹನು ಪೈಗಂಬರರನ್ನು ಕಳುಹಿಸಿದ್ದಾನೆ. ಆದುದರಿಂದ ಏಕ ದೇವತ್ವವೇ ಮುಸ್ಲಿಂ ಭಕ್ತಿಯ ತಳಹದಿ. ಇದಕ್ಕೇ 'ತೌಹೀದ್' ಎನ್ನುವರು. ಈ ಸಿದ್ಧಾಂತವನ್ನು ಪವಿತ್ರ ಕುರ್ ಆರ್‌ನಲ್ಲಿ ಹೇಳಲಾಗಿದೆ.

ಅಲ್ಲಾಹ್‌ನ ದೂತರಲ್ಲಿ ನಂಬಿಕೆ : ಮುಸ್ಲಿಮರು ಅಲ್ಲಾಹ್‌ನ ನಂತರ ಅವನ ದೂತರ ಮೇಲೆ ನಂಬಿಕೆಯಿಡಬೇಕು. ಅಲ್ಲಾಹ್‌ನ ಈ ದೂತರು ಜ್ಯೋತಿಯಿಂದ ಹುಟ್ಟಿದವರು. ಆದರೆ ಕಣ್ಣಿಗೆ ಕಾಣಿಸರು, ಅಲ್ಲಾಹನು ನಿಯಮಿಸಿದ ಕಾರ್ಯಗಳನ್ನು ಚಾಚೂತಪ್ಪದೆ ಅನುಸರಿಸುವವರು. ಅವರಲ್ಲಿ ಹ। ಜಿಬ್ರಾಯಿಲ್, ಹ। ಇಸ್ರಾಫಿಲ್, ಹ। ಮಿಕಾಯಿಲ್, ಹ। ಇಜರಾಯಿಲ್ ಪ್ರಮುಖರು.

ದೈವಗ್ರಂಥಗಳಲ್ಲಿ ನಂಬಿಕೆ : ಅಲ್ಲಾಹ್‌ನು ಕಾಲಕಾಲಕ್ಕೆ ಕಳುಹಿಸಿದ ದೈವಗ್ರಂಥಗಳಲ್ಲಿ ನಂಬಿಕೆಯಿಡಬೇಕು. ಹ। ದಾವೂದ್ ಅವರ ಮೇಲೆ ಜಬೂರನ್ನು, ಹ। ಮೂಸಾ ಅವರ ಮೇಲೆ ತಾರೇತನ್ನು, ಹ। ಇಸಾ ಅವರ ಮೇಲೆ ಇಂಜೀ ಅರನ್ನು ಅವತೀರ್ಣಿಸಿದಂತೆ, ಹ। ಮುಹ್ಮದ್ ಪೈಗಂಬರರ ಮೇಲೆ ಪವಿತ್ರ 'ಕುರ್ ಆನ್' ಅವತೀರ್ಣಿಸಿದರು.

ಪೈಗಂಬರರಲ್ಲಿ ನಂಬಿಕೆ : ಅಲ್ಲಾಹ್‌ನು ಮಾನವ ಜನಾಂಗಕ್ಕೆ ಸನ್ಮಾರ್ಗ ತೋರಿಸಲು ಕಾಲಕಾಲಕ್ಕೆ ಕಳುಹಿಸಿದ ಎಲ್ಲಾ ಪೈಗಂಬರರ ಮೇಲೆ ಭಕ್ತಿಯನ್ನಿಡಬೇಕು. ಇವರು ಸುಮಾರು ಒಂದು ಲಕ್ಷ ಇಪ್ಪತ್ನಾಲ್ಕು ಸಾವಿರವೆಂದು ಹೇಳುವರು. ಅವರಲ್ಲಿ ಹ। ಆದಮ್ ಮೊದಲನೆಯವರು, ಹ। ಮುಹ್ಮದ್ ಪೈಗಂಬರರು ಕೊನೆಯವರು.

ಕಯಾಮತದಲ್ಲಿ ನಂಬಿಕೆ : ಕಯಾಮತ್ ಅಂದರೆ ಅಲ್ಲಾಹ್‌ನು ಇಡೀ ಸಚರಾಚರ ಪ್ರಪಂಚವನ್ನು ಲಯಗೊಳಿಸುವ ದಿನ. ಹ। ಇಸ್ರಾಫಿಲ್ ಜಗತ್ ಪ್ರಳಯ ಮಾಡುವಲ್ಲಿ ಪ್ರಮುಖ ಪಾತ್ರ ವಹಿಸುವರು.

ಜಗತ್ಪ್ರಳಯ ಒಂದು ದಿನ ಆಗಿಯೇ ತೀರುತ್ತದೆ. ಆದರೆ ಇಂಥ ದಿನವೇ ಅದು ಆಗುತ್ತದೆಂಬುದು ಅಲ್ಲಾಹ್‌ನಿಗೆ ಮಾತ್ರ ಗೊತ್ತು.

ಅಲ್ಲಾಹ್‌ನ ನಿರ್ಣಯದಲ್ಲಿ ನಂಬಿಕೆ : ಒಳ್ಳೆಯದನ್ನು ಕೆಟ್ಟದ್ದನ್ನು ಮಾಡುವವ ಅಲ್ಲಾಹನೇ. ನಾವು ಯಾವುದನ್ನು ಬಯಸಬಾರದು, ಬೇಡಬಾರದು, ನಮ್ಮ ಕಾರ್ಯವನ್ನು ನಾವು ಮಾಡುತ್ತಿರಬೇಕು. ಎಲ್ಲವನ್ನೂ ಅಲ್ಲಾಹ್‌ನೇ ನಿರ್ಣಯಿಸುವವನು. ಅವನ ನಿರ್ಣಯದ ಮೇಲೆ ನಾವು ನಂಬಿಕೆ ಇಡಬೇಕು.

ಸಾವಿನ ನಂತರದ ಲೋಕದಲ್ಲಿ ನಂಬಿಕೆ : ಮುಸ್ಲಿಮನು ಸಾವು ಬಯಸಬಾರದು. ಬದುಕಿದಷ್ಟು ದಿನ ಸತ್ಕರ್ಮಗಳನ್ನು ಮಾಡಿ ಪುಣ್ಯ ಗಳಿಸಬೇಕು. ಮರಣಾನಂತರ ಎಲ್ಲರೂ ಅಲ್ಲಾಹನ ಮುಂದೆ ಉಪಸ್ಥಿತರಾಗುವರು. ಇದಕ್ಕೆ 'ಹಶರ್' ಎನ್ನುತ್ತಾರೆ. ಭೂಲೋಕದಲ್ಲಿ ಮನುಷ್ಯನು ಮಾಡುವ ಎಲ್ಲಾ ಕೃತಿಗಳ ಲೆಕ್ಕಾಚಾರವನ್ನು ಅಲ್ಲಾಹನ ನ್ಯಾಯಾಲಯದಲ್ಲಿ ಮಾಡಲಾಗುವುದು.

ಮಾನವ ಜನಾಂಗ ಸನ್ಮಾರ್ಗದಲ್ಲಿ ನಡೆಯಲು ಕುರ್ ಆನ್‌ನಲ್ಲಿ ನಂಬುಗೆ ಅತ್ಯಂತ ಅವಶ್ಯ. ಜೊತೆಗೆ ಪಂಚಸೂತ್ರಗಳ ಪರಿಪಾಲನೆಯನ್ನು ಹೇಳಲಾಗಿದೆ. ಕಲಿಮಾ, ನಮಾಜ್, ರೋಜಾ, ಜಕಾತ್, ಹಜ್ - ಇವೇ ಆ ಪಂಚಸೂತ್ರಗಳು. ಇವುಗಳನ್ನು ಕಡ್ಡಾಯವಾಗಿ ಆಚರಿಸಬೇಕು.

ಕಲಿಮಾ (ಪ್ರಾರ್ಥನಾರೂಪದ ಶ್ಲೋಕ) : ಕಲಿಮಾ ಒಟ್ಟು ಆರು ಇದ್ದು, ಇವುಗಳಲ್ಲಿ 5 ಕಲಿಮಾಗಳನ್ನು ಮುಸಲ್ಮಾನರು ಕಡ್ಡಾಯವಾಗಿ ಪಠಿಸಬೇಕು. ಇವು ಅಲ್ಲಾಹ್‌ನ ಹೊರತಾಗಿ ದೇವರಿಲ್ಲ. ಹ। ಮುಹ್ಮದ್‌ರು ಅಲ್ಲಾಹ್‌ನ ದೂತರು. ಪೈಗಂಬರರು ನಡೆದ ದಾರಿಯಲ್ಲಿ ನಮ್ಮನ್ನು ನಡೆಸು ಎಂಬ ಬೇಡಿಕೆಯನ್ನು ಒಳಗೊಂಡಿರುತ್ತವೆ.

ನಮಾಜ್ (ಪ್ರಾರ್ಥನೆ) : ಮುಸ್ಲಿಮನೊಬ್ಬ ತನ್ನ ಸೃಷ್ಟಿಕರ್ತನೊಡನೆ ವೈಯಕ್ತಿಕವಾಗಿ ಸಾಮೂಹಿಕವಾಗಿ ಮಸೀದಿಯಲ್ಲಿ ದಿನಕ್ಕೆ ಐದು ಸಲ ಪಡೆಯುವ ಆಧ್ಯಾತ್ಮಿಕ ಸಂಪರ್ಕಕ್ಕೆ ಸಾಧನವಾದದ್ದು ನಮಾಜ್. ಪ್ರತಿಯೊಬ್ಬ ಮುಸ್ಲಿಮನು ತನ್ನ ದೇಹ ಆತ್ಮಗಳಿಗೆ ಕಾರಣವಾದ ಪವಿತ್ರ ಶಕ್ತಿಯೊಂದರ ಸಾನಿಧ್ಯದಲ್ಲಿ ತಾನಿದ್ದೇನೆಂಬ ಭಾವನೆಯನ್ನು ನಮಾಜ್ ಗಟ್ಟಿಗೊಳಿಸುತ್ತದೆ ಎಂದು ನಿರೀಕ್ಷಿಸಲಾಗಿದೆ. ಇದು ಎಲ್ಲಾ ಅನೀತಿ ಅಪರಾಧಗಳಿಂದ ನಮ್ಮನ್ನು ದೂರವಿರಿಸುತ್ತದೆ. ನಮಾಜಿನ ಕ್ರಮವನ್ನು ಕುರಾನ್‌ನಲ್ಲಿ ಸ್ಪಷ್ಟವಾಗಿ ಹೇಳಿಲ್ಲವಾದರೂ ನಮಾಜಿನ ವೇಳೆಯನ್ನು, ನಮಾಜಿನ ಮಹತ್ವವನ್ನು ವಿವರಿಸಲಾಗಿದೆ.

ನಮಾಜ್ ಮುಸ್ಲಿಮನನ್ನು ದೇಹದಲ್ಲಿ ಮತ್ತು ಆತ್ಮದಲ್ಲಿ ಕ್ಲುಪ್ತನನ್ನಾಗಿ, ವ್ಯವಸ್ಥಿತನನ್ನಾಗಿ, ಸ್ವಸ್ಥಶುದ್ಧನನ್ನಾಗಿ ಇರಿಸುವ ಆಧ್ಯಾತ್ಮಿಕ ಸಾಧನವಾಗಿದೆ. 'ಜಮಾತ್'ನೊಂದಿಗೆ ಮಾಡುವ ನಮಾಜ್ (ಸಾಮೂಹಿಕ ಪ್ರಾರ್ಥನೆ) ಮನಸ್ಸಿನಲ್ಲಿ ಸಮಷ್ಟಿ ಚೈತನ್ಯವನ್ನು ಉಂಟು ಮಾಡುತ್ತದೆ. ಜೊತೆಗೆ ಸಮಾನತೆ ಹಾಗೂ ಸೋದರ ಭಾವನೆಗಳನ್ನು ಜಾಗ್ರತಗೊಳಿಸಿ ಸ್ಥಿರೀಕರಿಸಲು ಸಹಾಯಕವಾಗುತ್ತದೆ.

ಮುಸ್ಲೀಮರು ಯಾವುದೇ ವಯಸ್ಸಿನವರಿರಲಿ, ಯಾವುದೇ ಅಂತಸ್ತಿನವರಿರಲಿ ಎಂಥದೇ ಪರಿಸ್ಥಿತಿಯಲ್ಲಿರಲಿ ನಮಾಜು ಮಾಡಲೇಬೇಕು. ಏಕೆಂದರೆ ಕರುಣಾಮಯನಾದ ಅಲ್ಲಾಹ್‌ನೊಂದಿಗೆ ಮುಸ್ಲಿಮನು ನಡೆಸುವ ನೇರ ಸಂವಾದವೇ ನಮಾಜಿನ ಜೀವಾಳವಾಗಿದೆ.

ನಮಾಜ್ ಮಾಡುವವರು ದೇಹ ಶುದ್ಧವಾಗಿರಬೇಕು. ಅವರು ಸ್ವಚ್ಛವಾದ ಬಟ್ಟೆಗಳನ್ನು ಮೊಣಕಾಲು ಮುಚ್ಚುವವರೆಗೆ ಧರಿಸಿರಬೇಕು. 'ಅಜಾನ್' ಹೇಳಿದ ನಂತರ 'ವಜೂ' ಮಾಡಿಕೊಂಡು ಶುಚಿಯಾದ ಜಾಗದಲ್ಲಿ 'ಮೆಕ್ಕಾ ಷರೀಫ್' (ಪಶ್ಚಿಮ ದಿಕ್ಕಿನೆಡೆಗೆ) ಮುಖಮಾಡಿ ಮನಸ್ಸಿನಲ್ಲಿ 'ನಿಯತ್' ಕಟ್ಟಿಕೊಂಡು ನಮಾಜು ಮಾಡಬೇಕು. ದಿನಕ್ಕೆ ಐದು ಹೊತ್ತು ಗೊತ್ತಾದ ವೇಳೆಯಲ್ಲಿ ನಿರ್ದಿಷ್ಟ ಸಂಖ್ಯೆಯ 'ರಖಾತ್'ಗಳನ್ನು ಪಠಣ ಮಾಡಬೇಕು. ರಮ್‌ಜಾನ್ ಮತ್ತು ಬಕರೀದ್ ಹಬ್ಬದಂದು ಮಾಡುವ ನಮಾಜುಗಳಿಗೆ ಕ್ರಮವಾಗಿ 'ಈದುಲ್‌ಫಿತರ್' ಮತ್ತು 'ಈದುಜ್ಜುಹಾ' ಎನ್ನುತ್ತಾರೆ. ಈ ನಮಾಜುಗಳ ವೇಳೆ ಸೂರ್ಯೋದಯದಿಂದ ಪ್ರಾರಂಭವಾಗಿ ಸೂರ್ಯಾಸ್ತದವರೆಗೆ ಇರುತ್ತದೆ. ಇವುಗಳನ್ನು 'ಈದಗಾ' ಮೈದಾನದಲ್ಲಿ ಸಾಮೂಹಿಕವಾಗಿ ಮಾಡುತ್ತಾರೆ.

<u>ರೋಜಾ (ಉಪವಾಸ ವ್ರತ) :</u> ಪ್ರತಿವರ್ಷ 'ರಮ್‌ಜಾನ್' ತಿಂಗಳಿನಲ್ಲಿ ಎಲ್ಲಾ ಮುಸ್ಲಿಮರು ಉಪವಾಸ ಕೈಗೊಳ್ಳಬೇಕು. ನಮಾಜಿನಂತೆ ರೋಜಾವನ್ನು ಕೂಡ ಎಲ್ಲಾ ಪೈಗಂಬರರು ತಮ್ಮ ತಮ್ಮ ಅನುಯಾಯಿಗಳಿಗೆ ಕಡ್ಡಾಯವಾಗಿ ಕೈಗೊಳ್ಳಬೇಕೆಂದು ಬೋಧಿಸಿದ್ದರು. ಕುರ್ ಆನ್‌ನಲ್ಲಿ ರೋಜಾದ ಮಹತ್ವ ಕುರಿತು ಹೇಳಲಾಗಿದೆ.

ರಮ್‌ಜಾನ್ ಉಪವಾಸ ಒಂದು ತಿಂಗಳು ಮಾಡಬೇಕು. ಬೆಳಗಿನ ನಾಲ್ಕು ಗಂಟೆಯಿಂದ ಐದು ಗಂಟೆಯ ಮಧ್ಯದಲ್ಲಿ ಮಿತ ಆಹಾರ ಸ್ವೀಕರಿಸಿ ಸಂಜೆ ಪರ್ಯಂತ ನೀರನ್ನೂ ಕೂಡ ಕುಡಿಯದೇ ಇದ್ದು ರಾತ್ರಿ ಆಹಾರ ತೆಗೆದುಕೊಳ್ಳಬೇಕು. ಈ ಕಾಲದಲ್ಲಿ ಕಾಮ ಕ್ರೋಧಾದಿಗಳಿಗೆ ವಶವಾಗದೆ, ಭೋಗ ಲಾಲಸೆಗಳಿಗೆ ಬೀಳದೆ ಮನಸ್ಸನ್ನು ಪರಿಶುದ್ಧವಾಗಿಟ್ಟುಕೊಂಡು ಇರಬೇಕು. ಸಾಯಂಕಾಲ ಮಸೀದಿಗೆ ಹೋಗಿ 'ತರಾವಿ' ನಮಾಜು ಮಾಡಬೇಕು. ರೋಜಾ ಇದ್ದವರು ನಮಾಜು, ಕುರಾನ್‌ಪಠಣ, ಮಸೀದಿಗಳಲ್ಲಿ ಧರ್ಮಶ್ರವಣ ಇತ್ಯಾದಿ ಕಾರ್ಯಗಳಲ್ಲಿ ಮನ ತೊಡಗಿಸಬೇಕು. ರಮ್‌ಜಾನ್ ತಿಂಗಳಿನಲ್ಲಿ 'ಕುರ್‌ಆನ್' ಅವತೀರ್ಣವಾಯಿತು. ಕಾರಣ, ಈ ತಿಂಗಳಿನಲ್ಲಿ ಪ್ರತಿಯೊಬ್ಬ ಮುಸ್ಲಿಮನು ಉಪವಾಸ ವ್ರತ ಕೈಗೊಳ್ಳಬೇಕು. ಉಪವಾಸ ವ್ರತದಿಂದ ರಾಗದ್ವೇಷಗಳ ಸಂಯಮ, ದೇಹ ಆತ್ಮಗಳ ಪರಿಶುದ್ಧಿ ಸಾಧ್ಯವಾಗುತ್ತದೆ.

<u>ಜಕಾತ್ (ದಾನ)</u> : ನಿರ್ದಿಷ್ಟ ಆದಾಯವು ಒಂದು ವರ್ಷದವರೆಗೆ ಉಳಿದುಕೊಂಡರೆ ಮುಂದಿನ ವರ್ಷ ಅದು ಕರಾಕರಣೆಗೆ ಪಾತ್ರವಾಗುವುದು. ಇದಕ್ಕೇ 'ಜಕಾತ್' ಎನ್ನುವರು. ಪ್ರತಿವರ್ಷ ರಮ್‌ಜಾನ್ ತಿಂಗಳಿನಲ್ಲಿ ಮುಸ್ಲಿಮರು ಅಂತಹ ಆಸ್ತಿ ಆದಾಯ ಕರ ಕೊಡಬೇಕು. ಇದರ ಉದ್ದೇಶ ಸಾಮಾಜಿಕ ಸೇವೆ, ದೀನ ದರಿದ್ರರಿಗೆ ಆಹಾರವನ್ನೀಯುವುದೇ ಆಗಿದೆ. ಇದರ ಹೊರತಾಗಿ 'ಸದಖಾ' (ತಲೆಗಂದಾಯ ಎಂಬ ದಾನ) ಮತ್ತು ಫಿತರಾ (ಜೀವದ ತೆರಿಗೆ) ಎಂಬ ದಾನವನ್ನು ಮಾಡಲು ಇಸ್ಲಾಂ ಧರ್ಮ ತಿಳಿಸುತ್ತದೆ. ಸಮಾಜದಲ್ಲಿಯ ಆರ್ಥಿಕ ವಿಷಮತೆಯನ್ನು ದೂರ ಮಾಡಲು ಪರಸ್ಪರರಲ್ಲಿ ಪ್ರೀತ್ಯಾದರಗಳು ಕುದುರಲು ಈ 'ಜಕಾತ್' ಯೋಜನೆಯನ್ನು ಇಸ್ಲಾಂ ಧರ್ಮ ರೂಪಿಸಿದೆ.

<u>ಹಜ್ (ಯಾತ್ರೆ) :</u> ಪ್ರತಿಯೊಬ್ಬ ಮುಸ್ಲಿಮನು ತನ್ನ ಜೀವಮಾನದಲ್ಲಿ ಕೊನೆಯ ಪಕ್ಷ ಒಂದು ಸಲವಾದರೂ ಮೆಕ್ಕಾದಲ್ಲಿ ಪ್ರತಿವರ್ಷ ನಡೆಯುವ ಅಂತರರಾಷ್ಟ್ರೀಯ ಮೇಳಕ್ಕೆ ಹೋಗುವುದೇ ಹಜ್

ಯಾತ್ರೆ. ಭಿನ್ನ ಭಿನ್ನ ದೇಶವರ್ಣ ಜನಾಂಗಗಳಿಗೆ ಸೇರಿದ ರಂಕನಿಂದ ಮೊದಲ್ಗೊಂಡು ರಾಜನವರೆಗಿನ ಸಾವಿರಾರು ಜನರು ಪ್ರಪಂಚದ ಮೂಲೆ ಮೂಲೆಗಳಿಂದ ಹಜ್ ಯಾತ್ರೆಗೆ 'ಏಹ್ರಾಮ್' ವಸ್ತ್ರಗಳನ್ನು ಧರಿಸಿ ಬರಿಗಾಲಿನಲ್ಲಿ ಬರಿತಲೆಯಲ್ಲಿ ಮೆಕ್ಕಾದಲ್ಲಿ ಬಂದು ಸೇರುವರು. ಇಂತಹ ಈ ಬೃಹತ್ ಮೇಳ ಸಾಮ್ಯವಾದದ ವಾರ್ಷಿಕ ಪ್ರದರ್ಶನವಾಗಿದ್ದು, ಸಹೋದರತೆ, ಸಮಾನತೆಗಳ ಅದ್ಭುತ ನಿದರ್ಶನವನ್ನೊದಗಿಸುತ್ತದೆ. ಈ ವಾರ್ಷಿಕ ಮೇಳ ಸ್ತ್ರೀಪುರುಷರ ಮಧ್ಯೆ ಧಾರ್ಮಿಕ ಕ್ಷೇತ್ರದಲ್ಲಿರುವ ಸಾಂಪ್ರದಾಯಿಕ ಸಮಾನತೆಯನ್ನು ವ್ಯಕ್ತಪಡಿಸುವುದಲ್ಲದೆ ಎಲ್ಲಾ ಮಾನವಕುಲದ ಉದ್ದೇಶದ ಏಕತೆಯನ್ನು ಸಾರುತ್ತದೆ.

ಇಸ್ಲಾಂ ಧರ್ಮ ಮಾನವ ಜೀವನದೊಂದಿಗೆ ಸಂಬಂಧವಿರಿಸಿಕೊಂಡು, ಅದರ ಪ್ರತಿಯೊಂದು ವಿಷಯದಲ್ಲಿಯೂ ಮಾರ್ಗದರ್ಶನ ನೀಡುತ್ತದೆ. ವಿಶ್ವಾಸ, ಶ್ರದ್ಧೆ, ಆರಾಧನೆ, ಉಪಾಸನೆ, ನೀತಿ ನಡವಳಿಕೆಯಿಂದ ಹಿಡಿದು, ಆರ್ಥಿಕ, ಸಾಮಾಜಿಕ, ರಾಜಕೀಯ ವಿಷಯಗಳವರೆಗೂ ಇದರ ವ್ಯಾಪ್ತಿ ಹರಡಿದೆ. ಒಟ್ಟಿನಲ್ಲಿ ಮಾನವ ಜೀವನದ ಯಾವ ಅಂಶವೂ ಇದರಿಂದ ಹೊರತಾಗಿಲ್ಲ. ಇದು ಒಂದು ಕಡೆ ದೈವ ಸಂತೃಪ್ತಿಯನ್ನು ಮತ್ತು ಅಲೌಕಿಕ ಭದ್ರತೆಯನ್ನು ನೀಡಿದರೆ ಇನ್ನೊಂದೆಡೆ ಲೌಕಿಕ ಸಮಸ್ಯೆಗಳಿಗೆ ಉಚಿತ ಪರಿಹಾರ ನೀಡುತ್ತದೆ. ಮನುಷ್ಯ ತನ್ನ ಗೃಹ ಜೀವನವನ್ನು ಹೇಗೆ ನಡೆಸಬೇಕು, ಉಪ ಜೀವನದ ಸಂಪಾದನೆ, ವ್ಯಯ ಮಾಡುವ ಬಗೆಯೇನು ? ವ್ಯಾಪಾರ ವಹಿವಾಟುಗಳಲ್ಲಿ ಯಾವ ಕಾನೂನು ಕಾಯಿದೆಗಳಿರಬೇಕು ? ಸರಕಾರದ ರಚನೆ ಮತ್ತು ಕಾರ್ಯಭಾರಗಳನ್ನು ಮಾಡುವ ರೀತಿ ಯಾವುದು ? ಶಾಂತಿ ಯುದ್ಧಗಳ ಸಿದ್ಧಾಂತವೇನು ? ಎಂಬುದನ್ನು ಇಸ್ಲಾಂ ಧರ್ಮ ವಿವರಿಸುತ್ತದೆ.

ಹ। ಮುಹ್ಮದ್ ಪೈಗಂಬರರು ಪವಿತ್ರ ಕುರಾನಿನ ತತ್ವಗಳಿಗನುಸಾರವಾಗಿ ಮಾಡಿದ ಮೇಲಿನ ಆಚರಣೆಗಳಿಗೆ ಸುನ್ನತ್ ಎನ್ನುತ್ತಾರೆ. ಕುರಾನ್ ಹಾಗೂ ಸುನ್ನತ್ ಇಸ್ಲಾಂ ಧರ್ಮದ ಮೂಲ ಆಧಾರಗಳು. ಇವೆರಡರ ಮೂಲಕ ಇಸ್ಲಾಂ ಧರ್ಮಶಾಸ್ತ್ರ ರೂಪುಗೊಂಡಿದೆ. ಆದುದರಿಂದ ಇಸ್ಲಾಂ ಧರ್ಮವು ಮಾನವ ಜೀವನಕ್ಕೆ ಬೇಕಾಗುವ ಶಾಶ್ವತ ಮತ್ತು ಆದರ್ಶಪೂರ್ಣ ಶಾಸನ ಎನಿಸಿದೆ. ಇದಕ್ಕೆ 'ಷರಿಯತ್' ಎನ್ನುತ್ತಾರೆ.

ಇಸ್ಲಾಂ ಸಮಾಜದ ರೀತಿ ನೀತಿಗಳಿಗೆಲ್ಲಾ 'ಕುರಾನ್ ಷರೀಫ್ ಮತ್ತು ಹದೀಸ್' ಆಧಾರಗ್ರಂಥವಾಗಿದೆ. ಸಂಪ್ರದಾಯದ ಹೆಸರಿನಲ್ಲಿ ಕೆಲವೊಂದು ನಿಯಮಗಳು ಅನವಶ್ಯಕವಾಗಿ ಆಚರಣೆಯಲ್ಲಿವೆ. ಆದರೂ ಕೆಲವು ಮುಖ್ಯ ತತ್ವಗಳನ್ನು ಇಲ್ಲಿ ವಿವರಿಸಲಾಗಿದೆ.

<u>ನಿಕಾಹ್ (ಮದುವೆ) :</u> ನಿಕಾಹ್ ಎಂದರೆ ಶರೀರ ಸಂಬಂಧ, ಶಾದಿ ಎಂದರೆ ಸಂತೋಷ. ಆದರೂ ಎರಡು ಶಬ್ದಗಳು ಮದುವೆ ಎಂಬರ್ಥದಲ್ಲಿ ಬಳಕೆಯಲ್ಲಿವೆ. ಇಸ್ಲಾಂ ಧರ್ಮ ಬ್ರಹ್ಮಚರ್ಯವನ್ನು ಒಪ್ಪುವುದಿಲ್ಲ. ಸ್ತ್ರೀಪುರುಷರು ತಮ್ಮ ತಮ್ಮ ಜೀವನದಲ್ಲಿ ಒಂದೇ ಸಲ ಮದುವೆ ಮಾಡಿಕೊಳ್ಳಬೇಕೆಂಬ ನಿಯಮವಿಲ್ಲ. ಸಂಸಾರ ನಡೆಸುವುದಕ್ಕೆ ದೈಹಿಕ ಮತ್ತು ಆರ್ಥಿಕ ಶಕ್ತಿ ಇದ್ದರೆ, ಒಂದಕ್ಕಿಂತ ಹೆಚ್ಚು ಮದುವೆ ಮಾಡಿಕೊಳ್ಳಬಹುದು. ಗಂಡ ಹೆಂಡತಿಯರು ಪರಸ್ಪರ ತಮಗೆ ದಾಂಪತ್ಯ ಜೀವನ ಬೇಡವೆನಿಸಿದರೆ, ಗಂಡನನ್ನು ಬಿಟ್ಟುಬಿಡುವುದಕ್ಕೆ ಹೆಂಡತಿಗೂ, ಹೆಂಡತಿಯನ್ನು ಬಿಡುವ ಅಧಿಕಾರ ಗಂಡನಿಗೂ ಉಂಟು.

ಆದರೆ ಒಮ್ಮೆ ಪರಿತ್ಯಜಿಸಿದ ಹೆಂಡತಿಯನ್ನು ಮತ್ತೆ ಮದುವೆ ಮಾಡಿಕೊಳ್ಳಬೇಕಾದರೆ ಅವಳು ಮತ್ತೊಬ್ಬನನ್ನು ಮದುವೆಯಾಗಿ, ಅವನೊಡನೆ ಬಾಳಿ, ಅವನಿಂದ 'ತಲಾಖ್' ತೆಗೆದುಕೊಳ್ಳಬೇಕು.

ರಕ್ತ ಸಂಬಂಧ ಯಾರೊಡನೆ ಮಾಡಬೇಕು, ಯಾರೊಡನೆ ಮಾಡಬಾರದು ಎಂಬುದಕ್ಕೆ ಕುರಾನ್‌ನಲ್ಲಿ ಸವಿಸ್ತಾರವಾಗಿ ಹೇಳಲಾಗಿದೆ. ಮದುವೆಯಲ್ಲಿ ವಧೂ-ವರರ ಒಪ್ಪಿಗೆ ಅವಶ್ಯವಾದುದು. ವಧುವಿನ ಒಪ್ಪಿಗೆಯಿಲ್ಲದೆ ಮದುವೆ ನಡೆಯುವುದಿಲ್ಲ.

ಪರದಾ (ಗೋಷಾ) : ದುಷ್ಟರ ಅತ್ಯಾಚಾರ, ಹಿಂಸೆ, ಅವರ ಕೆಟ್ಟ ದೃಷ್ಟಿ ಇತ್ಯಾದಿಗಳಿಂದ ರಕ್ಷಣೆ ಹೊಂದಲು ಸ್ತ್ರೀಯರು ತಮ್ಮ ದೇಹವನ್ನು ವಿಶೇಷ ಬಟ್ಟೆಯಿಂದ ಮುಚ್ಚಿಕೊಳ್ಳುವುದಕ್ಕೆ ಪರದಾ (ಗೋಷಾ) ಪದ್ಧತಿ ಎನ್ನುತ್ತಾರೆ. ಋತುಮತಿಯಾದ ಪ್ರತಿಯೊಬ್ಬ ಮಹಿಳೆಯೂ ಕಡ್ಡಾಯವಾಗಿ 'ನಾ ಮೊಹರಿಮ್' (ಮದುವೆಯಾಗಲು ಅರ್ಹರು) ಅವರು ಮುಂದೆ 'ಪರದಾ' ಮಾಡಬೇಕೆಂದು ಕುರಾನ್ ಮತ್ತು ಹದೀಸುಗಳಲ್ಲಿ ಹೇಳಲಾಗಿದೆ. 'ಔರತ್' ಈ ಶಬ್ದದರ್ಥ 'ಛುಪಾನ' (ಮುಚ್ಚು) ಎಂದು. ಪರದಾ ಪದ್ಧತಿ ಸ್ತ್ರೀಯರ ಕಲ್ಯಾಣಕ್ಕಾಗಿ ಇದೆಯೇ ಹೊರತು ಅನಿಷ್ಟ ಪದ್ಧತಿಯಲ್ಲ.

ಪೈದಾಯಿಷ್ (ಜನ್ಮೋತ್ಸವ) : ಮಗು ಹುಟ್ಟಿದೊಡನೆ ಸ್ನಾನ ಮಾಡಿಸಿ ಕಿವಿಯಲ್ಲಿ 'ಅಜಾನ್' ಹೇಳುವರು. ಇದಕ್ಕೆ 'ಬಾಂಗ ನಮಾಜು' ಎಂದು ಹೆಸರು. ಬಾಂಗ ನಮಾಜಿನ ಉದ್ದೇಶ ನವಜನಿತ ಕೂಸಿಗೆ ಅಲ್ಲಾಹನ ಹೊರತು ಬೇರಾರೂ ದೊಡ್ಡವರಿಲ್ಲ. ಅಲ್ಲಾಹನೇ ಎಲ್ಲಾ ಹೊಗಳಿಕೆಗೆ ಯೋಗ್ಯನು. ಹ। ಮುಹ್ಮದ ಪೈಗಂಬರರು ಅವನ ಪ್ರವಾದಿಗಳು ಹೀಗೆ ಪ್ರಮಾಣ ಮಾಡಿ ಹೇಳುವುದೇ ಆಗಿದೆ. ಅನಂತರ 'ಅಖಿಕಾ' ಎಂಬ ವಿಧಿಯನ್ನು ಮಾಡುವರು.

'ಅಖಿಕಾ'ದಲ್ಲಿ ಮಗುವಿನ ಕೂದಲು ತೆಗೆಯಿಸಿ ಕುರಿಯೊಂದನ್ನು ಕೊಯ್ದು ಮಾಂಸವನ್ನು ಹಂಚಲಾಗುತ್ತದೆ. ಇದು ಹದೀಸದಲ್ಲಿ ಉಲ್ಲೇಖವಾಗಿದೆ. ಆದರೆ ಕಡ್ಡಾಯ ನಿಯಮವಲ್ಲ. ನಲ್ವತ್ತನೆಯ ದಿನಕ್ಕೆ ಬಾಣಂತಿ ಮತ್ತು ಮಗು ಇಬ್ಬರಿಗೂ ಸ್ನಾನ ಮಾಡಿಸಿ ಓಣಿಯ ಹಿರಿಯ ಮಹಿಳೆಯರ ಸಮ್ಮುಖದಲ್ಲಿ 'ಚಿಲ್ಲಾ' (ನಾಮಕರಣೋತ್ಸವ) ನಡೆಸುತ್ತಾರೆ. ಮಗುವಿಗೆ ಕ್ರಮೇಣ ಅಕ್ಷರಾಭ್ಯಾಸ, ಕುರಾನ್ ಅಧ್ಯಯ ಮಾಡಿಸುವರು. ಅನಂತರ 'ಹದಿಯಾ' ಮಾಡಿ ಮಿಠಾಯಿ ಹಂಚುವರು. ಇಲ್ಲವೆ ಊಟ ಹಾಕಿಸುವರು.

ಖತ್‌ನಾ (ಸುಂತಿ) : ಸಾಮಾನ್ಯವಾಗಿ ಏಳರಿಂದ ಹನ್ನೆರಡು ವರ್ಷದ ಒಳಗಿನ ಗಂಡು ಮಗುವಿನ ಜನನೇಂದ್ರಿಯದ ತುದಿಯ ಭಾಗದ ಚರ್ಮವನ್ನು ಕತ್ತರಿಸುವ ವಿಧಿಗೆ 'ಖತ್ನಾ' (ಸುಂತಿ) ಎನ್ನುವರು. ಇದು ಇಬ್ರಾಹಿಂ ಪೈಗಂಬರರ ಕಾಲದಿಂದ ಪ್ರಾರಂಭವಾಗಿದ್ದು ಹದೀಸ್‌ನಲ್ಲಿ ಉಲ್ಲೇಖವಾಗಿದೆ. ಖತ್ನಾವನ್ನು ಮುಲ್ಲಾ ಸಾಹೇಬ ಇಲ್ಲವೆ ವೈದ್ಯರಿಂದ ಮಾಡಿಸುತ್ತಾರೆ. 'ಜ್ಯೂ' ಮತ್ತು ಇಸ್ಲಾಮ್‌ನಲ್ಲಿ ಈ ರೂಢಿ ಕಡ್ಡಾಯವಾಗಿ ಬಳಕೆಯಲ್ಲಿದೆ. ಆಧುನಿಕ ವೈದ್ಯರ ಅಭಿಪ್ರಾಯದಂತೆ ಖತ್ನಾ ವಿಧಿ ಸಂಸಾರ ಸುಖ, ಆರೋಗ್ಯ ಹಾಗೂ ಸ್ವಚ್ಛತೆಯ ದೃಷ್ಟಿಯಿಂದ ಒಳ್ಳೆಯದು.

ಶವ ಸಂಸ್ಕಾರ : ಪ್ರಾಣ ಹೋದೊಡನೆ ಕಣ್ಣು ಬಾಯಿ ಮುಚ್ಚಿ ಮುಖವನ್ನು ಮಕ್ಕಾದ ಕಡೆಗೆ ತಿರುಗಿಸಿಟ್ಟು ಲೋಬಾನ (ಧೂಪ) ಹಾಕುತ್ತಾರೆ. ಕುರಾನ್ ಓದಿಸುತ್ತಾರೆ. ಶವಕ್ಕೆ ಸ್ನಾನ ಮಾಡಿಸಿ

ಬಟ್ಟೆಯನ್ನು ಹೊದಿಸುವರು. ಮೃತ ಪುರುಷನ ಹೆಂಡತಿ ಅಲ್ಲಿದ್ದರೆ ಕಫನ್ ಬಟ್ಟೆಯನ್ನು ಓರೆಯಾಗಿಸಿ ಮುಖ ತೋರಿಸಲಾಗುವುದು ಮತ್ತು ಪತಿಯಿಂದ ದೊರೆಯಬೇಕಾದ 'ಮಹರ್' (ಸ್ತ್ರೀಧನ) ಬಾಕಿಯಿದ್ದರೆ ಮಾಫಿ ಮಾಡಲಾಗಿದೆಯೆಂದು ಆಕೆಯ ಬಾಯಿಂದ ಹೇಳಿಸಲಾಗುವುದು.

ಅನಂತರ ಮೃತ ಶರೀರವನ್ನು ತಾಬೂತ ಅಥವಾ ಡೋಲಿಯಲ್ಲಿಡುತ್ತಾರೆ. ಪೆಟ್ಟಿಗೆಯ ಮೇಲೆ ಹೊಸ ಬಟ್ಟೆ ಹೊದಿಸಿ ಹೂಮಾಲೆ ಹಾಕಿ 'ಅತ್ತರ್' (ಸುಗಂಧ ದ್ರವ್ಯ) ಸಿಂಪಡಿಸುತ್ತಾರೆ. ಅನಂತರ ನಾಲ್ಕು ಮಂದಿ ಅದನ್ನು ಹೆಗಲ ಮೇಲೆ ಹೊತ್ತು ಸಾಮೂಹಿಕ ಗೀತೆ ಹಾಡುತ್ತಾ (ಮಧ್ಯ ಮಧ್ಯ ಹೆಣ ಹೊತ್ತವರು ಹೆಗಲು ಬದಲಾಯಿಸುವರು) ಕಬರಸ್ತಾನಕ್ಕೆ ನಡೆಯುವರು. ತೋಡಿದ ಕುಣಿಯಲ್ಲಿ ಹೆಣವನ್ನು ಮಲಗಿಸಿ, ಬಂಧು-ಬಾಂಧವರು, ಹಿಂದೂ-ಮುಸ್ಲಿಮರು ಒಂದೊಂದು ಹಿಡಿ ಮಣ್ಣು ಹಾಕುವರು. ಸಮಾಧಿಯ ಮೇಲೆ ಸುಟ್ಟ ಇಟ್ಟಿಗೆ ಅಥವಾ ಕಲ್ಲು ಇಲ್ಲವೆ ಬಾರಿ ಕಂಟಿ ಚುಚ್ಚುವರು. ಆದರೆ ಸುಣ್ಣ ಹಾಕುವುದನ್ನು ಕುರಾನದ ಆಯತಗಳನ್ನು ಕಲ್ಲಿನಲ್ಲಿ ಕೆತ್ತಿ ನೆಡುವುದನ್ನು, ಸಮಾಧಿ ಸ್ಥಳದಲ್ಲಿ ಗುಂಬಜ ಮಾಡಿ ಕಟ್ಟಡ ಕಟ್ಟುವುದನ್ನು ಇಸ್ಲಾಂ ಧರ್ಮದಲ್ಲಿ ನಿಷೇಧಿಸಲಾಗಿದೆ.

ಕಬರಸ್ತಾನದಿಂದ ಹಿಂದಿರುಗಿದ ಮೇಲೆ ಶವಯಾತ್ರೆಯಲ್ಲಿ ಭಾಗವಹಿಸಿದವರಿಗೆಲ್ಲ ಭೋಜನ ವ್ಯವಸ್ಥೆ ಮಾಡುವರು. ಮೂರನೆಯ ದಿನ ಕುರಾನ್ ಓದಿಸಿ ಅನಂತರ ಗೋರಿಗೆ ಹೋಗಿ ಫಾತಿಹಾ ಮಾಡಿ ಬರುವರು. ಒಂಬತ್ತನೆಯ ದಿನಕ್ಕೆ 'ನೌದಿನ್ ಜಿಯಾರತ್' ಮಾಡುವರು. 40ನೆಯ ದಿನ ಬಂಧು-ಮಿತ್ರರನ್ನು ಆಮಂತ್ರಿಸಿ ಕುರಾನ್ ಷರೀಫ ಓದಿಸಿ ಊತಣ ಏರ್ಪಡಿಸುವರು. ಬಡವರಿಗೂ ಫಕೀರರಿಗೂ ಅನ್ನದಾನ, ವಸ್ತ್ರದಾನ, ಅರ್ಥದಾನ ಮಾಡುವರು. ಒಂದು ವರ್ಷಕ್ಕೆ 'ಬರಸಿ' ಎಂಬ ಪುಣ್ಯತಿಥಿಯನ್ನು ಮಾಡುವರು.'[1]

ಇಸ್ಲಾಂ ಧರ್ಮದ ಈ ಮೇಲಿನ ತಿಳುವಳಿಕೆಯ ಹಿನ್ನೆಲೆಯಲ್ಲಿ ನೋಡಿದರೆ ಬಹುಪಾಲು ಪಿಂಜಾರರ ಜೀವನವಿಧಾನ ಈ ಧರ್ಮದ ತಾಂತ್ರಿಕ ಆಚರಣೆಗಳ ನೆಲೆಯನ್ನು ಮಾತ್ರ ಆಧರಿಸಿದಂತಿದೆ. ಆದರೆ ಸಂವೇದನೆಗಳ ನೆಲೆಯಲ್ಲಿ ಪಿಂಜಾರರು ತಮ್ಮ ಮೂಲಾಶ್ರಮದ ನೆನಪನ್ನು ಅಚ್ಚಳಿಯದೆ ಉಳಿಸಿಕೊಂಡಂತಿದ್ದಾರೆ. ಪಿಂಜಾರರು ರಂಜಾನ್, ಬಕ್ರೀದ್, ಮೊಹರಂನಂತಹ ಹಬ್ಬಗಳ ಸಂದರ್ಭದಲ್ಲಿ ಮತ್ತು ಹುಟ್ಟು, ಮುಂಜಿ, ಮದುವೆ, ಸಾವಿನ ಸಂದರ್ಭಗಳಲ್ಲಿ ಇಸ್ಲಾಂನ ಅನುಯಾಯಿಗಳೇ ಆಗಿದ್ದಾರೆ. ಈ ಕುರಿತಾದ ಶಾಸ್ತ್ರಜ್ಞಾನ ಅವರಿಗಿಲ್ಲದಿದ್ದರೂ ಬಲ್ಲವರಿಂದ ತಿಳಿದುಕೊಂಡು ಕೆಲವೊಮ್ಮೆ ತಿಳಿದವರನ್ನೇ ಅವಲಂಬಿಸಿ ಈ ಆಚರಣೆಗಳಲ್ಲಿ ತಮ್ಮ ಧಾರ್ಮಿಕ ನಿಷ್ಠೆಯನ್ನು ತೋರುತ್ತಾರೆ. ಹಿಂದೆ ವಿಶ್ಲೇಷಿಸಿದಂತೆ ಇಸ್ಲಾಂನ ಪುರೋಹಿತಶಾಹಿ ವ್ಯವಸ್ಥೆ ಪಿಂಜಾರರಲ್ಲಿ ಜಾರಿಯಲ್ಲಿದೆ. ಇದಕ್ಕೆ ಕಾರಣ ಪಿಂಜಾರರಲ್ಲಿನ ಇಸ್ಲಾಂ ಅರಿವಿನ ಕೊರತೆ. ಆದರೆ ಪಿಂಜಾರರು ಇಸ್ಲಾಂ ಅರಿವು ಪಡೆಯಲು ಈ ಶತಮಾನಗಳ ಅಂತರದಲ್ಲಿ ಪ್ರಯತ್ನಿಸಲಿಲ್ಲವೇ? ಖಂಡಿತ, ಅಂತಹ ಪ್ರಯತ್ನಗಳು ಅಲ್ಲಲ್ಲಿ ನಡೆದಿವೆ. ಆರಂಭದ ದಿನಗಳಲ್ಲಿ ಈ ಬಗೆಗಿನ ಆಸಕ್ತಿ ಅಷ್ಟಾಗಿರಲಿಲ್ಲ ಎಂದು ತಿಳಿಯುತ್ತದೆ. ಬರಬರುತ್ತಾ ಪಿಂಜಾರರು ಆ ಬಗೆಯ ತಿಳುವಳಿಕೆ ಪಡೆಯುವುದರಲ್ಲಿ ಆಸಕ್ತರಾದ ಉದಾಹರಣೆಗಳು ಸಿಗುತ್ತವೆ. ಈ ದಿಸೆಯಲ್ಲಿ ಅವರಿಗೆದುರಾದ ಬಹುಮುಖ್ಯ ಅಡ್ಡಿ ಎಂದರೆ ಭಾಷೆಯದು. ಪಿಂಜಾರರಿಗೆ ತಮ್ಮ ಭಾಷೆಯಾದ ಕನ್ನಡದಲ್ಲಿ ಇಸ್ಲಾಂನ

ಧಾರ್ಮಿಕ ಸಾಹಿತ್ಯ ಸಿಗದಿರುವುದು ಮತ್ತು ಮುಲ್ಲಾಗಳು ತಮ್ಮ ಧಾರ್ಮಿಕ ಪ್ರವಚನಗಳನ್ನು ಕನ್ನಡದಲ್ಲಿ ನೀಡದಿರುವುದು ಪಿಂಜಾರರು ಇಸ್ಲಾಂ ಅರಿವನ್ನು ಗಳಿಸಲು ಮುಖ್ಯ ತೊಂದರೆಯಾಗಿದೆ. ಈಗ ಅಂಥ ಸ್ಥಿತಿಯಿಲ್ಲ, ಈಗಿನ ಪಿಂಜಾರರ ಸ್ಥಿತಿಯನ್ನು ಕುರಿತು ಬೇರೊಂದು ಕಡೆ ಚರ್ಚಿಸುವುದರಿಂದ ಆ ವಿವರಗಳು ಇಲ್ಲಿ ಅನಗತ್ಯ. ಪಿಂಜಾರರಿಗೆ ಸರ್ಕಾರಿ ಕನ್ನಡ ಶಾಲೆಗಳಿಗೆ ಮಕ್ಕಳನ್ನು ಕಳಿಸುವ ರೂಢಿಯಿದ್ದಂತೆ ಉರ್ದು ಶಾಲೆ ಅಥವಾ ಮದರಸಾಗಳಿಗೆ ಕಳಿಸುವಂತಹ ಆಸಕ್ತಿಯಿಲ್ಲ. ಕೆಲವರು ಕಳಿಸಿದರೂ ಆ ಮಕ್ಕಳು ಒಂದು ಬಗೆಯ ಪರಕೀಯ ಭಾವನೆಯಿಂದ ಕೆಲವೇ ದಿನಗಳಲ್ಲಿ ಅಂಥ ಶಿಕ್ಷಣವನ್ನು ಮೊಟಕುಗೊಳಿಸಿಬಿಡುತ್ತವೆ. ಪಿಂಜಾರರು ಧಾರ್ಮಿಕ ಶಿಕ್ಷಣದಿಂದ ದೂರ ಉಳಿಯುವುದಕ್ಕೆ ಅವರು ಅವಲಂಬಿಸಿದ ವೃತ್ತಿ ಮತ್ತು ಆರ್ಥಿಕ ಸಾಮಾಜಿಕ ಕಾರಣಗಳು ಮೂಲವಾಗಿವೆ.

ಮಗು ಹುಟ್ಟಿದಾಗ ಮುಲ್ಲಾನಿಂದ ಮಗುವಿನ ಕಿವಿಯಲ್ಲಿ ಅಜಾನ್ ಕೊಡಿಸುತ್ತಾರೆ. ಮುಂಜಿ ಸಂದರ್ಭದಲ್ಲಿ ಮುಲ್ಲಾನ ಉಪಸ್ಥಿತಿ ಅನಿವಾರ್ಯ. ಮದುವೆಯಲ್ಲಂತೂ ಮುಲ್ಲಾನ ಪೌರೋಹಿತ್ಯ ಪೂರ್ಣ ಪ್ರಮಾಣದಲ್ಲಿರುತ್ತದೆ. ಶವಸಂಸ್ಕಾರವೂ ಆತನ ಮಾರ್ಗದರ್ಶನದಲ್ಲಿ ನಡೆಯುತ್ತದೆ. ರಂಜಾನ್, ಬಕ್ರೀದ್ ಹಬ್ಬಗಳ ಸಾಮೂಹಿಕ ನಮಾಜಿನಲ್ಲಿ ಪಿಂಜಾರರು ಕಡ್ಡಾಯವಾಗಿ ಭಾಗವಹಿಸುತ್ತಾರೆ. ಆದರೆ ನಮಾಜಿನ ಪೂರ್ಣ ಆಚರಣೆಯ ಅರಿವು ಅವರಿಗಿರುವುದಿಲ್ಲ. ತಮ್ಮ ಮುಂದಿನವರು ಹೇಗೆ ಮಾಡುತ್ತಾರೋ ಹಾಗೆ ಅನುಕರಿಸುತ್ತಾರೆ. ಈ ಅನುಕರಣೆಯ ವಿಚಾರದಲ್ಲಿ ಅವರಿಗೆ ಕೀಳರಿಮೆಯಿದ್ದಂತಿಲ್ಲ. ಬದಲಾಗಿ ಮುಸ್ಲಿಮರಿಗೆ ಇವರನ್ನು ಕಂಡು ಅನುಕಂಪ ಅಣಕದ ಭಾವನೆಗಳಿವೆ. ಪಿಂಜಾರರಲ್ಲಿ ಬುರ್ಖಾ ಅಥವಾ ಗೋಷಾ ಪದ್ಧತಿಯಿಲ್ಲ. ಒಂದಕ್ಕಿಂತ ಹೆಚ್ಚು ಮದುವೆಯಾಗುವುದಿಲ್ಲ. 'ತಲಾಖ್' ಬಗ್ಗೆ ಅವರಿಗೇನೂ ಗೊತ್ತಿಲ್ಲ. ಗೊತ್ತಿದ್ದವರು ಅದನ್ನು ಒಪ್ಪುವುದಿಲ್ಲ. ಪೈಗಂಬರ್ ಮತ್ತಿತರ ಶರಣರ ಕುರಿತು ಗೌರವವಿದೆ. ಅವರ ಚರಿತ್ರೆಯ ಬಗ್ಗೆ ಗೊತ್ತಿಲ್ಲ. ಮೊಹರಂ ಹಬ್ಬದ ಹಿನ್ನೆಲೆ ಅನೇಕರಿಗೆ ತಿಳಿದಿಲ್ಲ. ಆದ್ದರಿಂದಾಗಿಯೇ ಅದನ್ನು ಖುಷಿಯಿಂದ ಆಚರಿಸುತ್ತಾರೆ. ಮತ್ತು ಈ ಹಬ್ಬದಲ್ಲಿ 'ತಾಬೂತ್' ರಚಿಸಿಕೊಂಡು ಅದಕ್ಕೆ ಆರಾಧಿಸುವ, ಹರಕೆ ಕಟ್ಟಿಕೊಳ್ಳುವ ವಿಚಾರಗಳು ನಡೆಯುತ್ತವೆ. ಅಂದರೆ ಇದು ಹಿಂದೂ ಮೂರ್ತಿ ಪೂಜೆಯ ಪ್ರಭಾವ. ಕೆಲವು ಮುಸಲ್ಮಾನ ದೊರೆಗಳ ಹಾಗೂ ಬ್ರಿಟೀಷರ ರಾಜಕೀಯ ಉದ್ದೇಶಗಳಿಂದಾಗಿ ಈ ಹಬ್ಬದ ನಿಜ ಸಂದೇಶವೇ ವಿರೂಪಗೊಂಡುಬಿಟ್ಟಿದೆ. ಈ ಹಬ್ಬದಲ್ಲಿ ಪಿಂಜಾರರು ಮತ್ತು ಹಿಂದೂಗಳ ಸಹಭಾಗಿತ್ವ ಮಾತ್ರ ಮೆಚ್ಚುವಂತಹದ್ದಾಗಿದೆ. ರಂಜಾನ್, ಬಕ್ರೀದ್, ಮೊಹರಂ ಹಬ್ಬಗಳಲ್ಲಿ ಮಾಡಿದ ಅಡಿಗೆಯನ್ನು 'ಓದಿಕೆ' ಮಾಡಿಸುವುದು, ಕುರಿಕೋಳಿಗಳ 'ಜುಬಾ' ಮಾಡಿಸುವುದು ಎಲ್ಲಾ ಮುಲ್ಲಾನಿಂದಲೇ. ಆದ್ದರಿಂದ ಪಿಂಜಾರರು ಇಡೀ ಇಸ್ಲಾಮಿನ ಆಚರಣೆಗಳಲ್ಲಿ ಅತ್ಯಂತ ಶ್ರದ್ಧೆ ನಿಷ್ಠೆ ತೋರಿದರೂ ಆ ಕುರಿತಾದ ಸ್ಪಷ್ಟ ಜ್ಞಾನ ಅವರಲ್ಲಿಲ್ಲ.

ಆದರೆ ಪಿಂಜಾರರು ಹಿಂದೂ ಸಮುದಾಯದ ಅನೇಕ ಹಬ್ಬ ಮತ್ತು ಆಚರಣೆಗಳನ್ನು ನಂಬಿದವರಿದ್ದಾರೆ. ಆಯಾ ಸ್ಥಳೀಯವಾದ ಹಿಂದೂ ಸ್ತ್ರೀ ದೇವತೆಗಳ ಹಬ್ಬವನ್ನು ಪಿಂಜಾರರು ಆಚರಿಸುತ್ತಾರೆ. ಅನೇಕರು ನಾಯಕನಹಟ್ಟಿಯ ತಿಪ್ಪೇಸ್ವಾಮಿ, ಉಕ್ಕಡಗಾತ್ರಿಯ ಅಜ್ಜಯ್ಯನಿಂದ ಹಿಡಿದು ಶಿರಡಿಸಾಯಿಬಾಬಾ, ಧರ್ಮಸ್ಥಳದ ಮಂಜುನಾಥನಿಗೂ ನಡೆದುಕೊಳ್ಳುವವರಿದ್ದಾರೆ. ಮುಸ್ಲಿಂ

ಬಾಂಧವರು ಬಯ್ಯುತ್ತಾರೆ ಎಂಬ ಅಂಜಿಕೆಯಿಂದ ಈ ಸಂಬಂಧವಾದ ಫೋಟೋಗಳನ್ನು ಅಢಿಗೆ ಮನೆಗಳಲ್ಲಿ ಗುಪ್ತವಾಗಿಟ್ಟುಕೊಂಡವರಿದ್ದಾರೆ.

ಇವತ್ತಿಗೂ ಅನೇಕ ಪಿಂಜಾರರ ಮನೆದೇವತೆ ಎಲ್ಲಮ್ಮ. ಪ್ರತಿ ಮಂಗಳವಾರ ಮತ್ತು ಶುಕ್ರವಾರದ ದಿನ ಎಲ್ಲಮ್ಮನಿಗೆ ಎಡೆಯಿಟ್ಟು ಕಾಯಿ ಒಡೆದು ಬರುವ ಪದ್ಧತಿಯಿದೆ. ಸಾಮಾನ್ಯವಾಗಿ ಊರ ಹೊರಗಿರುವ ಚೌಡಮ್ಮ ಎಲ್ಲಮ್ಮನಂತಹ ದೇವತೆಗಳಿಗೆ ತಾವೇ ಎಣ್ಣೆ ಬಿಟ್ಟು ದೀಪಹಚ್ಚಿ, ಊದಿನಕಡ್ಡಿ ಬೆಳಗುತ್ತಾರೆ. ಪ್ರದಕ್ಷಿಣೆ ಹಾಕಿ ಅಡ್ಡ ಬೀಳುತ್ತಾರೆ. ಮಠಾಧಿಪತಿಗಳಿಗೆ ಅಡ್ಡ ಬೀಳುವವರೂ, ಶಿವರಾತ್ರಿಯ ಜಾಗರಣೆಯಲ್ಲಿ ಶಿವಭಜನೆ ಮಾಡುವವರೂ, ಶ್ರಾವಣದಲ್ಲಿ ಪುರಾಣ ಓದಿಸುವವರೂ ಇದ್ದಾರೆ. ಇದಲ್ಲದೆ ಇಸ್ಲಾಂ-ಹಿಂದೂ ಧಾರ್ಮಿಕ ಭಾವೈಕ್ಯತೆಯ ಸಂಗಮಗಳಂತಿರುವ ಬಾಬಾಬುಡನ್‌ಗಿರಿ ಉರುಸು, ಹಣಗೆರೆಕಟ್ಟೆ, ಬಸವಾಪಟ್ಟಣ, ಬಾತಿ, ಹೊನ್ನೂರಲಿ ಉರುಸುಗಳಿಗೆ ಗಾಡಿಕಟ್ಟಿಕೊಂಡು ಹೋಗಿ ಕುರಿಕೋಳಿ ಕೊಯ್ದು ಅಡಿಗೆ ಮಾಡಿ 'ಓದಿಸಿ' ಉಂಡು ಬರುತ್ತಾರೆ. ಪಿಂಜಾರರಿಗೆ ಇಸ್ಲಾಂ ಧಾರ್ಮಿಕ ಸಾಹಿತ್ಯಕ್ಕಿಂತ ಮಹಾಭಾರತ, ರಾಮಾಯಣ, ಕೃಷ್ಣ, ಶಿವನಿಗೆ ಸಂಬಂಧಿಸಿದ ಪುರಾಣಗಳು ತಿಳಿದಂತಿವೆ.

ಈ ಎಲ್ಲ ಕಾರಣಗಳಿಂದ ಪಿಂಜಾರರಿಗೆ ದೇವರನ್ನು ನಂಬುವುದು ಎಂದರೆ ನಿರ್ದಿಷ್ಟವಾಗಿ ಇಂತಹದ್ದೇ ದೇವರು ಆಗಬೇಕು ಎಂಬಂತಿಲ್ಲ. ದೇವರಲ್ಲಿ ಅಚಲವಾದ ವಿಶ್ವಾಸ ಮತ್ತು ಶ್ರದ್ಧೆಯಿದೆ. ಹಾಗೆಯೇ ಲೌಕಿಕ ಬದುಕಿನ ಸುಖ-ಸಂಕಷ್ಟಗಳ ಅರಿವೂ ಇದೆ. ಹಿಂದೂ-ಇಸ್ಲಾಂ ಎಂಬ ಧಾರ್ಮಿಕ ಭೇದ ಮಾಡದೆ ತಮಗೆ ಆಂತರಂಗಿಕ ಶಾಂತಿ ನೀಡುವ ಎಲ್ಲ ದೇವರಿಗೂ ನಡೆದುಕೊಳ್ಳುವ ಪಿಂಜಾರರಿಗೆ ಅಧ್ಯಾತ್ಮ ಎಂದರೆ ಅದು ಸತ್ತ ನಂತರದ ಯಾವುದೋ ಲೋಕದ ಸುಖವಲ್ಲ, ಆ ಲೋಕದ, ಹಿಂಸೆ, ಅಪಮಾನಗಳಿಲ್ಲದ ಸಾಮರಸ್ಯದ ಬದುಕು.

### ***೪.೨.೩ ಭವಿಷ್ಯದಲ್ಲಿ ನಂಬಿಕೆ***

ಮನುಕುಲ ದೇವರನ್ನು ನಂಬುವುದಕ್ಕೆ ಸೃಷ್ಟಿಯಲ್ಲಿನ ಮೂಲಭೂತವಾದ ಭಯ ಹಾಗೂ ವಿಸ್ಮಯಗಳು ಕಾರಣವಾದರೆ 'ಭವಿಷ್ಯ'ವನ್ನು ನಂಬುವುದಕ್ಕೆ ಜೀವನ ಸ್ವರೂಪದಲ್ಲಿನ ಆತಂಕ ಮತ್ತು ಆಸೆಗಳೇ ಕಾರಣವಾಗಿವೆ. ಭವಿಷ್ಯವನ್ನು ನಂಬುವುದಕ್ಕೂ ಜನಾಂಗಗಳಲ್ಲಿನ ಹಲವು ಬಗೆಗಿನ ಮೌಢ್ಯಗಳಿಗೂ ಸಂಬಂಧವಿದ್ದಂತಿದೆ. ಬದುಕು ಒಂದರ್ಥದಲ್ಲಿ ತೀರ ಯಾಂತ್ರಿಕವಾದುದು. ಈ ಯಾಂತ್ರಿಕತೆಯಲ್ಲಿ ಭೂತ, ವರ್ತಮಾನ, ಭವಿಷ್ಯತ್‌ಕಾಲಗಳು ಸಾಮಾನ್ಯವಾಗಿದೆ. ಮನುಷ್ಯನಿಗೆ ಭೂತಕಾಲದ ಎಲ್ಲ ಬಗೆಯ ನೆನಪುಗಳು, ಸಂವೇದನೆಗಳು ಮತ್ತು ತನ್ನ ಕೌಟುಂಬಿಕವಾದ ಸಮಸ್ಯೆಗಳು ಸದಾ ಕಾಡುತ್ತಿರುತ್ತವೆ. ವರ್ತಮಾನದಲ್ಲಿ ಸುಡುವಾಸ್ತವದ ಸಂಗತಿಗಳು ಹೆಚ್ಚಿನದಾಗಿ ಆ ಕ್ಷಣದ ತುರ್ತುಗಳು ಅವನನ್ನು ಕ್ರಿಯಾಶೀಲವಾಗಿಟ್ಟಿರುತ್ತವೆ. ಮನುಷ್ಯ ತೀವ್ರಗತಿಯ ಕ್ರಿಯೆಯಲ್ಲಿ ತೊಡಗುವುದು ವ್ಯಕ್ತಿಗತ ಹಿತಗಳ ಸಂದರ್ಭದಲ್ಲಿ ಎನಿಸುತ್ತದೆ. ತಾನು, ತನ್ನ ಕುಟುಂಬದ ಸುತ್ತಲೇ ಅವನ ಆಸಕ್ತಿಗಳು ಗಿರಕಿ ಹೊಡೆಯುತ್ತಿರುತ್ತವೆ. ಬದುಕಿನಲ್ಲಿ ಎದುರಾಗುವ ಸಂದರ್ಭಗಳನ್ನು ನಿಭಾಯಿಸುವಾಗ ಅವನು ಹೆಚ್ಚು ಆಶಾವಾದಿಯಾಗಿರಲು ಬಯಸುತ್ತಾನೆ. ಆದರೆ ಜೀವನದ ಸ್ವರೂಪ ಒಂದೇ

ತೆರನಾಗಿರುವುದಿಲ್ಲ. ತೀರ ಅನಿರೀಕ್ಷಿತವಾದ ಸೋಲುಗಳು, ತುಂಬಾ ಆಕಸ್ಮಿಕವಾದ ಸವಾಲುಗಳೂ ಆತನಿಗೆ ಎದುರಾಗುತ್ತವೆ. ಇವುಗಳನ್ನು ಸಮಚಿತ್ತದಿಂದ ಸ್ಥಿತಪ್ರಜ್ಞನಂತೆ ನಿರ್ವಹಿಸುವುದು ಎಲ್ಲ ಮನುಷ್ಯರಿಗೂ ಸಾಧ್ಯವಾಗುವುದಿಲ್ಲ. ಇಂತಹ ಸಂದರ್ಭಗಳಲ್ಲಿ ಮನುಷ್ಯ ದೇವರ ಆಸರೆಯನ್ನು ಬಯಸುತ್ತಾನೆ. ಭವಿಷ್ಯದ ಮೊರೆ ಹೋಗುತ್ತಾನೆ. ಜೀವನವನ್ನು ನಿರ್ಭೀತಿಯಿಂದ ಎದುರಿಸುವ ಮನಸ್ಥಿತಿಯಿಲ್ಲದಿದ್ದಾಗ ಮನುಷ್ಯ ತನಗೆ ಸಮಾಧಾನ ಸಿಗಬಹುದಾದ ರೀತಿಯಲ್ಲಿ ನಡೆದುಕೊಳ್ಳುತ್ತಾನೆ. ಭಾರತೀಯ ಸಂದರ್ಭದಲ್ಲಿ ಈ ಲೋಕದ ಮನುಷ್ಯನ ಹಣೆಬರಹ ಆತ ಹುಟ್ಟುವಾಗಲೇ ನಿರ್ಧಾರವಾಗುತ್ತದೆಂದು ನಂಬಲಾಗಿದೆ. ದೇವರು ಮನುಷ್ಯನನ್ನು ಸೃಷ್ಟಿಸುವಾಗಲೇ ಆತನ ಬಣ್ಣ, ಆತನ ಆರ್ಥಿಕ ಸಾಮಾಜಿಕ ಸ್ಥಿತಿಗತಿ, ಆತನ ಆಯುಷ್ಯ ಮೊದಲಾದ ಎಲ್ಲ ಆಗು-ಹೋಗುಗಳನ್ನು ನಿರ್ಧರಿಸಿಬಿಡುತ್ತಾನೆ ಎಂಬಂತಹ ನಂಬಿಕೆಯ ನೆಲೆಯೇ ಇಲ್ಲಿ ಮನುಷ್ಯನು ಭವಿಷ್ಯವನ್ನು ಆಶ್ರಯಿಸಲು ಕಾರಣವಾಗಿದೆ. ಅಂದರೆ ತನ್ನ ಜೀವನಕ್ಕೆ ಸಂಬಂಧಿಸಿದಂತೆ ಪೂರ್ವನಿರ್ಧಾರಿತವಾಗಿರಬಹುದಾದ ಸಂಗತಿಗಳನ್ನು ತಿಳಿಯುವ ಸಹಜ ಕುತೂಹಲ ಉಂಟಾಗುತ್ತದೆ. ಮತ್ತು ಗ್ರಹ, ತಾರೆಗಳು, ಅವುಗಳ ಚಲನೆಯಿಂದ ಮನುಷ್ಯನ ಜೀವನದ ಮೇಲೆ ಆಗುತ್ತದೆ ಎನ್ನಲಾದ ಪ್ರಭಾವಗಳಿಗೂ ಮನುಷ್ಯ ಹೆದರುತ್ತಾನೆ. ಇದು ವಿಶ್ವವ್ಯಾಪಿಯಾಗಿ ಎಲ್ಲ ಧರ್ಮಾನುಯಾಯಿಗಳನ್ನು ಕಾಡುತ್ತದೆ. ಭಾರತೀಯ ಬದುಕಿನಲ್ಲಿ ಈ ಬಗೆಯ ತಿಳುವಳಿಕೆಯನ್ನು ನೀಡುವ ಒಂದು ಅಧ್ಯಯನದ ಶಾಖೆಯೇ ಇದ್ದು, ಅದನ್ನು ಜ್ಯೋತಿಷ್ಯಶಾಸ್ತ್ರ ಎನ್ನಲಾಗುತ್ತದೆ. ಈ ಜ್ಯೋತಿಷ್ಯವನ್ನು ವೃತ್ತಿಯನ್ನಾಗಿ ಮಾಡಿಕೊಂಡು ಮನುಷ್ಯನ ದುರ್ಬಲ ಮನೋಭಾವವನ್ನು ಆರ್ಥಿಕ ಭದ್ರತೆಯ ಸಾಧನವಾಗಿ ಮಾರ್ಪಡಿಸಿಕೊಂಡ ಒಂದು ವರ್ಗವೇ ಇಲ್ಲಿದೆ. ಅಲ್ಲದೆ ಪುರಾತನ ಕಾಲದ ಈ ಬಗೆಯ ಅಧ್ಯಯನದ ಶಿಸ್ತನ್ನು ಅತ್ಯಂತ ವೈಜ್ಞಾನಿಕ ಎಂದು ಪ್ರತಿಬಿಂಬಿಸುತ್ತಾ ಇಲ್ಲಿನ ಆಡಳಿತಶಾಹಿ ವ್ಯವಸ್ಥೆ ವಿಶ್ವವಿದ್ಯಾನಿಲಯುಗಳಲ್ಲಿ ಉನ್ನತ ಪದವಿಗಳ ಶಿಕ್ಷಣ ಕೊಡುವಂತಹ ತೀರ್ಮಾನಗಳನ್ನು ಕೈಗೊಳ್ಳಲಾಗುತ್ತಿದೆ. ಆಧುನಿಕ ಕಾಲದ ಈ ತೀರ್ಮಾನಗಳು ಒಂದು ನಿರ್ದಿಷ್ಟ ಸಮುದಾಯದ ಹಿತಾಸಕ್ತಿಯನ್ನು ಕಾಯುವ, ವೈಚಾರಿಕ ಶಿಕ್ಷಣ ಪದ್ಧತಿಗೆ ಅಪಮಾನ ಮಾಡುತ್ತ ಇಲ್ಲಿನ ಅಪಾರ ಸಂಖ್ಯೆ ಜನವರ್ಗವನ್ನು ಕಂದಾಚಾರಗಳ ಪ್ರತಿಗಾಮಿ ನೆಲೆಗೆ ತಳ್ಳುವ ಇಂಥ ತೀರ್ಮಾನಗಳು ಅಧಿಕಾರ ರಾಜಕಾರಣದ ನೀಚತನವನ್ನು ಸ್ಪಷ್ಟವಾಗಿ ಬಯಲಿಗೆಳೆಯುತ್ತಿವೆ. ಈ ಎಲ್ಲ ಕಾರಣಗಳಿಂದ 'ಭವಿಷ್ಯ'ವನ್ನು ನಂಬುವ ವ್ಯಕ್ತಿವಿಶಿಷ್ಟವಾದ ಮನೋಭಾವವನ್ನು ಸಾರ್ವಜನಿಕ ಕ್ಷೇತ್ರದಲ್ಲಿ ಹರಾಜಿಗಿಟ್ಟು ಜನರನ್ನು ನಿತ್ಯಮೂಢರನ್ನಾಗಿ ಮಾಡುವ ಸಂಚು ಜಾಗತೀಕರಣದ ಪ್ರಬಲ ಅನಿಯಂತ್ರಿತ ದಾಳಿಯಲ್ಲಿ ನಾಶವಾಗುತ್ತಿರುವುದು ಸಹಜವಾಗಿದೆ.

ಧರ್ಮ, ಜಾತಿ, ಉಪಜಾತಿಗಳ ಬಲೆಯಲ್ಲಿರುವ ಮನುಷ್ಯ ಭವಿಷ್ಯವನ್ನು ನಂಬುವುದು ತನ್ನ ಧಾರ್ಮಿಕ ಮನೋಭಾವನೆಗಳಿಗೆ ಅನುಗುಣವಾಗಿಯೇ ಇದೆ. ಎಲ್ಲ ಜನಾಂಗಗಳು ಒಂದಲ್ಲ ಒಂದು ಬಗೆಯಲ್ಲಿ 'ಭವಿಷ್ಯ'ವನ್ನು ನಂಬಿಯೇ ಹೆಚ್ಚು ಆಶಾವಾದಿಗಳಾಗಿ ಬದುಕಿವೆ. ಪಿಂಜಾರರರೂ ಇಂಥ ಮನೋಭಾವನೆಯಿಂದ ಹೊರತಾಗಿಲ್ಲ. ಮಗು ಹುಟ್ಟಿದಾಗ ಆ ಮಗುವಿನ ಹೆಸರು, ಹುಟ್ಟಿದ ಕಾಲದ ಕುರಿತಾಗಿ ಪಿಂಜಾರರು ಇಸ್ಲಾಂ ಪದ್ಧತಿಯಂತೆ ಮುಲ್ಲಾನ ಮೊರೆಹೋಗಿ ವಿವರಗಳನ್ನು

ತಿಳಿದುಕೊಳ್ಳುತ್ತಾರೆ. ಮಗು ಬೆಳೆದಂತೆ ಅದೃಷ್ಟದ ಕೈಗೆರೆಗಳನ್ನು ಕಂಡು ಮಗುವಿನ ಬುದ್ಧಿಶಕ್ತಿ, ಅನ್ನದ ಗೆರೆ, ಧಾರಾಳ ಅಥವಾ ಜಿಪುಣತನ, ಸಿಟ್ಟು ಪ್ರೀತಿಯ ವಿಚಾರಗಳು, ಮದುವೆ, ಗಂಡ ಹೆಂಡತಿಯರ ನಡುವಿನ ದಾಂಪತ್ಯದ ಸರಸ-ವಿರಸ, ಬಡತನ-ಶ್ರೀಮಂತಿಕೆ, ಆಯಸ್ಸು ಮೊದಲಾದವುಗಳನ್ನು ಗುರುತಿಸಿ ಹೇಳುವವರು ಪಿಂಜಾರರಲ್ಲಿದ್ದಾರೆ. ಅವರ್‍ಯಾರೂ ಇದನ್ನೊಂದು ವೃತ್ತಿಯನ್ನಾಗಿ ಮಾಡಿಕೊಂಡವರಲ್ಲ. ಕುತೂಹಲಕ್ಕಾಗಿ, ತಮ್ಮ ತಿಳುವಳಿಕೆ ಮತ್ತು ಹಿರಿಯರಿಂದ ಕಲಿತದ್ದರ ಪರಿಣಾಮವಾಗಿ ಈ ಬಗೆಯಲ್ಲಿ 'ಹಣೆಬರಹ'ವನ್ನು ಹೇಳುವವರಿದ್ದಾರೆ. ಅನೇಕ ಪಿಂಜಾರರು ಬ್ರಾಹ್ಮಣರನ್ನು ಕಂಡು ತಮ್ಮ ಭವಿಷ್ಯವನ್ನು ಕೇಳುತ್ತಾರೆ. ಮಕ್ಕಳು ಹುಟ್ಟಿದಾಗ, ಮದುವೆಗಾಗಿ ಸಂಬಂಧ ಹುಡುಕುವಾಗ, ಮನೆ ಕಟ್ಟುವಾಗ ಬ್ರಾಹ್ಮಣರ ಹತ್ತಿರ ಅವಶ್ಯಕವಾಗಿ ಹೋಗಿ ಈ ಕಾರ್ಯಗಳಿಂದಾಗುವ ಆಗುಹೋಗುಗಳನ್ನು ತಿಳಿದುಕೊಂಡು ಅದರಂತೆ ನಡೆದುಕೊಳ್ಳುತ್ತಾರೆ. ಪಿಂಜಾರರಲ್ಲಿ ಜಾತಕವನ್ನು ಬರೆಸುವ ಪದ್ಧತಿಯಿಲ್ಲ. ಮದುವೆಗಾಗಿ ಗಂಡು-ಹೆಣ್ಣು ಹುಡುಕುವಾಗ ಇಂಥ ದಿಕ್ಕಿನ ಸಂಬಂಧ ಒಳ್ಳೆಯದು ಅಥವಾ ಕೆಟ್ಟದ್ದು ಎಂದು ತಿಳಿಯಬಯಸುತ್ತಾರೆ. ಮನೆಕಟ್ಟುವಾಗ ಆಯ ಎಂಥದಿರಬೇಕು, ಅಡಿಗೆಮನೆ, ದೇವರಮನೆ ಮತ್ತು ಬಾಗಿಲುಗಳು ಯಾವ ದಿಕ್ಕಿಗಿದ್ದರೆ ಒಳ್ಳೆಯದೆಂದು ಬ್ರಾಹ್ಮಣರನ್ನೇ ಕೇಳಿ ತಿಳಿಯುತ್ತಾರೆ. ಕೆಲವರು ಹಿಂದೂ ದೇವರಿಗೆ ನಡೆದುಕೊಳ್ಳುವವರು ಪೂಜಾರರ ಹತ್ತಿರ ತಮ್ಮ ಕಷ್ಟಗಳನ್ನು ಹೇಳಿಕೊಂಡು ದೇವರ ಅಪ್ಪಣೆಯನ್ನು ಕೇಳುವವರಿದ್ದಾರೆ. ಹಿಂದೆ ತಿಳಿಸಿದಂತೆ ಬುಡು-ಬುಡಿಕೆಯವರು, ಕುರುಮಾಮರು ಹೇಳುವ ಭವಿಷ್ಯವನ್ನು ನಂಬುತ್ತಾರೆ. ಮತ್ತು ಈ ಎಲ್ಲ ಸಂದರ್ಭಗಳಲ್ಲಿ ತಮಗೆ ಕೆಟ್ಟದ್ದೇನಾದರೂ ಸಂಭವಿಸುವ ಬಗ್ಗೆ ತಿಳಿದು ಬಂದರೆ ಅದಕ್ಕೆ ತಕ್ಕ ಪರಿಹಾರಗಳನ್ನು ತಿಳಿದುಕೊಂಡು ಅದರಂತೆ ನಡೆಯುತ್ತಾರೆ. ಊರುಗಳಿಗೆ ಯಾರಾದರೂ ಗಿಣಿಶಾಸ್ತ್ರ ಹೇಳುವವರು ಬಂದರೆ ಅವರ ಹತ್ತಿರವೂ ತಮ್ಮ ಅದೃಷ್ಟ ಪರೀಕ್ಷೆ ಮಾಡಿಕೊಳ್ಳುವವರಿದ್ದಾರೆ.

ಪಿಂಜಾರರಲ್ಲಿ ಭವಿಷ್ಯ ಅಥವಾ ಅದೃಷ್ಟವನ್ನು ನಂಬುವಾಗ ತಮ್ಮದೇ ಆದ ರೀತಿ-ನೀತಿಗಳಿದ್ದಂತಿಲ್ಲ. ಈ ಸಂಬಂಧವಾದ ಅವರ ವರ್ತನೆಗಳು ಪಿಂಜಾರರ ಮೂಲನೆಲೆಯನ್ನು ನೆನಪಿಸುವಂತಿವೆ ಮತ್ತು ಇಸ್ಲಾಂ ಈ ಬಗೆಯ ನಂಬಿಕೆಗಳ ಕುರಿತಾಗಿ ಏನು ಹೇಳುತ್ತದೆ ಎನ್ನುವುದು ಅವರಿಗೆ ತಿಳಿದಿಲ್ಲ.

ಭವಿಷ್ಯ ಮತ್ತು ಅದೃಷ್ಟದ ಬಗ್ಗೆ ಹೀಗೆಲ್ಲಾ ನಡೆದುಕೊಳ್ಳುವ ಮನುಷ್ಯ ವರ್ತನೆಗೆ ಬಹುಮಟ್ಟಿಗೆ ಆರ್ಥಿಕ ಮೂಲವಾದ ಹಿತಾಸಕ್ತಿಗಳು ಹಾಗೂ ಅಲೌಕಿಕ ಸುಖದ ಗೀಳು ಕಾರಣವಾಗಿರುವುದನ್ನು ಗಮನಿಸಬಹುದು. ಬದುಕಿನ ಈ ಕ್ಷಣದ ಹೊರತಾಗಿ ಮುಂದಿನದೆಲ್ಲವೂ ಅಸ್ಪಷ್ಟವೂ, ಅಗೋಚರವೂ ಆಗಿರುವುದರಿಂದ ಮನುಷ್ಯ ಅದೃಷ್ಟದ ಬೆನ್ನುಹತ್ತಿ ಅಸಹಾಯಕತೆಯನ್ನು ಪ್ರದರ್ಶಿಸುತ್ತಾನೆ. ಆದರೆ ಮನುಷ್ಯನಿಗೆ ಜೀವನದ ಸ್ವರೂಪವೇ ಹೀಗಿದೆ ಎಂದು ಬದುಕು ಬಂದಂತೆ ಸ್ವೀಕರಿಸುವ, ಬಂದಂತೆ ಬದುಕುವ ಮನೋಭಾವವನ್ನು ನಮ್ಮ ಸಾಮಾಜಿಕ ಪರಿಸರ ಕಲಿಸುವುದಿಲ್ಲ. 'ಇರುವುದೆಲ್ಲವ ಬಿಟ್ಟು ಇರದುದರೆಡೆಗೆ ತುಡಿವುದೇ ಜೀವನ' ಎಂಬುದೇ ಒಟ್ಟಾರೆ ಮನುಕುಲದ ನಡವಳಿಕೆಯಾಗಿ ಬಿಟ್ಟಿದೆ.

### ೪.೨.೨ ವಾರ್ಷಿಕ ಆವರ್ತನ ಆಚರಣೆಗಳು, ಹಬ್ಬ ಹರಿದಿನಗಳು ಮತ್ತು ಜಾತ್ರೆಗಳು

ಪಿಂಜಾರರು ಹೊಸವರ್ಷ ಎಂದು ಆಚರಿಸುವುದು ಯುಗಾದಿಯ ಹಬ್ಬದಲ್ಲಿ. ರೈತಾಪಿ ಕೆಲಸದ ಪಿಂಜಾರರು ಯುಗಾದಿಯ ದಿನವೇ 'ಹೊಸಬೇಸಾಯ' ಎಂದು ಹೊಲಕ್ಕೆ ನೇಗಿಲನ್ನೋ, ಕುಂಟೆಯನ್ನೋ ಹೂಡಿಕೊಂಡು ಒಂದೆರಡು ಸುತ್ತು ತಿರುಗಿಸಿ ಬೇಸಾಯದ ಶಾಸ್ತ್ರ ಮಾಡಿ ಬರುತ್ತಾರೆ. ಉಳಿದಂತೆ ಪಿಂಜಾರರು ವರ್ಷದುದ್ದಕ್ಕೂ ಬರುವ ವಿವಿಧ ಹಬ್ಬಗಳು, ಜಾತ್ರೆಗಳಲ್ಲಿ ಉತ್ಸಾಹದಿಂದ ಪಾಲ್ಗೊಳ್ಳುತ್ತಾರೆ. ಮಳೆ, ಚಳಿ, ಬೇಸಿಗೆ ಕಾಲ ಎನ್ನದೆ ತಮ್ಮ ದುಡಿಮೆಯ ಕಾರಣಕ್ಕೆ ನಿರಂತರವಾಗಿ ತಿರುಗುವ ಪಿಂಜಾರರಿಗೆ ವರ್ಷದ ಎಲ್ಲ ದಿನಗಳೂ ಒಂದೇ ರೀತಿ ಎನಿಸಿದ್ದರೆ ಅಚ್ಚರಿಯಿಲ್ಲ. ಪಿಂಜಾರರು ಆಚರಿಸುವ ಹಬ್ಬ ಹರಿದಿನಗಳು ಮತ್ತು ಉತ್ಸಾಹದಿಂದ ಭಾಗವಹಿಸುವ ಜಾತ್ರೆ, ಉರುಸುಗಳನ್ನು ಗಮನಿಸಿದರೆ ಅವರ ಸಾಂಸ್ಕೃತಿಕ ಅನನ್ಯತೆ ಮತ್ತಷ್ಟು ಸ್ಪಷ್ಟವಾಗುತ್ತದೆ. ಸಾಂಸ್ಕೃತಿಕ ವಿಕಸನದ ಹಾದಿಯಲ್ಲಿ ಅನ್ಯ ಸಂಸ್ಕೃತಿಯ ಜೀವೋತ್ಕರ್ಷದ ಸಂಗತಿಗಳನ್ನು ಹೇಗೆ ತನ್ನ ತೆಕ್ಕೆಗೆ ಬಾಚಿಕೊಳ್ಳುತ್ತ ಔದಾರ್ಯವನ್ನು ಪ್ರಕಟಿಸಬಲ್ಲದು ಎನ್ನುವುದಕ್ಕೆ ಪಿಂಜಾರರ ಸಾಂಸ್ಕೃತಿಕ ಅಧ್ಯಯನ ಉತ್ತಮ ನಿದರ್ಶನವಾಗಿದೆ. ಈ ಹಿನ್ನೆಲೆಯಲ್ಲಿ ಪಿಂಜಾರರು ಆಚರಿಸುವ ಹಬ್ಬಗಳ ಪರಿಚಯವನ್ನು ಮಾಡಿಕೊಳ್ಳಬಹುದಾಗಿದೆ.

ಒಂದು ಜನಾಂಗದ ಹಬ್ಬ-ಹರಿದಿನಗಳಿಗೆ ಆ ಜನಾಂಗದ ಧಾರ್ಮಿಕ ಬದ್ಧತೆ, ದೈವದ ನಂಬಿಕೆ ಮತ್ತು ವೃತ್ತಿಗಳ ಹಿನ್ನೆಲೆಯ ಸಂಭ್ರಮ ಕಾರಣವಾಗಿದೆ. ಮತ್ತು ಈ ಸಂದರ್ಭದ ಆಚರಣೆಗಳಿಂದ, ಆರಾಧನೆಯ ಮೂಲಕ ದೈವಗಳ ಮುನಿಸನ್ನು ಪರಿಹರಿಸಿಕೊಳ್ಳುವುದು ಒಂದು ಬಗೆಯ ತಂತ್ರವೂ ಆಗಿದೆ. ವಾಸ್ತವವಾಗಿ ನಿಸರ್ಗದ ವಿಕೋಪಗಳನ್ನು ಎದುರಿಸಲು ಮನುಷ್ಯ ದೈವಕ್ಕೆ ಹರಕೆ, ಬಲಿ ಮುಂತಾದ ಆಚರಣೆಗಳನ್ನು ಸೃಷ್ಟಿ ಮಾಡಿಕೊಂಡಂತೆ ಕಾಣುತ್ತದೆ. ಆದುದರಿಂದಲೇ ಹಬ್ಬಗಳೆಂದರೆ ಮನುಷ್ಯ ನಿಸರ್ಗಕ್ಕೆ, ದೈವಕ್ಕೆ ತೋರುವ ಸಮರ್ಪಣೆ, ಸಂಭ್ರಮದ ಸಂಕೇತಗಳು. ಇದರೊಂದಿಗೆ ಧರ್ಮಮೂಲದ ಶರಣರ ತ್ಯಾಗ, ಬಲಿದಾನಗಳನ್ನು ಹಾಡಿಹೊಗಳುವ ಮೂಲಕ ತಮ್ಮ ಭಕ್ತಿಯನ್ನು ತೋರಿಸುವುದು, ಅಂತಿಮವಾಗಿ ಮನುಷ್ಯನ ಸಾಮಾಜಿಕ ಜೀವನದ ಅನೇಕ ಬಗೆಯ ಕಲೆಗಳ ಪ್ರದರ್ಶನವೂ ಸೇರಿ ನೀತಿಯ ಪರಾಕಾಷ್ಠೆಯನ್ನು ಮೆರೆಯುವುದು ಇವುಗಳ ಲಕ್ಷಣವಾಗಿದೆ.

ಪಿಂಜಾರರ ಸಂಸ್ಕೃತಿಯ ಪ್ರಧಾನ ಲಕ್ಷಣಗಳು ವ್ಯಕ್ತವಾಗುವುದು ಹಬ್ಬಗಳ ಆಚರಣೆಯಲ್ಲಿ. ಪಿಂಜಾರರ ಮೂಲಾಚರಣೆಗಳು ಮತ್ತು ಈ ಜನಾಂಗ ಮತಾಂತರದ ನಂತರ ಒಳಗೊಂಡ ಆಚರಣೆಗಳು ಸೇರಿ ಹೊಸ ಸಂಸ್ಕೃತಿಯೊಂದರ ರಚನೆಯ ಸಾಧ್ಯತೆಯನ್ನು ಪಿಂಜಾರರು ಆಚರಿಸುವ ಹಬ್ಬಗಳಲ್ಲಿ ಕಾಣಬಹುದು. ಮದುವೆ, ಸಾವು ಮುಂತಾದ ಆಚರಣೆಗಳಲ್ಲಿ ಕಂಡಂತೆ ಇಲ್ಲಿ ಕೂಡ ಪಿಂಜಾರರು ಮುಸ್ಲಿಮರಿಂದ ತಾಂತ್ರಿಕವಾಗಿ ಮಾತ್ರ ಪ್ರಭಾವಿತರಾಗಿರುವುದು ತಿಳಿಯುತ್ತದೆ. ಒಂದು ಜನಾಂಗ ಅತ್ಯಂತ ಸಹಜವಾದ ಆಸಕ್ತಿ, ಶ್ರದ್ಧೆಯಿಂದ ಆಚರಿಸುವ ಹಬ್ಬಗಳ ಜತೆಗೆ ಸಾಮಾಜಿಕ ಭಯದ ಕಾರಣದಿಂದಲೂ ಒಳಗೊಂಡಿರುವ ಹಬ್ಬಗಳೂ ಸೇರಿ ವಿಶಿಷ್ಟವಾದ ಪರಂಪರೆಯನ್ನು ರೂಪಿಸಿಕೊಂಡೂ ನಿರ್ಲಕ್ಷ್ಯವನ್ನು ಅನುಭವಿಸುವುದು ಈ ನೆಲದ ವ್ಯಂಗ್ಯಗಳಲ್ಲಿ ಒಂದು.

ಪಿಂಜಾರರು ವರ್ಷದಲ್ಲಿ ಬರುವ ಹಬ್ಬಗಳೆಲ್ಲವನ್ನೂ ಆಚರಿಸುತ್ತಾರೆಂದರೆ ಅತಿಶಯೋಕ್ತಿಯಲ್ಲ. ಇದರಲ್ಲಿ ಉರುಸುಗಳೂ ಸೇರುತ್ತವೆ. ಉತ್ತರ ಕರ್ನಾಟಕದ ಜಾತ್ಯಾತೀತ ಪರಂಪರೆಗೆ ಪಿಂಜಾರರ ಕೊಡುಗೆ ಈ ಕಾರಣಕ್ಕೇ ವಿಶಿಷ್ಟವಾದುದು. ಭೂತಪ್ಪನಿಂದ ಹಿಡಿದು ಹಸೇನ್-ಹುಸೇನ್ ವರೆಗೆ ಎಲ್ಲರೂ ಪಿಂಜಾರರ ದೈವಗಳು. ಹಬ್ಬಗಳೆಲ್ಲ ಧಾರ್ಮಿಕ ಹಿನ್ನೆಲೆಯವೇ ಆದ್ದರಿಂದ ಧರ್ಮವನ್ನು ಪೋಷಿಸುವ ದೈವದ ಅಂಶ ಇಲ್ಲಿ ಇದ್ದೇ ಇರುತ್ತದೆ. ಜನಾಂಗಕ್ಕೆ ಅಂಟಿಕೊಂಡು ಬಂದ ರೂಢಿ, ನಂಬಿಕೆ, ಸಂಪ್ರದಾಯಗಳು ಬರುಬರುತ್ತ ಒಂದು ಸಮಾಜದ ಸಿದ್ಧ ಮೌಲ್ಯಗಳೂ ಆಗುವುದು ವಿಶೇಷವಲ್ಲ. ಭಾರತದ ಸಾಮಾಜಿಕ ಇತಿಹಾಸದಲ್ಲಿ ಉಂಟಾದ ಸಾಂಸ್ಕೃತಿಕ ವಿಕಸನದಲ್ಲಿ ಅಂಥ ಸಿದ್ಧ ಮೌಲ್ಯಗಳು ಇವತ್ತಿನ ಸಂದರ್ಭದಲ್ಲಿ ಎಂದಿಗಿಂತ ಮಹತ್ವವನ್ನು ಪಡೆಯುತ್ತವೆ. ಪಿಂಜಾರ ಜನಾಂಗಕ್ಕೆ ವಿಶಿಷ್ಟವಾದ ಮತ್ತು ಉಪ ಸಂಸ್ಕೃತಿ ಎಂದು ಗುರುತಿಸಬಹುದಾದ ಎಲ್ಲ ಜನಾಂಗಗಳ ಸಾವಯವ ಭಿತ್ತಿಯೇ ಆಗಿರುವ ಇಂತಹ ರೂಢಿ ಸಂಪ್ರದಾಯದ ಆಚರಣೆಗಳು ಸಮಕಾಲೀನ ಭ್ರಷ್ಟ ನಾಗರಿಕ ಸಮಾಜವನ್ನು ತಿದ್ದಬಲ್ಲ ಮಾರ್ಗದರ್ಶಿಕೆಗಳಾಗಬಹುದಾದಂತಹ ಸತ್ವವನ್ನು ಪಡೆದಿವೆ. ಆದರೆ ಸಹನೆ ಮತ್ತು ಕನಿಷ್ಠ ಸೌಜನ್ಯದ ಆಲೋಚನಾ ಕ್ರಮವೇ ಇಲ್ಲದ ನಾಗರಿಕ ಜಗತ್ತು ಉಪಸಂಸ್ಕೃತಿಗಳು ಕೊಡುವ ಸಂಸ್ಕಾರವನ್ನು ಗ್ರಹಿಸಿ ಅನುಷ್ಠಾನಗೊಳಿಸುತ್ತದೆ ಎಂದು ನಂಬುವುದು ಕಷ್ಟವಾಗಿದೆ.

ಪಿಂಜಾರರು ಪ್ರಧಾನವಾಗಿ ಆಚರಿಸುವ ಹಬ್ಬಗಳು ಯುಗಾದಿ, ರಂಜಾನ್, ಬಕ್ರೀದ್, ದೀಪಾವಳಿ, ಹಿರೇರ (ಹಿರಿಯರ) ಹಬ್ಬ ಮತ್ತು ಮೊಹರಂ. ಇವುಗಳ ಜೊತೆಗೆ ಕಾರ್ಹಬ್ಬ, ಬಸವನಹಬ್ಬ, ನಾಗಪ್ಪನ ಹಬ್ಬ, ಚೌಡವ್ವ, ಎಲ್ಲವ್ವನ ಹಬ್ಬ - ಮುಂತಾದವುಗಳನ್ನು ಆಚರಿಸುತ್ತಾರೆ. ದಾದಾ ಪಾಡು (ಬಾಬಾ ಬುಡನ್‌ಗಿರಿ), ಹೊನ್ನೂರಲಿ ಉರುಸು, ನಾಯಕನಹಟ್ಟಿ ಜಾತ್ರೆ, ದೇವರಗುಡ್ಡದ ಜಾತ್ರೆ, ಎಲ್ಲಮ್ಮನ ಜಾತ್ರೆ, ಬಸವಾಪಟ್ಟಣದ ಉರುಸು - ಹೀಗೆ ಪಿಂಜಾರರು ತಮ್ಮ ಸಂಸ್ಕೃತಿಗೆ ಮತ್ತು ವಾಸಕ್ಕೆ ನಿಕಟವಾದಂತಹ ಎಲ್ಲ ಬಗೆಯ ಉರುಸು ಜಾತ್ರೆಗಳನ್ನು ಮಾಡುತ್ತಾರೆ. ಇಂಡಿಯಾದಂತಹ ನೆಲದಲ್ಲಿ ಜನಾಂಗವೊಂದು ವಿವಿಧ ಸಂಸ್ಕೃತಿಗಳ ಒಟ್ಟು ಆಚರಣೆಯನ್ನು ಒಳಗೊಳ್ಳುವುದು ಮತ್ತು ಅಂತಹ ಸಾಧ್ಯತೆ ಇನ್ನೂ ಪೂರ್ಣ ಬಿಚ್ಚಿಕೊಳ್ಳಲಾಗದಂತಹ ಕೀಳರಿಮೆಯ ಜಗತ್ತಿನ, ಉಪಸಂಸ್ಕೃತಿ ಎಂದು ಗುರುತಿಸಬಹುದಾದ ಶೂದ್ರ ಸಮುದಾಯದ ಸಾಮಾಜಿಕ ಕೆಳಸ್ತರದ ಜನಾಂಗಗಳಲ್ಲಿ ಕಂಡು ಬರುತ್ತದೆ. ಹಾಗಾಗಿ ಜಾತ್ಯಾತೀತತೆ ಕೇವಲ ಒಂದು ಆದರ್ಶ ಅಥವಾ ಆಶಯವಾಗಿರದೆ, ಇಂಡಿಯಾದ ಮೂಲಭೂತ ಸಾಮಾಜಿಕ ರಚನೆಯಲ್ಲಿ, ಜಾತಿಪದ್ಧತಿಯಿಂದಾಗಿ ಮೇಲ್ಜಾತಿಗಳು ಕೆಳಜಾತಿಗಳನ್ನು ಎಷ್ಟೇ ಅವಮಾನದಿಂದ ಕಂಡರೂ, ಅಂದರೆ ಇದುವರೆಗೂ ಗುರುತಿಸಲು ಸಾಧ್ಯವಾಗದೇ ಇರುವಂತಹ ಜನಾಂಗಗಳ ಆಚರಣೆಯಲ್ಲಿಯೇ ಅಂತರ್ಗತವಾಗಿದೆ ತಮ್ಮಲ್ಲಿರುವ ಕೀಳರಿಮೆಯಿಂದ ಹೊರಬರಲಾಗದೆ. ತಮ್ಮ ಸಂಸ್ಕೃತಿಯು ಒಳಗೊಳ್ಳುವ ಮತ್ತು ಮಂಡಿಸುವ ಸಂವೇದನೆಗಳನ್ನು ಪ್ರಕಟಗೊಳಿಸಲು ಅಗತ್ಯವಾದ ದನಿಯಿಲ್ಲದೆ ನಮ್ಮ ಕೆಳಜಾತಿಗಳು ವ್ಯವಸ್ಥಿತವಾದ ಉದಾಸೀನವನ್ನು ಅನುಭವಿಸುತ್ತಲೇ ಬಂದಿವೆ. ಸ್ವಾತಂತ್ರ್ಯೋತ್ತರ ಭಾರತದ ಕಳೆದ ಎಂಟು ಹತ್ತು ವರ್ಷಗಳಿಂದ ಭಾರತೀಯ ಸಮಾಜ ಹೊಸಬಗೆಯ ಆಲೋಚನಾಕ್ರಮವನ್ನು ರೂಪಿಸಿಕೊಂಡು ತಮ್ಮ ಅಸ್ತಿತ್ವವನ್ನು ಪೋಷಿಸಿಕೊಳ್ಳಲು ಬೇಕಾದ

ವೇದಿಕೆಯನ್ನು ಪಡೆಯುತ್ತಿರುವುದು ಮತ್ತು ರಾಜಕೀಯ, ಸಾಮಾಜಿಕವಾದ ಈ ಪ್ರಯತ್ನದೊಂದಿಗೇ ತಮ್ಮ ನೋವು, ಸಿಟ್ಟನ್ನು ಒಟ್ಟಿಗೇ ದಾಖಲು ಮಾಡುತ್ತಿರುವುದು ಮಾತ್ರ ಧಾರ್ಮಿಕ ಮೂಲಭೂತವಾದಿಗಳ ಬುಡ ನಡುಗುವಷ್ಟರ ಮಟ್ಟಿಗೆ ಚೈತನ್ಯಶಾಲಿಯಾಗಿದೆ. ಇದಕ್ಕೂ, ಈಗ ಧಾರ್ಮಿಕ ಮೂಲಭೂತವಾದಿಗಳು ದಿಢೀರನೆ ತೋರಿಸುತ್ತಿರುವ ಸಾಮಾಜಿಕ ಏಕಸೂತ್ರದ ಕಳಕಳಿಗೂ ಇರುವ ಸೂಕ್ಷ್ಮ ಸಂಬಂಧವನ್ನು ಗಮನಿಸಿದರೆ ಭಾರತವನ್ನು ಸಾವಿರ ವರ್ಷ ಹಿಂದಕ್ಕೆ ತಳ್ಳುವ ಮೂಲಭೂತವಾದಿಗಳ ಪ್ರಯತ್ನ ಸ್ಪಷ್ಟವಾಗಿಯೇ ಕಾಣುತ್ತದೆ. ಪಿಂಜಾರರ ಹಬ್ಬಗಳಲ್ಲಿನ ಕೆಲವು ವಿಶಿಷ್ಟ ಆಚರಣೆಗಳನ್ನು ಗಮನಿಸಬಹುದು.

ರಂಜಾನ್ : ಮುಸ್ಲಿಮರ ಮಹತ್ವದ ಹಬ್ಬ ರಂಜಾನ್. ರಂಜಾನ್ ತಿಂಗಳಿಡೀ ಅತ್ಯಂತ ಪವಿತ್ರದ ದಿನಗಳೆಂದು ಮುಸ್ಲಿಮರು ಭಾವಿಸುತ್ತಾರೆ. ಈ ತಿಂಗಳು ಪೂರ್ತಿ ಮುಸ್ಲಿಮರು 'ರೋಜಾ' ಎಂದು ಕರೆಯುವ ಉಪವಾಸ ವ್ರತವನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಾರೆ. ರಂಜಾನ್ ತಿಂಗಳ ಮೊದಲು ಚಂದ್ರ (ಅಮಾವಾಸ್ಯೆಯ ನಂತರದ ಚಂದ್ರ)ನನ್ನು ನೋಡಿ ನಮಾಜು ಮಾಡುತ್ತಾರೆ. ಆ ರಾತ್ರಿಯ ಬೆಳಗಿನಲ್ಲಿ ಅಂದರೆ ಸೂರ್ಯೋದಯದ ಮೊದಲು ನಮಾಜು ಮಾಡಿ ರೋಜಾ ಆರಂಭಿಸುತ್ತಾರೆ. ಇಡೀ ಹಗಲೂ ಅಂದರೆ ಸೂರ್ಯಾಸ್ತವಾಗುವವರೆಗೆ ಉಪವಾಸವನ್ನು ಆಚರಿಸುತ್ತಾರೆ. ಅದೆಷ್ಟು ಕಠಿಣ ಉಪವಾಸ ಅಂದರೆ ಈ ಸಂದರ್ಭದಲ್ಲಿ ಉಗುಳು ನುಂಗುವ ಹಾಗಿಲ್ಲ, ಬೀಡಿ ಕೂಡ ಸೇದುವಂತಿಲ್ಲ. ಅಲ್ಲದೆ ಕಠೋರ ನಿಷ್ಠೆಯಿಂದ 'ಪಾಕ್'ಯಾಗಿರಬೇಕು. ಸೂರ್ಯಾಸ್ತದ ನಂತರ ನಮಾಜು ಮಾಡಿ ರೋಜಾ ಬಿಡುತ್ತಾರೆ. ಸಾಮಾನ್ಯವಾಗಿ ಎಂಥ ಬಡ ಮುಸ್ಲಿಮನೂ ಕೂಡ ಈ ದಿನಗಳಲ್ಲಿ ಒಳ್ಳೆಯ ಊಟ ಉಣ್ಣುತ್ತಾನೆ. ಕೆಲವರು ನಿತ್ಯ ರಾತ್ರಿ ಮಾಂಸಾಹಾರ ಉಪಯೋಗಿಸುತ್ತಾರೆ. ಈ ವ್ರತ ಒಂದು ತಿಂಗಳ ಕಾಲ ಸತತವಾಗಿ ಮತ್ತೆ ಅಮಾವಾಸ್ಯೆಯ ನಂತರದ ಚಂದ್ರನನ್ನು ನೋಡುವವರೆಗೂ ಮುಂದುವರಿಯುತ್ತದೆ. ರಂಜಾನ್ ದಿನ ಸಾಮೂಹಿಕ ಪ್ರಾರ್ಥನೆ ನಡೆಯುವುದರೊಂದಿಗೆ ಹಬ್ಬದ ಸಂಭ್ರಮ ಸಡಗರ ಮುಗಿಯುತ್ತದೆ.

ಪಿಂಜಾರರಿಗೆ ರಂಜಾನ್‌ನ ಈ ತಿಂಗಳಲ್ಲಿ ಮುಸ್ಲಿಮರು ಮಾಡುವ ಆಚರಣೆಗಳ ಬಗ್ಗೆ ಅರಿವಾಗದೆ ; ತಾವೂ ಅವನ್ನು ಒಳಗೊಳ್ಳಬೇಕೆಂಬ ಅಪೇಕ್ಷೆ ಇದೆ ; ಒಳಗೊಳ್ಳಲಾಗಿಲ್ಲ ಅನ್ನುವ ಕೊರಗಿದೆ ; ಒಳಗೊಳ್ಳಲಾಗುವುದಿಲ್ಲವಲ್ಲಾ ಅನ್ನುವ ತಳಮಳವೂ ಇದೆ. ಇದಕ್ಕೆ ಪಿಂಜಾರರಿಗಿರುವ ಧಾರ್ಮಿಕ ತಿಳುವಳಿಕೆಯ ಅಧಿಕೃತ ಜ್ಞಾನದ ಕೊರತೆಯೇ ಕಾರಣ. ಮುಸ್ಲಿಮರು ಪಿಂಜಾರರನ್ನು 'ಮುಸ್ಲಿಮರು' ಎಂದು ಒಟ್ಟಾಗಿ ಸ್ವೀಕರಿಸುವುದಿಲ್ಲ. ಇದಕ್ಕೂ ಪಿಂಜಾರರ ಧಾರ್ಮಿಕ (ಇಸ್ಲಾಂ) ತಿಳುವಳಿಕೆ ಕಡಿಮೆ ಎನ್ನುವಂತಹದ್ದೇ ಕಾರಣ. ಅದನ್ನೆಲ್ಲ ಕಲಿಯುವ ಉತ್ಕಟ ಅಪೇಕ್ಷೆ ಪಿಂಜಾರರಿಗಿದೆ. ಯಾರು ಕಲಿಸಬೇಕು? ಮುಸ್ಲಿಮರು ಕಲಿಸಬೇಕು, ಕಲಿಸಬೇಕಾಗಿತ್ತು, ಕಲಿಸಿಲ್ಲ. ಇದಕ್ಕೆ ಭಾಷೆಯ ತೊಂದರೆಯೂ ಸ್ವಲ್ಪಮಟ್ಟಿಗೆ ಕಾರಣವಾಗಿದೆ. ಇಸ್ಲಾಂ ಧರ್ಮದ ತಿಳುವಳಿಕೆಯನ್ನು ಕನ್ನಡ ಭಾಷೆಯ ಮೂಲಕ ತಲುಪಿಸುವ ಕೆಲಸವಾಗಬೇಕಿತ್ತು. ಆಗ ಪಿಂಜಾರರು ತಮ್ಮದೇ ಭಾಷೆಯಲ್ಲಿ ಸಹಜವಾಗಿ ಕಲಿಯುತ್ತಿದ್ದರು. ಆದರೆ ಮುಸ್ಲಿಮರಿಗೆ ಕನ್ನಡ ಬರುವುದಿಲ್ಲ. (ವ್ಯಾವಹಾರಿಕ ಅಗತ್ಯಕ್ಕೆ ತಕ್ಕಷ್ಟು ಬರುತ್ತದೆ. ಇಲ್ಲವೆಂದಲ್ಲ, ಧರ್ಮದ ಮೂಲಭೂತ ತಿರುಳನ್ನು ಮಂಡಿಸುವಷ್ಟರ ಮಟ್ಟಿನ ಕನ್ನಡ ಕರ್ನಾಟಕದಲ್ಲಿನ ಎಷ್ಟು ಮುಸ್ಲಿಮರಿಗೆ ಬರುತ್ತದೆ? ಬಂದವರು ಆ ಪ್ರಯತ್ನವನ್ನು ಯಾಕೆ ಮಾಡಿಲ್ಲ?) ಪಿಂಜಾರರಿಗೆ

ಉರ್ದುವಾಗಲಿ, ಅರಬಿಕ್ ಆಗಲಿ ಬರುವುದಿಲ್ಲ. ಹೋಗಲಿ, ಇಸ್ಲಾಂ ಬಗ್ಗೆ ಉಳಿದ ಧರ್ಮದವರಾಗಲೀ (ಹಿಂದೂ, ಕ್ರಿಶ್ಚಿಯನ್ ಇತ್ಯಾದಿ) ಏನು ತಿಳಿದುಕೊಳ್ಳಲು ಸಾಧ್ಯವಾಗಿದೆ ? ಉಳಿದವರು ತಿಳಿದುಕೊಳ್ಳಬೇಕೆಂಬ ಆಸಕ್ತಿಯನ್ನು ಹುಟ್ಟಿಸಬೇಕಾದವರು ಯಾರು? ಹಾಗೆಯೇ ಉಳಿದ ಧರ್ಮಗಳ ಬಗ್ಗೆ ಮುಸ್ಲಿಮರು ಏನು ತಿಳಿದುಕೊಂಡಿದ್ದಾರೆ ? ಯಾಕೆ ಒಂದೊಂದೂ ಧರ್ಮ ತನ್ನದೇ ಆದ ದ್ವೀಪಗಳನ್ನು ಸೃಷ್ಟಿ ಮಾಡಿಕೊಂಡಿವೆ ? ಈ ದ್ವೀಪಗಳನ್ನು ದೂರದಿಂದ ನೋಡುತ್ತಿರುವ ಪಿಂಜಾರರಂಥ ಜನಾಂಗದ ಗತಿ ಏನು? ಒಂದೊಂದೂ ದ್ವೀಪ ಒಂದೊಂದು ಧರ್ಮವಾದರೆ ಪಿಂಜಾರರದ್ದೂ ಒಂದು ಧರ್ಮ ಯಾಕಿಲ್ಲ ?

ಈ ಬಗೆಯ ಪ್ರಶ್ನೆಗಳು ಪಿಂಜಾರರ ಜೀವನ ವಿಧಾನವನ್ನು ಅಧ್ಯಯನ ಮಾಡುವ ಹಿನ್ನೆಲೆಗೆ ಅನಿವಾರ್ಯವಾದವೆನಿಸುತ್ತವೆ. ಈ ಎಲ್ಲ ಪ್ರಶ್ನೆಗಳು ಕೊಡುವ ಉತ್ತರಗಳೇ ಪಿಂಜಾರರ ಬದುಕನ್ನು ವಿವರಿಸುತ್ತವೆ. ಈ ನೆಲೆಯಲ್ಲಿ ಪಿಂಜಾರರ ರಂಜಾನ್ ಆಚರಣೆ ಒಳಗೊಂಡಿರುವ ರೀತಿ ಇಂತಹದ್ದು : ರಂಜಾನ್ ಅನ್ನುವ ಹಬ್ಬ ನಾವೂ ಆಚರಿಸಬೇಕಾದದ್ದು ಅನ್ನುವ ಅರಿವು ಪಿಂಜಾರರಿಗಿದೆ. ಕರ್ನಾಟಕದ ಪಿಂಜಾರ ಈ ದಿನಗಳಲ್ಲಿ ಮುಸ್ಲಿಮರು ಆಚರಿಸುವ ಹಾಗೆ 'ಉಪವಾಸ'ವನ್ನು ಆಚರಿಸುವುದಿಲ್ಲ. ಇದಕ್ಕೆ ಮುಖ್ಯ ಕಾರಣಗಳಿವೆ. ೧) ಧರ್ಮದ ಬಗ್ಗೆ ಮುಸ್ಲಿಮರಿಗಿರುವಷ್ಟು ಕಠೋರ ನಿಷ್ಠೆ ಪಿಂಜಾರರಿಗಿಲ್ಲ. ೨) 'ಉಪವಾಸ' ಇರಬೇಕಾದರೆ ಮುಸ್ಲಿಮರು ಅನುಸರಿಸುವ ವಿಧಾನಗಳು ಪಿಂಜಾರರಿಗೆ ಗೊತ್ತಿಲ್ಲ (ಹಿಂದೆ ಹೇಳಿದ ಧಾರ್ಮಿಕ ಅಜ್ಞಾನ ಮತ್ತು ಭಾಷೆಯ ಕಾರಣಗಳು). ೩) ಅತ್ಯಂತ ಮುಖ್ಯವಾದದ್ದು, ಪಿಂಜಾರರು ಜೀವನದ ಬಹುಭಾಗ ಉಪವಾಸವಿರುತ್ತಾರೆ. ಅದು ಅನ್ನ ಇದ್ದೂ ಧರ್ಮದ ಕಾರಣಕ್ಕಾಗಿ ಆಚರಿಸುವಂತಹದ್ದಲ್ಲ. ಅನ್ನವಿಲ್ಲದೆ ಅನಿವಾರ್ಯವಾಗಿ ಇರಬೇಕಾದ ಉಪವಾಸ.

ಈ ಕಾರಣದಿಂದಾಗಿಯೇ ಅನೇಕ ಪಿಂಜಾರರು ಮುಸ್ಲಿಮರು ಆಚರಿಸುವ 'ಉಪವಾಸ' ವ್ರತವನ್ನು ಪ್ರಶ್ನಿಸುತ್ತಾರೆ. 'ಪ್ರತಿ ಸಾಯಂಕಾಲ ಮತ್ತು ಬೆಳ್ಳಂಬೆಳಗ್ಗೆ ಬೇಕಾದ್ದು ಮಾಡಿಕೊಂಡು ತಿನ್ನುವಂತಹದ್ದು ಹೇಗೆ ಉಪವಾಸವಾಗುತ್ತದೆ?' ವರ್ಷದ ಮುಕ್ಕಾಲು ಭಾಗ ಅರೆ ಹೊಟ್ಟೆಯಲ್ಲಿ ಬದುಕುವ ನಾವು ವಿಶೇಷವಾಗಿ 'ಉಪವಾಸ' ಆಚರಿಸುವ ಅಗತ್ಯವೇನಿದೆ? ಪ್ರಜ್ಞಾವಂತರಲ್ಲದ, ಅವಿದ್ಯಾವಂತ ಪಿಂಜಾರರ ಈ ಪ್ರಶ್ನೆಗಳು 'ಯಾವುದು ಧರ್ಮ?' ಅನ್ನುವ ಮೂಲಭೂತ ಪ್ರಶ್ನೆಯನ್ನೇ ಹುಟ್ಟಿಸುತ್ತವೆ. ಅವರನ್ನು 'ಪ್ರಜ್ಞಾವಂತರಲ್ಲ' ಅನ್ನುವುದು ಹೇಗೆ ?

ನಗರಗಳಲ್ಲಿ, ಕೆಲವು ಹಳ್ಳಿಗಳಲ್ಲಿ ಸ್ವಲ್ಪ ಮಟ್ಟಿಗೆ ಹಿಂದೂ ಮೂಲಭೂತವಾದಿಗಳಿಂದ ಭೀತರಾದ ಪಿಂಜಾರರು ರಂಜಾನ್ ತಿಂಗಳಲ್ಲಿ ಉಪವಾಸವಿರುತ್ತಾರೆ. ರೋಜಾ ಬಿಡುವಾಗ, ಕಟ್ಟುವಾಗ ಧ್ಯಾನಿಸಬೇಕಾದ ಕಲ್ಮಗಳು ಇವರಿಗೂ ಬರುವುದಿಲ್ಲ. ಅಂಥವರು ಕಲ್ಮಗಳನ್ನು ಕನ್ನಡ ಅಕ್ಷರಗಳಲ್ಲಿ ಬರೆಸಿಕೊಂಡಿರುತ್ತಾರೆ. ಇದೂ ಪೂರ್ತಿ ತಿಂಗಳ ಕಾಲ ಹೀಗೆ ಮಾಡದೆ ಅವರು ಬಯಸಿದ ಯಾವುದೋ ಕೆಲವು ನಿರ್ದಿಷ್ಟ ದಿನಗಳಲ್ಲಿ ಉಪವಾಸಾಚರಣೆ ಮಾಡುತ್ತಾರೆ. ರಂಜಾನ್ ಇನ್ನೂ ಐದು ದಿನಗಳಿವೆ ಎನ್ನುವಾಗ ಆಚರಿಸುವ 'ಸತಾವಿ' ದಿನದಂದು ಇಂತಹವರು ಸಾಮಾನ್ಯವಾಗಿ ಉಪವಾಸವಿರುತ್ತಾರೆ.

'ಸತಾವಿ' ದಿನ ಉಪವಾಸ ಇದ್ದರೆ ಸಾಕು ಅದು ಒಂದು ತಿಂಗಳಿಗೆ ಸಮ ಎನ್ನುವ ಭಾವನೆಯೂ ಅನೇಕರಲ್ಲಿದೆ. ಆವತ್ತು ಮಾಂಸದಡಿಗೆ ಮಾಡಿ ಉಣ್ಣುತ್ತಾರೆ.

ಆದರೆ ತಿಂಗಳಿಡೀ ಉಪವಾಸವಿರದ ಬಹುಸಂಖ್ಯಾತ ಪಿಂಜಾರರು ಹಬ್ಬದ ದಿನ ಉತ್ಸಾಹದಿಂದಿರುತ್ತಾರೆ. ಮನೆಮಂದಿಗೆಲ್ಲ ಬಟ್ಟೆ ಬರೆ ತರುತ್ತಾರೆ. ಕಡೆಯ ಪಕ್ಷ, ಹಳೆಯ ಬಟ್ಟೆಗಳನ್ನೇ ಒಗೆದು ಉಟ್ಟುಕೊಳ್ಳುತ್ತಾರೆ. ಮೈ ತಿಕ್ಕಿ ತಿಕ್ಕಿ ಸ್ನಾನ ಮಾಡುತ್ತಾರೆ. ಹೊಸ ಅಥವಾ ಹಳೆಯ ಅಂಗಿ, ಪಂಚೆ ಅಥವಾ ಜುಬ್ಬ ಪೈಜಾಮುಗಳನ್ನು ತೊಟ್ಟುಕೊಂಡು ಶ್ಯಾವಿಗೆ ಹುಗ್ಗಿ ಉಂಡು ಬಗಲಲ್ಲಿ ಒಂದು ಚಾಪೆ ಅಥವಾ ದುಪ್ಪಡಿಯಿಟ್ಟುಕೊಂಡು ಊರ ಹೊರಗಿರುವ ಈದಗಾ ಹತ್ತಿರಕ್ಕೆ ತಂತಮ್ಮ ಆಪ್ತರೊಂದಿಗೆ ಹೊರಡುತ್ತಾರೆ. ಬೆಳಿಗ್ಗೆ ಆಗಲೇ ಹೊತ್ತು ಆಳೆತ್ತರಕ್ಕೆ ಬರುತ್ತಿದ್ದ ಹಾಗೇ ಎಲ್ಲರೂ ಈದಗಾ ಮೈದಾನದಲ್ಲಿ ಸೇರುತ್ತಾರೆ. ಹಿಂದಿನ ದಿನವೇ ಮೈದಾನದಲ್ಲಿ ಬೆಳೆದಿರುವ ಹುಲ್ಲು ಕೆತ್ತಿ, ಕಸಕಡ್ಡಿ ಗುಡಿಸಿ ಶುದ್ಧ ಮಾಡಿರುತ್ತಾರೆ. ಪಿಂಜಾರರು, ಮುಸ್ಲಿಮರು ಅವರವರದೇ ಸಣ್ಣಪುಟ್ಟ ಗುಂಪುಗಳಲ್ಲಿ, ಒಟ್ಟಾಗಿಯೂ ಇರುತ್ತಾರೆ. ಬರುವವರು ಬರುತ್ತಲೇ ಇರುತ್ತಾರೆ. ಅವರೆಲ್ಲ ಬಂದು ಸೇರಲೆಂದೇ ಮುಲ್ಲಾ ಪಶ್ಚಿಮಕ್ಕೆ ತಿರುಗಿ 'ಅಜಾನ್' ಕೊಡುತ್ತಾನೆ. ಮುಸ್ಲಿಂ ಮುಖಂಡರೆಲ್ಲ ಮುಂದಿನ ಸಾಲಿನಲ್ಲಿ ನಿಲ್ಲುತ್ತಾರೆ. ಸಹಜ ಕೀಳರಿಮೆಯಿಂದ ಪಿಂಜಾರರು ಮುಸ್ಲಿಂ ಜನರ ನಂತರದ ಸಾಲುಗಳಲ್ಲಿ ತಂತಮ್ಮ ದುಪ್ಪಡಿ, ಚಾಪೆ ಹಾಸಿಕೊಂಡು ನಿಲ್ಲುತ್ತಾರೆ. ಅತ್ಯಂತ ಮುಗ್ಧ ಮಕ್ಕಳ ಹಾಗೆ ಪಿಂಜಾರರೆಲ್ಲ ಅತ್ಯಂತ ಆಸಕ್ತಿ, ಜವಾಬ್ದಾರಿಯಿಂದ ಮುಸ್ಲಿಮರ ಅನುಕರಣೆ ಮಾಡತೊಡಗುತ್ತಾರೆ. ನಮಾಜು ಮುಗಿದ ನಂತರ ಅವರವರ ದುಪ್ಪಡಿಗಳನ್ನು ಮಡಿಸಿಕೊಂಡು ಮನೆಯ ಕಡೆ ಹೊರಡುತ್ತಾರೆ. ದಾರಿಯಲ್ಲಿ ಬರುವಾಗ ಅವರವರ ಸಂಬಂಧಿಕರು, ಮಕ್ಕಳು ಮರಿಗಳಿಗೆಲ್ಲ ಪ್ರೀತಿಯಂದ ತಿಳಿದಷ್ಟು ಹಣ ಕೊಡುವ ಸಂಪ್ರದಾಯವಿದೆ. ಮಾವನಾದವನು ಅಳಿಯ, ಸೊಸೆಯರಿಗಂತೂ ಕೊಟ್ಟೇ ಕೊಡುತ್ತಾನೆ. ಅವರೂ ಹಕ್ಕೆನ್ನುವ ರೀತಿಯಲ್ಲಿ ಅಧಿಕಾರಯುತವಾಗಿ ಕೇಳಿ ಪಡೆಯುತ್ತಾರೆ. ಮನೆಗೆ ಬಂದ ತಕ್ಷಣ ಕೈಕಾಲು ಮುಖ ತೊಳೆದು ಶಾವಿಗೆ ಹುಗ್ಗಿ ಉಣ್ಣುವವರು ಉಣ್ಣುತ್ತಾರೆ. ನಿತ್ಯದ ಹೊಲಮನೆ ಕೆಲಸಗಳಲ್ಲಿ ತೊಡಗುತ್ತಾರೆ. ಪಿಂಜಾರರ ವಿಶೇಷ ಖಯಾಲಿಯಾದ ಹೆಡ್ ಆಡಲೂ ಕೆಲವರು ಹೋಗುತ್ತಾರೆ. ಕುರಿ, ಮೇಕೆ, ಕೋಳಿ ಕುಯ್ಯುವುದು, ಕುರಿ, ಮೇಕೆ ಕೊಯ್ದುವರಿಂದ ಸಾಲ ಹೇಳಿ ಮಾಂಸ ತರುವುದು ನಡೆಯುತ್ತದೆ. ಮಾಂಸ ಮತ್ತು ಅಡಿಗೆಗೆ ಬೇಕಾದ ಕೊಬರಿ, ಏಲಕ್ಕಿ, ಲವಂಗ, ಕಸಕಸೆ ಇತ್ಯಾದಿ ತಂದುಕೊಟ್ಟರೆ ಗಂಡಸರ ಕೆಲಸ ಮುಗಿಯಿತು. ಹೆಣ್ಣುಮಕ್ಕಳು ಅಡಿಗೆ ಮಾಡುವುದರಲ್ಲಿ ನಿರತರಾಗುತ್ತಾರೆ. ಸಂಜೆ ಅಡಿಗೆಯಾಗುತ್ತಿದ್ದಂತೆ ಮುಲ್ಲಾನನ್ನು ಹುಡುಹುಡುಕಿ ಆತ ಯಾರ ಮನೆಯಲ್ಲಿ 'ಓದಿಕೆ' ಮಾಡುತ್ತಿದ್ದರೂ ಮುಗಿಯುವವರೆಗೆ ಕಾದಿದ್ದು ಕರೆದುಕೊಂಡು ಬರುತ್ತಾರೆ, ಮುಲ್ಲಾ ಮುಸ್ಲಿಮರ ಮನೆಗೆ ಈ ಕಾರಣಕ್ಕಾಗಿ ಹೋಗುವ ಅಗತ್ಯವಿರುವುದಿಲ್ಲ. ಯಾಕೆಂದರೆ ಮುಲ್ಲಾ ಮಾಡುವ ಓದಿಕೆ ಅವರಿಗೂ ಬರುತ್ತದೆ. ಆದರೆ ಪಿಂಜಾರರಿಗೆ ಮುಲ್ಲಾ ಅನಿವಾರ್ಯ. 'ಓದಿಕೆ' ಮುಗಿಯದೆ ಹಬ್ಬ ಮುಂತಾದ ವಿಶೇಷ ದಿನಗಳಲ್ಲಿ ಉಣ್ಣುವುದಿಲ್ಲವಾದ್ದರಿಂದ ಆತನನ್ನು ಕಾಡಿ ಬೇಡಿ ಕರೆದುಕೊಂಡು ಬರುತ್ತಾರೆ. ಮುಲ್ಲಾ ಯಾರ ಮನೆಯನ್ನೂ ಬಿಡದೆ ಎಲ್ಲರ ಮನೆಯ ಓದಿಕೆಯನ್ನು ಮುಗಿಸಿಕೊಡುತ್ತಾನೆ. ಒಂದು ವ್ಯತ್ಯಾಸವೆಂದರೆ ಪಿಂಜಾರರಲ್ಲಿ ಅಷ್ಟಿಷ್ಟು ಶ್ರೀಮಂತರಾಗಿದ್ದು ಇಡೀ ಪಿಂಜಾರರನ್ನು

ಅಧೀನದಲ್ಲಿಟ್ಟುಕೊಂಡಿರುವುದಾಗಿ ಭ್ರಮಿಸಿರುವವರ ಮನೆಗೆ ಮುಲ್ಲಾ ಅವರು ಹೇಳಿ ಕಳಿಸದಿದ್ದರೂ ಎಲ್ಲರಿಗಿಂತ ಮೊದಲು ಅಲ್ಲಿಗೆ ಹೋಗಿ ಓದಿಕೆ ನಡೆಸುತ್ತಾನೆ. ಪಿಂಜಾರರಲ್ಲಿ ವಿಶೇಷವೆಂದರೆ ಮುಲ್ಲಾ ಓದಿಕೆಗೆ ಬಂದನೆಂದರೆ ಆತನಿಗೆ ಕೈಕಾಲು ತೊಳೆಯಲು ನೀರು ಕೊಡುತ್ತಾರೆ. ಮನೆಯ ಒಳಗಡೆ ಮೂಲೆಯೊಂದರಲ್ಲಿ ಕೆಮ್ಮಣ್ಣು ಬಳಿದು ದಸ್ತರಖಾನಿ ಹಾಸಿ ಗಂಗಾಳದಲ್ಲಿ (ಮೊದಲು ಮಣ್ಣಿನ ಚಿಪ್ಪುಗಳಲ್ಲಿ ಇಡುತ್ತಿದ್ದರಂತೆ) ಅನ್ನ ಇಟ್ಟು ಅನ್ನದ ಮೇಲೆ ಮಾಂಸದ ಚೂರುಗಳಿರುವ ಹಾಗೆ ಸಾರು ಬಿಟ್ಟು ಒಂದು ಕಡೆಗೆ ನಾಕೈದು ಊದಿನ ಕಡ್ಡಿಗಳನ್ನು ಹಚ್ಚಿ ಸಿಕ್ಕಿಸುತ್ತಾರೆ. ಪಕ್ಕದಲ್ಲಿ ಕುಡಿಕೆಯಲ್ಲಿ ಬೆಂಕಿ ಕೆಂಡ ಹಾಕಿ ಅದರ ಕೆಳಗೆ ಕಾಗದದಲ್ಲಿ ಲೋಬಾನದ ಪುಡಿ ಇಟ್ಟಿರುತ್ತಾರೆ. ಮುಲ್ಲಾ ಸೀದಾ ಅಲ್ಲಿಗೆ ಬಂದು ಓದಿಕೆ ಮುಗಿಸಿ ಲೋಬಾನ ಹಾಕಿ ಮುಂದಿನ ಮನೆಗೆ ಹೊರಡುತ್ತಾನೆ. ಮುಲ್ಲಾನನ್ನು ಅತ್ಯಂತ ಪ್ರೀತಿಯಿಂದ ಉಂಡುಹೋಗಲು ಹೇಳುತ್ತಾರೆ. ಆದರೆ ಇನ್ನೂ ಅನೇಕ ಮನೆಗಳ ಓದಿಕೆ ಮುಗಿಸಬೇಕಾಗಿರುವುದರಿಂದ, ಆಗಲೇ ಸಾಹುಕಾರರ (ಊರಿಗೊಬ್ಬರಂತಿರುತ್ತಾರೆ) ಮನೆಯಲ್ಲಿ ಊಟ ಮಾಡಿರುವುದರಿಂದ ಆತ ಸೌಜನ್ಯದಿಂದಲೇ ನಿರಾಕರಿಸಿ ಹೋಗುತ್ತಾನೆ. ಓದಿಕೆ ಮುಗಿದದ್ದೇ ತಡ ಪಿಂಜಾರರು ಒಬ್ಬೊಬ್ಬರಾಗಿ ಲೋಬಾನ ಹಾಕಿ ಕುಕ್ಕುರುಗಾಲಲ್ಲಿ ಕೂತು ಮೊಣಕಾಲು ಮಂಡಿಯೂರಿ ಬಗ್ಗಿ, ಎರಡೂ ಕೈಗಳನ್ನು 'ಎಡೆ'ಯ ಹತ್ತಿರದ ನೆಲಕ್ಕೆ ಮುಟ್ಟಿಸಿ ಮತ್ತೆ ಹಣೆಗೆ ಮುಟ್ಟಿಸಿಕೊಳ್ಳುತ್ತಾರೆ. ಹೀಗೆ ಪ್ರತಿಯೊಬ್ಬರೂ ನೆಲಕ್ಕೆ ಹಣೆ ಮುಟ್ಟಿಸಿ ಲೋಬಾನ ಹಾಕಿದ ನಂತರ ಊಟಕ್ಕೆ ಕುಳಿತುಕೊಳ್ಳುತ್ತಾರೆ. ಹೆಣ್ಣು ಮಕ್ಕಳು ಮೊದಲು ಗಂಡಸರಿಗೆ ಬಡಿಸಿ ನಂತರ ಅವರು ಉಣ್ಣುತ್ತಾರೆ. ಇಂತಹ ವಿಶೇಷ ದಿನಗಳಲ್ಲಿ ಎಲೆ ಅಡಿಕೆ ಹಾಕುವುದು ಪಿಂಜಾರರಲ್ಲಿದೆ. ಆದರೆ ಬಳ್ಳಾರಿ, ರಾಯಚೂರು, ಧಾರವಾಡದ ಪಿಂಜಾರರಿಗೆ ಎಲೆ ಅಡಿಕೆ ತಂಬಾಕು ನಿತ್ಯದ ಚಟವೂ ಆಗಿದೆ.

ರಂಜಾನ್‌ನ ಈ ಆಚರಣೆಯಲ್ಲಿ ಪಿಂಜಾರರು ನಡೆದುಕೊಳ್ಳುವ ರೀತಿ ಮತ್ತು ಬಕ್ರೀದ್ ಹಬ್ಬದ ಆಚರಣೆಯ ರೀತಿಗೂ ಮೂಲಭೂತವಾಗಿ ವ್ಯತ್ಯಾಸವಿಲ್ಲ. ರಂಜಾನ್ ಸಂದರ್ಭದ ಹಾಗೆ ಉಪವಾಸಾಚರಣೆಯಿಲ್ಲ ಅನ್ನುವುದನ್ನು ಬಿಟ್ಟರೆ ಹಬ್ಬದ ದಿನ ಸಾಮೂಹಿಕ ನಮಾಜು, ಅಡಿಗೆ, ಆಟ ಇತ್ಯಾದಿಯೆಲ್ಲ ಮೇಲಿನ ರೀತಿಯದೆ, ಆಗಿರುವುದರಿಂದ ಬಕ್ರೀದ್‌ನ್ನು ಇಲ್ಲಿ ವಿಶೇಷವಾಗಿ ವಿವರಿಸುವ ಅಗತ್ಯವಿಲ್ಲ ಎನಿಸುತ್ತದೆ. ಬಕ್ರೀದ್‌ನಲ್ಲಿ ಅಷ್ಟಿಷ್ಟು ಉಳ್ಳವರು ಖುರ್ಬಾನಿ ಮಾಡುವ ರೂಢಿಯಿದೆ. ಸಾಮೂಹಿಕ ನಮಾಜನಿಂದ ಬಂದ ತಕ್ಷಣ ಹಬ್ಬಕ್ಕಾಗಿ ತಂದ ಕುರಿಯನ್ನು ಕೊಯ್ದು ತಮ್ಮ ಆಪ್ತರಾದವರಿಗೆ ಮೂರು ನಾಲ್ಕು ಮಾಂಸದ ತುಂಡುಗಳನ್ನು ಹಂಚುವುದಿದೆ. ಪಿಂಜಾರರೂ ಕೂಡ ಖುರ್ಬಾನಿಯನ್ನು ಮಾಡುವುದು ಅಲ್ಲಲ್ಲಿ ಕಂಡುಬರುತ್ತದೆ. ಪಿಂಜಾರರಿಗೆ ರಂಜಾನ್, ಬಕ್ರೀದ್ ಮುಂತಾದವು ನಮ್ಮ ಹಬ್ಬಗಳು, ನಾವು ಆಚರಿಸಬೇಕು ಎನ್ನುವುದಷ್ಟೇ ಹೊರತು ಆ ಮೂಲಕ ನಂಬಿಕೆ ಅಥವಾ ಹಿನ್ನೆಲೆಯ ಜ್ಞಾನ ಇಲ್ಲದಿರುವುದರಿಂದಲೇ ಅವರು ಈ ಹಬ್ಬಗಳಲ್ಲಿ ಆಚರಿಸುವ ರೀತಿ ಮುಖ್ಯವಾಗಿ, ತಾಂತ್ರಿಕವಾಗಿ ನಾವು ಹಾಗೆ ನಡೆದುಕೊಂಡಿದ್ದೇವೆನ್ನುವುದನ್ನು ಮುಸ್ಲಿಮರಿಗೆ ತೋರಿಸಿ ಒಪ್ಪಿಸಿಕೊಳ್ಳುವ ರೀತಿಯೇ ಆಗಿರುವಂತಿದೆ. ಇದರ ಹಿಂದಿರುವ ಭಯವನ್ನು ಗಮನಿಸಬಹುದು.

ಪಿಂಜಾರರ ಈ ಬಗೆಯ ಜೀವನ ವಿಧಾನವನ್ನು ತಿಳಿಯುವ ಸಂದರ್ಭದಲ್ಲಿ ಅತ್ಯಂತ ಕುತೂಹಲಕಾರಿಯಾದ ಸಂಗತಿಯೊಂದನ್ನು ಗುರುತಿಸಬಹುದಾಗಿದೆ. ಪಿಂಜಾರ ಜನಾಂಗ ಈ ಎರಡು ಹಬ್ಬಗಳಲ್ಲಿ ಮಾತ್ರ ನಮಾಜಿನ ಆಸಕ್ತಿಯನ್ನು ತೋರಿಸುತ್ತಾರೆ. ಹಾಗೆ ಸಾಮೂಹಿಕ ನಮಾಜಿನಲ್ಲಿ ತೊಡಗಿದಾಗ ಪಿಂಜಾರ ತನ್ನ ನಿತ್ಯದ ಅವಮಾನವನ್ನು ಅನುಭವಿಸುವುದು ಕಡಿಮೆ. ಆ ಸಂದರ್ಭದಲ್ಲಿ ಮುಸ್ಲಿಮರು ಇವರಿಗೆ ಬಯ್ಯುವುದಿಲ್ಲ. ಆದರೆ ಪ್ರೀತಿಯಿಂದಲೂ ನೋಡಿಕೊಳ್ಳುತ್ತಾರೆಂದಲ್ಲ. ಅವರ ಪಾಡಿಗೆ ಅವರನ್ನು ಬಿಟ್ಟು ತಂತಮ್ಮ ನಮಾಜಿನಲ್ಲಿ ತೊಡಗುತ್ತಾರೆ. ಸಾರ್ವಜನಿಕವಾಗಿ, ಉಳಿದ ಸಂದರ್ಭದಲ್ಲಿ ಅನುಭವಿಸುವಂಥ ಆಳದ ಅವಮಾನವನ್ನು ಸಾಮೂಹಿಕ ಪ್ರಾರ್ಥನೆಯ ಸಂದರ್ಭದಲ್ಲಿ ಪಿಂಜಾರರು ಅನುಭವಿಸುವುದಿಲ್ಲ ಎನ್ನುವುದಾದರೆ ಮುಸ್ಲಿಮರು ಪಿಂಜಾರರಿಂದ ಏನನ್ನು ನಿರೀಕ್ಷಿಸುತ್ತಾರೆನ್ನುವುದು ಸ್ಪಷ್ಟವಾಗುತ್ತದೆ. ಬರೀ ಪಿಂಜಾರರೇ ಇರುವ ಊರುಗಳಲ್ಲಿ ಈ ತೊಂದರೆಯಿರುವುದಿಲ್ಲ. ಆದರೆ ಒಂದು ಊರಿನಲ್ಲಿ ಒಂದೆರಡು ಮುಸ್ಲಿಮರ ಮನೆಗಳಿದ್ದರೆ ಸಾಕು ಮಾನಸಿಕ ಹೊಯ್ದಾಟ ಶುರುವಾಗುತ್ತದೆ. ಅನೇಕ ಊರುಗಳಲ್ಲಿ ಮುಸ್ಲಿಮರೇ ಪಿಂಜಾರರಿಗೆ ಹೊಂದಿಕೊಂಡು ಸಾಂಪ್ರದಾಯಿಕ ಉಗ್ರನಿಷ್ಠೆಯಿಂದ ಹೊರಬಂದ ಉದಾಹರಣೆಗಳಿವೆ. ಇದು ಅನೇಕ ಪಿಂಜಾರರು 'ಮುಸ್ಲಿಮ'ರಾಗುವ ಮೂಲಕ ತಮ್ಮ ಸಾಮಾಜಿಕ ಭದ್ರತೆಯನ್ನು ಖಚಿತಪಡಿಸಿಕೊಂಡ ಹಾಗೆ ಅಷ್ಟೆ. ಆದರೆ ಇಸ್ಲಾಂ ಬಗ್ಗೆ ಪಿಂಜಾರರಿಗಿರುವ ಅಜ್ಞಾನ, ಮುಸ್ಲಿಮರ ಬಗ್ಗೆ ಇರುವ ಭಯ ಮತ್ತು ಸಿಟ್ಟು ಒಟ್ಟಿಗೆ ಸೇರಿ ಪಿಂಜಾರರು ತಮ್ಮ ಮೂಲಾಚರಣೆಗಳನ್ನೇ ಸಹಜವಾಗಿ ಮುಂದುವರಿಸಿಕೊಂಡು ಬರಲು ಕಾರಣವಾಗಿದೆ. ಆದ್ದರಿಂದಲೇ ಪಿಂಜಾರರಿಗೆ ಇವತ್ತಿಗೂ ಯುಗಾದಿಯನ್ನು ಆಚರಿಸುವಾಗಿನ ತಿಳುವಳಿಕೆ ಮತ್ತು ಸಂಭ್ರಮ ರಂಜಾನ್ ಮತ್ತು ಬಕ್ರೀದ್ ಆಚರಣೆಯ ಸಂದರ್ಭದಲ್ಲಿ ಕಂಡು ಬರುವುದಿಲ್ಲ.

ಪಿಂಜಾರರು ತಮ್ಮ ಮೂಲಾಶ್ರಮದ ಹಬ್ಬಗಳನ್ನು ಎಲ್ಲ ಹಿಂದೂ ಶೂದ್ರ ಸಮುದಾಯದವರು ಆಚರಿಸುವ ವಿಧಾನದಲ್ಲೇ ಆಚರಿಸುತ್ತಾರೆ. ಒಂದು ವಿಶೇಷವೆಂದರೆ ಆ ಯಾವುದೇ ಹಬ್ಬಗಳಲ್ಲಿ ಕೋಳಿ, ಕುರಿ ಕೊಯ್ಯುವಾಗ ಮತ್ತು ಅಡಿಗೆ ಎಡೆಯಿಟ್ಟು ಓದಿಕೆ ಮಾಡಿಸುವಾಗ ಮುಲ್ಲಾನನ್ನು ಅಗತ್ಯವಾಗಿ ಕರೆದು ತರುತ್ತಾರೆ.

ಪಿಂಜಾರರು ಮಾರ್ನೆಮಿ (ಮಹಾನವಮಿ) ಹಬ್ಬ ಇನ್ನೇನು ಬಂತು ಅನ್ನುವಾಗ, (ಅಮಾವಾಸ್ಯೆಯಾದ ಹನ್ನೊಂದುದಿನದಲ್ಲಿ ಹಬ್ಬ ಎನ್ನುತ್ತಾರೆ) ಮನೆಗೆ ಸುಣ್ಣ ಬಳಿದು ಬಾಗಿಲಿಗೆ ಕೆಮ್ಮಣ್ಣು ಬಳಿದು ಶುದ್ಧ ಮಾಡುತ್ತಾರೆ. ಹಬ್ಬದ ದಿನ ಹುಗ್ಗಿ, ಅನ್ನ, ಸಾರು ಮಾಡಿಕೊಂಡು ಊರಿನ ಹನುಮಂತ ದೇವರ ಗುಡಿ ಅಥವಾ ಈಶ್ವರ ಗುಡಿಗೆ ಹಣ್ಣು ಕಾಯಿ ಮಾಡಿಸಿ ಅಡ್ಡಬಿದ್ದು ಬರುತ್ತಾರೆ. ನಂತರ ಹೊಲಕ್ಕೆ ಹೋಗಿ ಇದ್ದ (ಹತ್ತಿ ಅಥವಾ ಜೋಳ) ಬೆಳೆಯ ತುಂಬಾ ಅನ್ನ, ಮಜ್ಜಿಗೆಯನ್ನು ಕಲಸಿಕೊಂಡು ಚರಗ ಉಗ್ಗುತ್ತಾರೆ. ಒಂದು ಕಲ್ಲಿಗೆ ಸುಣ್ಣ ಹಚ್ಚಿ ಅದನ್ನು ಒಂದು ಗಿಡದ ಬುಡದಲ್ಲಿಟ್ಟು ಎಲೆ ಅಡಿಕೆ, ಅರಿಶಿಣ ಕೊಂಬು, ಅಕ್ಕಿ, ದಾರ ಇಟ್ಟು ಇಡೀ ಸಂಸಾರದೊಂದಿಗೆ ಹೊಲದಲ್ಲಿ ಊಟ ಮಾಡಿ ಬೈಗಾಗುವವರೆಗಿದ್ದು ಮನೆಗೆ ಬರುತ್ತಾರೆ. ಮರುದಿನ ಮಾಂಸದ ಸಾರು ಮಾಡಿಕೊಂಡು ಉಣ್ಣುತ್ತಾರೆ.

ದೀಪಾವಳಿಯ ಸಂದರ್ಭದಲ್ಲಿ ಎಂದಿನಂತೆ ಮನೆಬಳಿದು ಮಕ್ಕಳು ಮರಿಗಳಿಗೆಲ್ಲಾ ಹೊಸಬಟ್ಟೆ ತಂದು ಮೈತೊಳೆದು ಉಡಿಸುತ್ತಾರೆ. ಹಬ್ಬದ ದಿನ ಬೇಳೆ ಹಾಕಿ ಹೋಳಿಗೆ ಮಾಡುತ್ತಾರೆ. ಹೋಳಿಗೆಯ ಜೊತೆ ಅನ್ನ, ಸಾರು ಮಾಡಿ ಮನೆಯ ಒಂದು ಮೂಲೆಯಲ್ಲಿ ಕೆಮ್ಮಣ್ಣು ಬಳಿದು ಬಾಳೆ ಎಲೆ ಹಾಸಿ ಕುಂಕುಮ, ಕರ್ಪೂರ, ತೆಂಗಿನಕಾಯಿ, ಬಾಳೆಹಣ್ಣು, ಎಲೆ ಅಡಿಕೆ, ಗಂಧ, ಊದಿನಕಡ್ಡಿ ಎಲ್ಲ ಇಟ್ಟು ಎಡೆಗೆ ಸಿದ್ಧಮಾಡುತ್ತಾರೆ. ಅಡಿಗೆ ಆರಂಭವಾದಾಗಿನಿಂದಲೂ ಎಲ್ಲ ಶಾಸ್ತ್ರ ಮುಗಿಯುವರೆಗೂ ಯಾರೂ ಎಂಜಲು ಮಾಡುವಂತಿಲ್ಲ. ಎಡೆಗೆ ಸಿದ್ಧತೆಯಾದ ನಂತರ ಎಲ್ಲಮ್ಮನನ್ನು ಕರೆದುಕೊಂಡು ಬರುತ್ತಾರೆ. ಸಾಮಾನ್ಯವಾಗಿ ಊರಿಗೊಬ್ಬರಂತೆ ಈ ಎಲ್ಲಮ್ಮನನ್ನು ಹೊತ್ತುಕೊಂಡು ಬರುವವರು ಇರುತ್ತಾರೆ. ಹಾಗೆ ಹೊತ್ತು ತರುವವರು ತಳವಾರರು, ಕುರುಬರು, ಉಪ್ಪಾರರು ಅಥವಾ ಮರಾಠಿಗರು - ಈ ಯಾವುದೇ ಜನಾಂಗಕ್ಕೆ ಸೇರಿದ ಸ್ತ್ರೀಯಾಗಿರುತ್ತಾಳೆ. ಈಕೆ ಒಂದು ಪುಟ್ಟಿ ಅಥವಾ ಗೂಡೆಯಂತಹದರಲ್ಲಿ (ಕಾಗದ ನೆನೆಸಿಟ್ಟು ಅರೆದು ನಂತರ ಪುಟ್ಟಿಗೆ ಬಳಿದು ಒಣಗಿಸಿರುತ್ತಾರೆ) ಎಲ್ಲಮ್ಮನ ಫೋಟೋ, ಸಣ್ಣಕತ್ತಿ, ಬಳೆ, ಕುಂಕುಮ ಇತ್ಯಾದಿ ಇಟ್ಟುಕೊಂಡು ಹೊರಡುತ್ತಾಳೆ. ಈಕೆಯನ್ನು ಕರೆದೊಯ್ಯುವವರು ಮುಂದೆ ಮುಂದೆ ನೀರು ಚಿಮುಕಿಸುತ್ತಾ ಬಂದಂತೆ ಎಲ್ಲಮ್ಮ ಆ ಪುಟ್ಟಿಯನ್ನು ಹೊತ್ತು ನೀರು ಚಿಮುಕಿಸಿದ ದಾರಿಯಲ್ಲಿ ನಡೆದು ಬರುತ್ತಾಳೆ. ಮನೆಯೊಳಗೆ ಬಂದ ತಕ್ಷಣ ಎಲ್ಲಮ್ಮನ ಪುಟ್ಟಿಯನ್ನು ಇಳಿಸಿ ಕೆಮ್ಮಣ್ಣು ಬಳಿದ ಜಾಗದಲ್ಲಿ ಅಕ್ಕಿ ಹಾಸಿ ಅದರ ಮೇಲಿಡುತ್ತಾರೆ. ನಂತರ ಎಡೆಗಾಗಿ ಜೋಡಿಸಿದ್ದ ಒಂಬತ್ತು ಹೋಳಿಗೆ, ಎರಡು ಬಾಳೆಹಣ್ಣು, ಎರಡು ತೆಂಗಿನಕಾಯಿ, ಐದು ವೀಳೆದೆಲೆ ಮುಂತಾದವನ್ನು ಎಲ್ಲಮ್ಮನ ಮುಂದಿಡುತ್ತಾರೆ. ಅವಳು ತುಂಬಿದ ಕೊಡದಲ್ಲಿನ ನೀರನ್ನು ಒಂದು ಚಂಬಿಗೆ ತುಂಬಿಕೊಂಡು ಕೆಮ್ಮಣ್ಣಿನಿಂದ ಬಳಿದ ಜಾಗದಲ್ಲಿ ಅಕ್ಕಿ ಹರಡಿ ಅದರ ಮೇಲೆ ಚಂಬನ್ನು ಇಡುತ್ತಾಳೆ. ಸ್ವಲ್ಪ ಬೇವಿನಸೊಪ್ಪು, ಐದು ವೀಳೆಯದೆಲೆಯನ್ನು ಚಂಬಿನೊಳಗಿಟ್ಟು ಎಡೆ ಮಾಡುತ್ತಾಳೆ. ಮಾಡುವಾಗ 'ಎಲ್ಲಮ್ಮ ಉಧೋ....' ಇತ್ಯಾದಿಯಾಗಿ ಒಂದೆರಡು ನುಡಿಪದ ಹಾಡುತ್ತಾಳೆ. ನಂತರ ಮನೆಯವರು ಕಾಯಿ ಒಡೆಯುತ್ತಾರೆ. ಆಮೇಲೆ ಎಲ್ಲಮ್ಮನ ಪಟ್ಟಳಿಗೆ (ಪುಟ್ಟಿ) ಹೋಳಿಗೆ, ಅಕ್ಕಿ, ತಿಳಿದಷ್ಟು ದುಡ್ಡು, ಒಡೆದ ಕಾಯಿಯ ಒಂದು ಭಾಗವನ್ನು ಹಾಕಿ ಮೊದಲಿನಂತೆ ನೀರು ಚಿಮುಕಿಸುತ್ತಾ ಕಳಿಸಿ ಬರುತ್ತಾರೆ.

ಇತ್ತ ಮನೆಯಲ್ಲಿ ಎಡೆಗೆ ಕೈಮುಗಿದು ಅಡ್ಡಬಿದ್ದು ಊಟಕ್ಕೆ ಕುಳಿತುಕೊಳ್ಳುತ್ತಾರೆ. ದೀಪಾವಳಿಯ ದಿನ ಬೆಳಿಗ್ಗೆ ಸಾಮಾನ್ಯ ಊಟ ಉಂಡ ನಂತರ ಇಲ್ಲಿಯವರೆಗೆ ಯಾವ ಕಾರಣಕ್ಕೂ ಪಿಂಜಾರರು ಮಾಡಿದ ಅಡಿಗೆಯನ್ನು ಎಂಜಲು ಮಾಡಲು ಬಿಡುವುದಿಲ್ಲ. ಊಟದ ನಂತರ ಚಂಬನ್ನು (ಬೇವಿನಸೊಪ್ಪು, ಎಲೆಯಿಟ್ಟಿರುವ) ತೆಗೆದುಕೊಂಡು ಹೋಗಿ ಬೇವಿನ ಮರದ ಬುಡಕ್ಕೆ ಚೆಲ್ಲಿ ಬರುತ್ತಾರೆ. ಎಡೆಯಲ್ಲಿ ಇದ್ದಂತಹ ಹೋಳಿಗೆ, ಅನ್ನ ಇತ್ಯಾದಿ ಅಡಿಗೆಯನ್ನು ಮನೆಯ ಹೆಣ್ಣುಮಕ್ಕಳೇ ಉಣ್ಣಬೇಕೆಂಬ ನಿಯಮವಿದೆ. ಅಂದರೆ ಆ ಮನೆಯಲ್ಲಿ ಹುಟ್ಟಿದ ಹೆಣ್ಣುಮಕ್ಕಳು ಉಣ್ಣಬೇಕೇ ಹೊರತು ಸೊಸೆಯರಾಗಿ ಬಂದವರು ಉಣ್ಣುವಂತಿಲ್ಲ. ಆ ಸೊಸೆಯರ ದೇವರು ಬದಲಿಯಾಗುತ್ತದೆಂಬ ಕಾರಣಕ್ಕೆ ಅಂದು ಸೊಸೆಯರನ್ನು ಅಡಿಗೆ ಮನೆಯೊಳಕ್ಕೆ ಬಿಟ್ಟುಕೊಳ್ಳುವುದಿಲ್ಲ. ಅಡಿಗೆ ಮುಗಿದು ಎಡೆಯಾಗಿ ಊಟ ಮುಗಿದ ನಂತರ ಅವರು ಉಣ್ಣಬೇಕು ಎನ್ನುವುದು ಪಿಂಜಾರರು ಪಾಲಿಸಿಕೊಂಡು ಬಂದ ರೂಢಿ. ಅಷ್ಟಿಷ್ಟು ಶ್ರೀಮಂತರು ಮಾತ್ರ

ಪಟಾಕಿ ಹಾರಿಸುತ್ತಾರೆ. ಆರ್ಥಿಕವಾಗಿ ಹಿಂದುಳಿದ ಬಹಳಷ್ಟು ಪಿಂಜಾರರು ಪಟಾಕಿ ಸುಟ್ಟರೆ ಅದು ರೊಕ್ಕ ಸುಟ್ಟಂತೆ ಎನ್ನುತ್ತಾರೆ. ರೊಕ್ಕ ಸುಟ್ಟರೆ ಸದ್ದು ಬರುವುದಿಲ್ಲ, ಅದಕ್ಕೆಂತಲೇ ರೊಕ್ಕ ಕೊಟ್ಟು ಪಟಾಕಿ ತಂದು ಸುಡುತ್ತಾರೆ ಎಂದು ಮಾತನಾಡುತ್ತಾರೆ.

ಎಂದಿನಂತೆ ಪಿಂಜಾರರು ಸಿಹಿಯೂಟದ ಮರುದಿನ ಮಾಂಸಾಹಾರ ಬಳಸುತ್ತಾರೆ.

ಪಿಂಜಾರರನೇಕರ ಮನೆದೇವರು ಈ ಎಲ್ಲಮ್ಮ, ಇವತ್ತಿಗೂ ಈ ದೀಪಾವಳಿಯ ಸಂದರ್ಭದಲ್ಲಿ ಈ ದೇವತೆಯ ಪೂಜೆ ಮಾಡದೆ ಪಿಂಜಾರರು ಉಣ್ಣುವುದಿಲ್ಲ. ಎಂದಿನಂತೆ ಇದನ್ನೊಂದು ಸಂಭ್ರಮದ ಹಬ್ಬವಾಗಿಯೂ ಆಚರಿಸುವ ಗ್ರಾಮಾಂತರದ ಪಿಂಜಾರರು ತಮ್ಮ ಸಹಜ ಪರಂಪರೆಯನ್ನು ನಿರ್ಭಿಡೆಯಿಂದ ಮುಂದುವರೆಸಿಕೊಂಡು ಬಂದಿದ್ದಾರೆ. ಕೆಲವು ನಗರಗಳಲ್ಲಿನ ಪಿಂಜಾರರು ಗುಪ್ತವಾಗಿ, ಆಂತರಿಕ ಭಯದಲ್ಲಿ ಈ ದೇವತೆಯ ಪೂಜೆ ಮಾಡುತ್ತಿರುವುದು ತಿಳಿದು ಬರುತ್ತದೆ. ಈ ಬಗೆಯ ಭಯಕ್ಕೆ ಹಿಂದೂ-ಮುಸ್ಲಿಮರಿಬ್ಬರೂ ಕಾರಣವಾದಂತಿದೆ. ಯಾಕೆಂದರೆ ಕೋಮು ಗಲಭೆಯ ಸಂದರ್ಭಗಳು ಪಿಂಜಾರರನ್ನು ಈ ಸ್ಥಿತಿಗೆ ತಂದಿವೆ. ಹೆಚ್ಚಾಗಿ ಮುಸ್ಲಿಮರಿಗೇ ಹೆದರುವ ಪಿಂಜಾರರು ಇರುವ ಕಡೆಯಲ್ಲ ಎಂದೂ ಕೋಮು ಗಲಭೆಗಳಾಗಿಲ್ಲ. ಇದು ಪಿಂಜಾರರ ಜಾತ್ಯಾತೀತ ಪರಂಪರೆಯ ದ್ಯೋತಕವೂ ಆಗಿದೆ. ಇಂಥ ಹಬ್ಬಗಳಲ್ಲೆಲ್ಲ ಪಿಂಜಾರರು ಹಿಂದುಗಳು ಪರಸ್ಪರ ಬೆರೆತು ಉಣ್ಣುವುದೂ ಇದೆ.

ಯುಗಾದಿಯನ್ನು ಪಿಂಜಾರರು ಬಯಲುಸೀಮೆಯ ಉತ್ಸಾಹ, ಸಂಭ್ರಮಗಳಲ್ಲಿ ಆಚರಿಸುತ್ತಾರೆ. 'ಹೊಸದಿನ' ಎಂದು ಉಗಾದಿಯ ದಿನದಂದು ರೈತರಾದವರು ಬೇಸಾಯ ಹೂಡಿಕೊಂಡು ಹೊಲಕ್ಕೆ ಹೋಗಿ ಎತ್ತು, ನೊಗ, ಕುಂಟೆ ಅಥವಾ ನೇಗಿಲಿಗೆ ಪೂಜೆ ಮಾಡಿ ಕಾಯಿ ಒಡೆದು ಸ್ವಲ್ಪ ಹೊತ್ತು ಬೇಸಾಯ ಮಾಡುತ್ತಾರೆ. ಇದು ಹೊಸವರ್ಷ ಆರು ಕಟ್ಟುವ ರೀತಿ, ಭೂಮಿತಾಯಿ ಈ ವರ್ಷ ಒಳ್ಳೆಯ ಫಸಲು ಕೊಡಲಿ ಎಂದು ಹಾರೈಸಿ ಮಾಡುವ ಈ ಪೂಜೆ (ಪಿಂಜಾರರು ಪೂಜೆ ಮಾಡುವುದೆಂದರೆ ಊದಿನಕಡ್ಡಿ ಹಚ್ಚಿ ಬೆಳಗಿ ಒಂದು ಕಡೆ ಸಿಕ್ಕಿಸಿ ಕಾಯಿ ಒಡೆದು ಕಾಯೊಳಗಿನ ನೀರನ್ನು ಚಿಮುಕಿಸುತ್ತಾರೆ) ರೈತರೆಲ್ಲರ ನಂಬಿಕೆಯೇ ಆಗಿದೆ. ಮನೆಯಲ್ಲಿ ಹೆಣ್ಣು ಮಕ್ಕಳು ಮನೆಮಂದಿಗೆಲ್ಲ ಎಣ್ಣೆ ಹಚ್ಚಿ ಮೈ ತೊಳೆಸಿ ಹುರಿಗಡ್ಲೆ (ಬೆಳಗಡ್ಲೆ ಎನ್ನುತ್ತಾರೆ, ಪಿಂಜಾರರು) ಬೆಲ್ಲ, ಶುಂಠಿ, ಯಾಲಕ್ಕಿ, ಬೇವಿನಸೊಪ್ಪನ್ನು ಕುಟ್ಟಿ ಕಲಸಿ ಮನೆಯವರಿಗೆ, ಹೊರಗಿನವರಿಗೆ ಹಂಚಿ ತಿನ್ನುತ್ತಾರೆ. ಸಂಜೆಯಲ್ಲಿ ಶ್ಯಾವಿಗೆ ಅಥವಾ ಗೋಧಿ ಹುಗ್ಗಿ ಮಾಡಿ ಎಡೆಯಿಟ್ಟು ಊದಿನಕಡ್ಡಿ ಹಚ್ಚಿಡುತ್ತಾರೆ. ಎಲ್ಲರೂ ಲೋಬಾನ ಹಾಕಿದ ನಂತರ ಊಟ ನಡೆಯುತ್ತದೆ. ಮರುದಿನ ಬಿಡುವು ಎಂದು ಆ ದಿನ ಏನೂ ವಿಶೇಷವಾಗಿ ಮಾಡದೆ ಎಂದಿನಂತಿರುತ್ತಾರೆ. ಮಾರನೆಯ ದಿನ ಹೋಳಿಗೆ ತಯಾರಿ ಎಂದಿನಂತೆ ಎಡೆ, ಎಡೆಯ ಮುಂದಿಟ್ಟ ಬೇವಿನಸೊಪ್ಪು, ಎಲೆ ತುಂಬಿದ ನೀರಿನ ಚಂಬನ್ನು ಊಟದ ನಂತರ ಬೇವಿನ ಮರದ ಬುಡಕ್ಕೆ ಚೆಲ್ಲಿ ಬರುತ್ತಾರೆ. ಅಥವಾ ಚೌಡಮ್ಮನ ಮರಕ್ಕೆ ಎಡೆ ಒಯ್ಯುತ್ತಾರೆ.

ಇದಕ್ಕೆ ಮೊದಲು ಈ ಮೂರನೆಯ ದಿನದ ಸಂಜೆ ಪಿಂಜಾರರ ವಿಶೇಷ ಆಚರಣೆಯೊಂದಿದೆ. ಅವರಿವರೆನ್ನದೆ ಎಲ್ಲರೂ ಊರಿನ ಹೊರಗೆ ಬಯಲಿನಲ್ಲಿ ಸಂಜೆ ಕಾಣುವ ಬಿದಿಗೆ ಚಂದ್ರನನ್ನು ನೋಡಲು

ನೆರೆಯುತ್ತಾರೆ. ಕೆಲವರು ಮನೆಯ ಹತ್ತಿರವೇ ಇರುತ್ತಾರೆ. ಮುಳುಗುವ ಸೂರ್ಯನ ಚೆಂಬೆಳಗು ಕಡಿಮೆಯಾಗುತ್ತಿದ್ದಂತೆ ಚಂದ್ರನನ್ನು ಪಡುವಣ ಆಕಾಶದಂಚಿನಲ್ಲಿ ಹುಡುಕಲು ನಾ ಮುಂದೆ ತಾ ಮುಂದೆ ಎಂದು ನೆರೆದು ಚಂದ್ರ ಕಂಡ ತಕ್ಷಣ ಹಿರಿಯರಾದವರಿಗೆ ಬೀಗರಿಗೆ ಕಾಲಿಗೆ ಬೀಳುತ್ತಾರೆ. ಮನೆಯಲ್ಲಿ ಚಂದ್ರ ಕಂಡ ತಕ್ಷಣ ಕಾಯಿ ಒಡೆಯುತ್ತಾರೆ. ಚಂದ್ರನನ್ನು ನೋಡಿದ ಹಿರಿಯರು ಈ ಬಾರಿಯ ಮಳೆ, ದವಸ ಧಾನ್ಯಗಳ ಬೆಲೆಯ ಏರಿಳಿತ ಇತ್ಯಾದಿಯನ್ನು ಕುರಿತು ಹೇಳುತ್ತಾರೆ. ಮಕ್ಕಳು, ದೊಡ್ಡವರು ಎಲ್ಲರೂ ಮನೆಮನೆಗೆ ಹೋಗಿ ಹಿರಿಯರಿಗೆ ಕಾಲಿಗೆ ಬಿದ್ದು ಆಶೀರ್ವಾದ ಪಡೆದು ಬರುತ್ತಾರೆ. ಇಲ್ಲಿ ಎಲ್ಲ ಜನಾಂಗದವರೂ ಇರುತ್ತಾರೆನ್ನುವುದು ವಿಶೇಷವೇನಲ್ಲ.

ಮಾರನೆಯ ದಿನ ಕೋಳಿ ಅಥವಾ ಕುರಿ ಕೊಯ್ದು ಸಾರು ಮಾಡಿಕೊಂಡು ಉಣ್ಣುತ್ತಾರೆ.

ಶ್ರಾವಣ ಮಾಸದಲ್ಲಿ ಪಿಂಜಾರರು ನಾಗರಪಂಚಮಿ ಹಬ್ಬವನ್ನು ಮಾಡುತ್ತಾರೆ. ಪಿಂಜಾರರು ಎಲ್ಲ ಹಬ್ಬಗಳ ಮೊದಲು ಮನೆ, ನೆಲ ಬಳಿಯುತ್ತಾರೆ. ಸುಣ್ಣದ ಕಲ್ಲುಗಳನ್ನು ಕೊಂಡುಕೊಂಡು ದೊಡ್ಡ ಮಡಕೆಯಲ್ಲಿಟ್ಟು ನೀರು ಹಾಕಿರುತ್ತಾರೆ. ಹಬ್ಬ ಇನ್ನೂ ಎರಡು ಮೂರು ದಿನಗಳಿವೆ ಎನ್ನುವಾಗ ಹಳೆ ಕಂಬಳಿಯ ತುಣುಕೊಂದನ್ನು ತೆಗೆದುಕೊಂಡು ಸುಣ್ಣವನ್ನು ಪಾತ್ರೆಯಲ್ಲಿ ಹಾಕಿಕೊಂಡು ಮನೆಯ ಒಳಹೊರಗೆ ಬಳಿಯುತ್ತಾರೆ. ಮನೆಯ ಬಾಗಿಲು ತೋಳು, ಹೊಸಲಿಗೆ ಕೆಮ್ಮಣ್ಣು ಬಳಿಯುತ್ತಾರೆ. ಆಮೇಲೆ ಸಗಣಿ ನೀರು ಹಾಕಿ ನೆಲ ಸಾರಿಸುತ್ತಾರೆ. ಇದು ಎಲ್ಲ ಹಬ್ಬಗಳು ಬಂದಾಗ ಪಿಂಜಾರರು ಮಾಡಿಕೊಂಡು ಬಂದ ರೂಢಿ. ಶ್ರಾವಣ ಮಾಸದಲ್ಲಿ ಆ ತಿಂಗಳಿನ ಯಾವುದಾದರೊಂದಿನ (ಸಾಮಾನ್ಯವಾಗಿ ಸೋಮವಾರ) ಅವರಿಗೆ ಅನುಕೂಲವಾದ ದಿವಸ ಎಳ್ಳುಂಡೆ, ಹಸಿಹಿಟ್ಟಿನ ತಮಟ, ಹಸಿಹಾಲು, ತುಪ್ಪ, ಜೋಳದಹಳ್ಳು, ಪರಂಗಿ ಎಲೆ, ಗಂಧ, ಕುಂಕುಮ, ಎರಡು ಕಾಯಿ, ಹತ್ತಿಯ ಅರಳೆಯಲ್ಲಿ ಬತ್ತಿ ಮಾಡಿ ಒಂದು ಪುಟ್ಟಿಯಲ್ಲಿ ಇವೆಲ್ಲವನ್ನು ತುಂಬಿಕೊಂಡು ಹೊಲಕ್ಕೆ ಹೋಗುತ್ತಾರೆ. ಹೊಲದ ತುಂಬ ಅನ್ನ ಮಜ್ಜಿಗೆ ಕಲಿಸಿ ಚರಗ ಹೊಡೆಯುತ್ತಾರೆ. ಮನೆಮಂದಿಯೆಲ್ಲ ಅಂದು ಹೊಲದಲ್ಲಿರುತ್ತಾರೆ. ಹುತ್ತದಲ್ಲಿ ಎಲ್ಲೆಲ್ಲಿ ತೂತುಗಳಿರುತ್ತವೆಯೋ ಅಲ್ಲಿಗೆ ಗಂಧ ಕುಂಕುಮ ಹಚ್ಚಿ ಹತ್ತಿ ಅರಳೆಯಿಟ್ಟು ಪರಂಗಿ ಎಲೆಯಲ್ಲಿ ಉಂಡೆ, ಹೋಳಿಗೆ, ತುಪ್ಪ, ಜೋಳದ ಹಳ್ಳು ಎಲ್ಲವನ್ನು ಎಡೆಯಿಟ್ಟು ಒಬ್ಬೊಬ್ಬರಾಗಿ ಮನೆಯ ಎಲ್ಲರ ಹೆಸರನ್ನು ಹೇಳಿ ಹೇಳಿ ಹುತ್ತಕ್ಕೆ ಹಾಲು ಬಿಡುತ್ತಾರೆ. ನಂತರ ಎರಡು ಕಾಯಿ ಒಡೆದು (ಜೋಡುಕಾಯಿ) ನಾಲ್ಕು ದಿಕ್ಕಿಗೂ ತಿರುತಿರುಗಿ ಕೈಮುಗಿದು ಹುತ್ತಕ್ಕೆ ಅಡ್ಡಬಿದ್ದು ನಮ್ಮ ಮನೆಯ ಯಾರಿಗೂ ತೊಂದರೆ ಕೊಡಬೇಡೆಂದು ನಾಗಪ್ಪನಿಗೆ ಬೇಡಿಕೊಳ್ಳುತ್ತಾರೆ. ಇದಾದ ನಂತರ ಊಟ ಮಾಡಿ ಬೈಗಾಗುವವರೆಗೂ ಮರದ ನೆರಳಲ್ಲಿ ಕುಳಿತಿದ್ದು ಮನೆಗೆ ಬರುತ್ತಾರೆ. ಈ ಸಂದರ್ಭದಲ್ಲಿ ಅಲ್ಲಿಗೆ ಬಂದವರಿಗೆ ಕರೆದು ಊಟ ಕೊಡುತ್ತಾರೆ. ಅವರು ಯಾರಾದರೇನು, ಕರೆದು ಊಟಕೊಟ್ಟು ಕಳಿಸುತ್ತಾರೆ. ಈ ಹಬ್ಬದಲ್ಲಿ ಎಳ್ಳುಂಡೆ, ಕಡ್ಲೆ ಉಂಡೆ ಮಾಡಿಟ್ಟು ತಿಂಗಳುಗಟ್ಟಲೆ ಅದನ್ನು ತಿನ್ನುತ್ತಾರೆ. ಮಕ್ಕಳಿಗೆ ಈ ಹಬ್ಬದಲ್ಲಿ ಕೊಬರಿ ಬಟ್ಟಲು ಮಾಡಿಕೊಟ್ಟು ಆಡಿಕೊಳ್ಳಲು ಹೇಳುತ್ತಾರೆ.

ಬಸವನ ಹಬ್ಬದಲ್ಲಿ ಪಿಂಜಾರರು ಎತ್ತುಗಳ ಕೋಡು ಎರೆಸಿ ಮೈ ತೊಳೆದು ಕೋಡುಗಳಿಗೆ ಬಣ್ಣ ಹಚ್ಚುತ್ತಾರೆ. ಕೆಲವರು ಕೋಡಿಗೆ ಅಣಸನ್ನು ಹಾಕಿಸುತ್ತಾರೆ. ಕೊರಳ ತುಂಬ ಗೆಜ್ಜೆ ಕಟ್ಟಿ ಮೈತುಂಬ ಬಣ್ಣದ

ಜೋಲು ಹೊದಿಸಿ ಎತ್ತುಗಳ ಮೆರವಣಿಗೆ ಮಾಡುತ್ತಾರೆ. ಈ ಮೆರವಣಿಗೆಗೆ ವಾದ್ಯದವರು (ಸೊನೆಯವದರು) ಇರುತ್ತಾರೆ. ಎತ್ತುಗಳಿಗೆ ಸಂಬಂಧಪಟ್ಟವರು ಜೋಡಿ ಎತ್ತುಗಳನ್ನು ಹಿಡಿದುಕೊಂಡು ಸಾಲಾಗಿ ಮೆಲ್ಲಗೆ ಹೊರಡುತ್ತಾರೆ. ಊರಿನ ಜನ ಈ ಎತ್ತುಗಳ ಮೆರವಣಿಗೆಯಲ್ಲಿ ಯಾರ ಎತ್ತುಗಳು ತಯಾರಿಯಾಗಿವೆ ಎಂದು ಕುತೂಹಲದಿಂದ ನೋಡುತ್ತಾರೆ. ಚೆನ್ನಾಗಿ ಸಾಕಿದವರು ತಮ್ಮ ಎತ್ತುಗಳನ್ನು ಈ ಮೆರವಣಿಗೆಯಲ್ಲಿ ತಂದು ಪ್ರತಿಷ್ಠಿತರಾಗುತ್ತಾರೆ. ಸಂಜೆ ಮೆರವಣಿಗೆಯಾದ ನಂತರ ತೆಂಗಿನಕಾಯಿ, ಬಾಳೆಹಣ್ಣು ಊದಿನಕಡ್ಡಿ ತಂದು ಎತ್ತುಗಳಿಗೆ ಪೂಜೆ ಮಾಡಿ ಕಾಯಿ ಒಡೆದು ಮೈಗೆ, ಕೋಡುಗಳಿಗೆ ಗಂಧ ಹಚ್ಚಿ ಎತ್ತುಗಳ ಮುಂಗಾಲುಗಳನ್ನು ಮುಟ್ಟಿ ನಮಸ್ಕರಿಸುತ್ತಾರೆ. ಬಾಳೆಹಣ್ಣುಗಳನ್ನು ಎತ್ತಿಗೇ ತಿನ್ನಿಸಿ ಮತ್ತೊಮ್ಮೆ ಅಡ್ಡಬಿದ್ದು ಮೈತುರಿಸಿ ಬರುತ್ತಾರೆ. ಈ ಹಬ್ಬದ ದಿನ ಯಾರೂ ಎತ್ತುಗಳನ್ನು ಹೂಡುವುದಿಲ್ಲ. ಈ ಹಬ್ಬವನ್ನೂ ಒಳಗೊಂಡಂತೆ ಪಿಂಜಾರರ ಉಳಿದ ಹಬ್ಬಗಳ ಆಚರಣೆಯಲ್ಲಿ ಕಂಡು ಬರುವುದು ಲಿಂಗಾಯ್ತರ ಪ್ರಭಾವ ಎನ್ನುವುದನ್ನು ಸೂಕ್ಷ್ಮವಾಗಿ ಗುರುತಿಸಬಹುದು.

ತೇರು ಹಬ್ಬದಲ್ಲಿ ಲಿಂಗಾಯ್ತರಂತೆ ಕಡುಬು ದೋಸೆ ಮಾಡಿಕೊಂಡು ಉಣ್ಣುತ್ತಾರೆ. ತೇರಿಗೆ ಕಾಯಿ ಒಡೆಸಿಕೊಂಡು ಬರುತ್ತಾರೆ. ತೇರು ಹಬ್ಬದಲ್ಲಿ ಬಯಲು ಸೀಮೆಯ ಸಾಮಾನ್ಯ ರೂಢಿಯಂತೆ ಮುಳ್ಳು ತುಳಿಯುವ ಆಚರಣೆಯಲ್ಲಿ ಪಿಂಜಾರರೂ ಭಾಗವಹಿಸುತ್ತಾರೆ.

ಪಿಂಜಾರರ ಮನೆದೇವತೆಯೇ ಆದ ಎಲ್ಲಮ್ಮನ ಹಬ್ಬವನ್ನು ಪಿಂಜಾರರು ಬಿಡದೆ ಮಾಡುತ್ತಾರೆ. ಅವತ್ತು ಎರಡು ಕುಂಬಗಳಲ್ಲಿ ಹೆಂಡ ತರುತ್ತಾರೆ. ಅವು ಹೊಸದಾಗಿ ಕೊಂಡ ಕುಂಬಗಳು. ಹೆಂಡ ತಮ್ಮೂರಲ್ಲಿ ಸಿಗದಿದ್ದರೆ ಬೇರೆ ಊರಿನಿಂದಾದರೂ ತರುತ್ತಾರೆ. ನವಧಾನ್ಯಗಳ ಮೇಲೆ ಈ ಕುಂಬಗಳನ್ನಿಟ್ಟು ಬೇವಿನಸೊಪ್ಪು ಮುಡಿಸಿ ಎಲ್ಲಮ್ಮನನ್ನು ಕರೆತಂದು ಪೂಜೆ ಮಾಡಿಸುತ್ತಾರೆ. ಈ ಪೂಜೆ ಮಾಡುವವರು ಸಾಮಾನ್ಯವಾಗಿ ತಳವಾರರು ಇಲ್ಲವೇ ಆರೇರು ಎಂದು ಕರೆಯಲಾಗುವ ಕರ್ನಾಟಕದ ಮರಾಠಿ ಜನಾಂಗದವರು. ಕೆಲವು ಕಡೆ ಈಡಿಗರೂ ಇರುತ್ತಾರೆ. ಅವರಿಂದ ಪೂಜೆ ಮಾಡಿಸಿದ ನಂತರ ಎಲ್ಲರೂ ಊಟ ಮಾಡುತ್ತಾರೆ. ಬಹುಶಃ ಈ ಹಬ್ಬದ ಹಿನ್ನೆಲೆಯೇ ಇರಬೇಕು ಇವತ್ತು ಈ ಹಬ್ಬವನ್ನು ಅನೇಕ ಕಾರಣದಿಂದ ಮಾಡಲಾಗದ ಜನರು ಹೆಂಡ ಕುಡಿಯುತ್ತಾರೆ, ಪಿಂಜಾರರಲ್ಲಿ ಹೆಂಡದ ಬಳಕೆ ಸಾಮಾನ್ಯವಾಗಿ ಈಗಲೂ ಕಂಡು ಬರುತ್ತದೆ. ಕೆಲವು ಮನೆಯ ಹೆಂಗಸರು ಮನೆಗೇ ಹೆಂಡ ತರಿಸಿಕೊಂಡು ಕುಡಿಯುತ್ತಾರೆ. ಈಗೀಗ ಕೆಲವರಿಗೆ ದೇವರ ನಂಬಿಕೆಯ ಹಿನ್ನೆಲೆ ಹೊರಟು ಹೋಗಿ ಅದೊಂದು ಚಟವಾಗಿ ಕಂಡು ಬರುತ್ತದೆ.

ಧಾರವಾಡ ಜಿಲ್ಲೆಯ ಅನೇಕ ಹಳ್ಳಿಗಳಲ್ಲಿ ಮತ್ತು ದಾವಣಗೆರೆಯ ಸುತ್ತಲಿನ ಊರುಗಳಲ್ಲಿ ಮಹೇಶ್ವರನ ಹಬ್ಬ ಮಾಡುವುದು ಪಿಂಜಾರರಲ್ಲಿ ಕಂಡುಬರುತ್ತದೆ. ಈ ಹಬ್ಬದ ಸಲುವಾಗಿ ಮಹೇಶ್ವರನ ಜಾತ್ರೆಯೂ ನಡೆಯುತ್ತದೆ. ಪಿಂಜಾರರು ನೇರವಾಗಿ ಈ ಹಬ್ಬದ ಆಚರಣೆಯನ್ನು ಮನೆಯಲ್ಲಿ ತರುವುದಿಲ್ಲವಾದರೂ ಜಾತ್ರೆಯಲ್ಲಿ ದೇವರ ಉತ್ಸವದಲ್ಲಿ ಸಡಗರದಿಂದ ಪಾಲ್ಗೊಳ್ಳುತ್ತಾರೆ. ಈಶ್ವರನಿಗೆ ಕೈಮುಗಿದು ಕಾಯಿ ಒಡೆಸುತ್ತಾರೆ. ಈ ಊರುಗಳಲ್ಲಿ ಈ ಹಬ್ಬಕ್ಕಾಗಿ ತಮ್ಮ ಸಂಬಂಧಿಕರನ್ನು ಬೀಗರು, ಬಿಜ್ಜರನ್ನು ಕರೆ ಕಳುಹಿಸುತ್ತಾರೆ. ಹಿಂದೆ ಗಮನಿಸಿದಂತೆ ಲಿಂಗಾಯ್ತರ ದೇವರುಗಳಾದ ಬಸವ, ಈಶ್ವರ, ಹನುಮಂತ ಮುಂತಾದವುಗಳನ್ನು ಕಂಡರೆ ಪಿಂಜಾರರಿಗೆ ವಿಶೇಷ ಆಸಕ್ತಿ.

ನಾಯಕನಹಟ್ಟಿ ಜಾತ್ರೆ, ದೇವರಗುಡ್ಡದ ಜಾತ್ರೆ, ಎಲ್ಲಮ್ಮನ ಜಾತ್ರೆ, ದಾದಾಪಾಡು, ಹೊನ್ನೂರಲಿ, ಬಾತಿ ಉರುಸು ಮುಂತಾದ ಕಡೆ ಪಿಂಜಾರರು ತಮ್ಮ ಅನೇಕ ದಿನಗಳ ಹರಕೆ ಪೂರೈಸಲು ಹೋಗುತ್ತಾರೆ. ಹಾಗೆಯೇ ಧರ್ಮಸ್ಥಳ, ಹಣಿಗೆರೆಕಟ್ಟೆ ಮುಂತಾದ ಕ್ಷೇತ್ರಗಳಿಗೂ ಹೋಗಿ ಬರುತ್ತಾರೆ. ಇಂಥ ಯಾವ ಕಡೆ ಹೋದರೂ ಪಿಂಜಾರರ ಆಚರಣೆ ಮತ್ತು ಅನುಭವ ಒಂದೇ ತೆರನಾದುದು : ಉರುಸುಗಳಲ್ಲಿ ಮುಲ್ಲಾನ ಹತ್ತಿರ ಸಕ್ಕರೆ 'ಓದಿಸಿ'ಕೊಂಡು ಬರುವುದು, ಜಾತ್ರೆಗಳಲ್ಲಿ ದೇವಸ್ಥಾನಗಳಿಗೆ ಹೋಗಿ ಹಣ್ಣುಕಾಯಿ ಮಾಡಿಸಿಕೊಳ್ಳುವುದು, ಬೆಂಡು ಬತ್ತಾಸು ಕೊಂಡುಕೊಂಡು ಹರಕೆ ಪೂರೈಸಿ ಬರುವುದು. ಕೆಲವರು ಕೋಳಿ, ಕುರಿ ಕೊಯ್ಸಿಕೊಂಡು ಅಡಿಗೆ ಮಾಡಿ ಉಂಡೂ ಬರುತ್ತಾರೆ. ಮನೆಯ ಯಾರಿಗಾದರೂ ಖಾಯಿಲೆಯಾದಾಗ ಗುಣವಾಗಲೆಂದು ಬಡತನ ನಿವಾರಣೆಯಾಗಲೆಂದು ಮುಂತಾಗಿ ಹರಕೆ ಕಟ್ಟಿಕೊಳ್ಳುವ ಪಿಂಜಾರರು ಇಂಥದ್ದೇ ದೇವರಿಗೆ ನಡೆದುಕೊಳ್ಳಬೇಕೆಂದೇನೂ ಇರುವುದಿಲ್ಲವಾದರೂ ಹೊನ್ನೂರಲಿಗೆ ಹೋಗುವವರು ದಾದಾಪಾಡಿಗೆ ಹೋಗುವುದಿಲ್ಲ. ದೇವರು ಗುಡ್ಡದ ಜಾತ್ರೆಗೆ ಪ್ರತೀಸಲ ಹೋಗುವವರಿದ್ದಾರೆ. ಧರ್ಮಸ್ಥಳದ ಮಂಜುನಾಥನಿಗೆ ಅಂಚೆ ಮೂಲಕ ಹಣ ಕಳಿಸುವವರೂ, ಅಲ್ಲಿಗೆ ಹೋಗಿ ತಲೆಬೋಳಿಸಿಕೊಂಡು ಬರುವವರೂ ಇದ್ದಾರೆ.

ಪಿಂಜಾರರ ವಿಶಿಷ್ಟ ಹಬ್ಬಗಳು ಹಿರಿಯರ ಹಬ್ಬ ಮತ್ತು ಮೊಹರಂ ಹಬ್ಬ.

ಮುಸ್ಲಿಮರು ಷಬ್-ಎ-ಬರಾತ್ ಎಂದು ಆಚರಿಸುವ ದಿನದಂದೇ ಪಿಂಜಾರರು ಹಿರಿಯರ ಹಬ್ಬವನ್ನು ಆಚರಿಸುತ್ತಾರೆ. ಪಿಂಜಾರರು ಮುಸ್ಲಿಮರಿಂದ ಎಷ್ಟರಮಟ್ಟಿಗೆ ಭಿನ್ನರಾಗಿ ಕಾಣುತ್ತಾರೆನ್ನುವುದನ್ನು ಈ ಎರಡೂ ಹಬ್ಬದ ಆಚರಣೆಗಳಲ್ಲಿ ಕಾಣಬಹುದಾಗಿದೆ. ಹಿರಿಯರ ನೆನಪು, ಅವರ ಬಗ್ಗೆ ಆರಾಧನಾ ಭಾವನೆ, ಅವರು ಸ್ವರ್ಗದಲ್ಲಿ ಬದುಕಿದ್ದಾರೆ ಎನ್ನುವ ಕಲ್ಪನೆ. ಅವರು ನಮಗೆ ಸದಾ ಒಳ್ಳೆಯದನ್ನು ಹಾರೈಸಲಿ ಎಂಬ ಬಯಕೆ ಮುಂತಾದ್ದನ್ನೆಲ್ಲ ಒಳಗೊಂಡಿರುವ ಹಿರಿಯರ ಹಬ್ಬದ ಆಚರಣೆ ಪಿಂಜಾರರ ಮೂಲ ಸಂಸ್ಕೃತಿಯಿಂದ ಬಂದದ್ದು ಎನ್ನುವುದರಲ್ಲಿ ಅನುಮಾನವಿಲ್ಲ.

ಸತ್ತ ಹಿರಿಯರನ್ನು ನೆನೆಸಿಕೊಳ್ಳುವ ಮೂಲಕ ತಮ್ಮ ನಿತ್ಯದ ಬದುಕಿನಲ್ಲಿ ಅವರ ನಡವಳಿಕೆ ಮತ್ತು ಪ್ರಭಾವವನ್ನು ಗುರುತಿಸಿಕೊಳ್ಳುವುದು ಈ ಹಬ್ಬದ ಮೂಲ ಉದ್ದೇಶದಂತೆ ಕಾಣುತ್ತದೆ. ಸತ್ತ ಗಂಡಸರಿಗಾದರೆ ಲುಂಗಿ ಪಂಚೆ, ಅಂಗಿಬಟ್ಟೆ, ಟವೆಲ್ಲು ತರುತ್ತಾರೆ. ಹೆಂಗಸರಿಗೆ ಅವರು ಬದುಕಿದ್ದಾಗ ಉಡುತ್ತಿದ್ದ ರೀತಿಯ ಬಟ್ಟೆಗಳನ್ನೇ ತರುತ್ತಾರೆ. ಈ ಬಟ್ಟೆಗಳನ್ನು ಮನೆಯ ಮೂಲೆಯೊಂದರಲ್ಲಿ ಕೆಮ್ಮಣ್ಣು ಬಳಿದ ಜಾಗದಲ್ಲಿ ಅಗಲವಾದ ತಾಮ್ರ ಅಥವಾ ಹಿತ್ತಾಳೆಯ, ಚಿತ್ರ ಬಿಡಿಸಿದ ಗಂಗಾಳದಲ್ಲಿ ದಸ್ತರಖಾನಿ ಹಾಸಿ ಇಡುತ್ತಾರೆ. ಅವತ್ತು ತಮ್ಮ ಹಿರಿಯರು ಇಷ್ಟಪಡುತ್ತಿದ್ದ ವಿವಿಧ ನಮೂನೆಯ ಆಹಾರ ಪದಾರ್ಥಗಳನ್ನು ತಯಾರಿಸಿ, ತಂದು ಎಡೆಯಲ್ಲಿಡುತ್ತಾರೆ. ಜೊತೆಗೆ ಗಂಡಸರಿಗೆ ಬೀಡಿ, ಬೆಂಕಿಪೊಟ್ಟಣ, ಎಲೆಅಡಿಕೆ, ಹೊಗೆಸೊಪ್ಪು ಹೆಂಗಸರಿಗೆ ಕೂಡ ಎಲೆ ಅಡಿಕೆ ಹೊಗೆಸೊಪ್ಪು ಇಡುತ್ತಾರೆ. ಹುಗ್ಗಿ, ತುಪ್ಪ, ರೊಟ್ಟಿ, ಹೋಳಿಗೆ, ಅನೇಕ ಬಗೆಯ ಹಣ್ಣು ಹಂಪಲುಗಳು, ಕೊಬರಿ, ಉತ್ತುತ್ತಿ, ಮಾಂಸದ ಸಾರಿನಲ್ಲಿದ್ದ ಚೂರುಗಳು, ಮೊಟ್ಟೆ ಮುಂತಾದುವನ್ನೆಲ್ಲ ಎಡೆಯ ರೂಪದಲ್ಲಿಡುತ್ತಾರೆ. ನಂತರ ಮುಲ್ಲಾನನ್ನು

ಕರೆತರಲಾಗುತ್ತದೆ. ಮುಲ್ಲಾ ಮನೆಮನೆಗೂ ಬಂದು ಈ ಎಡೆಯನ್ನು 'ಫಾತೆಹ' ಮಾಡುವುದರ ಮೂಲಕ ದೇವರ ಸನ್ನಿಧಿಯಲ್ಲಿರುವ ತಮ್ಮ ಹಿರಿಯರಿಗೆ ತಲುಪಿಸುತ್ತಾನೆಂಬ ನಂಬಿಕೆಯಿದೆ. ಮುಲ್ಲಾನಿಂದ 'ಓದಿಕೆ'ಯಾದ (ಮುಸ್ಲಿಮರು 'ಫಾತೆಹ' ಅಂದರೆ ಪಿಂಜಾರರು 'ಓದಿಕೆ' ಅನ್ನುತ್ತಾರೆ. 'ಫಾತೆಹ' ಪದಕ್ಕೆ ಸಂವಾದಿಯಾಗಿ ಓದಿಕೆ ಎಂಬ ಕನ್ನಡ ಪದವನ್ನು ಬಳಸುತ್ತಾರೆ) ನಂತರ ಎಲ್ಲರೂ ಎಡೆಯ ಹತ್ತಿರವಿರುವ ಮಣ್ಣಿನ ಕುಡಿಕೆಯ ಬೆಂಕಿ ಕೆಂಡದಲ್ಲಿ ಲೋಬಾನ ಹಾಕಿ ಅಡ್ಡಬಿದ್ದು ಹಿರಿಯರನ್ನೆಲ್ಲ ನೆನೆದು ಬಂದು ಉಣ್ಣಲು ಕೂರುತ್ತಾರೆ. ಮುಲ್ಲಾನ 'ಓದಿಕೆ' ಮುಗಿಯುವವರೆಗೂ ಅಡಿಗೆಯನ್ನು ಯಾರೂ ಎಂಜಲು ಮಾಡಲು ಬಿಡುವುದಿಲ್ಲ. ಎಡೆಯಲ್ಲಿಟ್ಟ ಆಹಾರ ಪದಾರ್ಥಗಳೆಲ್ಲವೂ ಹಾಗೇ ಇರುತ್ತವೆ. ರಾತ್ರಿ ಹಿರಿಯರು ಬಂದು ಉಣ್ಣುತ್ತಾರೆ ಎಂಬ ನಂಬಿಕೆಯಿದೆ. ಬೆಳಿಗ್ಗೆ ಗೋರಿಗಳ ಹತ್ತಿರ ಹೋಗಿ ಹೂವು, ಗಂಧ ಹಾಕಿ ಊದಿನ ಕಡ್ಡಿ ಹಚ್ಚಿಟ್ಟು ಕೈಮುಗಿದು ಬರುತ್ತಾರೆ. ನಂತರ ಮನೆಯವರೆಲ್ಲರೂ ಆ ಎಡೆಯಲ್ಲಿರುವ ಆಹಾರವನ್ನು ಹಂಚಿಕೊಂಡು ತಿನ್ನುತ್ತಾರೆ. ಅಲ್ಲಿಟ್ಟಿದ್ದ ಲುಂಗಿ, ಪಂಚೆ, ಟವೆಲ್ಲು, ಸೀರೆ, ಕುಬಸ ಮುಂತಾದ ಬಟ್ಟೆಗಳನ್ನು ಮನೆಯ ಹಿರಿಯರು ಬಳಸುತ್ತಾರೆ.

ಇದು ಒಂದು ಗಾಢನಂಬಿಕೆಯಾಗಿ ಆಚರಣೆಯ ರೂಪದಲ್ಲಿ ಉಳಿದುಕೊಂಡಿದೆ. ಪಿಂಜಾರರು ಎಷ್ಟೇ ಕಷ್ಟವಿರಲಿ, ಹಿರಿಯರ ಹಬ್ಬವನ್ನು ಅತ್ಯಂತ ಶ್ರದ್ಧೆಯಿಂದ ಆಚರಿಸುತ್ತಾರೆ. ಪಿಂಜಾರರ ಮೂಲಾಶ್ರಮದ ಪರಂಪರೆಯನ್ನು ಸ್ಪಷ್ಟವಾಗಿ ನಾವು ಈ ಬಗೆಯ ಆಚರಣೆಯಿಂದ ಗುರುತಿಸಬಹುದಾಗಿದೆ. ಈ ಪರಂಪರೆಯ ಹಿನ್ನೆಲೆಯಲ್ಲಿರುವ ಆತ್ಮ, ದೇವರು, ಸ್ವರ್ಗ - ನರಕ, ಪಾಪ-ಪುಣ್ಯ ಮತ್ತು ಪುನರ್ಜನ್ಮದ ಕಲ್ಪನೆಗಳು ಕೂಡ ಪಿಂಜಾರರ ಬದುಕನ್ನು ಪ್ರಭಾವಿಸಿರುವುದು ತಿಳಿಯುತ್ತದೆ. ಇಂಥ ರೂಢಿ ಸಂಪ್ರದಾಯಗಳು ಜನಾಂಗವೊಂದರ ಭಾವಕೋಶದಲ್ಲಿ ಶತಮಾನಗಳ ಕಾಲ ಸ್ಥಾಯಿಯಾಗಿ ಉಳಿದುಕೊಂಡು ಬಂದಿರುವುದೇ ನಮ್ಮ ಸಾಮಾಜಿಕ ಪರಂಪರೆಯನ್ನು ನಿರಂತರವಾಗಿ ಧರ್ಮ ಮತ್ತು ಸಂಸ್ಕೃತಿಯ ನಿರ್ದೇಶನದಲ್ಲಿ, ನಿಯಂತ್ರಣದಲ್ಲಿ ರೂಪಿಸಿಕೊಂಡು ಬರುವದರ ಸಂಕೇತವಾಗಿದೆ. ವಿಚಿತ್ರವೆಂದರೆ ಸಂಸ್ಕೃತಿಗೂ ಧರ್ಮಕ್ಕೂ ಇರುವ ನಿರಪೇಕ್ಷ ಸಂಬಂಧವನ್ನು ಅವಿನಾಭಾವ ಸಂಬಂಧ ಎನ್ನುವ ರೀತಿಯಲ್ಲಿ ನಮ್ಮ ತತ್ವಶಾಸ್ತ್ರಜ್ಞರು ಕಾವ್ಯ ಮೀಮಾಂಸಕರು ವ್ಯಾಖ್ಯಾನಿಸುತ್ತಾ ಬಂದಿರುವುದು. ಹಾಗಾಗಿ ಪಿಂಜಾರರು ಹಿರಿಯರ ಹಬ್ಬವನ್ನು ಕೂಡ ಒಂದು ಧಾರ್ಮಿಕ ಆವರಣದೊಳಗೇ ಆಚರಿಸುತ್ತ ಬಂದಿದ್ದು ಹಿರಿಯರ ಬಗ್ಗೆ ತೋರುವ ಗೌರವ, ಪ್ರೀತಿ, ಶ್ರದ್ಧೆಗಳು ಕೂಡ 'ಸಂಪ್ರದಾಯ'ದ ಅರ್ಥ ಪಡೆದುಕೊಂಡಿದೆ. ಎಲ್ಲ ಹಬ್ಬಗಳು ಮತ್ತು ಆಚರಣೆಗಳು ಕೂಡ ಸಂಪ್ರದಾಯದ ಚೌಕಟ್ಟಿನೊಳಗೇ ಅರ್ಥಪಡೆದುಕೊಳ್ಳುವುದು ಒಂದು ಜನಾಂಗದ ಸಂಸ್ಕೃತಿಯ ಅಧ್ಯಯನದ ಸಂದರ್ಭದಲ್ಲಿ ಅನಿವಾರ್ಯವಾದ ಕ್ರಿಯೆಯಾಗಿದೆ.

### ೪.೨.೪ ವಿಶೇಷವಾಗಿ ಮೊಹರಂ ಆಚರಣೆ

ಪಿಂಜಾರರಿಗೂ ಮುಸ್ಲಿಮರಿಗೂ ಇರುವ ವ್ಯತ್ಯಾಸ ಹಾಗೂ ಪಿಂಜಾರರಿಗೂ ಹಿಂದೂ ಸಮುದಾಯಗಳಿಗೂ ಇರುವ ಭಾವನಾತ್ಮಕ ಸಂಬಂಧದ ಸ್ವರೂಪ ಮುಖ್ಯವಾಗಿ ಮೊಹರಂ ಹಬ್ಬದ ಆಚರಣೆಯ ಸಂದರ್ಭದಲ್ಲಿ ತಿಳಿಯುತ್ತದೆ. ಪಿಂಜಾರರು ಈ ಹಬ್ಬವನ್ನು ಅಲೇಹಬ್ಬ, ಪೀರಲು ಹಬ್ಬ

ಮೊದಲಾದ ಹೆಸರುಗಳಲ್ಲಿ ಕರೆಯುತ್ತಾರೆ. ಇದು ಇಸ್ಲಾಂನ ಹಸೇನ್-ಹುಸೇನ್ ಎಂಬ ಶರಣರ ಬಲಿದಾನವನ್ನು ನೆನಪಿಸಿಕೊಳ್ಳುವ ಶೋಕಪೂರಿತವಾದ ಹಬ್ಬ. ಪಿಂಜಾರರಿಗೆ ಈ ಶರಣರ ಹಿನ್ನೆಲೆಯ ಕತೆ ಸ್ಪಷ್ಟವಾಗಿ ಗೊತ್ತಿಲ್ಲ. ಇದು ವಾಸ್ತವವಾಗಿ ರಾಜಕೀಯ ದ್ವೇಷದಿಂದ ನಡೆದ ಕಗ್ಗೊಲೆ. ಇದರ ಹಿನ್ನೆಲೆ ಹೀಗಿದೆ : ಹ। ಮುಹ್ಮದ ಪೈಗಂಬರರು ಮಾನವ ಕಲ್ಯಾಣಕ್ಕಾಗಿ ಬಹು ಕಷ್ಟ-ನಷ್ಟ ಅನುಭವಿಸಿ ಇಸ್ಲಾಂ ಪ್ರಜಾಪ್ರಭುತ್ವದ ಸ್ಥಾಪನೆ ಮಾಡಿದರು. ಅವರ ಮರಣದ ಕೆಲ ವರ್ಷಗಳಲ್ಲಿ ಖಲೀಫರಾಗಿ ಹ। ಅಬೂಬಕ್ರ ಸಿದ್ದೀಕ್ (ಕ್ರಿ.ಶ. 632-634) ಹ। ಉಮರ ಫಾರೋಖ್ (ಕ್ರಿ.ಶ. 634-644) ಹ। ಉಸ್ಮಾನ ಗನಿ (ಕ್ರಿ.ಶ. 644-656) ಪ್ರಜಾಪ್ರಭುತ್ವ ನಡೆಸಿದರು. ನಾಲ್ಕನೆಯ ಖಲೀಫರಾಗಿ ಬನೀ ಹಾಷೀಮ್ ಪಂಗಡದವರು ಹ। ಅಲಿ ಅವರನ್ನು ಚುನಾಯಿಸಲು ಸಿರಿಯಾದ ಪ್ರಾಂತಾಧಿಕಾರಿಯಾದ ಹ। ಮುಆವಿಯಾ ವಿರೋಧಿಸಿದನು. ಎರಡು ಪಂಗಡಗಳ ನಡುವೆ ಘರ್ಷಣೆ ನಡೆದು ಒಪ್ಪಂದವಾಯಿತು. ಆದರೆ ಕ್ರಿ.ಶ. 661ರಲ್ಲಿ ಹ। ಮುಆವಿಯಾನ ಕುತಂತ್ರಕ್ಕೆ ಹ। ಅಲಿ ಅವರ ಬಲಿಯಾಗಲು ಅವರ ಜ್ಯೇಷ್ಠ ಪುತ್ರ ಹ। ಇಮಾಮ್ ಹಸನ್ ಜನಾಭಿಪ್ರಾಯ ಮನ್ನಿಸಿ ಖಲೀಫರಾದರು. ಮುಆವಿಯಾ ಸಾಯುವ ಮುನ್ನ ತನ್ನ ಮಗನಾದ ಯಜೀದನನ್ನು ಖಲೀಫನೆಂದು ಘೋಷಿಸಿ ಕೊನೆಯುಸಿರೆಳೆದನು. ತಂದೆಯ ಮರಣಾನಂತರ ಯಜೀದ್, ಇಮಾಮ ಹಸನರನ್ನು ಮೋಸದಿಂದ ವಿಷಪ್ರಾಶನ ಮಾಡಿಸಿ ಕೊಲ್ಲಿಸಿದನು ಮತ್ತು ನಿಜವಾದ ಖಲೀಫನಾದ ತನಗೆ ಮುಸ್ಲಿಂ ಮುಖಂಡರು 'ಬಯ್ಯತ್' ಕೈಗೊಳ್ಳಬೇಕೆಂದು ಆಜ್ಞೆ ಹೊರಡಿಸಿದನು. ಖಲೀಫನಾಗಲು ಅನರ್ಹನಾದ ಯಜೀದನನ್ನು ಧಿಕ್ಕರಿಸಿ ಅರೇಬಿಯಾ, ಇರಾಣ್, ಇರಾಕ್, ಕೂಫಾ ಜನರು ಹ।ಇ।ಹುಸೇನರಿಗೆ ಬೆಂಬಲ ನೀಡಿದರು. ಕೂಫೇದ ಜನ ಯಜೀದನ ದೌರ್ಜನ್ಯದಿಂದ ತಮ್ಮನ್ನು ಕಾಪಾಡಬೇಕೆಂದು ವಿನಂತಿಸಿ ಪತ್ರ ಬರೆದರು. ಧರ್ಮ ರಕ್ಷಣೆಗಾಗಿ, ಮಾನವ ಕಲ್ಯಾಣಕ್ಕಾಗಿ ಹ।ಇಮಾಮ ಹುಸೇನರು ಯಜೀದನ ಕ್ರೌರ್ಯವನ್ನು, ದುರಾಡಳಿತವನ್ನು ಪ್ರತಿಭಟಿಸಿದರು. ಹೆಂಡತಿ ಮಕ್ಕಳು, ಹತ್ತಿರದ ಬಂಧು-ಬಳಗ ಮೊದಲಾಗಿ 72 ಜನರೊಂದಿಗೆ ಕೂಫೆಗೆ ಪ್ರಯಾಣ ಬೆಳೆಸಿದರು.

ಹಿಜರಿ ಸನ್ 61ರ ಮೊಹರಂ ತಿಂಗಳು (ಕ್ರಿ.ಶ. 680) ಒಂದನೆಯ ದಿನಾಂಕದಂದು ಇರಾಕ್ ಪ್ರಾಂತ್ಯವನ್ನು ಪ್ರವೇಶಿಸಿದರು. ಐದನೆಯ ದಿನ ಕರ್ಬಲಾ ಭೂಮಿಗೆ ಬಂದಿಳಿದರು. ವೈರಿ ಸೈನಿಕರು ಜಲಾಶಯಗಳಿಗೆ ವಿಷಬೆರೆಸಿ ಅನ್ನನೀರಿಗೆ ತೊಂದರೆಯಾಗುವಂತೆ ವ್ಯವಸ್ಥೆ ಮಾಡಿದರು. ಹತ್ತು ದಿನಗಳವರೆಗೆ ಅನ್ನ ನೀರಿಲ್ಲದೆ ಹುಸೇನರ ಪರಿವಾರ ತತ್ತರಿಸಿತು. ಮೊಹರಂ ತಿಂಗಳ ಒಂಬತ್ತನೆಯ ದಿನ ಯಜೀದನ ಅಸಂಖ್ಯಾತ ಸೈನಿಕರಿಗೂ ಹುಸೇನರ ಅನುಯಾಯಿಗಳಿಗೂ ಘನಘೋರ ಯುದ್ಧ ನಡೆಯಿತು. ಕಾಸೀಮಧೂಲಾ, ಅಬ್ದುಲ್ಲಾ, ಅಬ್ಬಾಸ ಅಲಿ, ಹುಸೇನ ಅವರ ವೀರಾವೇಶದ ಹೋರಾಟಕ್ಕೆ ವೈರಿ ಸೈನಿಕರು ತತ್ತರಿಸಿದರು. ಯುದ್ಧ ನೀತಿಯನ್ನು ಗಾಳಿಗೆ ತೂರಿದರು. ಮೋಸದಿಂದ ಹುಸೇನರ ಅನುಯಾಯಿಗಳ ರುಂಡ ಚಂಡಾಡುತ್ತಾ ನಡೆದರು. ಕೊನೆಗುಳಿದ ಹ। ಇಮಾಮ ಹುಸೇನರನ್ನು ಎದುರಿಸಿ ಯುದ್ಧಮಾಡಲು ಯಾರೊಬ್ಬರಿಗೂ ಧೈರ್ಯವಾಗಲಿಲ್ಲ. ಆಗ ವೈರಿ ಪಡೆಯ ನಾಯಕನಾದ 'ಶುಮರ' ಘಾತುಕ ರೀತಿಯಲ್ಲಿ ಆಕ್ರಮಣ ಮಾಡಲು ಆಜ್ಞೆ ಮಾಡಿದನು. 'ಜರಿವೀನ್ ಶರೀಕ್' ಎಂಬ ಕ್ರೂರಿಯೊಬ್ಬ ಹುಸೇನರ ಎಡಗೈಯನ್ನು ಖಡ್ಗದಿಂದ ಕತ್ತರಿಸಿ ಹಾಕಿದನು. 'ಸಿನಾನ್ ಬಿನ್ ಅನಾಸ್ ಬಿನ್ ಅಮ್ರ ಅಲ್ ನಾಖಿಯಾ'

ಎಂಬುವನು ಹುಸೇನರನ್ನು ನೆಲಕ್ಕೆ ಕೆಡವಿದನು. ಆಗ 'ಖವಾಲಿ ಬಿನ್ ಯಜೀದ್ ಅಲ್ ಅಸ್ಬಾಹಿ' ಅವರ ತಲೆಯನ್ನು ಕತ್ತರಿಸಿ ಹಾಕಿದನು. ಮೋಸಕ್ಕೆ ಜಯವಾಯಿತು. ಧರ್ಮಕ್ಕೆ ಸೋಲಾಯಿತು. ಹ। ಇಮಾಮ ಹುಸೇನರು ವೀರಮರಣ ಹೊಂದಿದರು.

ಈ ಘೋರ ದುರಂತ ಕೇಳಿದ ಮಕ್ಕಾ ಮದೀನಾ ಜನ, ಯಜೀದನ ಗುಂಪಿನ ಮೇಲೆ ದಂಗೆಯೆದ್ದು ಸೇಡು ತೀರಿಸಿಕೊಂಡರು. ಯಜೀದನ ಮರಣದ ಅನಂತರ ಬನೀ ಉಮೈಯರು, ಬನೀ ಹಾಷೀಮರು ಖಲೀಫರಾಗಿ ಆಳಿದರು. ಇದು ಕರ್ಬಲಾ ದುರಂತದ ಭೀಕರ ಕಥೆ.

ಹ। ಅಲಿ ಅವರ ಅನುಯಾಯಿಗಳಾದ ಷಿಯಾ ಮುಸ್ಲಿಮರು, ಹ। ಇಮಾಮ ಹುಸೇನರ ವೀರ ಮರಣದ ಕೆಲ ವರ್ಷಗಳ ಅನಂತರ ಅವರ ಗೌರವಾರ್ಥ ಸಭೆ ಸೇರಿ ಶೋಕ ವ್ಯಕ್ತಪಡಿಸಿದರು. ಕ್ರಿ.ಶ. 962ರಲ್ಲಿ 'ಬುವಯಹಿ' ಸಂತತಿಯ ಷಿಯಾ ಮುಸ್ಲಿಮರು ಹ। ಅಲಿ ಅವರ ಸಂತತಿಗೆ ಭಕ್ತಿ ಗೌರವ, ಆದರಗಳಿಂದ ನಡೆದುಕೊಂಡು ಕರ್ಬಲಾ ಕಾಳಗದ ನೆನಪಿಗಾಗಿ ಕೂಟ ಕೂಡುವುದಕ್ಕೆ ಪ್ರೋತ್ಸಾಹ ಕೊಟ್ಟರು. ಹುಸೇನರ ಆತ್ಮಕ್ಕೆ ಶಾಂತಿ ಸಿಗಲೆಂದು ಮೊಹರಂ ತಿಂಗಳಿನಲ್ಲಿ ಮುಸ್ಲಿಮರು ಉಪವಾಸ ವ್ರತ, ಕುರಾನ್ ಪಠಣ, ದಾನ-ಧರ್ಮ ಇತ್ಯಾದಿಗಳನ್ನು ಮಾಡುತ್ತಿದ್ದರು. ದುಃಖ ಮೂಲವಾದ ಇಂತಹ ಮೊಹರಂ ಆಚರಣೆ ಸುಪ್ರಸಿದ್ಧ ಬಾದಶಹಾ ಅಮೀರ ತೈಮೂರ ಲಂಗ (ಕ್ರಿ.ಶ. 1336-1405)ನ ಕಾಲದಲ್ಲಿ ಭಾರತವನ್ನು ಪ್ರವೇಶಿಸಿತು. 'ತಾಜಿಯಾ' ತಯಾರಿಸುವ ಪದ್ಧತಿಯನ್ನು ಭಾರತದಲ್ಲಿ ಆರಂಭಿಸಿದವನು ಇವನೇ. ಮೊಗಲರ ಆಳ್ವಿಕೆಯಲ್ಲಿ ಇದೇ ಪದ್ಧತಿ ಮುಂದುವರಿದು ಕಾಲಕಳೆದಂತೆ ಮೊಹರಂ ಆಚರಣೆಯಲ್ಲಿ ಭಾಗವಹಿಸುವ ಹಿಂದುಗಳು ಕೂಡ ತಾಜಿಯಾ ತಯಾರಿಸಿ ಮೆರವಣಿಗೆ ಮಾಡಲಾರಂಭಿಸಿದರು. ಶೇರಖಿ ರಾಜ ಸಂತತಿಯ ಸುಲ್ತಾನರು (ಕ್ರಿ.ಶ. 1398-1486) ಮೊಹರಂ ಆಚರಣೆಯಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು ಮತ್ತು ಸಕಲ ಮತ ಪಂಥಗಳಿಗೆ, ಮೊಹರಂ ಆಚರಣೆಗೆ ಧನ ಸಹಾಯ ನೀಡುತ್ತಿದ್ದರು.

ಔಧ ಪ್ರಾಂತವನ್ನಾಳಿದ ಮೊಗಲ್ ಸಾಮ್ರಾಜ್ಯದ ನವಾಬ ಶುಜಾ ಉದ್ದೌಲನ ಹೆಂಡತಿ ಮೊಹರಂ ಆಚರಣೆಗೆ ಸಾಕಷ್ಟು ಹಣ ಖರ್ಚು ಮಾಡುತ್ತಿದ್ದಳು ಮತ್ತು ಸ್ವತಃ ಭಾಗವಹಿಸುತ್ತಿದ್ದಳು. ಕ್ರಿ.ಶ. 1814ರಲ್ಲಿ ಔಧ ಸಿಂಹಾಸನವೇರಿದ ಗಾಜಿ ಉದ್ದೀನ ಹೈದರ ಲಖನೌದಲ್ಲಿ 'ಶಹ್ ಜಹಾನ್' ಎಂಬ ಇಮಾಮಬಾಡಾ ಕಟ್ಟಿಸಿದನು ಮತ್ತು ಹಿಂದೂ ಮುಸ್ಲಿಮರಿಗೆ ಹಣ ನೀಡಿ ಮೊಹರಂ ಆಚರಿಸಲು ಪ್ರೋತ್ಸಾಹ ನೀಡುತ್ತಿದ್ದನು.

ದಕ್ಷಿಣ ಭಾರತದಲ್ಲಿ ಕಲ್ಬುರ್ಗಿ ಮತ್ತು ಬೀದರಿನಿಂದ ಆಳಿದ ಬಹಮನಿ ಸುಲ್ತಾನರು (ಕ್ರಿ.ಶ. 1347-1538) ಬಿಜಾಪುರದ ಆದಿಲ್‌ಷಾಹಿಗಳು (ಕ್ರಿ.ಶ. 1489-1686) ಸಂಭ್ರಮ ಹಾಗೂ ಸಡಗರದಿಂದ ಮೊಹರಂ ಆಚರಿಸುತ್ತಿದ್ದರು. ಗೋಲ್ಕೊಂಡಾದ ಕುತುಬ್‌ಷಾಹಿಗಳು (ಕ್ರಿ.ಶ. 1550-1672) ಹೈದರಾಬಾದ ನಗರದಲ್ಲಿ ಅಲಂ ಇಡುವ ಪದ್ಧತಿ ಆರಂಭಿಸಿ ಮುಂದುವರಿಸಿಕೊಂಡು ಬಂದರು. ಅಲಮ್‌ಗಳ ಮುಂದೆ ಮಜಲಿಸ್ ಏರ್ಪಡಿಸಿ ಉದಾರ ಮನಸ್ಸಿನಿಂದ ತಮ್ಮ ಬೊಕ್ಕಸದಿಂದ ಧನ ಸಹಾಯ ಮಾಡುತ್ತಿದ್ದರು. 'ಅಬ್ದುಲ್ ಕುತುಬ್ ಷಾ' ಮೊಹರಂ ತಿಂಗಳ ಮೊದಲನೆಯ ದಿನದಿಂದ ಸಫರ ತಿಂಗಳ 20ನೆಯ

ದಿನಗಳವರೆಗೆ ಹೆಂಡ ಕುಡಿಯುವುದನ್ನು, ಕ್ಷೌರ ಮಾಡಿಸಿಕೊಳ್ಳುವುದನ್ನು, ತಾಂಬೂಲ ಸೇವಿಸುವುದನ್ನು ಅಪರಾಧವೆಂದು ಸಾರಿದ್ದನು. ಅಲಂ ಇಡುವುದಕ್ಕಾಗಿ ಕಟ್ಟಿಸಿದ ಆಶೂರ ಖಾನೆಗಳು ಇಂದಿಗೂ ಸುಸ್ಥಿತಿಯಲ್ಲಿದ್ದು ಹೈದರಾಬಾದ ನಗರದ ಸಾಂಸ್ಕೃತಿಕ ಮಹತ್ವವನ್ನು ಸಾರಿ ಹೇಳುತ್ತವೆ.

ಸಾಮ್ರಾಟ ಅಕ್ಬರ (ಕ್ರಿ.ಶ. 1542-1605) ದೀನ್-ಎ-ಇಲಾಹಿ ಸ್ಥಾಪಿಸಿದ ಅನಂತರ ಮೊಹರಂ ಹಬ್ಬ ರಾಷ್ಟ್ರೀಯ ಹಬ್ಬವಾಗಿ ಮಾರ್ಪಾಡಾಯಿತು. 18ನೆಯ ಶತಮಾನದಲ್ಲಿ ಮೈಸೂರು ಸಂಸ್ಥಾನವನ್ನಾಳಿದ ಮೈಸೂರು ಹುಲಿ ಟಿಪ್ಪು ಸುಲ್ತಾನನು ಮೊಹರಂ ಒಂದು ಹಬ್ಬವಲ್ಲ, ಅದು ಹ। ಮುಹ್ಮದ ಪೈಗಂಬರರ ಮೊಮ್ಮಕ್ಕಳು ಹೋರಾಡಿ ಹುತಾತ್ಮರಾದ ಪುಣ್ಯದ ದಿನ, ಅದನ್ನು ಸೂತಕದಂತೆ ಆಚರಿಸಬೇಕು, ಎಂದು ಹೇಳುತ್ತಿದ್ದನು. ಆದರೆ ಕುತಂತ್ರಿ ಬ್ರಿಟೀಷರು ತಮಗೆ ಸಿಂಹಸ್ವಪ್ನವಾಗಿದ್ದ ಟಿಪ್ಪೂವನ್ನು ಮುಸ್ಲಿಮರಿಂದ ಬೇರ್ಪಡಿಸಲು ಮೊಹರಂ ಪ್ರಸಂಗವನ್ನು ಉಪಯೋಗಿಸಿಕೊಂಡರು. ಕಂಪನಿ ಅಧಿಕಾರಿಗಳಿಗೆ ಮುಸ್ಲಿಮರ ಗೆಳೆತನ ಮಾಡಿಸಿ ಮುಸ್ಲಿಂ ಮುಜಾವರರಿಗೆ ಸಾಕಷ್ಟು ಹಣ ನೀಡಿ 'ಮೊಹರಂ' ಅನ್ನು ಅದ್ದೂರಿಯಿಂದ ಆಚರಿಸಲು ವ್ಯವಸ್ಥೆ ಮಾಡಿದರು. ಅಂದು ಬ್ರಿಟೀಷ್ ಅಧಿಕಾರಿಗಳು ಹಣದಾಸೆ, ಅಧಿಕಾರದಾಸೆ ತೋರಿಸಿ ಪ್ರಾರಂಭ ಮಾಡಿದ ಮೊಹರಂ ವಿಕಾರ ರೂಪ ಹೊಂದಿ ಬಳಕೆಯಲ್ಲಿ ಬಂದಿತು. ಇಂದಿಗೂ ಕೆಲ ಹಳ್ಳಿಗಳಲ್ಲಿ ಸರಕಾರಿ ಕಾಮಣ್ಣನಿಡುವಂತೆ, ಸರಕಾರಿ ಡೋಲಿ, ಸರಕಾರಿ ಅಲಂ ಇಡುವುದನ್ನು ನಾವು ಕಾಣುತ್ತೇವೆ.

ಹೀಗೆ ಹಿಂದೂಗಳ ಪ್ರಭಾವದಿಂದ ಬ್ರಿಟೀಷರ ಪೈಪೋಟಿತನದಿಂದ ಶೋಕಮೂಲ ಮೊಹರಂ ಆಚರಣೆ ಮರೆಯಾಗಿ ಸಂತೋಷ ಮತ್ತು ಸಂಭ್ರಮದ ಹಬ್ಬವಾಗಿ ವಿಶೇಷವಾಗಿ ಕರ್ನಾಟಕದಲ್ಲಿ ಮಾರ್ಪಾಡಾಯಿತು. ತತ್ಫಲವಾಗಿ ಹಿಂದೂ - ಮುಸ್ಲಿಮರಲ್ಲಿ ಹೊಂದಾಣಿಕೆ ಗಟ್ಟಿಗೊಂಡು ಭಾವೈಕ್ಯ ಸಾಧನೆಗೆ ಹಾದಿಯಾಯಿತು.

ಭಾರತೀಯರು ವಿವಿಧ ಹಬ್ಬಗಳನ್ನು ತಮ್ಮದೇ ಆದ ವಿಶಿಷ್ಟ ರೀತಿಯಲ್ಲಿ ಆಚರಿಸುವಂತೆ ಮೊಹರಂ ಹಬ್ಬವನ್ನು ಆಚರಿಸುತ್ತಾರೆ. ಮೊಹರಂ ಹಬ್ಬದ ಮೇಲೆ ಹಿಂದೂ ಸಂಸ್ಕೃತಿಯ ಗಾಢ ಪ್ರಭಾವವಾಗಿದೆ. ಪ್ರಾದೇಶಿಕವಾಗಿ ರೂಢಿಯಲ್ಲಿರುವ ಮೊಹರಂ ಆಚರಣೆಯನ್ನು ಕೂಲಂಕುಷವಾಗಿ ಪರಿಶೀಲಿಸಿದಾಗ ಹಿಂದೂ-ಮುಸ್ಲಿಂ ಮೈತ್ರಿಯ ಕುರುಹುಗಳು ಸ್ಪಷ್ಟವಾಗಿ ಗೋಚರಿಸುತ್ತವೆ.

ಉತ್ತರ ಪ್ರದೇಶದ ಲಖನೌ ನಗರದಲ್ಲಿ ಷಿಯಾ - ಸುನ್ನಿ ಮುಸ್ಲಿಮರ ಜೊತೆಗೆ ಹಿಂದುಗಳು ಸೇರಿ ತಾಜಿಯಾ ಕಟ್ಟುತ್ತಾರೆ. ಮೊಹರಂ ತಿಂಗಳ ಆರನೆಯ ದಿನ 'ಆಸಫಿ ಇಮಾಮಬಾಡಾದಲ್ಲಿ ಬರಿಗಾಲಿನಿಂದ ಬೆಂಕಿನ ಮೇಲೆ ನಡೆದುಹೋಗುವ ದೃಶ್ಯ, ಮೆಹಂದಿ ಜುಲೂಸನಲಿ ಪಾಲಕಿ ಪಾಲ್ಗೊಳ್ಳುವುದು' ಹಿಂದೂ ಸಂಸ್ಕೃತಿಯಿಂದ ಪ್ರಭಾವಗೊಂಡ ಅಂಶಗಳು. ಚನೋರಬಾ ಗ್ರಾಮದಲ್ಲಿ ಮೊಹರಂ ಮೆರವಣಿಗೆ ಹೊರಟಾಗ ಹಿಂದೂ-ಮುಸ್ಲಿಮರು ರೋಗ ಪೀಡಿತ ಮಕ್ಕಳನ್ನು ತಾಜಿಯಾಗಳ ಕೆಳಗೆ ಹಾಯಿಸುತ್ತಾರೆ. ಈ ಪದ್ಧತಿ ಹಿಂದುಗಳ ರಥೋತ್ಸವವನ್ನು ನೆನಪಿಸುತ್ತದೆ.

ಆಂಧ್ರಪ್ರದೇಶದ ಹೈದರಾಬಾದ ಮತ್ತು ಗೋಲ್ಕೊಂಡ ನಗರಗಳ ಮೊಹರಂ ಆಚರಣೆಯಲ್ಲಿ ಹಿಂದುಗಳು ಪಾಲ್ಗೊಂಡು 'ಅಲ್ಲೈ ಮುಬಾರಕ್'ಗಳಿಗೆ ಎಡೆ ಉಡಿ ಕಾಣಿಕೆ ನೀಡುತ್ತಾರೆ. ಹತ್ತನೆಯ ದಿನ

ಮಾತಂ ನಡೆಯುವಾಗ ನಿಂತು ಕಣ್ಣೀರು ಸುರಿಸುತ್ತಾರೆ. ಪಶ್ಚಿಮ ಬಂಗಾಲದ ವಿಷ್ಣುಪುರ ನಗರದ ಮೊಹರಂ ಜುಲೂಸದಲ್ಲಿ ಪಾಲ್ಗೊಳ್ಳುವ 'ಧುಲ್ ಧುಲ್' ಎಂಬ ಮಣ್ಣಿನ ಕುದುರೆಯನ್ನು ಪೋತದಾರರು ತಯಾರಿಸುತ್ತಾರೆ. ಇದರಲ್ಲಿ ಹಿಂದು ದೇವ ದೇವತೆಗಳ ಮಣ್ಣಿನ ಮಾದರಿಯ ಛಾಯೆ ಕಂಡುಬರುತ್ತದೆ.

ಮಹಾರಾಷ್ಟ್ರ ರಾಜ್ಯದ ಅಕ್ಕಲಕೋಟೆ ನಗರದಲ್ಲಿ ಹಿಂದು ಮುಸ್ಲಿಮರು ಸೇರಿ ತಾಜಿಯಾ ತಯಾರಿಸುತ್ತಾರೆ. ಗ್ರಾಮ ದೇವತೆಗಳಿಗೆ ಹಿಂದುಗಳು ತೆಂಗಿನಕಾಯಿ ಒಡೆಯುವಂತೆ ತಾಜಿಯಾಗಳಿಗೆ ಹಿಂದು-ಮುಸ್ಲಿಮರು ತೆಂಗಿನಕಾಯಿಗಳನ್ನು ಒಡೆಸುತ್ತಾರೆ ಮತ್ತು ಹಿಂದೂ ದೇವರಿಗೆ ಎಲೆ ಬಳ್ಳಿ ಪೂಜೆ ಮಾಡುವಂತೆ ಹಿಂದು ಮುಸ್ಲಿಮರು ತಾಜಿಯಾಗಳಿಗೆ ವೀಳ್ಯದೆಲೆಯ ಹಾರ ಹಾಕುತ್ತಾರೆ. ರತ್ನಾಗಿರಿ ಜಿಲ್ಲೆಯ ಫತೇಪುರದಲ್ಲಿ ಮೊಹರಂ ಆಚರಣೆಯ ಸಂದರ್ಭದಲ್ಲಿ ತಮಾಷೆ ಮದ್ದುಗಳನ್ನು ಸುಡುತ್ತಾರೆ ಹಾಗೂ ಹೊಸಬಟ್ಟೆ ತೊಟ್ಟು ಮುಖಕ್ಕೆ ಸುಗಂಧ ದ್ರವ್ಯಗಳನ್ನು ಲೇಪಿಸಿಕೊಳ್ಳುತ್ತಾರೆ. ಈ ಸಂಭ್ರಮ ಹಿಂದುಗಳ ದೀಪಾವಳಿ ಹಬ್ಬವನ್ನು ನೆನಪಿಸುತ್ತದೆ.

ಕರ್ನಾಟಕ ರಾಜ್ಯದ ರಾಯಚೂರ ಜಿಲ್ಲೆಯ ಮುದಗಲ್ಲ ಗ್ರಾಮದಲ್ಲಿ ಮೊಹರಂ ಆಚರಣೆಯಲ್ಲಿ ಮುಸ್ಲೀಮೇತರರೇ ಹೆಚ್ಚಾಗಿ ಭಾಗವಹಿಸುತ್ತಾರೆ. ಹರಕೆ ಹೊತ್ತ ಹಿಂದೂ-ಮುಸ್ಲಿಮರು ಹುಲಿ ವೇಷ, ಅಳ್ಳಳ್ಳಿ ಬವ್ವಾ ವೇಷ ಹಾಕಿ ಕುಣಿದು ಕುಪ್ಪಳಿಸುತ್ತಾರೆ. ಕಂದೂರಿ ಮಾಡಿ ಎಡೆ ನೀಡಿ ಮನಸ್ಸಿಗೆ ನೆಮ್ಮದಿ ತಂದುಕೊಳ್ಳುತ್ತಾರೆ. ದೀರ್ಘ ದಂಡ ನಮಸ್ಕಾರ ಹಾಕಿ ಧನ್ಯರಾಗುತ್ತಾರೆ. ಹತ್ತನೆಯ ದಿನ ಹೊರಡುವ ಕಾಸೀಮ ಅಲಂ ಮತ್ತು ಹಸನ ಅಲಂ ಒಂದಕ್ಕೊಂದು ಭೆಟ್ಟಿಯಾದಾಗ ನೆರೆದ ಜನ ಸಮೂಹ ತೇರಿನ ಮೇಲೆ ಹಣ್ಣುಕಾಯಿ ಎಸೆಯುವಂತೆ ಸೂರೆ ಮಾಡಿ ಭಯ ಭಕ್ತಿಯಿಂದ ಕೈಮುಗಿದು ತೃಪ್ತರಾಗುತ್ತಾರೆ. ಹಿಂದುಗಳ ಜಾತ್ರೆಯ ಸಂಭ್ರಮವನ್ನು ನೆನಪಿಸುವ ಮುದಗಲ್ಲ ಮೊಹರಂ ಇಂದಿಗೂ ಸರ್ವರ ಇಷ್ಟಾರ್ಥಗಳನ್ನು ಪೂರೈಸುವ ಪುಣ್ಯಕ್ಷೇತ್ರೋತ್ಸವವೆಂದೇ ಪ್ರಚಲಿತವಾಗಿದೆ.

ಬಳ್ಳಾರಿ ಜಿಲ್ಲೆಯ ಹೊಸ ಪೇಟೆಯಲ್ಲಿ ಕೂಡಿಸುವ ಮೌಲಾಲಿ ಅಲಮ್‌ಗಳಿಗೆ ಹಿಂದೂ-ಮುಸ್ಲಿಮರು ರಾಮುಲಸ್ವಾಮಿ ಎಂದೇ ಕರೆಯುತ್ತಾರೆ. ಒಂಬತ್ತನೆಯ ದಿನ ರಾತ್ರಿ ಎಡೆ ಕೊಡುವಾಗ ಉಪ್ಪನ್ನು ಒಯ್ದು ಅಲಾವಿಯಲ್ಲಿ ಚೆಲ್ಲಿ ಹುರುಕು ಕಜ್ಜಗಳನ್ನು ವಾಸಿ ಮಾಡಿಕೊಳ್ಳುತ್ತಾರೆ. ಕೋಲಾರ ಜಿಲ್ಲೆಯ ನಾಗಸಂದ್ರದ ಮೊಹರಂ ಬಾಬಯ್ಯನ ಹಬ್ಬವೆಂದೇ ಪ್ರಸಿದ್ಧಿ ಪಡೆದಿದೆ.

ಧಾರವಾಡ ಜಿಲ್ಲೆಯ ಯರಗುಪ್ಪಿ ಗ್ರಾಮದ ಮೊಹರಂ ಸುತ್ತ ಹತ್ತು ಹಳ್ಳಿಗಳಲ್ಲಿ ಮೊಹರಂ ಜಾತ್ರೆಯೆಂದೇ ಹೆಸರಾಗಿದೆ. ಊರಿನ ಹಿಂದೂ-ಮುಸ್ಲಿಮರು ವಿಶೇಷವಾಗಿ ಬ್ರಾಹ್ಮಣರು ತಮ್ಮ ಶಕ್ತ್ಯಾನುಸಾರ ದೇವರ ಚಾಕರಿ ಮಾಡುತ್ತಾರೆ. ಹರಕೆ ತೀರಿಸುತ್ತಾರೆ. ಗದಗ-ಬೆಟಗೇರಿಯಲ್ಲಿ ನಡೆಯುವ ಮೊಹರಂ ಮೆರವಣಿಗೆಯಲ್ಲಿ ಹಿಂದೂ-ಮುಸ್ಲಿಂ ಭಕ್ತರು ಪಾಲ್ಗೊಂಡು ಮೈ ತುಂಬಿದ ದೇವರಿಂದ ಮಳೆ - ಬೆಳೆ ಕುರಿತು ಹೇಳಿಕೆ-ಕೇಳಿಕೆ ಮಾಡುತ್ತಾರೆ. ಸೊಟಕನಹಾಳದ ಡೋಲಿ ಮತ್ತು ಕೈದೇವರು ದ್ಯಾಮವ್ವನ ಗುಡಿಗೆ ಭೆಟ್ಟಿಯಿತ್ತಾಗ ಊರ ಜನ ಇಮಾಮ ಹುಸೇನರು ತಂಗಿ ದ್ಯಾವಮ್ಮನ ದರ್ಶನಕ್ಕೆ ಬಂದಿದ್ದಾರೆಂದೇ ತಿಳಿಯುತ್ತಾರೆ.

ಹೀಗೆ ಮೊಹರಂ ಆಚರಣೆ ಶೋಕಮೂಲವಾಗಿದ್ದರೂ ಮೂಲತಃ ಮುಸ್ಲಿಮರಿಗೆ ಸಂಬಂಧಪಟ್ಟಿದ್ದರೂ ಅದು ಹಿಂದುಗಳ ಸ್ನಿಗ್ಧ ಸ್ನೇಹದಿಂದ ಭಾವೈಕ್ಯದ ಪ್ರತೀಕವಾಗಿ ಎಲ್ಲರ ಹಬ್ಬವಾಗಿ ಬಳಕೆಯಲ್ಲಿದೆ. ಹಿಂದು-ಮುಸ್ಲಿಮರನ್ನು ಒಂದುಗೂಡಿಸುವ ಧಾರ್ಮಿಕ ಸೌಹಾರ್ದವನ್ನು ಹುಟ್ಟು ಹಾಕುವ 'ಮೊಹರಂ' ಭಾವೈಕ್ಯದ ಬೆಸುಗೆಗೆ ಮತೀಯ ಸಾಮರಸ್ಯಕ್ಕೆ ಬಹುದೊಡ್ಡ ಕಾಣಿಕೆಯಾಗಿದೆ.'2

ಮೊಹರಂ ಹಬ್ಬದ ಈ ಐತಿಹಾಸಿಕ ಹಿನ್ನೆಲೆ ಬಹುಪಾಲು ಪಿಂಜಾರರಿಗೆ ಗೊತ್ತಿಲ್ಲ. ಪಿಂಜಾರರ ಈ ಜ್ಞಾನದ ಕೊರತೆ ಮತ್ತು ಈ ಹಬ್ಬಕ್ಕೆ ದೊರೆಯುವ ಹಿಂದೂಗಳ ಅಪಾರವಾದ ಸಹಯೋಗದ ಕಾರಣದಿಂದ ಶೋಕಮೂಲವಾದ ಈ ಹಬ್ಬವನ್ನು ಪಿಂಜಾರರು ಉತ್ಸಾಹ-ಉಲ್ಲಾಸಗಳಿಂದ ಆಚರಿಸುತ್ತಾರೆ. ಮೊಹರಂ ಎನ್ನುವುದು ಇಸ್ಲಾಂ ಧರ್ಮದ ಹನ್ನೆರಡು ತಿಂಗಳುಗಳಲ್ಲಿ ಒಂದು. ಈ ತಿಂಗಳಲ್ಲಿ ಅಮಾವಾಸ್ಯೆಯ ನಂತರ ಕಾಣಬರುವ ಚಂದ್ರನ ದರ್ಶನದ ಕ್ಷಣದಿಂದ ಈ ಹಬ್ಬದ ಆಚರಣೆ ಆರಂಭವಾಗುತ್ತದೆ. ವಾಸ್ತವವಾಗಿ ಈ ದಿನದಿಂದ ಹತ್ತು ದಿನಗಳ ಕಾಲ ಈ ಹಬ್ಬದ ಆಚರಣೆಯಿರುವುದು ನಿಜವಾದರೂ ಚಂದ್ರದರ್ಶನದ ನಂತರ ಮಸೀದಿಯ ಮುಂದೆ ಹಾರೆ ಹಾಕಿ ಸಣ್ಣ ಗುಂಡಿ ತೋಡುವ ಶಾಸ್ತ್ರದ ಹೊರತಾಗಿ (ಬೆಂಕಿಕುಂಡದ ರಚನೆಗಾಗಿ) ಆರಂಭದ ಎಂಟು ದಿನಗಳಲ್ಲಿ ಮಹತ್ವವಾದದ್ದು ಏನೂ ನಡೆಯುವುದಿಲ್ಲ. ಈ ದಿನಗಳಲ್ಲಿ ಗುಂಬಜ್ ಆಕಾರದ ತಾಬೂತ್‌ನ್ನು (ತಾಜಿಯಾ ಎಂದೂ ಕರೆಯುತ್ತಾರೆ). ರಚಿಸಿ ಅದಕ್ಕೆ ವಿವಿಧ ಬಗೆಯ ಬಣ್ಣದ ಕಾಗದಗಳಿಂದ ಅಲಂಕಾರ ಮಾಡಲಾಗುತ್ತದೆ. ಈ ತಾಬೂತ್‌ನ ಅಲಂಕಾರ ಮಾತ್ರ ಪ್ರತಿ ವರ್ಷ ನಡೆಯುತ್ತದೆ; ಆದರೆ ಪ್ರತಿವರ್ಷ ತಾಬೂತನ್ನು ಹೊಸದಾಗಿ ತಯಾರಿಸುವುದಿಲ್ಲ. ಹಬ್ಬ ಮುಗಿದ ನಂತರ ಇದನ್ನು ಮಸೀದಿಯ ಒಂದುಕಡೆ ರಕ್ಷಿಸಿಡಲಾಗುತ್ತದೆ. ತಾಬೂತ್ ಎಂದರೆ ಶವಪೆಟ್ಟಿಗೆ ಎಂದು ಅರ್ಥ. ಧರ್ಮಕ್ಕಾಗಿ ಪ್ರಾಣ ಕಳೆದುಕೊಂಡ ಇಮಾಮ್‌ಹುಸೇನರ ಶವಸಂಸ್ಕಾರದ ಶೋಕಪೂರಿತ ಸಂಕೇತವದು. ಮೊಹರಂನ ಹಿನ್ನೆಲೆ ಗೊತ್ತಿಲ್ಲದ ಪಿಂಜಾರರಿಗೆ ಈ ತಾಬೂತ್ ಪದದ ಅರ್ಥವೂ ಗೊತ್ತಿಲ್ಲ. ಆದರೆ ಅದನ್ನು ದೇವರೆಂಬ ಭಯ-ಭಕ್ತಿಯಿಂದ ಹೊತ್ತುಕೊಳ್ಳುತ್ತಾರೆ. ಕಡೆಯ ಎರಡು ದಿನಗಳಲ್ಲಿಯೇ ವಿಶೇಷವಾದ ಆಚರಣೆ ಉತ್ಸವಗಳು ಕಂಡುಬರುತ್ತವೆ. ಈ ಹಿನ್ನೆಲೆಯಲ್ಲಿ ಪಿಂಜಾರರ ಮೊಹರಂ ಆಚರಣೆಯ ಸಂದರ್ಭವನ್ನು ವಿವರವಾಗಿ ನೋಡಬಹುದು. ಅಮಾವಾಸ್ಯೆಯ ನಂತರದ ಚಂದ್ರನನ್ನು ನೋಡಿ ಆ ಸಂಜೆಯೇ ಮಸೀದಿ (ಪಿಂಜಾರರು ಮಸೂತಿ ಎಂದೂ ಕರೆಯುತ್ತಾರೆ)ಯ ಮುಂದೆ 'ಹಾರೆ ಹಾಕು'ತ್ತಾರೆ. ಈ ಹಾರೆ ಹಾಕುವುದೆಂದರೆ ಊರ ಹಿರಿಯರ ಮಾರ್ಗದರ್ಶನದಲ್ಲಿ ಹುಡುಗರು ಹಾರೆಯಿಂದ ಮಸೂತಿಯ ಮುಂದಿನ ಆವರಣದಲ್ಲಿ ನೆಲವನ್ನು ಸ್ವಲ್ಪ ಅಗಿಯುತ್ತಾರೆ. ಇಲ್ಲಿಂದ ಹಬ್ಬದ ಆಚರಣೆ ನಡೆಯುತ್ತಾ ಹೋಗುತ್ತದೆ. ಊರಿಗೊಂದು ಬಳಗ ಇರುತ್ತದೆ. ದೇವರಿಗೆ ಬಣ್ಣ ಹಚ್ಚುವುದಕ್ಕೆ, ಸವಾಲು ಹೇಳಿಸುವುದಕ್ಕೆ, ಬೆಂಕಿ ಕೆಂಡ ತುಳಿಯುವ ಸಲುವಾಗಿ ಕಟ್ಟಿಗೆ ತರುವುದಕ್ಕೆ, ಮೈಕುಸೆಟ್ಟು ಇತ್ಯಾದಿ ಖರ್ಚಿಗೆಂದು ಬಳಗದವರು ಮನೆಮನೆಗೆ ಹೋಗಿ ಹಣವನ್ನು, ಹಣ ಇಲ್ಲದವರ ಹತ್ತಿರ ಕಾಳು ಕಡೆಯನ್ನು ಕೇಳಿ ಪಡೆಯುತ್ತಾರೆ. ಹಬ್ಬದ ಕೆಲಸಕ್ಕಾದ್ದರಿಂದ ಯಾರೂ ಇಲ್ಲವೆನ್ನದೆ ಕೊಡುತ್ತಾರೆ. ಎಲ್ಲರಿಂದ ಬಂದ ಹಣವನ್ನು ಕೂಡಿಸಿ ಅಗತ್ಯದ ಸಾಮಾನು ತರುತ್ತಾರೆ. ಅನೇಕ ನಮೂನೆಯ ಬಣ್ಣದ ಕಾಗದಗಳನ್ನು ತಂದು ಕತ್ತರಿಸಿ ಚಿತ್ರಾಕಾರದಲ್ಲಿ ದೇವರಿಗೆ ಹಚ್ಚಿ ಅಲಂಕರಿಸುತ್ತಾರೆ. ಮನೆಯ ಹೆಣ್ಣುಮಕ್ಕಳು ಮನೆ ಬಳಿಯುವ, ಅಡಿಗೆ

ಪದಾರ್ಥಗಳನ್ನು ತಂದುಕೊಳ್ಳುವ ಕೆಲಸದಲ್ಲಿ ಮಗ್ನರಾಗಿರುತ್ತಾರೆ. ದೇವರ ಅಲಂಕಾರ ಮುಗಿಯುತ್ತಿದ್ದಂತೆ ಒಂಭತ್ತನೆಯ ದಿನದ ಬೆಳ್ಳಂಬೆಳಗ್ಗೆ 'ಮೌಲಾಲಿ' ಹೊತ್ತುಕೊಂಡು ಮುಲ್ಲಾನ ಜೊತೆಗೆ ಕೆಲವರು ಮನೆಮನೆಗೆ ಬರುತ್ತಾರೆ. ಮಬ್ಬು ಹರಿಯುತ್ತಿದ್ದಂತೆ ಮೌಲಾಲಿ ಬರುತ್ತದೆಂದು ತಿಳಿದ ಜನ ತಂತಮ್ಮ ಮನೆ ಮುಂದೆ ಕಸಹೊಡೆದು ನೀರು ಚಿಮುಕಿಸುತ್ತಾರೆ. ಮೌಲಾಲಿಯನ್ನು ಹಿಡಿದುಕೊಂಡು ಬಂದವನ ಕಾಲು ತೊಳೆದು ಮನೆಯ ಹೆಂಗಸರು ಸಕ್ಕರೆ ಅಥವಾ ಬೆಲ್ಲವನ್ನು ಓದಿಸಲು ಕೊಡುತ್ತಾರೆ. ಚಿತ್ತಾರದ ತಾಮ್ರದ ಅಥವಾ ಹಿತ್ತಾಳೆಯ ಗಂಗಾಳದಲ್ಲಿ ಸಕ್ಕರೆ ಅಥವಾ ಬೆಲ್ಲ ಹಾಕಿ ದಸ್ತರಖಾನಿ ಮುಚ್ಚಿಕೊಟ್ಟರೆ ಮುಲ್ಲಾ 'ಓದಿಕೆ' ಮುಗಿಸಿ ಅರ್ಧದಷ್ಟು ಸಕ್ಕರೆ ಅಥವಾ ಬೆಲ್ಲವನ್ನು ತಾನು ತೆಗೆದುಕೊಂಡು ಉಳಿದದ್ದನ್ನು ಹಿಂತಿರುಗಿಸುತ್ತಾನೆ. ಹೀಗೆ ಇಡೀ ಊರಿನವರು ಅವರಿವರೆನ್ನದೆ ತಮ್ಮ ಮನೆಮುಂದೆ ಮೌಲಾಲಿಗೆ ಗೌರವ ತೋರಿಸುವ ಸಲುವಾಗಿ ಸಕ್ಕರೆ ಓದಿಸುತ್ತಾರೆ. ಬಹಳಷ್ಟು ಪಿಂಜಾರರು ಬಡವರೇ ಆಗಿರುವುದರಿಂದ ಬೆಲ್ಲವನ್ನು ಪುಡಿಮಾಡಿ ಕೊಟ್ಟು ಓದಿಸುತ್ತಾರೆ. ಸಕ್ಕರೆ ಓದಿಸುವವರು ಬೆಲ್ಲ ಓದಿಸುವವರಿಗಿಂತ ಸ್ಥಿತಿವಂತರೆಂದು ಪಿಂಜಾರರೇ ನಂಬುತ್ತಾರೆ. ಈ ಸಕ್ಕರೆ ಅಥವಾ ಬೆಲ್ಲ ಓದಿಸುವಾಗಲೇ ಸಣ್ಣ ಮಕ್ಕಳಿಗೆ ಲಾಡಿಕಟ್ಟುವ ಸಲುವಾಗಿ ಹೊಸ ಲಾಡಿದಾರ ತಂದು ಅದರೊಂದಿಗಿಟ್ಟು ಓದಿಸಿ ನಂತರ ಮಕ್ಕಳಿಗೆ ಕಟ್ಟುತ್ತಾರೆ. ಮಕ್ಕಳು ಅವರ್ಣನೀಯ ಆನಂದದಿಂದ ಕುಣಿದಾಡುತ್ತವೆ. ಮಧ್ಯಾಹ್ನಕ್ಕೆ ಈ ಸಂಭ್ರಮ ಮುಗಿಯುತ್ತದೆ.

ಆ ದಿನ ಮಧ್ಯಾಹ್ನವೇ ಮಸೂತಿ ಮುಂದೆ ಅಗಲವಾದ ೨-೩ ಅಡಿ ಆಳದ ಅಂಗಲವಾದ ಗುಂಡಿಯನ್ನು ತೋಡುತ್ತಾರೆ. ಕಟ್ಟಿಗೆಯನ್ನು ತಂದ ಅಲ್ಲಿ ಕಲೆಹಾಕುತ್ತಾರೆ. ಆ ದಿನ ಸಂಜೆ ಹಲಗೆ ವಾದ್ಯಗಳೊಡನೆ ತಾಬೂತನ್ನು ಹೊತ್ತುಕೊಂಡು ಇಡೀ ಊರನ್ನು ಕುಣಿಯುತ್ತಾ ಸುತ್ತಲಾಗುತ್ತದೆ. ತಾಬೂತಿನ ಮುಂದೆ ಕತ್ತಿಗಳನ್ನು ಹಿಡಿದವರು, ಮೌಲಾಲಿ ಹಿಡಿದವರು, ಕೈಯಲ್ಲಿ ಹಿಡಿದುಕೊಳ್ಳಬಹುದಾದ ಕುಡಿಕೆಯಲ್ಲಿ ಬೆಂಕಿ ಕೆಂಡ ಹಾಕಿಕೊಂಡು ಹಿಡಿದು ಮುಲ್ಲಾನ ಜೊತೆಗೆ ಅನೇಕರು ಹೊರಡುತ್ತಾರೆ. ತಾಬೂತು ಮುಂದೆ ಹೋದಂತೆ ಹೆಂಗಸರು, ಮಕ್ಕಳಾದಿಯಾಗಿ ಮನೆಯಿಂದ ಕಿಚಡಿ, ಶರಬತ್ತನ್ನು ಗಂಗಾಳ, ಲೋಟಗಳಲ್ಲಿಟ್ಟುಕೊಂಡು ದಸ್ತರಖಾನಿ ಮುಚ್ಚಿ ಕೈಲಿಟ್ಟುಕೊಂಡು ಹೊಸಸೀರೆ ಬಟ್ಟೆಗಳನ್ನುಟ್ಟು ತಲೆತುಂಬ ಸೆರಗು ಹೊದ್ದು ಹೊರಡುತ್ತಾರೆ. ಆವೇಶದಿಂದ ಕುಣಿಯುತ್ತಾ ಗಂಡಸರು, ಮಕ್ಕಳು 'ಕ್ಯಾ ಹುಸೇನ್ ಬಾ ಹುಸೇನ್' ಎಂದು ಕೂಗುತ್ತಾ ನಡೆಯುತ್ತಾರೆ. ತಾಬೂತು ಮಸೀದಿ ತಲುಪಿದ ತಕ್ಷಣ ಅದನ್ನು ಕೆಳಗಿಳಿಸುತ್ತಾರೆ. ಅದರ ಮುಂದೆ ಮುಲ್ಲಾ ಕುಳಿತುಕೊಳ್ಳುತ್ತಾರೆ. ಹೆಣ್ಣು ಮಕ್ಕಳು ತಂದ ಕಿಚಡಿ ಶರಬತ್ತನ್ನು 'ಓದಿಕೆ' ಮಾಡಿ ತಂದದ್ದರಲ್ಲಿ ಅರ್ಧ ಉಳಿಸಿಕೊಂಡು ಉಳಿದರ್ಧವನ್ನು ಕೊಟ್ಟು ಕಳಿಸಲಾಗುತ್ತದೆ. ಓದಿಕೆ ಮಾಡಿಕೊಂಡು ಬಂದ ನಂತರವೇ ಕಿಚಡಿ ಶರಬತ್ತನ್ನು ಕಲಸಿಕೊಂಡು ಉಣ್ಣಲಾಗುತ್ತದೆ. ಮುಲ್ಲಾ ಮಸೀದಿಯಲ್ಲಿ ಉಳಿಸಿಕೊಂಡ ಕಿಚಡಿ ಶರಬತ್ತನ್ನು ಬಡವರಿಗೆ ಹಂಚುತ್ತಾನೆ. ರಾತ್ರಿಯಿಡೀ ಮಸೂತಿಯ ಮುಂದೆ ಹಿರಿಯರೆಲ್ಲರೂ ಕೂಡಿಕೊಂಡು ಕತೆ ಹೇಳುವುದು, ಹರಟೆ ಹೊಡೆಯುವುದು, ಸಾಧ್ಯವಾದರೆ ಸವಾಲು ಹೇಳುವುದು ಮಾಡುತ್ತ ಬೀಡಿ ಸೇದುತ್ತಾ ಗುಂಡಿಗೆ ಕಟ್ಟಿಗೆ ತುಂಬಿ ಬೆಂಕಿ ಹಚ್ಚುತ್ತಾರೆ. ಹೆಚ್ಚು ಹೆಚ್ಚು ಕೆಂಡಗಳಿರಲೆಂದು ದಪ್ಪನೆಯ ತುಂಡುಗಳಿಗೆ ಬೆಂಕಿ ಹಚ್ಚುತ್ತಾರೆ. ಬೆಳಗಾಗುವವರೆಗೂ ಬೆಂಕಿ ಉರಿಯುತ್ತಿರುವಂತೆ ನೋಡಿಕೊಳ್ಳುತ್ತಾರೆ.

ಇದು ಹತ್ತನೆಯ ದಿನ ಮೊಹರಂ ಕಡೆಯ ದಿನ. ಬೆಳಗಾಗುತ್ತಿದ್ದಂತೆಯೇ ಅಲಿದೇವರನ್ನು ಹೊತ್ತುಕೊಂಡು (ಗುಂಬಜ್ ಆಕಾರದಲ್ಲಿ ಕಟ್ಟಿಗೆಯಿಂದ ಮಾಡಿದ ದೇವರು, ಎಲ್ಲೂ ಕಟ್ಟಿಗೆ ಕಾಣದಂತೆ ಬಣ್ಣದ ಕಾಗದ ಅಂಟಿಸಿ ಅಲಂಕರಿಸುತ್ತಾರೆ. ಗುಂಬಜ್‌ನ ತುಟ್ಟ ತುದಿಯಲ್ಲಿ ಅರ್ಧ ಚಂದ್ರಾಕಾರದ ಬೆಳ್ಳಿಯ ಆಭರಣವಿರುತ್ತದೆ) ಜನಜಂಗುಳಿ ಕುಣಿಯುತ್ತ ಕೂಗಾಡಿಕೊಂಡು ಬರುತ್ತದೆ. ತಾಬೂತಿನ ಮುಂದೆ ೩-೪ ಜನ ಹಲಗೆ ಬಡಿಯುವವರು (ಸಾಮಾನ್ಯವಾಗಿ ಅವರು ಹರಿಜನರೇ ಆಗಿರುತ್ತಾರೆ. ಆಗಾಗ್ಗೆ ಬೆಂಕಿ ಹಾಕಿ ಹಲಗೆ ಕಾಯಿಸಿಕೊಳ್ಳುತ್ತ ಕುಣಿಯುತ್ತ ಲಯಬದ್ಧವಾಗಿ ಹಲಗೆ ಬಡಿಯುತ್ತಾರೆ. ಸೊನೆಯದವರು (ವಾದ್ಯದವರೂ) ಇವರೊಂದಿಗೆ ತಮ್ಮ ವಾದ್ಯಗಳನ್ನು ಕುಣಿತಕ್ಕನುಸಾರವಾಗಿ ಬಾರಿಸುತ್ತಾರೆ. ಸಣ್ಣಪುಟ್ಟ ಮಕ್ಕಳಿಂದ ಹಿಡಿದು ದೊಡ್ಡವರವರೆಗೆ ಕೈಯಲ್ಲಿ ಬಿಲ್ಲಿನಾಕಾರದಲ್ಲಿ ಬಿದಿರು ದಬ್ಬೆಯಿಂದ ಮಾಡಿದ ವಸ್ತುವಿಗೆ ಬಣ್ಣದ ಕಾಗದ ಅಂಟಿಸಿಕೊಂಡು, ಮತ್ತೊಂದು ಕೈಯಲ್ಲಿ ಹಿಡಿಯಾಕಾರದಲ್ಲಿ ಡಬ್ಬದಲ್ಲಿ ಮಾಡಿದ ವಸ್ತುವಿನೊಳಗೆ ಕಲ್ಲಾಳು ಹಾಕಿಕೊಂಡು ಅಲುಗಾಡಿಸುತ್ತಾ 'ಜಾಲಜ ಜನಕ ಪಟಿ' ಎನ್ನುತ್ತಾ ಕುಣಿಯುತ್ತಾರೆ. ನಾಲ್ಕೈದು ಮಂದಿಯಂತೆ ಸಾಲುಗಳನ್ನು ಮಾಡಿಕೊಂಡು ಕುಣಿಯುತ್ತಾರೆ. ಮಕ್ಕಳು ಸೊಂಟಕ್ಕೆ ಗೆಜ್ಜೆಯಿರುವ ಪಟಗಣ್ಣೆ ಕಟ್ಟಿಕೊಂಡು ಕಾಗದದಲ್ಲಿ ಗೋಪುರಾಕಾರದ ಟೋಪಿ ರಚಿಸಿ (ಅಳ್ಳಳ್ಳಿಬುವ್ವಾ) ತಲೆಗೆ ಹಾಕಿಕೊಂಡು ಕೈಯಲ್ಲಿ ಒಣಗಿದ ಅಡಿಕೆಪಟ್ಟೆಯನ್ನು ದುಂಡಗೆ ಮಡಿಸಿ ಹಿಡಿದುಕೊಂಡು ಕುಣಿಯುತ್ತಾರೆ. ಹೀಗೆ ಕುಣಿಯುವವರನ್ನು ಗೌರವದಿಂದ ಕುತೂಹಲದಿಂದ ಜನತೆ ನೋಡುತ್ತಿರುತ್ತದೆ. ಅಡಿಕೆಪಟ್ಟೆ ಹಿಡಿದುಕೊಂಡ ಮಕ್ಕಳನ್ನು ಕರೆದು ತುಂಬ ಚಿಕ್ಕ ಮಕ್ಕಳ ತಲೆಗೆ ಅಡಿಕೆಪಟ್ಟೆಯಿಂದ ಮೆಲ್ಲಗೆ ಮುಟ್ಟಿಸಲು ಹೇಳುತ್ತಾರೆ. ಅದು ದೇವರ ಆಶೀರ್ವಾದವೆಂದೇ ಜನ ಭಾವಿಸುತ್ತಾರೆ. ಕುಣಿಯುವವರ ಗುಂಪು ಹಿಂದಕ್ಕೆ ಮುಂದಕ್ಕೆ ತಾಳಬದ್ಧವಾಗಿ ಹೆಜ್ಜೆ ಹಾಕುತ್ತಾ ಮೆಲ್ಲಗೆ ಮುಂದೆ ಸಾಗುತ್ತಿರುತ್ತದೆ. ಪ್ರತಿಯೊಂದು ಮನೆಯವರೂ ಈ ಗುಂಪು ಬರುವ ಮೊದಲೇ ತಂತಮ್ಮ ಮನೆಮುಂದಿನ ಜಾಗವನ್ನು ಸ್ವಚ್ಛ ಮಾಡಿ ನೀರು ಚಿಮುಕಿಸುತ್ತಾರೆ. ಕುಣಿಯುವವರ ಹಿಂದೆ ಮೌಲಾಲಿ ಹಿಡಿದು ಒಬ್ಬರು, ಪಕ್ಕದಲ್ಲಿ ತಲೆಗೆ ಕರವಸ್ತ್ರ ಕಟ್ಟಿದ ಮುಲ್ಲಾ, ಅವರೊಂದಿಗೆ ಕತ್ತಿ, ನವಿಲುಗರಿ, ಲೋಬಾನದ ಕುಡಿಕೆ ಹಿಡಿದುಕೊಂಡು ಹುಡುಗರು ಬರುತ್ತಿರುತ್ತಾರೆ. ಇವರ ಹಿಂದೆ ದೇವರನ್ನು ಹೊತ್ತುಕೊಂಡು ಬರುವವರು ಆಗಾಗ್ಗೆ ಹೆಗಲು ಬದಲಿಸಿಕೊಳ್ಳುತ್ತಾ ಬರುತ್ತಾರೆ. ಪ್ರತಿ ಮನೆಯ ಮುಂದೆ ದೇವರು ನಿಂತು ಮನೆಯವರು ಕೊಟ್ಟ ಸಕ್ಕರೆ ಅಥವಾ ಬೆಲ್ಲವನ್ನು ಮುಲ್ಲಾ ಓದಿಕೆ ಮಾಡಿದ ತಕ್ಷಣ ಹುಡುಗರು 'ಇಮಾಂಬೋಲ' ಅನ್ನುತ್ತಾರೆ. ತಕ್ಷಣ ಇನ್ನೊಂದು ಗುಂಪು 'ಇಂಬುಂಬೋ ಇಮೋಂದೀನ್' ಎಂದು ಪ್ರತಿಯಾಗಿ ಹೇಳುತ್ತದೆ. ಎಲ್ಲರೂ ದೇವರ ಮೇಲೆ ಬೀಳುವಂತೆ ಮಂಡಕ್ಕಿಯನ್ನು ತೂರುತ್ತಾರೆ. ಹೆಂಗಸರು 'ಓದಿಕೆ' ಮಾಡಿಸಿಕೊಳ್ಳುವುದಕ್ಕಾಗಿ ಸಕ್ಕರೆ, ಬೆಲ್ಲ ತಂದು ಮುಲ್ಲಾ ಕೈಲಿಕೊಟ್ಟು ಕುಣಿಯುವ ಜನರನ್ನು ನೋಡುತ್ತಿರುತ್ತಾರೆ. ಅದಕ್ಕೆ ಮೊದಲು ಮುಲ್ಲಾನ ಕಾಲು ತೊಳೆಯಲಾಗುತ್ತದೆ. ದೇವರಿಗೆ ಮಂಡಕ್ಕಿ ಉಗ್ಗಿದ ನಂತರ ದೇವರು ಮತ್ತೆ ಮೆಲ್ಲಗೆ ಮುಂದಕ್ಕೆ ಸಾಗುತ್ತದೆ. ಕೆಲವರು ಹೆಣ್ಣುಮಕ್ಕಳು ಹಸುಗೂಸನ್ನು ಎತ್ತಿಕೊಂಡು ತಾಬೂತಿನ ಕೆಳಗೆ ಬಗ್ಗಿ ಭಯಭಕ್ತಿಯಿಂದ ದಾಟುತ್ತಾರೆ. ಕಾಯಿಲೆ-ಕಸಾಲೆಯಾದವರು ಮತ್ತು ಮಕ್ಕಳಿಗೂ ಈ ರೀತಿ ದಾಟಲು ಹೇಳುತ್ತಾರೆ. ಇನ್ನೂ ಕೆಲವರು

ಮಕ್ಕಳು-ಮರಿಗಳನ್ನು ಕರೆದು ನವಿಲುಗರಿಯಿಂದ ಮೂರು ಸಲ ಹಣೆ ತಲೆಗೆ ಮುಟ್ಟಿಸಿಕೊಳ್ಳುವಂತೆ ಪ್ರೋತ್ಸಾಹಿಸುತ್ತಾರೆ. ಇದರಿಂದ ದೇವರು ತಮಗೆ ಹರಸುತ್ತಾನೆ ಎಂಬ ನಂಬಿಕೆ ಇದೆ. ಹೀಗೆ ಇಡೀ ಊರನ್ನು ಸುತ್ತಿದ ನಂತರ ಪಕ್ಕದ ಊರಿನ ದೇವರ ಜೊತೆ ಗಡಿಯಾಡಲು ಹೋಗುತ್ತಾರೆ.

ಎಲ್ಲ ಊರುಗಳಲ್ಲಿಯೂ ಪಿಂಜಾರರು ಈ ಗಡಿಯಾಡುವ ಆಚರಣೆಯನ್ನಿಟ್ಟುಕೊಂಡಿಲ್ಲ. ಕೆಲವು ಊರುಗಳಲ್ಲಿದೆ. ಪಕ್ಕದ ಊರಿನ ದೇವರು ತಮ್ಮೂರ ದೇವರ ಸಹೋದರ ಎಂದು ತಿಳಿದಿರುತ್ತಾರೆ. ಕುಣಿಯುತ್ತಿದ್ದವರು ತಾವು ಹಿಡಿದುಕೊಂಡಿದ್ದ ಸಾಮಾನುಗಳನ್ನೆಲ್ಲ ಮಸೂತಿಯಲ್ಲಿಟ್ಟು ಎಲ್ಲರೂ ದೇವರ ಹಿಂದೆ ಹೊರಡುತ್ತಾರೆ. ಹೊರಟಾಗ ಯಾರೂ ಕುಣಿಯುವುದಿಲ್ಲ. ಮೌಲಾಲಿ ಮತ್ತು ದೇವರನ್ನು ಹೊತ್ತುಕೊಂಡವರ ಮುಂದೆ ಮುಲ್ಲಾ ಇರುತ್ತಾನೆ. ತಮ್ಮೂರ ಗಡಿಯವರೆಗೂ ಹೋಗಿ ಪಕ್ಕದೂರಿನ ದೇವರು ಬರುವವರೆಗೂ ಕಾಯುತ್ತಾರೆ. ಸಾಮಾನ್ಯವಾಗಿ ಹೆಚ್ಚು ಕಾಯಿಸದೆ ಎರಡೂ ಊರಿನವರೂ ಗಡಿಯಲ್ಲಿ ಬಂದು ಸೇರುತ್ತಾರೆ. ನಂತರ ಎರಡೂ ಕಡೆಯ ಮುಲ್ಲಾಗಳು 'ಓದಿಕೆ' ಮಾಡುತ್ತಾರೆ. ಅವರ ಮಾರ್ಗದರ್ಶನದಂತೆ ಮೌಲಾಲಿ ಹಿಡಿದುಕೊಂಡವರು ಪರಸ್ಪರ (ಮೌಲಾಲಿ ಎಂದರೆ ಉದ್ದನೆಯ ಗಳುವೊಂದಕ್ಕೆ ಬಿಳಿಬಟ್ಟೆ ಸುತ್ತಿ ತುದಿಯಲ್ಲಿ ಗುಂಡು ಅಥವಾ ಅರ್ಧಚಂದ್ರಾಕಾರದ ಲೋಹದ ಬಂಗಾರದ ಬಣ್ಣದ ಆಭರಣವನ್ನು ಇಟ್ಟಿರುತ್ತಾರೆ) ಆ ಮೌಲಾಲಿಗಳಿಗೆ ಢಿಕ್ಕಿ ಹೊಡೆಸುತ್ತಾರೆ. ೨-೩ ಸಲ ಹಾಗೆ ಪರಸ್ಪರ ಸಂಘಟಿಸಿದ ನಂತರ ದೇವರನ್ನು ಹೊತ್ತುಕೊಂಡವರು ಕೂಡ ಎದುರುಬದುರು ಜೋರಾಗಿ ಆ ಕಡೆಯಿಂದ ಈ ಕಡೆಗೆ ಈ ಕಡೆಯಿಂದ ಆ ಕಡೆಗೆ ರಭಸದಿಂದ ಓಡಾಡುತ್ತಾರೆ. ಪ್ರದಕ್ಷಿಣೆ ಹಾಕುತ್ತಾರೆ. ಅದಕ್ಕೆಂದೇ ತಿಗುಡಾಗಿರುವ ಯುವಕರು ದೇವರನ್ನು ಹೊತ್ತುಕೊಂಡಿರುತ್ತಾರೆ. ದೇವರನ್ನು ಹೊತ್ತುಕೊಳ್ಳುವುದಕ್ಕೂ ನಾ ಮುಂದು ತಾ ಮುಂದು ಎನ್ನುವಂಥ ಸ್ಪರ್ಧೆಯಿರುತ್ತದೆ. ಅದು ಪುಣ್ಯದ ಕೆಲಸ ದೇವರ ಸೇವೆ ಎಂಬ ನಂಬಿಕೆಯಿರಬೇಕು. ಹೀಗೆ ಎರಡೂ ಊರಿನ ದೇವರುಗಳು ಗಡಿಯಾಡಿದ ನಂತರ ನೇರವಾಗಿ ತಂತಮ್ಮ ಊರಿನ ಮಸೂತಿಯ ಹತ್ತಿರ ಜನರೆಲ್ಲ ಬರುತ್ತಾರೆ. ಈ ಜನ ಬರುತ್ತಿದ್ದಂತೆಯೇ ಮಸೂತಿ ಮುಂದೆ ತೋಡಿದ್ದ ಗುಂಡಿಯ ಬೆಂಕಿ ಕೆಂಡವನ್ನು ಕೆದರಿ ಕೆದರಿ ಕೆಂಪಾಗಿ ಉರಿಯುವುದು ಕಾಣುವಂತೆ ಮಾಡಲಾಗುತ್ತದೆ. ಗುಂಡಿಯ ಸುತ್ತ ಕಿಕ್ಕಿರಿದು ಜನ ಸೇರುತ್ತಾರೆ. ಒಬ್ಬೊಬ್ಬರಾಗಿ ಕೆಂಡ ತುಳಿಯಲು ಅವಕಾಶ ಮಾಡಿಕೊಡಲಾಗುತ್ತದೆ. ಮೊದಲು ಮೌಲಾಲಿ ಹಿಡಿದವನು ಉನ್ಮಾದದಿಂದ ದೇವರು ಮೈಮೇಲೆ ಬಂದವನಂತೆ ಬೆಂಕಿ ಕೆಂಡವನ್ನು ಮತ್ತೆ ಮತ್ತೆ ತುಳಿಯುತ್ತಾನೆ. ಆತನನ್ನು ಹಿಡಿದುಕೊಳ್ಳುತ್ತಾರೆ. ಮತ್ತೆ ಕತ್ತಿ, ನವಿಲುಗರಿ ಹಿಡಿದವರು 'ಇಂಬುಂಬೋಲ ಇಮೋಂದೀನ್' ಎಂದು ಕೂಗುತ್ತಾ ಬೆಂಕಿ ತುಳಿಯುತ್ತಾರೆ. ಉಳಿದವರಿಗೂ ಬೆಂಕಿ ತುಳಿಯಲು ಅವಕಾಶ ಮಾಡಿಕೊಡಲಾಗುತ್ತದೆ. ಹರಕೆ ಕಟ್ಟಿದವರು, ದೇವರು ಮೈ ಮೇಲೆ ಬಂದಂತೆ ನಟಿಸುವವರು. ಹುಡುಗಾಟಕ್ಕೆ ಬೆಂಕಿ ತುಳಿಯಲೆಂದು ಬಂದವರು, ಗಾಢ ನಂಬಿಕೆಯಿಟ್ಟವರು - ಎಲ್ಲರೂ ಯಾವುದೇ ಜನಾಂಗದವರು, ಬೆಂಕಿ ತುಳಿಯುತ್ತಾರೆ, ಯಾರಿಗೂ ಬಹಳ ಹೊತ್ತು ತುಳಿಯಲು ಬಿಡುವುದಿಲ್ಲ. ಎಲ್ಲರೂ ತುಳಿದ ನಂತರ ತಕ್ಷಣ ಆ ಗುಂಡಿಯನ್ನು ಮುಚ್ಚಲಾಗುತ್ತದೆ. ದೇವರನ್ನು ಮಸೀದಿಯ ಪಕ್ಕ ಇಳಿಸಿ ಎಲ್ಲರೂ ಮನೆಗೆ ಬರುತ್ತಾರೆ.

ಮನೆಗೆ ಬಂದು ಕೈಕಾಲು ತೊಳೆದು ಉಣ್ಣುತ್ತಾರೆ. ಕೆಲವರು ಆಗಲೇ ಕುರಿ ಅಥವಾ ಮೇಕೆಯನ್ನು ಕೊಯ್ದು ಮಾಂಸ ಬೇಕೆಂದವರಿಗೆ ಕೊಡುತ್ತಿರುತ್ತಾರೆ. ಬೇಕಾದವರು ಮೊದಲೇ ಯಾರು ಕೊಯ್ಯುತ್ತಾರೆಂದು ತಿಳಿದು ತಮಗೆ ಇಷ್ಟು ಬೇಕೆಂದು ನಿಗದಿ ಮಾಡಿರುತ್ತಾರೆ. ಮಾಂಸ ತಂದುಕೊಟ್ಟು ಗಂಡಸರು ವಿವಿಧ ವೇಷಗಳನ್ನು ಧರಿಸಿಕೊಂಡು ಊರ ನಡುವೆ ತಿರುಗಾಡಿ ಜನರನ್ನು ರಂಜಿಸುತ್ತಾರೆ.

ಪಿಂಜಾರರು ಈ ವೇಷ ಹಾಕುವ ಕಲೆಯಲ್ಲಿ ನಿಜಕ್ಕೂ ನಿಪುಣರು. ಬುಡುಬುಡಿಕೆಯವರು, ರಾಮುಗುಂಡಾಡಿ, ಬೇಡರ ಕಣ್ಣಪ್ಪ, ಹುಲಿವೇಷ, ಊರಿಮಾರಮ್ಮ ಮುಂತಾಗಿ ಹತ್ತಾರು ರೀತಿಯ ವೇಷ ಧರಿಸಿ ಊರ ತುಂಬ ತಿರುಗಾಡುತ್ತಾರೆ. ಮನೆಮನೆಗೆ ಹೋಗಿ ಬುಡುಬುಡಿಕೆ ಅಲ್ಲಾಡಿಸಿ ಆ ಮನೆಯವರ ಭವಿಷ್ಯ ಹೇಳುತ್ತಾರೆ. ಬೇಡರ ಕಣ್ಣಪ್ಪನ ವೇಷದವರು ಹಲಗೆ ಬಡಿಯುವವರನ್ನು ಜೊತೆಯಲ್ಲಿಟ್ಟುಕೊಂಡು ಕುಣಿಯುತ್ತಾ ಊರು ಸುತ್ತುತ್ತಾರೆ. ಹೀಗೆ ವೇಷ ಹಾಕಿಕೊಂಡು ಬಂದವರಿಗೆ ಊರಿನ ಜನ ತಮಗಿಷ್ಟವಾದವರಿಗೆ ತಿಳಿದಷ್ಟು ಹಣವನ್ನು ಮುಯ್ಯಿ ಮಾಡುತ್ತಾರೆ. ಊರ ಬಾಕಲು ಎಂದೇ ಕರೆಯುವ ಊರ ನಡುವಿನ ಜಾಗದಲ್ಲಿ, ಎಲ್ಲರೂ ಸಾಮಾನ್ಯವಾಗಿ ಸೇರುವ ಜಾಗ, ಈ ವೇಷಧಾರಿಗಳು ಹೆಚ್ಚು ಸಮಯವನ್ನು ಕಳೆಯುತ್ತಾರೆ. ವೇಷದೊಂದಿಗೆ ಅಷ್ಟೇ ವಿನೋದವಾಗಿ ಮಾತಾಡಿ ಜನರನ್ನು ಲವಲವಿಯಿಂದಿಡುತ್ತಾರೆ. ಅತ್ಯಂತ ಕಲಾತ್ಮಕ ದೃಷ್ಟಿಯಿಂದಲೂ, ಮನೋರಂಜನೆಯ ದೃಷ್ಟಿಯಿಂದಲೂ ಪಿಂಜಾರರು ಮತ್ತು ಎಲ್ಲ ಜನಾಂಗದವರು ತರುವ ವೇಷಗಳನ್ನು ಅಧ್ಯಯನ ಮಾಡುವುದು ಸಾಧ್ಯವಿದೆ. ವಿಚಿತ್ರವೆಂದರೆ ಮುಸ್ಲಿಮರೇ ಈ ಯಾವುದರಲ್ಲೂ ಭಾಗವಹಿಸುವುದಿಲ್ಲ. ಕೆಲವು ಊರುಗಳಲ್ಲಂತೂ ಪಿಂಜಾರರಿಗೆ ಹೀಗೆ ಮಾಡಬಾರದೆಂದು ಮುಸ್ಲಿಮರು ಬಯ್ದು ಹೇಳುತ್ತಾರೆ. ಯಾರು ಏನು ಹೇಳಿದರೂ ವರ್ಷವರ್ಷಕ್ಕೂ ಹೆಚ್ಚು ಹೆಚ್ಚು ಸಂಭ್ರಮ, ಆಸಕ್ತಿಯಿಂದ ಪಿಂಜಾರರು ಈ ಹಬ್ಬವನ್ನು ಮಾಡಿಯೇ ತೀರುತ್ತಾರೆ. ಆ ಸಂಸ್ಕೃತಿಯನ್ನು ಉಳಿಸಿಕೊಳ್ಳಲು ಮುಸ್ಲಿಮರು ಪಿಂಜಾರರೊಂದಿಗೆ ಸಹಕರಿಸುವುದನ್ನು ಅವರು ಬಯಸುತ್ತಾರೆ. ಈ ವೇಷಗಳನ್ನು ತರುವುದು. ದೇವರನ್ನು ಹೊತ್ತು ಕುಣಿಯುವುದೆಲ್ಲಾ ಇಸ್ಲಾಂ ಧಾರ್ಮಿಕ ಆಚರಣೆಗೆ ವಿರುದ್ಧವಾದುದೆಂದು ಮುಸ್ಲಿಮರು ಹೇಳುತ್ತಾರೆ. ಅಲ್ಲದೆ ಮೊಹರಂ ಕಡೆಯ ದಿನ, ದೇವರು ಸಾಯುವ ದಿನ, ದುಃಖ ಪಡಬೇಕಾದ ಸಮಯದಲ್ಲಿ ಸಂಭ್ರಮದಿಂದ ಕುಣಿಯುತ್ತಾರೆ ಈ ಜನ. ಇವರಿಗೆ ಧರ್ಮದ ಬಗ್ಗೆ ಜ್ಞಾನ ಇದ್ದರಲ್ಲವೇ ? ಏ ಲದಾಫಾಂಕು ಕೋನ್ ಬೋಲ್ತ? ಎಂದಂದುಕೊಂಡು ಮುಸ್ಲಿಮರು ಹೇಳುವಷ್ಟು ಹೇಳಿ ಸುಮ್ಮನಾಗುತ್ತಾರೆ. ಕೆಲವು ಊರುಗಳಲ್ಲಿ ಪಿಂಜಾರರಿಗಿಂತ ಕಡಿಮೆ ಸಂಖ್ಯೆಯ ಮುಸ್ಲಿಮರಿರುವ ಊರುಗಳಲ್ಲಿ ಮುಸ್ಲಿಮರು ಪಿಂಜಾರರಿಗೇ ಹೊಂದಿಕೊಂಡು ಅವರಂತೆಯೇ ಈ ಹಬ್ಬದಲ್ಲಿ ಭಾಗವಹಿಸುತ್ತಾರೆ.

ವೇಷ ಹಾಕುವುದರ ಜೊತೆಜೊತೆಗೆ ಕತ್ತಿವರಸೆಯಲ್ಲಿ ನಿಪುಣರಾದವರು ಕತ್ತಿ ತಿರುಗಿಸುತ್ತಾರೆ. ಕೆಲವು ಊರುಗಳಲ್ಲಿ ಪಿಂಜಾರರು ಕತ್ತಿ ತಿರುಗಿಸುವುದನ್ನು ನೋಡಿದರೆ ಆಶ್ಚರ್ಯ, ಭಯ ಒಟ್ಟಿಗೇ ಉಂಟಾಗುತ್ತವೆ. ಎರಡೂ ಕೈಯಲ್ಲಿ ಎರಡು ಉದ್ದನೆಯ ಕತ್ತಿಗಳನ್ನು ಹಿಡಿದುಕೊಂಡು ಜೋರಾಗಿ ಮೈ ಸುತ್ತಿಸುತ್ತಾ ಹೆಜ್ಜೆ ಹಾಕುತ್ತಾ ಕತ್ತಿ ತಿರುಗಿಸುವ ಚಮತ್ಕಾರಿಕೆಯನ್ನು ನೋಡಿದರೆ ಎಂತಹವರಿಗೂ ಪಿಂಜಾರರ ಈ ಕಲೆಯ ಬಗ್ಗೆ ಪ್ರೀತಿ, ಮೆಚ್ಚುಗೆ ಹುಟ್ಟುತ್ತದೆ. ಜನ ಭಯ, ಕುತೂಹಲದಿಂದ ಹಿಂದು ಹಿಂದಕ್ಕೆ

ಸರಿದು ಕತ್ತಿವರಸೆಯನ್ನು ನೋಡುತ್ತಾರೆ. ಈ ನಡುವೆ ಪಿಂಜಾರ ಹೆಂಗಸರಿಗೆ ವಿಪರೀತ ಕೆಲಸ. ಕಿಚುಡಿ, ಚೋಂಗಿ, ಶರಬತ್ತು, ಮಾಂಸದ ಸಾರು, ಅನ್ನ ಹೀಗೆ ಹಲವಾರು ರೀತಿಯ ಅಡಿಗೆ ಮಾಡುತ್ತಲೇ ಮನೆಯ ಹತ್ತಿರ ಬಂದ ವೇಷಧಾರಿಗಳನ್ನು ಕಂಡು ಮಾತನಾಡಿಸಿ ಮನರಂಜನೆ ಪಡೆಯುತ್ತಾರೆ. ದನಕರುಗಳಿದ್ದವರು ಅವುಗಳ ಬಗ್ಗೆ ಅವತ್ತು ನಿಗಾವಹಿಸುವುದು ಕಡಿಮೆ.

ಸಂಜೆಯಾಗುತ್ತಿದ್ದಂತೆ ಹೆಂಗಸರು, ಗಂಡಸರಾದಿಯಾಗಿ ಮಸೀದಿಯ ಹತ್ತಿರ ಅಥವಾ ಊರಿನ ನಡುವೆ (ಊರುಬಾಕಲು) ಸೇರುತ್ತಾರೆ. ಇಡೀ ಊರಿನ ಜನ ಅವರಿವರೆನ್ನದೆ ಕಿಕ್ಕಿರಿದು ಅಲ್ಲಿ ಸೇರುತ್ತಾರೆ. ಪ್ರತಿವರ್ಷ ಕಂಚಿಗೊಲ್ಲರ ಆಟ ಆಡಿದ ನಂತರ ಕಾರ್ಣಿಕ ಹೇಳುವುದನ್ನು ನೋಡಲು ಈ ಜನ ಬರುತ್ತಾರೆ. ಈ ಬಗೆಯ ವಿಶಿಷ್ಟ ಆಚರಣೆ ಪಿಂಜಾರರಿರುವ ಎಲ್ಲ ಊರುಗಳಲ್ಲಿ ಇದ್ದಂತೆ ಕಾಣುವುದಿಲ್ಲ. ಆದರೆ ಇಂತಹ ವಿಶಿಷ್ಟ ಆಚರಣೆಯ ಪಿಂಜಾರರು ಇರುವ ಊರುಗಳೇನು ಕಡಿಮೆಯಿಲ್ಲ. ವಿವರಗಳಲ್ಲಿ ಒಂದಿಷ್ಟು ವ್ಯತ್ಯಾಸವಿರಬಹುದಾದರೂ ಆಚರಣೆಯ ಕಲೆ, ದೃಷ್ಟಿ ಒಂದೇ ಆಗಿರುವುದರಿಂದ ಅದರ ವಿವರಗಳನ್ನು ಇಲ್ಲಿ ಸಂಗ್ರಹವಾಗಿ ಕೊಡಲಾಗಿದೆ.

ಹುಡುಗಿಯರು ಕುಂಟಬಿಲ್ಲೆ ಆಡಲು ಗೆರೆ ಕೊರೆದುಕೊಳ್ಳುವಂತೆ, ಆದರೆ ಸ್ವಲ್ಪ ಉದ್ದನಾಗಿ, ದೊಡ್ಡದಾಗಿ ಗೆರೆ ಕೊರೆದು ಗೆರೆಯುದ್ದಕ್ಕೂ ನೀರು ಬಿಟ್ಟು ಬೂದಿ ಉದುರಿಸಲಾಗುತ್ತದೆ. ಗೆರೆಯ ಒಂದು ತುದಿಯಲ್ಲಿ ಬೇವಿನ ಸೊಪ್ಪು ಹಿಡಿದು ಝಳಪಿಸುತ್ತಾ ಋಷಿಭಂಗಿಯಲ್ಲಿ ಒಬ್ಬನು ಕುಳಿತಿರುತ್ತಾನೆ. ಗೆರೆಯ ಇನ್ನೊಂದು ತುದಿಯಿಂದ ಸೊಂಟಕ್ಕೆ ಹಣೆಗೆ ಬೇವಿನಸೊಪ್ಪು ಕಟ್ಟಿಕೊಂಡ ನಾಲ್ಕೈದು ಜನರು ಬಗ್ಗಿ ಋಷಿಭಂಗಿಯಲ್ಲಿ ಕುಳಿತವನ ಕಡೆ ಮೆಲ್ಲಗೆ ಬರುತ್ತಾರೆ. ಋಷಿಭಂಗಿಯ ಮನುಷ್ಯನ ಮುಂಭಾಗದಲ್ಲಿ ನಿಂಬೆಹಣ್ಣನ್ನು ಇಟ್ಟಿರುತ್ತಾರೆ. ಸೊಂಟಕ್ಕೆ ಸೊಪ್ಪು ಕಟ್ಟಿಕೊಂಡು, ತಲೆಯಲ್ಲೂ ಬೇವಿನಸೊಪ್ಪು ಸಿಕ್ಕಿಸಿಕೊಂಡೂ, ಕೈಯಲ್ಲೂ ಹಿಡಿದುಕೊಂಡು ಅವರು ಹತ್ತಿರ ಹತ್ತಿರ ಬರುತ್ತಿದ್ದಂತೆ ಋಷಿ ಹಿಡಿ ಬೂದಿಯನ್ನು ಅವರತ್ತ ಎಸೆದು ಹೂಂಕರಿಸುತ್ತಾನೆ. ತಕ್ಷಣ ಎದುರಿಗೆ ಬರುತ್ತಿದ್ದವರಲ್ಲಿ ಒಬ್ಬೊಬ್ಬರಾಗಿ ಹಿಂದೆ ಬೀಳುತ್ತಾರೆ. ಕೊನೆಗೊಬ್ಬ ಋಷಿಯ ಹೂಂಕಾರಕ್ಕೆ ಜಗ್ಗದೆ ಮಕಾಡೆ ಬಿದ್ದುಹೋಗಿ ಬಾಯಲ್ಲಿ ಆ ನಿಂಬೆಹಣ್ಣನ್ನು ಕಚ್ಚಿಕೊಳ್ಳುತ್ತಾನೆ. ಮಂಕುಬೂದಿಯ ಋಷಿ ಇಲ್ಲಿಗೆ ಸೋತಂತೆ. ಪಿಂಜಾರರು ಅತ್ಯಂತ ನಿಷ್ಠೆಯಿಂದ ಇದನ್ನು ಮಾಡುತ್ತಾರಾದರೂ ಯಾಕೆ ಮಾಡುತ್ತೀರಿ ? ಇದರ ಉದ್ದೇಶವೇನು ? ಇತ್ಯಾದಿ ಪ್ರಶ್ನೆಗಳಿಗೆ ಅವರಲ್ಲಿ ಉತ್ತರವಿಲ್ಲ. ಸಿಗುವ ಒಂದೇ ಉತ್ತರ 'ಮೊದಲಿನಿಂದ ಮಾಡಿಕೊಂಡು ಬಂದಿದ್ದಾರೆ, ನಾವೂ ಮಾಡುತ್ತೀವಿ' ಎನ್ನುವುದು. ಇದಕ್ಕೆ ಪಿಂಜಾರರು ಕಂಚಿಗೊಲ್ಲರ ಆಟ ಎನ್ನುತ್ತಾರೆ. ಇದರ ಉದ್ದೇಶ ಮನರಂಜನೆ ಮಾತ್ರವಾಗಿರದೆ ಋಷಿ ಅಥವಾ ಮಂಕುಬೂದಿಯವ ಆಟವನ್ನು, ಶಕ್ತಿಯನ್ನು ಪರೀಕ್ಷಿಸುವ ಹಿನ್ನೆಲೆಯಲ್ಲಿ ಆತನ ಮಗಳನ್ನು ಮದುವೆಯಾಗುವ ಪಣದಿಂದ ಈ ಆಟ ಆಡುವುದಾಗಿ ತಿಳಿದು ಬರುತ್ತದೆ. ಆತನ ಮಗಳನ್ನು ಮದುವೆಯಾಗಲು ಹತ್ತಾರು ಜನರ ಸ್ಪರ್ಧೆಯಿದ್ದು ಅದರಲ್ಲಿ ಯಾವನು ಮಂತ್ರಿಸಿದ ನಿಂಬೆಹಣ್ಣನ್ನು ಬಾಯಲ್ಲಿ ಕಚ್ಚಿಕೊಳ್ಳುತ್ತಾನೋ ಅವಳಿಗೆ ಮಗಳನ್ನು ಕೊಡುವುದಾಗಿ ಆತ ಈ ಆಟ ಹೂಡುತ್ತಾನೆ. ಇದನ್ನು ಒಂದು ನಂಬಿಕೆಯ ಹಿನ್ನೆಲೆಯಲ್ಲಿ ಚಾಚೂತಪ್ಪದೆ ಪಿಂಜಾರರು ಪ್ರತಿವರ್ಷ ಈ ಹಬ್ಬದಲ್ಲಿ ಆಡುತ್ತಾರೆ. ಈ ಆಟ ಪಿಂಜಾರರ ಸಾಂಸ್ಕೃತಿಕ ನೆಲೆಯನ್ನು ಅತ್ಯಂತ ಸೂಕ್ಷ್ಮವಾಗಿ ತೋರುವಂತಿದೆ.

ಇದನ್ನೆಲ್ಲ ನಿಬ್ಬೆರಗಾಗಿ ನೋಡುತ್ತಿದ್ದಂತೆಯೇ ಜನರು ಇದ್ದಕ್ಕಿದ್ದ ಹಾಗೆ ಇದೇ ಜನರಿಂದ ಕೂಡಿದ ಮತ್ತೊಂದು ಕಾರ್ಯಕ್ರಮವನ್ನು ನೋಡಲು ಕಾತರರಾಗುತ್ತಾರೆ. ಹತ್ತಿಪ್ಪತ್ತು ಜನರು ತಲೆಗೆ, ಸೊಂಟಕ್ಕೆ ಬೇವಿನಸೊಪ್ಪು ಕಟ್ಟಿಕೊಂಡು, ಕೈಯಲ್ಲಿ ಬೇವಿನಸೊಪ್ಪು ಹಿಡಿದು ಮೇಲೆತ್ತಿ ಆಡಿಸುತ್ತಾ ಭಜನೆ ಮಾಡುತ್ತಾ (ಇದು ಸಾಮಾನ್ಯವಾಗಿ ಶಿವಭಜನೆಯಾಗಿರುತ್ತದೆ) ಕೆಂಪನೆಯ ಶಾಲಿನಂತಹ ವಸ್ತ್ರಗಳನ್ನು ಮುಚ್ಚಿಕೊಂಡ ವ್ಯಕ್ತಿಯನ್ನು ಕರೆತರುತ್ತಾರೆ. ಈತ ಪ್ರತಿವರ್ಷ 'ಕಾರ್ಣಿಕ' ಹೇಳುವವನಾಗಿರುತ್ತಾನೆ. ಅಥವಾ ಹಾಗೆ ಹೇಳುತ್ತಾ ನಡೆದುಕೊಂಡು ಬಂದ ಮನೆಯವನಾಗಿರುತ್ತಾನೆ. ಜನರಾಶಿಯ ನಡುವೆ ಈತ ಎಲ್ಲರಿಗೂ ಕಾಣುವಂತೆ ಏಣಿ ಹಾಕಿ ಅವನನ್ನು ಹತ್ತಿಸಿ ಏಣಿಯನ್ನು ಹಿಡಿದುಕೊಳ್ಳುತ್ತಾರೆ. ಆತ ತನ್ನ ತೆರೆ ತೆರೆದು ದಕ್ಷಿಣಾಭಿಮುಖನಾಗಿ ನಿಂತು ಸ್ವಲ್ಪ ಹೊತ್ತು ಕಣ್ಣುಮುಚ್ಚಿ ಆಲೋಚಿಸಿದವನಂತೆ ಮಾಡಿ ಕಣ್ಣು ತೆರೆದು ಕೈಯಲ್ಲಿದ್ದ ಚಂಬಿನಿಂದ (ಆತನನ್ನು ಕರೆತರುವಾಗಲೇ ಹತ್ತಿರದ ಬಾವಿಗೆ ಹೋಗಿ ಒಂದು ಚಂಬು ನೀರನ್ನು ಆತನ ಕೈಗೆ ಕೊಟ್ಟಿರುತ್ತಾರೆ) ನೀರನ್ನು ಕೆಳಕ್ಕೆ ಚಿಮುಕಿಸುತ್ತಾನೆ - ಅಥವಾ ಬುಡುಬುಡು ಹುಯ್ಯುತ್ತಾನೆ. ನೀರನ್ನು ಚಿಮುಕಿಸಿದರೆ ಈ ಬಾರಿ ಮಳೆ ಕಡಿಮೆ, ಬುಡುಬುಡು ಹುಯ್ದರೆ ಮಳೆ ಜಾಸ್ತಿ ಎಂದು ಜನ ಭಾವಿಸುತ್ತಾರೆ. ಕೆಲವು ಸಲ ಆತ ಎರಡು ಪ್ರಾಸದ ಮಾತುಗಳನ್ನು ಆಡುತ್ತಾನೆ. ನೀರನ್ನು ಚಿಮುಕಿಸಿದಾಗ ಈ ವರ್ಷದ ಮಳೆಗಾಲ ಚೆನ್ನಾಗಿ ನಡೆಸುವುದಿಲ್ಲ ಎಂದು ಜನರೇ ತಿಳಿದುಕೊಳ್ಳುತ್ತಾರೆ. ತಕ್ಷಣ ಆತ ಅದಕ್ಕೆ ಅನುಗುಣವಾಗಿ 'ಸರ್ಕಾರಕ್ಕೆ ಕುತ್ತು, ರೈತರಿಗೆ ಆಪತ್ತು' ಎನ್ನುತ್ತಾನೆ. ಈ ಮಾತುಗಳು ಒಟ್ಟಾರೆ ಒಂದು ವರ್ಷದಲ್ಲಿ ಜನ ಎದುರುನೋಡಬಹುದಾದ ಭವಿಷ್ಯವನ್ನೇ ಹೇಳುವಂತಿರುತ್ತವೆ. ಮುಖ್ಯವಾಗಿ ಆ ವರ್ಷದಲ್ಲಿ ಆಗಬಹುದಾದ ಮಳೆ-ಬೆಳೆಯನ್ನು, ಜನಕ್ಕೆ ಒದಗಬಹುದಾದ ಆಪತ್ತು-ವಿಪತ್ತುಗಳನ್ನು ಅವನ ಮಾತುಗಳು ಸೂಚಿಸುತ್ತವೆ. ಭವಿಷ್ಯದ ಕುರಿತಾಗಿ ಪಿಂಜಾರರಲ್ಲಿರುವ ನಂಬಿಕೆಯ ನೆಲೆಯನ್ನು ಈ ಸಂಪ್ರದಾಯ ಹೇಳುತ್ತದೆ. ಈ ಕಾರ್ಣಿಕ ಹೇಳುವವನ ಆಗಿನ ಮಾತುಗಳು ನಿಜವಾಗುತ್ತವೆಂದು ಪಿಂಜಾರರು ನಂಬುತ್ತಾರೆ. ಆದರೆ ಹಾಗೆ ನಿಜವಾಗದೇ ಅವನು ಹೇಳಿದುದಕ್ಕಿಂತ ತದ್ವಿರುದ್ಧವಾದ ದಿನಮಾನಗಳನ್ನು ಕಂಡ ಉದಾಹರಣೆಗಳನ್ನು ಪಿಂಜಾರರೇ ಹೇಳುತ್ತಾರೆ. ಒಟ್ಟಿನಲ್ಲಿ ಒಂದು ಊರಿನ ಎಲ್ಲ ಜನಾಂಗದವರೂ ಆಸಕ್ತಿಯಿಂದ ಬಂದು ಭಾಗವಹಿಸಿ ನೋಡಿ, ಕೇಳಿ ಆನಂದಿಸುವಂತಹ ಈ ಆಚರಣೆ ಪಿಂಜಾರರ ಸಾಂಸ್ಕೃತಿಕ - ಸಾಮಾಜಿಕ ಬದುಕಿನ ಹಲವು ಬಗೆಗಿನ ವಿವರಗಳನ್ನು ಕೊಡುತ್ತದೆ. ಹೆಚ್ಚು ಕಡಿಮೆ ಜೋತಿಷ್ಯವನ್ನು ಕೇಳುವಂತೆಯೇ ಅವತ್ತು ಜನರೆಲ್ಲ ಕಾರ್ಣಿಕವನ್ನು ನಿಶ್ಯಬ್ದವಾಗಿದ್ದು ಕೇಳುತ್ತಾರೆ. ಒಂದು ಜನಾಂಗ ಅದೃಷ್ಟವನ್ನು ನಂಬುವುದರ ಮೂಲಕ ಮುಂದಾಗುವುದನ್ನು ತಿಳಿಯುವ ಕುತೂಹಲವನ್ನು, ಇಡೀ ಸಮಾಜದ ಆಶಾವಾದವನ್ನು ಈ ಆಚರಣೆ ವ್ಯಕ್ತಪಡಿಸುತ್ತದೆ. ಜೊತೆಗೆ ಹಿಂದೆ ವಿವರಿಸಿರುವ 'ನಂಬಿಕೆ'ಯ ಅವಲಂಬನೆಯಲ್ಲಿ ಬದುಕುತ್ತಿರುವ ಜನಾಂಗ 'ಅರಿವಿನ' ನೆಲೆಯಲ್ಲಿ ಬದುಕನ್ನು ರೂಪಿಸಿಕೊಳ್ಳುವುದಕ್ಕೆ ಬೇಕಾಗಿರುವ ಆರ್ಥಿಕ ಮತ್ತು ಶೈಕ್ಷಣಿಕ ಸವಲತ್ತುಗಳು ಇಲ್ಲದಿರುವುದೇ ಒಂದು ಸಂಸ್ಕೃತಿ ಅದರ ಎಲ್ಲ ಮೂಲ ಲಕ್ಷಣಗಳಲ್ಲಿ ಜೀವಂತವಾಗಿರುವುದಕ್ಕೆ ಕಾರಣವಾಗಿರುವಂತಿದೆ.

ಹಾಗೆ ಅವನು ಕಾರ್ಣಿಕ ಹೇಳಿದ ತಕ್ಷಣ ಏಣಿಯಿಂದ ಕೆಳಕ್ಕೆ ಬೀಳುತ್ತಾನೆ. ಕೆಳಗಿದ್ದವರು ಅವನನ್ನು ಹಿಡಿದುಕೊಳ್ಳುತ್ತಾರೆ.

ಈ ದಿನವನ್ನು ಪಿಂಜಾರರು 'ದೇವರನ್ನು ಮೈತೊಳೆಯುವ ದಿನ ಅಥವಾ ದೇವರು ಸಾಯುವ' ದಿನ ಎಂದು ಕರೆಯುತ್ತಾರೆ. ಕಾರ್ತಿಕ ಮುಗಿದ ತಕ್ಷಣ ದೇವರನ್ನು ಪ್ರತಿ ವರ್ಷದಂತೆ ನಿಗದಿಯಾದ ಒಂದು ಬಾವಿಯ ಹತ್ತಿರಕ್ಕೆ ಹೊತ್ತುಕೊಂಡು ಹೋಗುತ್ತಾರೆ. ಕಾರ್ತಿಕ ಕೇಳಿ ಮನೆಗೆ ಬಂದವರೇ ಜನ ಮನೆಗೊಬ್ಬರಂತೆ ಚೋಂಗಿ, ಬುತ್ತಿ, ಚಿಕ್ಕದೊಂದು ಗಿಂಡಿ ಅಥವಾ ಚಂಬನ್ನು ತಟ್ಟೆಯಲ್ಲಿಟ್ಟುಕೊಂಡು ದಸ್ತರಖಾನಿ ಮುಚ್ಚಿಕೊಂಡು ದೇವರನ್ನು ಒಯ್ದ ಬಾವಿಯ ಹತ್ತಿರ ಹೋಗುತ್ತಾರೆ. ಅಲ್ಲಿ ದೇವರನ್ನು ಇಳಿಸಿ, ಬಾವಿಯಿಂದ ದೊಡ್ಡದೊಂದು ಕೊಡಪಾನದಲ್ಲಿ ನೀರನ್ನೆಳೆದುಕೊಂಡು ದೇವರ ಮುಂದಿಟ್ಟು ಮುಲ್ಲಾ ಕುಳಿತಿರುತ್ತಾನೆ. ಎಲ್ಲರೂ ತೆಗೆದುಕೊಂಡು ಹೋದ ಚೋಂಗಿ (ಪಿಂಜಾರರು ಈ ಹಬ್ಬದಲ್ಲಿ ವಿಶೇಷವಾಗಿ ಮಾಡುವ ಆಹಾರ, ಗೋಧಿ ಹಿಟ್ಟು ಕಲಸಿ ಚಿತ್ರವಿರುವ ಕಲ್ಲಿನ ಮೇಲೆ ಅಂಗೈಯಗಲದಷ್ಟು ಎಲೆಯನ್ನು ಉದ್ದುತ್ತಾರೆ. ಆ ಎಲೆಗಳನ್ನು ಹಂಚಿನಲ್ಲಿಟ್ಟು ಚಪಾತಿಯಂತೆ ಬೇಯಿಸಿ ಎಲೆಯ ಮೇಲೆ ತುರಿದ ಒಣಕೊಬರಿ, ಸಕ್ಕರೆ ಅಥವಾ ಪುಡಿಮಾಡಿದ ಬೆಲ್ಲ ಮತ್ತು ಕಸಕಸೆಯನ್ನು ಉದುರಿಸುತ್ತಾರೆ. ಉದುರಿಸಿದ ನಂತರ ಒಂದರ ಮೇಲೊಂದರಂತೆ ಇಟ್ಟು ತಿನ್ನಲು ಕೊಡುತ್ತಾರೆ) ಬುತ್ತಿಯ ತಟ್ಟೆಯನ್ನು ದಸ್ತರಖಾನಿ ತೆಗೆದು ತಾಬೂತಿನ ಮೇಲಿಡುತ್ತಾರೆ. ಮುಲ್ಲಾ ಎಲ್ಲರ ಎಡೆಗಳನ್ನು ಒಂದೇ ಸಲಕ್ಕೆ 'ಓದಿಕೆ' ಮುಗಿಸುತ್ತಾನೆ. ನಂತರ ಜನ ತಾವು ತಂದಿದ್ದ ಗಿಂಡಿಯಲ್ಲಿ ನೀರು ತೆಗೆದುಕೊಳ್ಳಲು ನೂಕು ನುಗ್ಗಲು ಮಾಡುತ್ತಾರೆ. ಮುಲ್ಲಾ ತನ್ನ ಬಳಿಯಿಟ್ಟಿದ್ದ ತುಂಬಿದ ಕೊಡಪಾನದಿಂದ ಎಲ್ಲರಿಗೂ ನೀರು ಕೊಡುತ್ತಾನೆ. ಆ ನೀರು ಸಾಲದು ಬಂದರೆ ಮತ್ತೆ ಬಾವಿಯಿಂದ ಎಳೆದುಕೊಳ್ಳಲಾಗುತ್ತದೆ. ಈ ಕೆಲಸವನ್ನು ಮುಲ್ಲಾನೇ ಮಾಡುತ್ತಾನೆ. ನೀರು ಪಡೆದ ಜನ ತಾವು ತಂದಿದ್ದ ಚೋಂಗಿ ಬುತ್ತಿಯಲ್ಲಿ ಮುಲ್ಲಾನಿಗೂ ಕೊಟ್ಟು, ಬಂದಿದ್ದ ಜನರಿಗೆಲ್ಲ ಹಂಚಿ ತಾವು ತಿಂದು ನೀರನ್ನು ಮಾತ್ರ ಜೋಪಾನವಾಗಿ ಮನೆಗೆ ತರುತ್ತಾರೆ. ಆ ನೀರನ್ನು ಮನೆಯಲ್ಲಿರುವ ಎಲ್ಲರಿಗೂ ಹಂಚಿ ಕುಡಿಸಲಾಗುತ್ತದೆ. ದೇವರ ಮೈತೊಳೆದ ನೀರು ಪವಿತ್ರವಾದ್ದರಿಂದ ಕುಡಿಯಬೇಕು ಎನ್ನುವುದು ಅವರ ನಂಬಿಕೆ. ನಂತರ ಎಲ್ಲರೂ ಚೋಂಗಿ, ಬುತ್ತಿ ಮಾಂಸದ ಸಾರು ಊಟ ಮಾಡಿ ಎಲೆ ಅಡಿಕೆ ಹಾಕಿಕೊಂಡು ನಿಧಾನಕ್ಕೆ ಊರು ಬಾಕಲಿನಲ್ಲಿ ಅಂದರೆ ಮಸೂತಿಯ ಹತ್ತಿರ ಸೇರತೊಡಗುತ್ತಾರೆ. ಈ ರಾತ್ರಿ ಪರವೂರಿನಿಂದ ಕರೆಸಿದ ಸವಾಲು ಪದ ಹೇಳುವವರು ಮತ್ತು ಆಯಾ ಊರಲ್ಲಿ ಕೂಡ ಹೇಳಬಲ್ಲವಂತಹವರಿಂದ ಪದ ಹೇಳಿಸಲಾಗುತ್ತದೆ. ಇದು ಮೊದಲೇ ವಿವರಿಸಿದ ಹಾಗೆ ತೋಡಿಹಾಕಿ ತೋಡಿ ಬಿಡಿಸುವ ಪದಗಳ ಗಾಯನ, ಮುಖ್ಯವಾಗಿ ಧಾರ್ಮಿಕ ಶರಣರನ್ನು, ಧಾರ್ಮಿಕ ಬದುಕನ್ನು, ಆಧ್ಯಾತ್ಮವನ್ನು ಕುರಿತಂತೆ, ಪುರಾಣ ಪುಣ್ಯ ಕತೆಗಳನ್ನು ಹೇಳಿಸುವಂತೆಯೇ ಇಡೀ ರಾತ್ರಿ ಈ ಸಮಾರಂಭ ನಡೆಯುತ್ತದೆ. ದೇವರು ಸತ್ತಿದ್ದಾನೆ. (ದೇವರನ್ನು ಮಸೂತಿಯ ಹೊರಗಿಟ್ಟು ಅದರ ಪಕ್ಕದಲ್ಲೇ ಈ ಕಾರ್ಯಕ್ರಮ ನಡೆಯುತ್ತದೆ) ದೇವರ ಪವಿತ್ರ ಸಾವನ್ನು ಆತನ ನೆನಪು, ಕೀರ್ತಿ, ಭಜನೆಗಳ ಮೂಲಕ ಆಚರಿಸುವುದು ವಿಶೇಷವಾಗಿದೆ. ಪಿಂಜಾರರು ಈ ಹಬ್ಬವನ್ನು ಅತ್ಯಂತ ಖುಷಿಯಿಂದ ಆಚರಿಸುತ್ತಿರುವುದು ಅವರ ಸಾಂಸ್ಕೃತಿಕ ವೈಶಿಷ್ಟ್ಯವನ್ನು ತೋರುತ್ತದೆ. ಮೂರ್ತರೂಪದ ದೇವರನ್ನು ಇಟ್ಟುಕೊಂಡೇ ಪಿಂಜಾರರು ಈ ಹಬ್ಬವನ್ನು ಆಚರಿಸುತ್ತಾರೆ. ಮುಸ್ಲಿಮರು ಪಿಂಜಾರರನ್ನು ಇಷ್ಟಪಡದಿರುವುದಕ್ಕೆ ಇದೂ ಒಂದು ಕಾರಣವಾಗಿರುವಂತಿದೆ.

ಇಲ್ಲಿಂದ ಒಂದು ತಿಂಗಳ ಕಾಲವನ್ನು ಪಿಂಜಾರರು 'ಕೆಟ್ಟ ತಿಂಗಳು' ಅಥವಾ 'ಸಫರ್' ಎಂದು ಕರೆಯುತ್ತಾರೆ. ಈ ತಿಂಗಳಲ್ಲಿ ಮದುವೆ ಮುಂತಾದ ಶುಭಕಾರ್ಯಗಳನ್ನು ಅವರು ಮಾಡುವುದಿಲ್ಲ.

ಮೊಹರಂ ಹಬ್ಬವನ್ನು ಮುಸ್ಲಿಮರು - ಹಿಂದೂಗಳು ಒಟ್ಟಾಗಿ ಆಚರಿಸುವ ಇಂಥ ನೂರಾರು ಉದಾಹರಣೆಗಳು ಕರ್ನಾಟಕದಲ್ಲಿ ಸಿಗುತ್ತವೆ. ಮಾಧ್ಯಮಗಳು ಪಿಂಜಾರರನ್ನು ಮುಸ್ಲಿಮರೆಂದೇ ಪ್ರಚಾರ ಮಾಡುವುದರಿಂದ ಪಿಂಜಾರರು ಹಾಗೂ ಹಿಂದೂಗಳ ನಡುವಿನ ಸಾಮಾಜಿಕ ಸಂಬಂಧಗಳ ಬಗ್ಗೆ ಜನರಿಗೆ ತಿಳಿಯುವುದಿಲ್ಲ. ಆದರೆ ಮೊಹರಂ ಹಬ್ಬವನ್ನು ಪಿಂಜಾರರು ಮುಸ್ಲಿಮರೂ ಇಲ್ಲದ ಊರುಗಳಲ್ಲಿಯೂ ಬರೀ ಹಿಂದೂ ಬಾಂಧವರೇ ಸೇರಿಕೊಂಡು ಆಚರಿಸುವ ಉದಾಹರಣೆಗಳು ಸಿಗುತ್ತವೆ. ಧಾರ್ಮಿಕ ಮೂಲಭೂತವಾದಿಗಳಿಗೆ ಸಿಟ್ಟು ತರಿಸಬಹುದಾದ ಇಂಥ ನಿದರ್ಶನಗಳು ಉದಾರವಾದಿಗಳಿಗೆ ಹರ್ಷವುಂಟು ಮಾಡುತ್ತವೆ. ಅಂತಹದೊಂದು ಉದಾಹರಣೆ ಇಲ್ಲಿದೆ. 'ಗದಗ ಶಹರದಿಂದ ೧೫ ಕಿ.ಮೀ. ದೂರದಲ್ಲಿರುವ ಶ್ಯಾಗೋಟಿ ೨೫೦೦ ಜನಸಂಖ್ಯೆಯುಳ್ಳ ಗ್ರಾಮ. ಇರುವ ೪೦೦ ಮನೆಗಳಲ್ಲಿ ಒಂದೇ ಒಂದು ಮನೆಯಾಗಲಿ, ಒಬ್ಬ ಗ್ರಾಮಸ್ಥನಾಗಲಿ ಮುಸ್ಲಿಮನಲ್ಲ. ಆದರೂ ಈ ಗ್ರಾಮದಲ್ಲಿ ಮಸೀದಿ ಇದೆ. ಪ್ರತಿ ವರ್ಷವೂ ಇಲ್ಲಿನ 'ಮೊಹರಂ' ಹಬ್ಬವನ್ನು ಅತ್ಯಂತ ಭರ್ಜರಿಯಾಗಿ ಆಚರಿಸಲಾಗುತ್ತದೆ.

ಊರೊಳಗೆ ಎಲ್ಲ ಹಿಂದೂ ಹಬ್ಬಗಳ ಆಚರಣೆಯಂತೆ ಈ ಹಬ್ಬಕ್ಕೂ ಪಟ್ಟಿ ಹಾಕಿ (ಹಣ ಸಂಗ್ರಹಿಸಿ) ಮಸೀದಿಗೆ ಸುಣ್ಣ-ಬಣ್ಣ ಬಳಿಯುವವರಿಂದ ಹಿಡಿದು ಒಂದು ತಿಂಗಳ ಪೂರ್ವದಿಂದ ಮೊಹರಂ ಹಬ್ಬದ ತಯಾರಿ ನಡೆಯುತ್ತದೆ. ಮೊಹರಂ ಹಬ್ಬದ ಎಲ್ಲ ಧಾರ್ಮಿಕ ವಿಧಿ ವಿಧಾನಗಳನ್ನು ನೆರವೇರಿಸಲು ನೆರೆಯ ಚಿಕ್ಕಹಂದಿ ಗೋಳದ 'ಮುಕ್ತುಂಸಾಬ್' ಎಂಬ ಮುಲ್ಲಾ ಬರುತ್ತಾರೆ. ೩ ಕ್ವಿಂಟಾಲ್‌ಗೂ ಅಧಿಕ ಭಾರದ ಕಟ್ಟಿಗೆಯ ಡೋಲಿಯನ್ನು ಸಿಂಗರಿಸಿ ಇದರಲ್ಲಿ ದೇವರನ್ನು ಕೂಡಿಸುತ್ತಾರೆ. ಈ ಡೋಲಿಯನ್ನು ೮ ಜನ ಆದಿಬಣಜಿಗ ಜನಾಂಗದವರು ಊರು ಗೋಲಿನ ಸಹಾಯದಿಂದ ಹೊರುತ್ತಾರೆ.

ಪತ್ತಾ (ದೀವಟಿಗೆಯಂತಹ ವಸ್ತು) ಮತ್ತು ಉದ್ದನ್ (ದೂಪ ಹಾಕುವ ವಸ್ತು) ಅನ್ನು ವಾಲ್ಮೀಕಿ ಜನಾಂಗದವರು ಹಿಡಿಯುತ್ತಾರೆ. ಇನ್ನು ಏಳೆಂಟು ಕೈಗಳ ದೇವರುಗಳಿದ್ದು ಇವುಗಳನ್ನು ವಾಲ್ಮೀಕಿ ಹಾಗೂ ಕುರುಬ ಜನಾಂಗದವರು ಹಿಡಿದುಕೊಳ್ಳುತ್ತಾರೆ. ದೇವರು ಮಸೀದಿಯಿಂದ ಹೊರಟ ತಕ್ಷಣ ಅಕ್ಕ-ಪಕ್ಕದ ಮನೆಯವರೆಲ್ಲರೂ ದೇವರ ಮುಂದೆ ಕೊಡಗಳಿಂದ ನೀರು ಹಾಕಿ ಡೋಲಿ ಹೊತ್ತವರನ್ನು ಮತ್ತು ಕೈ ದೇವರು ಹಿಡಿದವರನ್ನು ಪಾದಮುಟ್ಟಿ ನಮಸ್ಕರಿಸುತ್ತಾರೆ. ಅನೇಕ ಭಕ್ತಾದಿಗಳು ದೇವರು ಹೊತ್ತವರ ಕೊರಳಲ್ಲಿರುವ ಜೋಳುಗೆಯಲ್ಲಿ ಕೊಬ್ಬರಿ, ಉತ್ತತ್ತಿ, ಕಲ್ಲುಸಕ್ಕರೆ, ಬೆಲ್ಲ, ಪುಟಾಣಿ, ಬೇಳೆ ಮುಂತಾದವುಗಳನ್ನು ಹಾಕಿ ನಮಸ್ಕರಿಸುತ್ತಾರೆ.

ಮೊಹರಂ ಹಬ್ಬದ ಮೊದಲ ದಿನ ಬೆಳಗಿನ ಜಾವ ಮಸೀದಿಯ ಮುಂದೆ ತೋಡಿದ ಗುಂಡಿಯಲ್ಲಿ ಅಗ್ನಿಕುಂಡದಲ್ಲಿ ದೇವರುಗಳನ್ನು ಹೊತ್ತವರು ಹಾಗೂ ಧಾರ್ಮಿಕ ಮನೋಭಾವನೆಯಿಂದ ಹರಕೆ ಹೊತ್ತವರು ಹಾಯ್ದು ಹೋಗುತ್ತಾರೆ. ಸಂದಲ ರಾತ್ರಿಯ ದಿನ (ಕತ್ತಲ ರಾತ್ರಿ) ಅಂದರೆ ನಾಲ್ಕನೇ ದಿನ ಗ್ರಾಮದ ಬಹುತೇಕಜನ ಸಕ್ರಿ ಓದಿಸೋದು (ಓದಿಕೆ), ಫಕೀರರಾಗುವುದು ಹಣ್ಣು, ಹೂ, ಧೂಪಗಳ

ಓದಿಕೆ 'ಚೊಂಗೆ' ಹಾಗೂ 'ಮದಾಲಿ'ಯ ಸಿಹಿ ತಿನಿಸುಗಳ ನೈವೇದ್ಯ ನಡೆಯುತ್ತದೆ. ಈ ಎಲ್ಲ ಧಾರ್ಮಿಕ ವಿಧಿ ವಿಧಾನಗಳಲ್ಲಿ ಗ್ರಾಮದ ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡದವರನ್ನೊಳಗೊಂಡು ಎಲ್ಲರೂ ಪಾಲ್ಗೊಂಡಿರುತ್ತಾರೆ.

ಮೊಹರಂ ಹಬ್ಬದ ೫ ದಿನಗಳ ಕಾಲ ಊರಿನಲ್ಲಿ ಸಂಪೂರ್ಣ ಹಬ್ಬದ ವಾತಾವರಣ ನಿರ್ಮಾಣಗೊಂಡಿರುತ್ತದೆ. ಈ ದಿನಗಳಲ್ಲಿ ಹೆಜ್ಜೆಯ ಮಜಲು, ಡೊಳ್ಳು ಕುಣಿತ ಸವಾಲ್ - ಜವಾಬ್ ಪದಗಳೊಂದಿಗೆ ರಿವಾಯ್ತು ಪದಗಳನ್ನು ಒಂದರ ಮೇಲೊಂದು ಹಾಡುತ್ತ ಕೋಲಾಟದೊಂದಿಗೆ ವೈಶಿಷ್ಟ್ಯಪೂರ್ಣ ಆಲವಿ ಹೆಜ್ಜೆಯನ್ನು ೩೦ ರಿಂದ ೫೦ ಜನರ ತಂಡ ತಂಡವಾಗಿ ತಾಳಕ್ಕೆ ತಕ್ಕಂತೆ ಹೆಜ್ಜೆ ಹಾಕುತ್ತಿರುತ್ತಾರೆ. ಇದರಲ್ಲಿ ಯುವಕರೇ ಹೆಚ್ಚು. ಹೀಗೆ ವಿಶೇಷಗಳು ನಡೆಯುತ್ತವೆ. ಅತ್ಯುತ್ತಮ ಹೆಜ್ಜೆಗಾರನಿಗೆ ಹೂಮಾಲೆ ಹಾಕಿ ಖುಷಿ ಮಾಡುವರು. ನೋಟುಗಳನ್ನು ಪಿನ್‌ಹಾಕಿ ಮಾಲೆಗೆ ಸೇರಿಸುವುದು. ಚುರುಮರಿ (ಮಂಡಕ್ಕಿ)ಯನ್ನು ತೂರುತ್ತಾರೆ. ಹೆಜ್ಜೆ ಹಾಕುವುದಕ್ಕೆ ಮತ್ತಷ್ಟು ಹುರಿದುಂಬಿಸುತ್ತಾರೆ.

ಕೊನೆಯ ದಿನ ಸಕಲ ವಾದ್ಯ ವೈಭವಗಳೊಂದಿಗೆ ಮೆರವಣಿಗೆಯಲ್ಲಿ ದೇವರು ಹೊಳೆಗೆ ಹೋಗುವುದು. ಅಂದರೆ ಪೈಗಂಬರರ ಮಕ್ಕಳಾದ ಹುಸೇನಿ - ಹುಸೇನಬಿಯರ ಬಲಿದಾನದ ಶೋಕಾಚರಣೆಯ ಸಂಕೇತವಾಗಿ ನೀಲಪ್ಪ ಗೌಡರ ತೋಟದ ಬಾವಿಯಲ್ಲಿ ಎಲ್ಲ ದೇವರನ್ನು ತೊಳೆದುಕೊಂಡು ಬರುವ ಮೂಲಕ ಮೊಹರಂ ಹಬ್ಬಕ್ಕೆ ಮಂಗಲ ಹಾಡಲಾಗುತ್ತದೆ.

ಲಿಂಗಾಯತರು ಮತ್ತು ವಾಲ್ಮೀಕಿ ಜನಾಂಗದವರೆ ಅಧಿಕ ಸಂಖ್ಯೆಯಲ್ಲಿರುವ ಈ ಗ್ರಾಮದಲ್ಲಿ ಯಾವುದೆ ತಂಟೆ ತಕರಾರುಗಳಿಲ್ಲದೆ ಶಾಂತಿಯುತವಾಗಿ ಮೊಹರಂ ಹಬ್ಬದ ಆಚರಣೆಯಾಗುತ್ತದೆ. ಮುಸ್ಲಿಮರಿಲ್ಲದೆ ಮೊಹರಂ ಆಚರಣೆ ಅತ್ಯಂತ ಸಂಭ್ರಮ ಸಡಗರದಿಂದ ನಡೆಯುತ್ತದೆ. ಪರಧರ್ಮ ಸಹಿಷ್ಣುತೆ, ಪರಧರ್ಮವನ್ನು ಪ್ರೀತಿಸುವ, ಪೂಜಿಸುವ, ಸುಮಧುರ ಮನೋಭಾವ ಭಕ್ತಿಗೆ ಹಿಡಿದ ಕನ್ನಡಿ ಈ ಶ್ಯಾಗೋಟಿಯ ಮೊಹರಂ. (ದಿ. 26-02-04ರ ಪ್ರಜಾವಾಣಿ, ಕರ್ನಾಟಕ ದರ್ಶನ, ಪುಟ-2, ಲೇಖನ : ಎಂ. ಮಂಜುನಾಥ ಬಮ್ಮನಕಟ್ಟಿ)

ಮೊಹರಂ ಹಬ್ಬದ ಆಚರಣೆಗಳಲ್ಲಿ ಊರಿಂದೂರಿಗೆ ಸ್ಥಳೀಯ ಜನಸಮುದಾಯದ ನಂಬಿಕೆಗಳಿಗನುಸಾರವಾಗಿ ಸಣ್ಣಪುಟ್ಟ ವ್ಯತ್ಯಾಸ ಕಂಡು ಬರುತ್ತದೆ. ಆದರೆ ಪ್ರಧಾನವಾಗಿ ಆಚರಣೆಯಲ್ಲಿರುವ ವಿವರಗಳನ್ನು ಇಲ್ಲಿ ದಾಖಲು ಮಾಡಲಾಗಿದೆ. ಈ ಹಬ್ಬದ ಆಚರಣೆಗಳಲ್ಲಿ ಮುಖ್ಯವಾಗಿ ಗಮನಿಸಬೇಕಾದುದೆಂದರೆ ಹಿಂದೂ-ಮುಸ್ಲಿಂ ಸಮುದಾಯಗಳ ಕುತೂಹಲಕರ ಸಹಭಾಗಿತ್ವ. ಇದನ್ನು ಭಾರತದಾದ್ಯಂತ ಗಮನಿಸಬಹುದಾಗಿದೆ. ಹಿಂದೂ-ಮುಸ್ಲಿಂ ಸಮುದಾಯಗಳ ನಡುವೆ ಧಾರ್ಮಿಕ ಭಿನ್ನಾಭಿಪ್ರಾಯಗಳಿದ್ದಾಗ್ಯೂ ಈ ಎರಡು ಸಮುದಾಯಗಳ ಸಾಮಾಜಿಕ ಜೀವನಕ್ರಮದಲ್ಲಿ ವ್ಯಾವಹಾರಿಕ ಸಹಭಾಗಿತ್ವದಿಂದ ಉಂಟಾಗುವ ಆತಂಕದ ಹಿನ್ನೆಲೆಯಲ್ಲಿ ಗಮನಿಸಿದರೆ ಧರ್ಮಾಚರಣೆಗಳ ಸಂದರ್ಭದ ಉದ್ರೇಕ ತೀವ್ರತರದ್ದಾಗಿದೆ. ಭಾರತದಂತಹ ಸಾಮಾಜಿಕ ಪರಿಸರದಲ್ಲಿ ಇಸ್ಲಾಂ ಹಿನ್ನೆಲೆಯ ಆಚರಣೆಗಳನ್ನು ಸದಾ ಅನುಮಾನದಲ್ಲಿ, ಇಲ್ಲಿನ ನಂಬಿಕೆಗಳಿಗೆ ವಿರುದ್ಧವಾದುದು

ಎಂಬಂತಹ ನೆಲೆಯಲ್ಲಿ ನೋಡಲಾಗುತ್ತಿರುವುದು ಸುಳ್ಳೇನಲ್ಲ. ಈ ಕಾರಣದಿಂದ ಉಂಟಾಗುವ ಧಾರ್ಮಿಕ - ಸಾಮಾಜಿಕ ಸಂಘರ್ಷ ರಾಜಕೀಯವಾಗಿಯೂ ಈ ಎರಡು ಸಮುದಾಯಗಳನ್ನು ಬೇರ್ಪಡಿಸುವ ನಿಟ್ಟಿನಲ್ಲಿ ಕೆಲಸ ಮಾಡುತ್ತದೆ. ಆದ್ದರಿಂದಲೇ ಪ್ರಗತಿಪರ ವಿಚಾರಗಳ ನೆಲೆಗಟ್ಟು ಈ ಜನವರ್ಗಗಳ ಯಾವುದೇ ಬಗೆಯ ಸಂಯೋಗವನ್ನು ಹಾರ್ದಿಕವಾಗಿ ಸ್ವಾಗತಿಸುತ್ತದೆ. ಇವರ ನಡುವಿನ ಯಾವುದೇ ಆಚರಣೆ ಮತ್ತು ಸಂಬಂಧಗಳಿಗೆ ಹೆಚ್ಚು ಪ್ರಚಾರ ಕೊಡುತ್ತ ಇವುಗಳ ಮಾದರಿ ನಡವಳಿಕೆಯನ್ನು ಸೆಕ್ಯುಲರ್ ಎಂದು ತೀರ್ಮಾನಿಸುತ್ತದೆ. ಮೊಹರಂ ಹಬ್ಬದ ಸಂದರ್ಭದಲ್ಲಿ ಈ ಸಮುದಾಯಗಳು ತೋರುವ ಭಾವನಾತ್ಮಕ ಸಮ್ಮಿಲನವನ್ನು ಆಚರಣೆಗಳ ಹೊರರೂಪದಲ್ಲಿ ಗ್ರಹಿಸುವ ನೆಲೆಯಿದು. ಇಸ್ಲಾಂ ಧರ್ಮ ಆಳರಸರ ಮೂಲಕ ಭಾರತಕ್ಕೆ ಬಂದದ್ದು ಎಂಬ ತಪ್ಪು ಗ್ರಹಿಕೆಯಿಂದಾಗಿ ಹಿಂದೂ ಸಮುದಾಯ ಇಡೀ ಇಸ್ಲಾಂ ಧರ್ಮಾನುಯಾಯಿಗಳನ್ನು ಸಂಶಯಿಸುವಂತಾದುದರ ಹಿನ್ನೆಲೆಯಲ್ಲಿ ಸೆಕ್ಯುಲರಿಸಂನ್ನು ನೋಡಬೇಕಿದೆ. ಸೂಫಿಗಳ ಮೂಲಕ ಇಸ್ಲಾಂ ಭಾರತಕ್ಕೆ ಬಂದದ್ದು ಮತ್ತು ಮುಸ್ಲಿಂ ಆಳರಸರು ತಮ್ಮ ರಾಜಕೀಯ ಕಾರಣಗಳಿಗಾಗಿ ಈ ಸಂದರ್ಭವನ್ನು ಬಳಸಿಕೊಂಡದ್ದು ಭಾರತೀಯ ಇತಿಹಾಸ ರಚನಾಕಾರರ ದೃಷ್ಟಿಯಲ್ಲಿ ನಿರ್ಲಕ್ಷ್ಯಕ್ಕೆ ಒಳಗಾಗಿಬಿಟ್ಟಿತು. ಹೀಗಾಗಿಯೇ ಸೂಫಿಗಳು ಮತ್ತು ಭಾರತೀಯ ಅನುಭಾವಿಗಳ ಒಡನಾಟದಿಂದ ಸಾಮರಸ್ಯದ ಬದುಕನ್ನು ಅದರ ಒಳರಚನಾಕ್ರಮದಲ್ಲಿ ಗ್ರಹಿಸದೆ ಕೇವಲ ಹೊರರೂಪಗಳ ನೆಲೆಯಲ್ಲಿ ಗ್ರಹಿಸುವ ರೀತಿ ಬೆಳೆದು ಬಂದಿತು. 'ಭಾರತದ ರಾಜಕಾರಣದಲ್ಲಿ ಕೋಮುವಾದ ಬೆಳೆಯುತ್ತಿದ್ದಂತೆ, ಪತ್ರಿಕೋದ್ಯಮದಲ್ಲಿರುವ ಪ್ರಗತಿಪರ ಸೆಕ್ಯುಲರ್ ದನಿಗಳು ಕ್ರಿಯಾಶೀಲಗೊಂಡವು. ಅವು ಕೋಮು ಸಾಮರಸ್ಯದ ನಿದರ್ಶನಗಳನ್ನು ನಿಧಿ ಹುಡುಕುವಂತೆ ಹುಡುಕುತ್ತ ವರದಿ ಮಾಡತೊಡಗಿದವು. 'ಹಿಂದೂ' ಸಂತನು 'ಮುಸ್ಲಿಂ' ರಿವಾಜುಗಳನ್ನು ಮಾಡುತ್ತಿದ್ದರೆ ಮುಸ್ಲಿಂ ಸಂತನಿಗೆ ಹಿಂದೂ ಶಿಷ್ಯರಿದ್ದರೆ, ಒಂದು ಧರ್ಮದ ದೈವಕ್ಕೆ ಇನ್ನೊಂದು ಧರ್ಮದ ಭಕ್ತರು ನಡೆದುಕೊಳ್ಳುತ್ತಿದ್ದರೆ ಸಾಕು, ಅದು ಧಾರ್ಮಿಕ ಸಾಮರಸ್ಯ ಆಗಿಬಿಡುತ್ತದೆ. ಮೂಲತಃ ಹಿಂದೂ-ಮುಸ್ಲಿಂ ಎಂಬ ಪರಿಭಾಷೆಯೆ ಕೋಮುವಾದಿಯಾದುದು. ಅದು ಜನರನ್ನು ಅವರ ಬಾಳಿನ ಸಂಸ್ಕೃತಿಯ ನೆಲೆಯಲ್ಲಿ ನೋಡದೆ ಧಾರ್ಮಿಕ ಗುರುತುಗಳ ಹಿನ್ನೆಲೆಯಲ್ಲಿ ನೋಡುತ್ತದೆ. ಎಂತಲೇ ಅದಕ್ಕೆ ಗೋವಿಂದಭಟ್ಟ - ಶಿಶುನಾಳರ ಗುರುಶಿಷ್ಯತ್ವ ಬೆರಗಿನ ಸಂಗತಿಯಾಗುತ್ತದೆ. ಕರ್ನಾಟಕ ಸೂಫಿಗಳು ಹಾಗೂ ಇತರೆ ಪಂಥಗಳ ಅನುಯಾಯಿಗಳು ಸಹಜವಾಗಿ ಮಾಡಿರುವ ತತ್ವಚಿಂತನೆ, ಅದನ್ನು ಸಹಜವಾಗಿ ಬದುಕುತ್ತಿರುವ ಜನ - ಇಲ್ಲೆಲ್ಲ ಕೋಮುಸಾಮರಸ್ಯದ ಉದ್ದೇಶಗಳೆ ಇಲ್ಲ. ಹಿಂದೂ-ಮುಸ್ಲಿಂ ಸಾಮರ್ಸ್ಯದ ಗ್ರಹಿಕೆಯು ಕೋಮುವಾದಿ ಚಿಂತನೆಯೆದುರು ಸದಾಶಯ ಉಳ್ಳದಾಗಿದ್ದರೂ, ತನ್ನ ವಿಧಾನದಲ್ಲಿ ಅಸೂಕ್ಷ್ಮವೂ, ಅಸಾಂಸ್ಕೃತಿಕವೂ ಆಗಿದೆ' (ಕರ್ನಾಟಕದ ಸೂಫಿಗಳು - ರಹಮತ್‌ತರೀಕೆರೆ, ಪರಿಷ್ಕೃತ ಮುದ್ರಣ-2001, ಹಂಪಿ ಕನ್ನಡ ವಿಶ್ವವಿದ್ಯಾಲಯ, ಪುಟ 73-74)

ವಾಸ್ತವವಾಗಿ ಪಿಂಜಾರರು ಮೊಹರಂ ಆಚರಿಸುವ ರೀತಿಯನ್ನು ಸಾಂಪ್ರದಾಯಿಕ ಮುಸ್ಲಿಮರು ವಿರೋಧಿಸುತ್ತಾರೆ ಮತ್ತು ಇಂಥ ಉತ್ಸವಗಳಿಂದ ಅವರು ದೂರವುಳಿದೂ ಬಿಡುತ್ತಾರೆ. ಇದು ಪಿಂಜಾರರು, ಮುಸ್ಲಿಮರು ಮತ್ತು ಹಿಂದೂ ಸಮುದಾಯಗಳು ಒಟ್ಟಾಗಿರುವ ಊರುಗಳಲ್ಲಿ ಹೀಗೆ ನಡೆಯುತ್ತದೆ. ಕೆಲವು

ಊರುಗಳಲ್ಲಿ ಮುಸ್ಲಿಮರಿರುವುದಿಲ್ಲ, ಅಂತಹ ಕಡೆ ಪಿಂಜಾರರು ಮತ್ತು ಹಿಂದೂಗಳು ಸೇರಿ ಆಚರಿಸುವ ಮೊಹರಂ ಹಬ್ಬದ ಉತ್ಸವಗಳನ್ನು ಕಂಡಾಗ ಇಲ್ಲಿ ಕೂಡ ಈ ಎರಡೂ ಸಮುದಾಯಗಳವರಿಗೆ ಕೋಮು ಸಾಮರಸ್ಯದ ಉದ್ದೇಶವಿರುವುದಿಲ್ಲ. ಅದು ಅವರ ಬದುಕಿನ ಸಹಜ ಸ್ವರೂಪವಾಗಿದೆ. ಹಾಗಾಗಿ ಪಿಂಜಾರರು ಮತ್ತು ಹಿಂದೂ ಧಾರ್ಮಿಕ ಆವರಣದ ಹಿಂದುಳಿದ ಜನಾಂಗಗಳ ನಡುವಿನ ಸಂಬಂಧಗಳು ಮಾಧ್ಯಮಗಳ ಸೆಕ್ಯುಲರ್ ದನಿಗಳಾಗಿರದೆ, ಅಸೂಕ್ಷ್ಮವೂ ಅಸಾಂಸ್ಕೃತಿಕವೂ ಅಲ್ಲದ ಸಾಮಾಜಿಕ ಸಂಸ್ಕೃತಿಯ ಒಳನೆಲೆಯಾಗಿದೆ. ಪಿಂಜಾರರ ಅಧ್ಯಯನದ ಒಟ್ಟಾರೆ ವಿವರಗಳು ಕೂಡ ಈ ಮಾತನ್ನು ಸಮರ್ಥಿಸುವಂತಿದೆ. ಆದರೆ ಸ್ವಾತಂತ್ರ್ಯೋತ್ತರ ಭಾರತ ಕಂಡ ಐವತ್ತೇಳು ವರ್ಷಗಳಲ್ಲಿ ಇತ್ತೀಚಿನ 10-12 ವರ್ಷಗಳು ಅಧಿಕಾರ ರಾಜಕಾರಣ ಮತ್ತು ಕೋಮುವಾದಗಳ ಸಂಬಂಧದ ಫಲವಾಗಿ ಎಂದೂ ಕಂಡರಿಯದ ಹಿಂಸೆ ಹಾಗೂ ಅದರ ಸಮರ್ಥನೆಯಿಂದ ಕೂಡಿವೆ. ಅಲ್ಪಸಂಖ್ಯಾತ ಅನ್ಯಧರ್ಮದವರ ಮೇಲೆ ಬಹುಸಂಖ್ಯಾತರು ಸಂಘಟಿತ ಆಕ್ರಮಣಗಳನ್ನು ನಡೆಸಿದರೆ ಅದನ್ನು ಧರ್ಮ ರಕ್ಷಣೆಯ ಪ್ರಯತ್ನ, ದೇಶಪ್ರೇಮದ ಸಂಕೇತ, ಎಚ್ಚೆತ್ತ ಹಿಂದೂಗಳ ಕ್ರೋಧ ಎಂಬಂತಹ ರೀತಿಯಲ್ಲಿ ವ್ಯಾಖ್ಯಾನ ಮಾಡಲಾಗುತ್ತದೆ. ಇಂತಹ ಸಾಮಾಜಿಕ ಭೀತಿಯಲ್ಲಿ ಪಿಂಜಾರರು ತಮ್ಮ ಸಾಂಸ್ಕೃತಿಕ ರೂಪಗಳನ್ನು ಕಾಪಾಡಿಕೊಳ್ಳುವುದು ಕಷ್ಟಕರವಾಗಿದೆ. ಪಿಂಜಾರರು ತಮ್ಮ ಜನಾಂಗದ ಧಾರ್ಮಿಕ ಅನನ್ಯತೆಯನ್ನು ಕಂಡುಕೊಳ್ಳುವ ಪ್ರಯತ್ನಕ್ಕೆ ಅವರು ಎದುರಿಸುವ ಸಾಮಾಜಿಕ ಅಭದ್ರತೆಯೇ ಕಾರಣವಾಗಿದೆ. ಬದಲಾಗುತ್ತಿರುವ ಪಿಂಜಾರರ ಸಾಮಾಜಿಕ - ಧಾರ್ಮಿಕ ಜೀವನಕ್ರಮ ಕೂಡ ಅವರ ಸಾಂಸ್ಕೃತಿಕ ವೈಶಿಷ್ಟ್ಯಗಳು ಅವನತಿಯತ್ತ ಸಾಗುತ್ತಿರುವ ಸೂಚನೆಯನ್ನು ನೀಡುತ್ತಿವೆ.

---

ಅಡಿಟಿಪ್ಪಣಿಗಳು :-

1- ಮೊಹರಂ ಪದಗಳು-ಡಾ. ದಸ್ತಗೀರ್ ಅಲ್ಲೀಭಾಯಿ - ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು - ಪ್ರಥಮ ಮುದ್ರಣ - ೧೯೯೯, ಪುಟ-೨೯೩-೩೦೫

2 - ಅದೇ, ಪುಟ - ix - xv

## ಅಧ್ಯಾಯ - ೫

# ಪಿಂಜಾರರು ಮತ್ತು ಸಾಹಿತ್ಯ

ಪಿಂಜಾರ ಜನಾಂಗ ಮತ್ತು ಸಾಹಿತ್ಯವನ್ನು ಕುರಿತು ಮಾತನಾಡುವಾಗ ಈ ಜನಾಂಗದ ಭಾಷೆಯ ಬಗ್ಗೆ ಚರ್ಚಿಸುವುದು ಅಗತ್ಯವಾಗಿದೆ. ಒಂದು ಜನಾಂಗದ ಭಾಷೆಯ ಕುರಿತು ಚಿಂತಿಸುವುದೆಂದರೆ ಆ ಜನಾಂಗದ ಸಾಮಾಜಿಕ - ಸಾಂಸ್ಕೃತಿಕ ಸ್ಥಾನಮಾನಗಳನ್ನು ವಿಶ್ಲೇಷಿಸುವುದೇ ಆಗಿದೆ. ಆದ್ದರಿಂದ ಪಿಂಜಾರರ ಭಾಷೆ ಮತ್ತು ಆ ಹಿನ್ನೆಲೆಯಲ್ಲಿ ಪಿಂಜಾರರು ಅನುಭವಿಸುವ ಸಂಕಷ್ಟಗಳನ್ನು ಮೊದಲು ನಿವೇದಿಸಿಕೊಳ್ಳಬೇಕಾಗಿದೆ. ಪಿಂಜಾರರ ಮಾತೃಭಾಷೆ, ಹಾಗೂ ವ್ಯಾವಹಾರಿಕವಾಗಿ ಬಳಸುವ ಭಾಷೆಗಳು ಒಂದೇ ತೆರನಾಗಿಲ್ಲ. ಪಿಂಜಾರರ ಈ ಬಹುಭಾಷಿಕ ಸ್ವರೂಪ ಕೂಡ ಅವರು ಸಂಘಟಿತರಾಗದೇ ಇರಲು ಕಾರಣವಿರಬಹುದು. ಈ ಜನಾಂಗದ ಬಹುಭಾಷಿಕತೆಯ ಅನಿವಾರ್ಯತೆಯ ಹಿಂದೆ ಇರಬಹುದಾದ ಐತಿಹಾಸಿಕ ಹಾಗೂ ಸಮಕಾಲೀನ ಸಂದರ್ಭಗಳನ್ನು ಗಮನಿಸಬೇಕಾಗಿದೆ. ಕರ್ನಾಟಕದಲ್ಲಿ ಬದುಕುತ್ತಿರುವ ಪಿಂಜಾರರಲ್ಲಿ ಕೂಡ ಕನ್ನಡ, ಉರ್ದು, ತೆಲುಗು ಭಾಷೆಯನ್ನು ಬಳಸುವವರಿದ್ದಾರೆ. ಈ ಭಾಷೆಗಳಲ್ಲಿ ಕನ್ನಡ ಅನೇಕರ ಮಾತೃಭಾಷೆಯಾದರೆ ಮತ್ತೆ ಕೆಲವರ ಮನೆಮಾತು ತೆಲುಗು. ವಿಶೇಷವೆಂದರೆ ಬಹುಪಾಲು ಪಿಂಜಾರರು ಉರ್ದು ಭಾಷೆಯನ್ನು ಕೇವಲ ವ್ಯಾವಹಾರಿಕ ಸಂದರ್ಭಗಳಲ್ಲಿ ಮಾತ್ರ ಅರೆಬರೆಯಾಗಿ ಬಳಸುವುದಿದೆ. ಪಿಂಜಾರರು ಬದುಕುತ್ತಿರುವುದು ಕನ್ನಡ ಸಂಸ್ಕೃತಿಯ ವಾತಾವರಣದಲ್ಲಿಯಾದುದರಿಂದ ಕನ್ನಡ ಸಂಸ್ಕೃತಿ ಒಳಗೊಳ್ಳುವ ಜೀವನ ವಿಧಾನವೇ ಪಿಂಜಾರರದ್ದೂ ಆಗಿದೆ. ಪಿಂಜಾರರ ಭಾಷೆಗೂ ಅವರ ಒಟ್ಟಾರೆ ಜೀವನ ವಿಧಾನ ಒಳಗೊಳ್ಳುವ ಇತಿಹಾಸಕ್ಕೂ ಸಂಬಂಧವಿದೆ. ಪಿಂಜಾರರ ಮತಾಂತರಕ್ಕೆ ಇರುವ ಕಾರಣಗಳೇ ಇವತ್ತು ಪಿಂಜಾರರು ಕನ್ನಡ ಮಾತನಾಡುವುದಕ್ಕೆ ಇರುವ ಕಾರಣಗಳೂ ಆಗಿವೆ. ಆದರೆ ಪಿಂಜಾರರ ಒಟ್ಟಾರೆ ಬದುಕು ಕನ್ನಡಮಯವೆನಿಸಿದರೂ ಬಿಜಾಪುರ, ರಾಯಚೂರು, ಬಳ್ಳಾರಿ ಮತ್ತು ಚಿತ್ರದುರ್ಗ ಜಿಲ್ಲೆಯ ಕೆಲವು ಗಡಿಪ್ರದೇಶಗಳಲ್ಲಿ ಉರ್ದು ಮತ್ತು ತೆಲುಗಿನ ಬಳಕೆಯನ್ನು ಕಾಣಬಹುದಾಗಿದೆ. ಆಂಧ್ರಮೂಲದ ದೂದೇಕುಲದವರೆಂದು ನಂಬುವ ಪಿಂಜಾರರು ತೆಲುಗು ಮಾತನಾಡುವುದು ಆಂಧ್ರಪ್ರದೇಶಕ್ಕೆ ಅಂಟಿಕೊಂಡಂತಿರುವ ಊರುಗಳಲ್ಲಿ ಮಾತ್ರ. ಇನ್ನು ಬಿಜಾಪುರ, ರಾಯಚೂರು, ಗುಲಬರ್ಗಾಗಳಂತೂ ನಿಜಾಮರ ಆಡಳಿತಕ್ಕೊಳಪಟ್ಟಂದಿನಿಂದಲೂ ಉರ್ದುವಿನ ದಟ್ಟ ಪ್ರಭಾವವನ್ನು ಒಳಗೊಂಡಿರುವುದು ಗೊತ್ತಿರುವ ಸಂಗತಿ. ಈ ಪ್ರದೇಶಗಳಲ್ಲಿರುವ ಕೆಲವು ಪಿಂಜಾರರಷ್ಟೇ ಉರ್ದು, ತೆಲುಗು ಮಾತನಾಡಿದರೆ ಅದೇ ಜಿಲ್ಲೆಯ ಕನ್ನಡ ವಾತಾವರಣವಿರುವ ಎಲ್ಲ ಊರುಗಳ ಪಿಂಜಾರರಿಗೆ ಬರುವುದು ಕನ್ನಡ ಮಾತ್ರ. ಧಾರವಾಡ, ದಾವಣಗೆರೆ, ಬಳ್ಳಾರಿ, ಶಿವಮೊಗ್ಗ ಜಿಲ್ಲೆಯ ಕೆಲವು ಊರುಗಳಲ್ಲಿರುವ ಪಿಂಜಾರರಿಗೆ ಕನ್ನಡ ಮಾತ್ರ ಗೊತ್ತು. ಬಹುಸಂಖ್ಯಾತ ಪಿಂಜಾರರು ಕನ್ನಡಿಗರು. ಪಿಂಜಾರರು ಕನ್ನಡ ಮಾತನಾಡುವ ಕಾರಣಕ್ಕೇ ಅನೇಕ ಬಗೆಯ ತಾತ್ಸಾರಕ್ಕೆ, ಅವಮಾನಕ್ಕೆ ಒಳಗಾಗುವ ಸಂದರ್ಭಗಳಿವೆ. ಪಿಂಜಾರರು ಮೇಲೆ ಹೇಳಿದ ಕೆಲವು ಪ್ರದೇಶಗಳಲ್ಲಿ ಉರ್ದು, ತೆಲುಗು ಮಾತನಾಡಿದರೂ ಅದು ವ್ಯವಹಾರಿಕ ಅಗತ್ಯದ ದೃಷ್ಟಿಯಿಂದ

ಬಳಸುವಂತಹದ್ದು. ಅವರ ಸಾಹಿತ್ಯವನ್ನು ಗಮನಿಸಿದರೆ, ಅವರ ಸಮಗ್ರ ಜೀವನ ವಿಧಾನವನ್ನು ಅವಲೋಕಿಸಿದರೆ ಪಿಂಜಾರರಿಗೆ ದೊಡ್ಡ ಪ್ರಮಾಣದಲ್ಲಿ ಪ್ರಭಾವಿಸಿರುವ ಭಾಷೆ ಕನ್ನಡ, ಅದೂ ಬಸವಣ್ಣನವರ ಕಾಲದ ಕನ್ನಡ ಎಂದು ತಿಳಿಯುತ್ತದೆ. ಈಗಿನ ಒತ್ತಡಕ್ಕೆ ತಕ್ಕಂತೆ ಅದು ಬದಲಾಗುತ್ತ ಬಂದಿದೆ ಅಷ್ಟೆ. ಪಿಂಜಾರರ ಬದುಕನ್ನು ಕರುಣಾಜನಕಗೊಳಿಸಿರುವ ಅಂಶಗಳಲ್ಲಿ ಭಾಷೆಯೂ ಒಂದು. ಈ ಕುರಿತ ವಿಶ್ಲೇಷಣೆ ಕೂಡ ಪಿಂಜಾರರ ಜೀವನದ ಒಂದು ಭಾಗವಾಗಿಯೇ ಇರುವುದರಿಂದ ಭಾಷೆ ಒಳಗೊಳ್ಳುವ ಧಾರ್ಮಿಕ ಪ್ರಭಾವವನ್ನು ಗುರುತಿಸಬೇಕಾಗುತ್ತದೆ.

ಪ್ರಾದೇಶಿಕತೆಯ ಅಂಶವೊಂದನ್ನು ಬಿಟ್ಟರೆ ಯಾವುದೇ ಭಾಷೆ ತನ್ನಷ್ಟಕ್ಕೆ ತಾನು ಮತೀಯ ಅಂಶಗಳಿಂದ ಕೂಡಿರುತ್ತದೆಂದು ಹೇಳಲಾಗುವುದಿಲ್ಲ. ಭಾಷೆಯ ವೈಜ್ಞಾನಿಕ ಅಧ್ಯಯನ ಕೂಡ ಅದನ್ನು ಸಮರ್ಥಿಸುವುದಿಲ್ಲ. ಆದರೆ ಭಾಷೆ ಅಭಿವ್ಯಕ್ತಗೊಳ್ಳುವ ಸಂದರ್ಭದಲ್ಲಿ ವಿಶಿಷ್ಟವಾದ ಪ್ರಾದೇಶಿಕ ಪರಿಧಿಯನ್ನು ಸೃಷ್ಟಿಸಿಕೊಳ್ಳುತ್ತದೆ. ಭಾಷೆ ಧರ್ಮಕ್ಕಿಂತ ಪ್ರಾಚೀನವಾದುದಾದರೂ ಧರ್ಮದ ನೆಲೆಯಾದ ಆವೇಶ ಅಥವಾ ಉತ್ಸಾಹದಿಂದ ಭಾಷೆ ಹೊರತಾಗಿತ್ತೆನಿಸುತ್ತದೆ. ಯಾವಾಗ ಭಾಷೆಯನ್ನು ಧಾರ್ಮಿಕ ಭಾವುಕತೆಯನ್ನು ವ್ಯಕ್ತಪಡಿಸಲು ಬಳಸಿಕೊಳ್ಳಲಾಯಿತೋ ಅಂದಿನಿಂದಲೇ ಭಾಷೆ ಮತ್ತು ಧರ್ಮಕ್ಕೆ ಸಂಬಂಧಿಸಿದಂತಹ ವಿಷಯ ಅಭಿಮಾನದ ನೆಲೆಯನ್ನೂ ಮೀರಿ ಅತ್ಯುತ್ಸಾಹದ ನೆಲೆಯಲ್ಲಿ ಅರ್ಥ ಪಡೆಯುತ್ತಾ ಬಂತೆನಿಸುತ್ತದೆ. ಬರುಬರುತ್ತಾ ಪ್ರಾದೇಶಿಕತೆಯನ್ನು ರೂಪಿಸುವ ರಾಜಕೀಯ ಮತ್ತು ಸಾಮಾಜಿಕ ಒತ್ತಡಗಳು ಭಾಷೆಯ ಬಗೆಗಿನ ಮೂಲಸ್ವರೂಪದೊಂದಿಗೆ ಧಾರ್ಮಿಕ ಹಿತಾಸಕ್ತಿಗಳೂ ಒಡೆದು ಕಾಣುವಂತೆ ಬೆಸೆದವು. ಇದೇ, ಧಾರ್ಮಿಕವಾಗಿ ಬಹುಸಂಖ್ಯಾತರೆನಿಸಿಕೊಂಡವರು ಭಾಷಿಕವಾಗಿಯೂ ಬಹುಸಂಖ್ಯಾತರಾಗುವಂತೆ, ಧಾರ್ಮಿಕವಾಗಿ ಅಲ್ಪಸಂಖ್ಯಾತರಾದವರು ಭಾಷಿಕವಾಗಿಯೂ ಅಲ್ಪ ಸಂಖ್ಯಾತರಾಗುವಂತಹ ಗೊಂದಲದ ನಿರ್ಮಾಣಕ್ಕೆ ಕಾರಣವಾಯಿತೆನಿಸುತ್ತದೆ. ಬಹುಸಂಖ್ಯಾತರೆಲ್ಲ ಭಾಷೆಗೆ ಧಾರ್ಮಿಕ ಲೇಪನವನ್ನು ಕೊಡುತ್ತಿದ್ದಂತೆಯೇ ಅಲ್ಪಸಂಖ್ಯಾತರು ವಿಚಿತ್ರ ಭಯ, ತಳಮಳಗಳನ್ನು ಅನುಭವಿಸತೊಡಗಿ ಅವರೂ ತಂತಮ್ಮಲ್ಲಿ ಗುಡ್ಡೆ ಹಾಕಿಕೊಳ್ಳತೊಡಗಿದರು. ಅಲ್ಪ ಸಂಖ್ಯಾತರನ್ನು ಪರಕೀಯರೆಂತಲೇ ಗುರುತಿಸಿ ಅವರ ಬಗ್ಗೆ ತೋರುವ ತಾತ್ಸಾರ, ಅವರಲ್ಲಿ ಹುಟ್ಟಿಸುವ ಆತಂಕದಿಂದಾಗಿ ಅವರೇ ಒಂದು ದ್ವೀಪವಾಗುವಂತಹ ಪರಿಸ್ಥಿತಿ ನಿರ್ಮಾಣವಾಯಿತು. ಆದರೆ ಧರ್ಮ ಮತ್ತು ಭಾಷೆ - ಈ ಎರಡೂ ದೃಷ್ಟಿಯಿಂದಲೂ ಅಲ್ಪಸಂಖ್ಯಾತರಲ್ಲದ, ಸಂಖ್ಯೆಯ ದೃಷ್ಟಿಯಿಂದ ಮಾತ್ರ ಅಲ್ಪ ಸಂಖ್ಯಾತರಾಗಿರುವ ಪಿಂಜಾರರ ಬದುಕು ಈ ಎರಡರಿಂದಲೂ ಅಸಹನೀಯ ಎನಿಸುವಷ್ಟರಮಟ್ಟಿಗೆ ಕರುಣಾಜನಕವಾಗಿದೆ.

ನಡೆ-ನುಡಿ, ಆಚಾರ-ವಿಚಾರಗಳಲ್ಲಿ ಕನ್ನಡ ಬಿಟ್ಟರೆ ಬೇರೆ ಭಾಷೆ ಗೊತ್ತಿಲ್ಲದ ಪಿಂಜಾರರೇ ಕರ್ನಾಟಕದಲ್ಲಿ ಬಹಳಷ್ಟಿದ್ದಾರೆ. ಹಳ್ಳಿಗಳಲ್ಲಿರುವ ಇವರೆಲ್ಲ ಪ್ರಜ್ಞಾಪೂರ್ವಕವಾಗಿ ಅವಮಾನವನ್ನು ಅನುಭವಿಸದಿದ್ದರೂ ತಡವಾಗಿಯಾದರೂ ಅದರ ಅರಿವಾಗಿ ಕೊರಗುತ್ತಾರೆ. ಈ ಕೊರಗು ಎರಡು ಬಗೆಯ ಕಾರಣಗಳಿಂದಾಗಿ ಅವರ ಅರಿವಿಗೆ ಬರುತ್ತದೆ.

೧. ಪಿಂಜಾರ ಮಾತನಾಡುವಾಗ ಕನ್ನಡ ಬಲ್ಲ ಹಿಂದೂ ಜನರ ನಡುವೆಯೇ ಹೆಚ್ಚಾಗಿ ಬೆರೆಯುತ್ತಾನೆ. ಮಾತಿನ ನಡುವೆ ಪಿಂಜಾರನ ಹೆಸರು ಗೊತ್ತಾದರೆ ಸಾಕು, 'ನೀವು ಸಾಬ್‌ರೇನು, ನಿಮ್ಮಾತು ನೋಡಿದ್ರೆ ಗೊತ್ತೇ ಆಗಲ್ಲ' ಅನ್ನುವ ಮಾತು ಸಲೀಸಾಗಿ ಬರುತ್ತದೆ.

೨. ಅದೇ ಪಿಂಜಾರ ಮುಸ್ಲಿಮರೊಂದಿಗೆ ಮಾತನಾಡುವ ಸಂದರ್ಭ ಬಂದಾಗ ಈತನ ಕನ್ನಡ ಕೇಳಿ ಮುಸ್ಲಿಮನಾದವನು ನೇರವಾಗಿಯೇ ಕೇಳುತ್ತಾನೆ. 'ನಿನ್ನ ಹಿಂದೂ ಅಂದ್ಕೊಂಡಿದ್ದೆ, ಉರ್ದು ಮಾತನಾಡೋಕೆ ಬರೋದಿಲ್ವೇ, ನೀನೇನ್ ಲದಾಫನಾ?'

ಈ ಎರಡೂ ಸಂದರ್ಭಗಳಲ್ಲಿ ಭಾಷೆ ಮತ್ತು ಧರ್ಮಕ್ಕಿರುವ ಸಂಬಂಧವನ್ನು ಚೆನ್ನಾಗಿ ಗುರುತಿಸಬಹುದು. ಭಾಷೆ ಮತ್ತು ಧರ್ಮವನ್ನು ಪ್ರತ್ಯೇಕವಾಗಿ ನೋಡಲಾಗದ ಇಂತಹ ದೃಷ್ಟಿಕೋನದಲ್ಲಿರುವ ಭಾವನೆಯೇ ಪಿಂಜಾರರ ಅವಮಾನಕ್ಕೆ ಕಾರಣವಾಗುತ್ತದೆ. ಮೇಲಿನಂತಹ ಉದಾಹರಣೆಯನ್ನೇ ಗಮನಿಸಿ 'ಕನ್ನಡ' ಭಾಷೆ ಹಿಂದೂ-ಮುಸ್ಲಿಮರಿಬ್ಬರ ದೃಷ್ಟಿಯಲ್ಲಿ 'ಹಿಂದೂ ಭಾಷೆ' ಆಗಿರುವಂತಿದೆ. ಹಾಗೆಯೇ ಉರ್ದು ಭಾಷೆ ಇಬ್ಬರ ದೃಷ್ಟಿಯಲ್ಲೂ 'ಮುಸ್ಲಿಮರ ಭಾಷೆ' ಆಗಿದೆ. ಹೀಗೆ ಯಾಕಾಯಿತು ಅನ್ನುವುದಕ್ಕಿಂತ ಪಿಂಜಾರರ ಕಷ್ಟಕ್ಕೆ ಏನು ಕಾರಣ ಎಂದೇ ಯೋಚಿಸಬೇಕಾಗಿದೆ.

ಪಿಂಜಾರರು ಕೆಲವೊಮ್ಮೆ ಹಿಂದೂ-ಮುಸ್ಲಿಮರಿಬ್ಬರ ಹೊಗಳಿಕೆಗೂ ಪಾತ್ರರಾಗುವ ಸಂದರ್ಭಗಳಿರುತ್ತದೆ. ಪಿಂಜಾರನೊಬ್ಬನು ಕತೆ, ಪುರಾಣ ಹೇಳಿದರೆ, ಹಾಡಿದರೆ, ಸೊಗಸಾಗಿ ರೈತಾಪಿ ಕೆಲಸದಲ್ಲಿ ನಿಪುಣನಾಗಿದ್ದರೆ ಸಾಮಾನ್ಯವಾಗಿ ಪ್ರಶಂಸಿಸಲಾಗುತ್ತದೆ.

ಆರಂಭದಲ್ಲಿ ಇಂತಹ ಪ್ರಶಂಸೆಯನ್ನು ಕೇಳಿದ ಪಿಂಜಾರ ಉಬ್ಬಿ ಹೋಗುವುದು ನಿಜ. ಬರುಬರುತ್ತ ಆ ಹೊಗಳಿಕೆಯಲ್ಲಿರುವ ಸೂಕ್ಷ್ಮ ಅವಮಾನದ ಅರಿವಾಗುತ್ತದೆ. ಅದು ಪ್ರೀತಿಯ ಸಂಕೇತವಾಗಿರದೆ ಒಂದು ಬಗೆಯ ರಿಯಾಯಿತಿಯಾಗಿರುತ್ತದೆ. ಹೆಸರಿನ ಮೂಲಕ 'ಮುಸ್ಲಿಂ' ಎಂದು ಗೊತ್ತಾಗುವ ಪಿಂಜಾರರು ತಮ್ಮ ಮಾತೃಭಾಷೆಯಾದ ಕನ್ನಡ ಮಾತಾಡಿದಾಗ ಪ್ರಶಂಸೆಗೆ ಗುರಿಯಾಗಬಹುದಾದರೆ ಅಂತಿಮವಾಗಿ ಆತನನ್ನು ಮುಸ್ಲಿಮರೊಂದಿಗೇ ಹೊರಗಿಟ್ಟು ಪ್ರತ್ಯೇಕವಾಗಿ ನೋಡಲಾಗುತ್ತದೆ ಎಂದೇ ಅದರ ಅರ್ಥ ಮಾಡಬೇಕಾಗುತ್ತದೆ. ಹಿಂದೂ-ಮುಸ್ಲಿಮರ ನಡುವೆ ಬದುಕಬೇಕಾಗಿರುವ ಪಿಂಜಾರರು ಅನುಭವಿಸುತ್ತಿರುವ ಕಷ್ಟ ಈ ಬಗೆಯದು. ಪಿಂಜಾರರು ಹಿಂದೂ-ಮುಸ್ಲಿಂ ಇಬ್ಬರಿಂದಲೂ ಅವಮಾನಕ್ಕೊಳಗಾಗುತ್ತಿರುವುದು ಈ ನೆಲದಲ್ಲಿ ಹಿಂದೂ-ಮುಸ್ಲಿಮರ ನಡುವಿನ ಅಗಾಧ ಕಂದರವನ್ನು ಸ್ಪಷ್ಟವಾಗಿ ತೋರುವುದಲ್ಲದೆ ಆ ಕಂದರದಲ್ಲಿ ಬೀಳುತ್ತಿರುವ ಪಿಂಜಾರರಂಥ ಅಮಾಯಕರ ದುರಂತವನ್ನು ಹೇಳುತ್ತದೆ.

ಪಿಂಜಾರರ ಈ ಬಗೆಯ ಸ್ಥಿತಿಗೆ ಮತ್ತೆ ಅವರ ಮತಾಂತರದ ಸಂದರ್ಭವೇ ಕಾರಣವಾಗಿದೆ ಎನ್ನದೆ ವಿಧಿಯಿಲ್ಲ. ಯಾಕೆಂದರೆ ಮತಾಂತರದ ಉದ್ದೇಶವೇ ಬೇರೆಯಾಗಿದ್ದುದರಿಂದ ಪಿಂಜಾರರು ಅಲ್ಲಿ ಇಲ್ಲಿ ಎಲ್ಲಿಯೂ ಸಲ್ಲದಂತಹ ಎಡಬಿಡಂಗಿ ಸ್ಥಾನದಲ್ಲಿ ಉಳಿದುಕೊಳ್ಳುವಂತಾಗಿದೆ. ಇದರೊಂದಿಗೆ ಮುಸ್ಲಿಮರು ಭಾರತವನ್ನು ಆಕ್ರಮಿಸುತ್ತಿದ್ದಂತೆಯೇ ಇಲ್ಲಿ ಹಿಂದೂ ಪುನರುಜ್ಜೀವನದ ಪ್ರಯತ್ನಗಳೂ

ಆರಂಭವಾದವು. ಮತ್ತು ಅದೇ ಇವತ್ತಿನ ಜನಾಂಗಕ್ಕೆ ಮುಸ್ಲಿಮರ ಬಗ್ಗೆ ಇರುವ ಪೂರ್ವಾಗ್ರಹಗಳಿಗೆ ಕಾರಣವಾದವು. ಇಂಡಿಯಾಕ್ಕೆ ಬಂದ ಮುಸ್ಲಿಮರು ತಮ್ಮ ಭಾಷೆ ಸಂಸ್ಕೃತಿಯನ್ನು ಇಲ್ಲಿ ಬೆಳೆಸುವ ಹಂಬಲದಲ್ಲಿ ಉರ್ದು ಭಾಷೆಯನ್ನು ಪರಿಚಯಿಸಿದಾಗಿನಿಂದ ಉರ್ದು ಮುಸ್ಲಿಮರ ಭಾಷೆ ಎನ್ನುವಂತಾಗಿಬಿಟ್ಟಿದೆ. ಇಲ್ಲಿನ ಮುಗ್ಧರು, ಜಾಣರು ಎಲ್ಲ ಉರ್ದು ಮಾತಾಡುವವರೆಲ್ಲ ಸಾಬರೇ ಅನ್ನುವಂತಹ ದೃಷ್ಟಿಯಲ್ಲಿ ನೋಡುತ್ತಾರೆ. ಅದರಲ್ಲೂ ಕರ್ನಾಟಕದ ಸಂದರ್ಭದಲ್ಲಿ ನಿಜಾಮರ ಆಡಳಿಕ್ಕೊಳಪಟ್ಟ ಉತ್ತರ ಕರ್ನಾಟಕದ ಅನೇಕ ಪ್ರದೇಶಗಳನ್ನು ಈ ಹಿನ್ನೆಲೆಯಲ್ಲಿ ಗಮನಿಸಬೇಕು. ಅಲ್ಲಿ ಎಲ್ಲ ಜನಾಂಗದವರ ಮಾತು, ವ್ಯವಹಾರ ಉರ್ದು ಭಾಷೆಯಲ್ಲಿ ನಡೆದರೂ ಉರ್ದು ಭಾಷೆಯ ಸಾಹಿತ್ಯ ನಮಗೇಕೆ ಲಭ್ಯವಾಗಿಲ್ಲವೆನ್ನುವ ಸಂಶಯ ಉಳಿಯುತ್ತದೆ. ಅಂದರೆ ಕರ್ನಾಟಕದಲ್ಲಿ ಉರ್ದು ಭಾಷೆಯನ್ನು ಕೇವಲ ವ್ಯವಹಾರದ ನೆಲೆಯಲ್ಲಿ ತಾಂತ್ರಿಕ ಅಗತ್ಯವೆಂಬಂತಹ ರೀತಿಯಲ್ಲಿ ಬಳಸಿಕೊಳ್ಳಲಾಯಿತೇ ? ಹಾಗಲ್ಲದಿದ್ದರೆ ಉರ್ದು ಭಾಷೆಯ ಶ್ರೀಮಂತ ಸಾಹಿತ್ಯ ಉತ್ತರ ಭಾರತದಲ್ಲಿ ಲಭ್ಯವಿರಬೇಕಾದರೆ ಕರ್ನಾಟಕದಲ್ಲಿ ಅದೇಕೆ ಸಾಧ್ಯವಾಗಿಲ್ಲ ? ಇತ್ಯಾದಿ ಪ್ರಶ್ನೆಗಳಿಗೆ ಪಿಂಜಾರರು ಅನುಭವಿಸುವ ನಿತ್ಯ ಯಾತನೆಯಲ್ಲಿ ಉತ್ತರಗಳನ್ನು ಕಂಡುಕೊಳ್ಳುವುದು ಸಾಧ್ಯವಿದೆ.

ವಿಚಿತ್ರವೆಂದರೆ ಉತ್ತರ ಕರ್ನಾಟಕದ ಭಾಗದಲ್ಲಿದ್ದ ಮುಸ್ಲಿಮರಿಂದ ಕನ್ನಡ ಭಾಷೆಯಲ್ಲೂ ಸಾಕಷ್ಟು ಸಾಹಿತ್ಯ ಸಿಗದಿರುವುದು. ತೀರ ಈಚಿನವರೆನ್ನಬಹುದಾದ ಶಿಶುನಾಳ ಶರೀಫರ ಸಾಹಿತ್ಯವೇ ನಮಗೆ ದೊರೆಯುವ ಮೊದಲ ಮುಸ್ಲಿಂ ಕವಿಯ ಸಾಹಿತ್ಯ. ಅಲ್ಲಿಯವರೆಗೆ ಮುಸ್ಲಿಮರದು ಎನ್ನಬಹುದಾದ ಸಾಹಿತ್ಯ ಕನ್ನಡದಲ್ಲಾಗಲೀ, ಉರ್ದುವಿನಲ್ಲಾಗಲೀ ಸಿಗದಿರುವುದಕ್ಕೆ ಐತಿಹಾಸಿಕವಾಗಿ ಏನು ಕಾರಣಗಳಿರಬಹುದೆನ್ನುವುದು ಕುತೂಹಲಕಾರಿಯಾದುದು. ಅಪ್ಪಟ ಪಿಂಜಾರರಾಗಿದ್ದ ಶಿಶುನಾಳ ಶರೀಫರ ಸಾಹಿತ್ಯವನ್ನು ಐತಿಹಾಸಿಕ ಮತ್ತು ರಾಜಕೀಯ, ಸಾಮಾಜಿಕ ಹಿನ್ನೆಲೆಯಲ್ಲಿ ಗಮನಿಸಿದರೂ ಪಿಂಜಾರರ ಒಟ್ಟಾರೆ ಜೀವನ ವಿಧಾನದ ಬಗ್ಗೆ ಹಿಂದೆ ಹೇಳಿರುವ ವಿವರಗಳನ್ನು ಸಮರ್ಥಿಸುವಂತಹ ಅಂಶಗಳು ಕಂಡುಬರುತ್ತವೆ. ಬಹುಶಃ ಸಾಮಾಜಿಕವಾಗಿ ಈ ಬಗೆಯ ಗೊಂದಲ, ತಳಮಳವನ್ನು ಅನುಭವಿಸುತ್ತಿದ್ದ ಶರೀಫರು ಆ ಕ್ರೂರ ಅನುಭವಕ್ಕೆ ಅಭಿವ್ಯಕ್ತಿಯನ್ನು ಕೊಡುವ ಬದಲು ಆಧ್ಯಾತ್ಮದ ಹಾದಿ ಹಿಡಿದು ಅದನ್ನೆಲ್ಲ ಮರೆಯಲು ಪ್ರಯತ್ನಿಸಿದಂತೆ ಕಾಣುತ್ತದೆ. ಧಾರ್ಮಿಕವಾಗಿ ಹಿಂದೂ-ಮುಸ್ಲಿಮರಿಬ್ಬರ ಆಚರಣೆಯಲ್ಲಿ ಬೆರೆಯುವ ಪಿಂಜಾರರು ಅನುಭವಿಸುವ ಅನಾಥ ಅಥವಾ ಯಾರೂ ಒಲ್ಲದ ಭಾವನೆಯನ್ನು ಶರೀಫರೂ ಅನುಭವಿಸಿದ್ದಿರಬಹುದಾಗಿದೆ. ದೇವರ ಬ್ರಹ್ಮ ಸ್ವರೂಪವನ್ನು, ಎಲ್ಲ ಧರ್ಮಗಳೂ ಅಂತಿಮವಾಗಿ ಸೇರುವ ಪರಬ್ರಹ್ಮವನ್ನು ಕುರಿತಂತೆ ಶರೀಫರು ನಡೆಸಿದ ಚಿಂತನೆ ಮತ್ತು ಕಂಡ ಕಾಣ್ಕೆ ಮೂಲಭೂತವಾಗಿ ಪಿಂಜಾರನ ಅನುಭವದ ನೆಲೆಯಿಂದ ಚಿಮ್ಮಿದ್ದು ಎಂದು ಗುರುತಿಸಬಹುದಾಗಿದೆ. ಇಷ್ಟಾದರೂ ಶರೀಫರು ತಮ್ಮ ಸಾಮಾಜಿಕ ಬದುಕಿನ ಅನುಭವಗಳಿಗೆ ಅಧ್ಯಾತ್ಮದ ಮೆರುಗು ಕೊಡದೆ ನಿಜಾನುಭವದ ಪ್ರಾಮಾಣಿಕ, ನಿಷ್ಠುರ ಅಭಿವ್ಯಕ್ತಿಯನ್ನು ಕೊಟ್ಟಿದ್ದರೆ ಅವರ ಸಾಹಿತ್ಯ ಬೇರೆಯದೇ ಆದೊಂದು ಹೊಸ ಹಾದಿಯನ್ನು ನಿರ್ಮಾಣ ಮಾಡುವ ಸಾಮರ್ಥ್ಯವನ್ನು ಪಡೆಯುತ್ತಿತ್ತೇನೋ ಅನ್ನುವಷ್ಟರಮಟ್ಟಿಗೆ ಶರೀಫರು ಇತಿಹಾಸ ವಿಮುಖರಾಗಿ ಕಾಣುತ್ತಾರೆ. ಅಲ್ಲದೆ ಕನಕದಾಸರಂತೆಯೇ

ಶೂದ್ರ ಬದುಕನ್ನು ಶ್ರೇಷ್ಠ ಎಂದು ತಿಳಿಯಲಾರದ ಶರೀಫರೂ ಕೂಡ ಪುರೋಹಿತಶಾಹಿಗಳ ಆಕರ್ಷಣೆಗೆ ಒಳಗಾಗಿ 'ಹಾಕಿದ ಜನಿವಾರವ, ಸದ್ಗುರುನಾಥ ಹಾಕಿದ ಜನಿವಾರವ' ಎಂದು ಉತ್ಸಾಹದಿಂದ ಹಾಡುತ್ತಾರೆ. ಹೀಗೆ ವೈಯಕ್ತಿಕ ಹಾಗೂ ಸಾಮಾಜಿಕ ವಾಸ್ತವಗಳ ಅನುಭವವನ್ನು ಆಧ್ಯಾತ್ಮೀಕರಣಗೊಳಿಸಿ ಮರೆಯುವ ಶರೀಫರು ಪಿಂಜಾರರ ನೋವಿಗೆ ದನಿಕೊಡುವ ಕೆಲಸವನ್ನು ಮಾಡುವ ಅಪೂರ್ವ ಅವಕಾಶವನ್ನು ಬಳಸಿಕೊಳ್ಳದೇ ಹೋದುದು ಮಾತ್ರ ವಿಷಾದನೀಯ. ದುರಂತದ ಸಂಗತಿಯೆಂದರೆ ಶರೀಫರ ಸಾಹಿತ್ಯವನ್ನು ಸಂಪಾದಿಸಿ ಪುಸ್ತಕ ಮತ್ತು ಕ್ಯಾಸೆಟ್ಟುಗಳನ್ನು ಮಾಡಿ ರೊಕ್ಕ ದೋಚುತ್ತಿರುವವರಾಗಲೀ, ಅದ್ಭುತ ಪವಾಡದ ವ್ಯಕ್ತಿಯಂತೆ ಶರೀಫರನ್ನು ಚಿತ್ರಿಸಿ ತೆಗೆದ ಚಲನಚಿತ್ರದ ನಿರ್ಮಾಪಕ, ನಿರ್ದೇಶಕರಾಗಲೀ ಶರೀಫರು ಪ್ರತಿನಿಧಿಸುವ ಪಿಂಜಾರ ಸಂಸ್ಕೃತಿಯ ಬಗ್ಗೆ ಚರಾಕವೆತ್ತದಿರುವುದು. ಶರೀಫರ ಬದುಕಿಗಿದ್ದ ಸವಾಲುಗಳು, ಗೊಂದಲ, ಅವಮಾನಗಳಿಗೆಲ್ಲ ಐತಿಹಾಸಿಕ ಸಂದರ್ಭದಲ್ಲಿ ಕಾರಣಗಳನ್ನು ಹುಡುಕುವ ಬದಲು ವ್ಯಕ್ತಿಯೊಬ್ಬನ ಜಾತ್ಯಾತೀತತೆಯನ್ನು ರೊಕ್ಕ ದುಡಿಯುವ ಸಾಧನವಾಗಿ ಬಳಸಿಕೊಳ್ಳುತ್ತಿರುವವರು ಕೂಡ ಪುರೋಹಿತ ವರ್ಗದವರೇ ಅನ್ನುವುದು ಕೆಟ್ಟ ಸತ್ಯ.

ಪಿಂಜಾರರ ಭಾಷೆಯನ್ನು ಕುರಿತು ಮಾತನಾಡುವಾಗ ಅವರ ಹೆಸರುಗಳ ಬಗ್ಗೆಯೂ ಅಗತ್ಯವಾಗಿ ಹೇಳಬೇಕಾಗುತ್ತದೆ. ಮುಸ್ಲಿಮರಿಗಿಂತ ಸ್ಪಷ್ಟವಾಗಿ ವ್ಯತ್ಯಾಸವಿರುವ ಪಿಂಜಾರರ ಹೆಸರುಗಳು ಕನ್ನಡದ ನುಡಿಗಟ್ಟುಗಳನ್ನು ಹೊಂದಿರುತ್ತವೆ. ಅನೇಕ ಹೆಸರುಗಳಂತೂ ಕನ್ನಡದವೇ. ಉದಾ : ತಿಪ್ಪಕ್ಕ, ಬಾಲಮ್ಮ, ಹಾಲಜ್ಜಿ, ಗಿರಿಯಪ್ಪ, ಕಾಸವ್ವ, ಸೀತವ್ವ, ಸಣ್ಣಮ್ಮ, ಸಕ್ರಮ್ಮ, ಅಲ್ಲೆವ್ವ, ಫಕೀರಪ್ಪ, ರಂಗಪ್ಪ ಬುಡೇನಿ, ರೋಸವ್ವ ಇತ್ಯಾದಿ. ಥರ್ಸ್‌ಟನ್ ಕೂಡ ಇಂತಹ ಕೆಲವು ಹೆಸರನ್ನು ಗುರುತಿಸಿದ್ದಾರೆ. ಹೊನ್ನೂರಪ್ಪ, ಬುಡೇನಪ್ಪ, ಸಣ್ಣತಮ್ಮಜ್ಜ, ಹಂಪಜ್ಜ, ಚಿಕ್ಕಣ್ಣ, ಪಾತವ್ವ, ಸಾಜವ್ವ, ಬುಡ್ಡವ್ವ ಮುಂತಾದ ಹೆಸರುಗಳು ಕನ್ನಡದ ವಿಶಿಷ್ಟ ನುಡಿಗಟ್ಟುಗಳನ್ನು ಹೊಂದಿರುವುದನ್ನು ಗಮನಿಸಬೇಕು. ಅವ್ವ-ಅಪ್ಪ, ಅಜ್ಜ-ಅಜ್ಜಿ, ಅಕ್ಕ-ಅಣ್ಣ, ತಾಯಿ-ತಮ್ಮ, ಸಣ್ಣಪ್ಪ-ದೊಡ್ಡಪ್ಪ ಎಂಬ ಸಂಬಂಧಸೂಚಕ ಪದಗಳೇ ಪಿಂಜಾರರಿಗೆ ಗೊತ್ತಿರುವುದು. ತೆಲುಗು ಮಾತನಾಡುವ ಕೆಲವು ಪಿಂಜಾರರು ಈ ಪದಗಳಿಗಿರುವ ತೆಲುಗು ರೂಪಗಳನ್ನೇ ಬಳಸುತ್ತಾರೆ. ಹೀಗೆ ಸ್ಥಳೀಯವಾದ ಪರಿಸರದಲ್ಲಿನ ಎಲ್ಲ ಲಕ್ಷಣಗಳನ್ನು ಪಿಂಜಾರರು ಅತ್ಯಂತ ಸಹಜವಾಗಿ ಹೊಂದಿದ್ದಾರೆ. ಮತಾಂತರದಿಂದ ನಿಜಕ್ಕೂ ಇವರು ಬದಲಾಗಿದ್ದಾರೆಂದು ಅವರ ಸಂಸ್ಕೃತಿಯನ್ನು ನೋಡಿದರೆ ಅನಿಸುವುದಿಲ್ಲ.

ಪಿಂಜಾರರ ಭಾಷೆ ಮತ್ತು ಕಸುಬಿಗೂ ನೇರ ಸಂಬಂಧವಿದೆ. ಆಧುನಿಕ ಕೈಗಾರಿಕೆಯ ಕಾರಣದಿಂದಾಗಿ ಪಿಂಜಾರರು ತಮ್ಮ ಮೂಲವೃತ್ತಿಯಲ್ಲಿ ಮುಂದುವರಿದು ಹೊಟ್ಟೆ ಹೊರೆಯುವುದು ಕಷ್ಟವಾದಂತೆ ವ್ಯವಸಾಯ ಮತ್ತು ಕೃಷಿಗೆ ಪೂರಕವಾದ ಅನೇಕ ಉಪಕಸುಬುಗಳಲ್ಲಿ ಅನಿವಾರ್ಯವಾಗಿ ತೊಡಗಿದ್ದಾರೆ. ಮೂಲವೃತ್ತಿಯಲ್ಲೇ ಇದ್ದು ಊರೂರು ಅಲೆಯುವ ಪಿಂಜಾರರು ಕೂಡ ಕೃಷಿಕಕೂಲಿಯ ಪಿಂಜಾರರ ಹಾಗೆ ಸ್ಥಳೀಯ ಭಾಷೆ, ನುಡಿಕಟ್ಟು ಪರಿಸರಗಳಿಗೆ ಹೊಂದಿಕೊಂಡಿದ್ದಾರೆ. ಇವರಿಗೆಲ್ಲ ತಮ್ಮದೆ ಆದ ಕನ್ನಡ ಅನಿವಾರ್ಯವಾಗಿರುವಂತೆ ನಗರಗಳಲ್ಲಿದ್ದುಕೊಂಡು ಸಣ್ಣಪುಟ್ಟ ವ್ಯಾಪಾರಗಳಲ್ಲಿರುವವರು ವ್ಯವಹಾರದ ಅಗತ್ಯಕ್ಕನುಗುಣವಾಗಿ ಉರ್ದುವನ್ನು ಕಲಿತಿರುತ್ತಾರೆ. ಉರ್ದು ಪ್ರಭಾವದೊಂದಿಗೆ ಕನ್ನಡ ಮಾತನಾಡುವ

ಪಿಂಜಾರ ಅಪಹಾಸ್ಯಕ್ಕೆ ಗುರಿಯಾದರೂ ಅರ್ಧ ಉರ್ದು ಅರ್ಧ ಕನ್ನಡ ಬೆರೆತ ಅಂಥ ಕೆಲವರ ಭಾಷೆ ರಂಜನೀಯವಾಗಿರುತ್ತದೆ.

ವಿಚಿತ್ರವೆಂದರೆ ಹಳ್ಳಿಗಳಲ್ಲಿರುವ ಪಿಂಜಾರರು ಉರ್ದುವಿನ ಬಗ್ಗೆ ತೋರಿಸುವ ಸಹಜವಾದ ತಾತ್ಸಾರ ಅಥವಾ ಉದಾಸೀನ ಮುಸ್ಲಿಮರನ್ನು ಕೆರಳಿಸುತ್ತದೆನ್ನುವುದು. ಕನ್ನಡ, ತೆಲುಗು, ತಮಿಳು, ಮರಾಠಿ ಭಾಷೆಗಳಂತೆಯೇ ಭಾರತೀಯ ಭಾಷೆಗಳಲ್ಲಿ ಒಂದಾಗಿರುವ ಉರ್ದುವನ್ನು ಮುಸ್ಲಿಮರು ಯಾಕೆ 'ನಮ್ಮದು' ಎಂದುಕೊಂಡಿದ್ದಾರೆ ? ಪಕ್ಕದ ತಮಿಳುನಾಡು, ಕೇರಳದ ಮುಸ್ಲಿಮರು ಆ ನಾಡಿನ ಭಾಷೆಯನ್ನೇ ಆಡುವುದು, ಅಲ್ಲಿನ ಭಾಷೆಯಲ್ಲಿಯೇ ಸಾಹಿತ್ಯ ರಚನೆ ಮಾಡುವುದು ಗೊತ್ತಿದ್ದೂ ಕೂಡ ಕರ್ನಾಟಕದ, ಅದರಲ್ಲೂ ಹಳೇ ಮೈಸೂರು ಸಂಸ್ಥಾನದ ಮುಸ್ಲಿಮರು ಕನ್ನಡ ಭಾಷೆಯ ಬಗ್ಗೆ ತೋರುತ್ತಿರುವ ಅಸಡ್ಡೆಗೆ ಬೇರೇನಾದರೂ ಐತಿಹಾಸಿಕ ಕಾರಣಗಳಿರಬಹುದೇ? ಕನ್ನಡ ನಮ್ಮ ಭಾಷೆಯಲ್ಲ ಎನ್ನುವಂತಹ ರೀತಿಯಲ್ಲಿ ವರ್ತಿಸುವ ಮುಸ್ಲಿಮರು ಉರ್ದು ಭಾಷೆಯನ್ನು ಆಯ್ದುಕೊಂಡಿರುವುದು ಇಸ್ಲಾಂನ ಪವಿತ್ರ ಗ್ರಂಥ 'ಕುರಾನ್' ಅರಬಿಕ್‌ನಲ್ಲಿದ್ದು, ಉರ್ದು ಅರಬಿಕ್ ಭಾಷೆಗೆ ಹತ್ತಿರವಾಗಿದೆ ಎನ್ನುವ ಕಾರಣಕ್ಕಿರಬಹುದೇ? ಅಥವಾ ಮುಸ್ಲಿಂ ಅರಸರ ಆಡಳಿತಾವಧಿಯಲ್ಲಿ ಉರ್ದು ಭಾಷೆಯಾಗಿದ್ದಂತಹ ಪ್ರದೇಶಗಳಲ್ಲಿನ ಮುಸ್ಲಿಮರೇ (ಗುಲ್ಬರ್ಗಾ, ಬಿಜಾಪುರ ಮುಂತಾದ ನಿಜಾಮರ ಆಡಳಿತಕ್ಕೊಳಪಟ್ಟ ಪ್ರದೇಶಗಳು) ಈಗ ಉರ್ದು ಮಾತೃ ಭಾಷೆಯಾಗಿರುವ ಮುಸ್ಲಿಮರಾಗಿರಬಹುದೇ? ಸ್ವಾತಂತ್ರ್ಯದ ನಂತರವಾದರೂ ಇವರು ಕನ್ನಡ ಭಾಷೆಯನ್ನು ಕಲಿಯಲಾಗದಂಥ ಸಾಮಾಜಿಕ, ರಾಜಕೀಯ ಅಡ್ಡಿಗಳೇನಿದ್ದವು? ಕನ್ನಡ ಮಾತನಾಡುವ ಪಿಂಜಾರರನ್ನು ಧಾರ್ಮಿಕ ಕಾರಣಕ್ಕಾಗಿ ವಿರೋಧಿಸುವ ಮುಸ್ಲಿಮರಿಗೆ ಈ ಪ್ರಶ್ನೆಗಳನ್ನು ಕೇಳಬೇಕಾಗಿರುವುದು ಅನಿವಾರ್ಯ. ಹಾಗೆಯೇ ಉರ್ದು ಮಾತಾಡುವವರೆಲ್ಲ ಮುಸ್ಲಿಮರೇ ಎಂದು ಭಾವಿಸುವ ಕರ್ನಾಟಕದ ಹಿಂದೂ ಜನಾಂಗದವರೂ ಕೂಡ ಉರ್ದು ಭಾರತದ್ದೇ ಒಂದು ಭಾಷೆ ಎಂಬಂತಹ ದೃಷ್ಟಿಯಿಂದ ನೋಡದೇ ಆ ಕಾರಣಕ್ಕಾಗಿ ಮುಸ್ಲಿಮರನ್ನು ಪ್ರತ್ಯೇಕವಾಗಿ ಕಾಣುವುದು ಯಾಕೆ ? ಅನ್ನುವ ಪ್ರಶ್ನೆಯೂ ಇದ್ದೇ ಇದೆ. ಆದರೆ ಒಟ್ಟಾರೆಯಾಗಿ ಪಿಂಜಾರರ ಭಾಷೆಯ ಬಗ್ಗೆ ಮಾತನಾಡುವಾಗ, ಪಕ್ಕದ ಆಂಧ್ರಪ್ರದೇಶ ಮತ್ತು ತಮಿಳುನಾಡಿನಲ್ಲಿರುವ ಪಿಂಜಾರರು ತೆಲುಗ-ತಮಿಳನ್ನೇ ಮಾತನಾಡುವಂತೆ, ಕರ್ನಾಟಕದ ಪಿಂಜಾರರ ಭಾಷೆ ಕೂಡ ಕನ್ನಡ ಎಂಬುದನ್ನು ಹೇಳುವಾಗ, ಈ ಕಾರಣದಿಂದಲೇ ಮುಸ್ಲಿಮರಿಂದ ಮತ್ತು ಆಗಾಗ್ಗೆ ಹಿಂದೂಗಳಿಂದ ಅಪಮಾನಕ್ಕೆ ಪಿಂಜಾರರು ಗುರಿಯಾಗುವುದಿದೆ ಎನ್ನುವಾಗ ಮೇಲಿನ ಪ್ರಶ್ನೆಗಳನ್ನು ನಮಗೆ ನಾವೇ ಕೇಳಿಕೊಂಡು ಅವುಗಳಿಗೆ ಕರ್ನಾಟಕದ ಸಾಮಾಜಿಕ ಇತಿಹಾಸದಲ್ಲಿ ಉತ್ತರಗಳನ್ನು ಕಂಡುಕೊಳ್ಳಬೇಕಾಗುತ್ತದೆ.

ವ್ಯಕ್ತಿಯ ಹೆಸರಿನ ಮೂಲಕವೇ ಆತನ ಅಥವಾ ಆವಳ ಜಾತಿಯನ್ನು, ಧರ್ಮವನ್ನು ಗುರುತಿಸುವುದು, ಆ ಮೂಲಕ ಆ ವ್ಯಕ್ತಿಯ ಜನಾಂಗಕ್ಕೆ ಇರುವ ಪೂರ್ವಗ್ರಹಿಕೆಗಳ ಆವರಣದಲ್ಲಿಯೇ ವ್ಯಕ್ತಿಯನ್ನು ನೋಡುವುದು ಈ ನೆಲದಲ್ಲಿ ಸಾಧ್ಯವಾಗುತ್ತದೆ. ಇದಕ್ಕೆ ಭಾಷೆಯ ಹಿನ್ನೆಲೆಯೇ ಮುಖ್ಯ ಕಾರಣ. ಭಾಷೆಯ ಬಳಕೆ ಮತ್ತು ಸ್ವರೂಪವನ್ನು ವೈಜ್ಞಾನಿಕವಾಗಿ, ಸರಳವಾಗಿ ಆದರೆ ಧಾರ್ಮಿಕ ಆವರಣದಿಂದ ಹೊರಗಿಟ್ಟು

ನೋಡುವ ಪರಿಪಾಠವೇ ನಮ್ಮಲ್ಲಿಲ್ಲವಾದ್ದರಿಂದ ಪಿಂಜಾರರ ಹೆಸರುಗಳು ಮುಸ್ಲಿಮರ ಹೆಸರುಗಳನ್ನೇ ಹೋಲುವುದರಿಂದ, ಕನ್ನಡ ನಾಮಪದಗಳನ್ನೆಲ್ಲ ಹಿಂದೂ ಹೆಸರುಗಳೆಂದೂ (ಉದಾ, ನಾಗರಾಜು, ಬಸವರಾಜ, ಮಲ್ಲಿಕಾರ್ಜುನ, ಪುಷ್ಪ, ಲತಾ, ನಳಿನಾ, ಇತ್ಯಾದಿ) ಕನ್ನಡ ಪದಗಳಲ್ಲದವುಗಳನ್ನು, ಅಂದರೆ ಇಬ್ರಾಹಿಂ, ಕಲೀಲ್, ಹೊನ್ನೂರ್ ಮುಂತಾದವನ್ನು ಮುಸ್ಲಿಮರ ಹೆಸರುಗಳೆಂದೂ ಇಲ್ಲಿ ತಿಳಿಯಲಾಗುತ್ತದೆ. ವಿಶೇಷವೆಂದರೆ ಮುಸ್ಲಿಮರ ಹೆಸರುಗಳಿಗೂ ಪಿಂಜಾರರ ಹೆಸರುಗಳಿಗೂ ಸ್ಪಷ್ಟವಾದ ವ್ಯತ್ಯಾಸಗಳೂ ಇವೆ. ಪಿಂಜಾರರಲ್ಲಿ ಸಾಮಾನ್ಯವಾಗಿರುವ ರಾಜಾಸಾಬ್, ಬುಡೇನ್‌ಸಾಬ್, ದಾದಾಪೀರ್, ಚಮನ್‌ಸಾಬ್, ಸೀತವ್ವ, ರೋಸವ್ವ, ಬುಡ್ಡವ್ವ, ಸಕ್ರವ್ವ ಮುಂತಾದ ನೂರಾರು ಹೆಸರುಗಳು ಮುಸ್ಲಿಮರಲ್ಲಿರುವುದಿಲ್ಲ. ಅಲ್ಲದೆ ಪಿಂಜಾರರ ಹೆಸರುಗಳು ಕೊನೆಯಲ್ಲಿ 'ಸಾಬ' ಒಳಗೊಂಡಿರುತ್ತವೆ. ಮತ್ತು ಸಂಬೋಧನೆಯಲ್ಲಿ ಬುಡ್ಡ, ದಾದಾ, ಚಮನ, ಹೊಂಡ್ರ (ಹೊನ್ನೂರ್) ಎಂದೂ, ವಯಸ್ಸಿಗೆ ತಕ್ಕಂತೆ ಹೆಸರುಗಳ ಜೊತೆಗೆ ಅಣ್ಣ, ಅಕ್ಕ, ಅಪ್ಪ, ಅವ್ವ, ಅಜ್ಜ, ಅಜ್ಜಿ ಎಂದು (ಬುಡ್ಡಣ್ಣ, ರೋಸಕ್ಕ, ಚಮನಪ್ಪ, ನೂರವ್ವ, ಹೊಂಡ್ರಜ್ಜ, ಪೀರಜ್ಜಿ ಮುಂತಾಗಿ) ಕನ್ನಡದ ಸಂಬಂಧ ಸೂಚಕ ಪದವನ್ನೇ ಸೇರಿಸಿಕೊಂಡು ಕನ್ನಡವೇ ಆಗಿಬಿಡುತ್ತವೆ.

ಪಿಂಜಾರರ ಭಾಷೆಯ ವೈಶಿಷ್ಟ್ಯ ಅವರು ವಾಸಿಸುವ ಪ್ರದೇಶಗಳ ವೈಶಿಷ್ಟ್ಯವೂ ಆಗಿದೆ. ಉತ್ತರ ಕರ್ನಾಟಕದ, ಬಯಲುಸೀಮೆಯ ಭಾಷೆಯ Accent ಪಿಂಜಾರರ ಭಾಷೆಯಲ್ಲಿ ಸಾಮಾನ್ಯವಾಗಿದೆ. ಚಿತ್ರದುರ್ಗ, ದಾವಣಗೆರೆಯ ಸುತ್ತ ಇರುವ ಪಿಂಜಾರರಿಗೆ ಸ್ವಲ್ಪಮಟ್ಟಿನ ಬೆಂಗಳೂರು ಪ್ರಾಂತ್ಯದ ಭಾಷೆಯ ಪ್ರಭಾವವಿದೆ. ಬಳ್ಳಾರಿ, ರಾಯಚೂರು, ಕೋಲಾರದ ಗಡಿ ಪ್ರದೇಶದ ಪಿಂಜಾರರಿಗೆ ತೆಲುಗಿನ ಪ್ರಭಾವವಿದೆ. ಗುಲ್ಬರ್ಗಾ, ಬಿಜಾಪುರ ಮತ್ತು ಬೆಳಗಾಂ ಕಡೆಯ ಪಿಂಜಾರರಿಗೆ ಉರ್ದು ಮತ್ತು ಮರಾಠಿಯ ಪ್ರಭಾವ ಇರುವುದು ತಿಳಿದು ಬರುತ್ತದೆ. ಇಂಥ ಪ್ರಭಾವ ಏನಿದ್ದರೂ ಅಲ್ಲಲ್ಲಿನ ಸ್ಥಳೀಯರೊಂದಿಗೆ ಹೊಂದಿಕೊಳ್ಳಬೇಕಾದ ವ್ಯಾವಹಾರಿಕ ಅಗತ್ಯಕ್ಕೆ ತಕ್ಕಂತಿರುತ್ತದೆಯೇ ಹೊರತು ಉಳಿದಂತೆ ಎಲ್ಲ ಪಿಂಜಾರರ ಜೀವನದ ಕೊಡು-ಕೊಳುವುದು ಕನ್ನಡದಲ್ಲಿಯೇ ನಡೆಯುತ್ತದೆ.

ಹಾಸಿಗೆ ಮಾಡುವುದು ಮತ್ತು ವ್ಯವಸಾಯ, ಕೃಷಿಗೆ ಪೂರಕವಾದ ಕೆಲಸಗಳನ್ನು ಮಾಡಿಕೊಂಡಿರುವ ಹಳ್ಳಿಯ ಪಿಂಜಾರರು ಕನ್ನಡವನ್ನೇ ಉಳಿಸಿಕೊಂಡರೆ, ಹೊಟ್ಟೆಪಾಡಿಗೆ ನಗರಗಳನ್ನು ಸೇರಿಕೊಂಡಿರುವ ಪಿಂಜಾರರು ಉರ್ದು ಮತ್ತು ತೆಲುಗನ್ನು ಜೊತೆಜೊತೆಗೆ ಕನ್ನಡವನ್ನು ಮಾತನಾಡುತ್ತಾರೆ. ಆದರೆ ಪಿಂಜಾರರು ಎಲ್ಲೇ ಇರಲಿ ಅವರಿಗೆ ಪೂರ್ತಿ ಬರುವುದು ಕನ್ನಡ ಮಾತ್ರ.

ಪಿಂಜಾರರ ಸಾಹಿತ್ಯದ ಹಿನ್ನೆಲೆಯಲ್ಲಿ ಕೂಡ ಅವರ ಭಾಷೆಯನ್ನು ಕುರಿತಂತೆ ಸಾಂದರ್ಭಿಕ ವಿಶ್ಲೇಷಣೆ ಸಾಧ್ಯವಾಗುತ್ತದೆ. ಒಟ್ಟಾರೆಯಾಗಿ ಪಿಂಜಾರರು ಇಸ್ಲಾಂನ ಅರೆಬರೆ ತಿಳುವಳಿಕೆಯಿಂದಾದರೂ ಅವರ ಹಬ್ಬ, ಮದುವೆ, ಮುಂಜಿ ಮುಂತಾದ ಆಚರಣೆಗಳ ಸಂದರ್ಭದ ಪರಿಭಾಷೆಗಳನ್ನು ಕನ್ನಡಕ್ಕೆ ತಂದು ಕನ್ನಡವನ್ನು ಮತ್ತಷ್ಟು ಶ್ರೀಮಂತಗೊಳಿಸುವ ಕೆಲಸದಲ್ಲಿ ತಮಗರಿವಿಲ್ಲದಂತೆ ತೊಡಗಿದ್ದಾರೆ ಎನ್ನಬಹುದು.

ಪಿಂಜಾರರ ಬದುಕಿನ ಬಹುಭಾಷಿಕ ಸ್ವರೂಪ ಅವರ ಬಹುಧಾರ್ಮಿಕತೆಗೂ ಕಾರಣವಿದ್ದೀತೆ? ಎನ್ನುವುದನ್ನು ತಿಳಿಯಬೇಕಾಗಿದೆ. ಯಾಕೆಂದರೆ ಹಿಂದೆ ತಿಳಿಸಿದಂತೆ ಪಿಂಜಾರರು ಮೂಲತಃ

ಆಂಧ್ರಪ್ರದೇಶದ ದೂದೇಕುಲ ಜನಾಂಗದವರಾಗಿದ್ದು, ಅವರ ಮನೆಭಾಷೆ ತೆಲುಗು ಮತ್ತು ಉತ್ತರ ಕರ್ನಾಟಕದ ಪಿಂಜಾರರು ವೀರಶೈವ ಚಳುವಳಿಯ ಮೌಲ್ಯಗಳಿಂದ ಪ್ರೇರಿತವಾದ ಜೀವನಕ್ರಮವನ್ನು ಹೊಂದಿದ್ದು, ಆ ಚಳುವಳಿಯ ಪರಿಭಾಷೆಗಳು ಪಿಂಜಾರರಲ್ಲಿ ದಟ್ಟವಾಗಿ ಕಾಣುವುದು ಕನ್ನಡದಲ್ಲಿ ! ಹಾಗಾಗಿ ಪಿಂಜಾರರ ಈ ಬಹುಭಾಷಿಕತೆ ಇನ್ನೂ ಮುಂದುವರಿದು ಉರ್ದು, ಮರಾಠಿಯನ್ನು ತನ್ನ ತೆಕ್ಕೆಗೆ ತೆಗೆದುಕೊಳ್ಳುತ್ತದೆ. ಇದು ಸಾಧ್ಯವಾಗುವುದು ಪಿಂಜಾರ ಜನಾಂಗದ ಒಟ್ಟು ಚರಿತ್ರೆಯನ್ನು ಗಮನಿಸಿದಾಗ. ಒಂದು ಕಡೆ ಮತಾಂತರದ ಸಂಕರಕ್ಕೆ ಒಳಗಾದ ಪಿಂಜಾರರು ತಮ್ಮ ಮೂಲಭಾಷೆ ಮತ್ತು ಸಂವೇದನೆಗಳಿಂದ ಹೊರಬರಲಾಗದೇ ಉಳಿದರು. ಬಸವಣ್ಣ ಮತ್ತಿತರರ ಸಾಮಾಜಿಕ ಆಂದೋಲನದ ಪರಿಣಾಮವಾಗಿ ಹಿಂದೂ ಧರ್ಮದ ಕೆಳನೆಲೆಯ ಅನೇಕ ಜನಾಂಗಗಳು ದನಿ ಪಡೆದುಕೊಂಡದ್ದು ಕನ್ನಡದಲ್ಲಿ. ಸರಿ ಸುಮಾರು ಇದೇ ಹೊತ್ತಿನಲ್ಲಿ 'ಭಾರತದ ಮುಸ್ಲಿಂ ದೊರೆಗಳು ಸಂಪ್ರದಾಯವಾದಿ ಇಸ್ಲಾಮಿನ ಹಿಡಿತದಿಂದ ಬಿಡಿಸಿಕೊಂಡು ತಮ್ಮ ರಾಜಕಾರಣಕ್ಕೆ ಸ್ವತಂತ್ರ ನೆಲೆ ಕಂಡುಕೊಳ್ಳುವ ತುರ್ತಿನಲ್ಲಿದ್ದರು. ಇದೇ ಹೊತ್ತಲ್ಲಿ ಸನಾತನವಾದಿ ಇಸ್ಲಾಮಿನ ಹಿಡಿತದಿಂದ ಅನುಭಾವತತ್ವವನ್ನು ಬಿಡುಗಡೆ ಮಾಡುವ ಹೋರಾಟದಲ್ಲಿ ಸೂಫಿಗಳೂ ಇದ್ದರು. ಇಬ್ಬರೂ ಹೀಗಾಗಿ ಸಾಮಾನ್ಯ ಎದುರಾಳಿಯ ಬಗ್ಗೆ ಒಬ್ಬರಿಗೊಬ್ಬರು ಸಹಾಯ ಪಡೆದುಕೊಳ್ಳತೊಡಗಿದರು. ಸೂಫಿಗಳೂ, ಮುಸ್ಲಿಂ ಪ್ರಭುತ್ವಗಳೂ ಭಾರತದಲ್ಲಿ ನೆಲೆಯೂರುವ ಈ ಸಂಕ್ರಮಣ ಕಾಲದಲ್ಲಿ ಉರ್ದು ಭಾಷೆ ಕಣ್ಬಿಡತೊಡಗಿತು. ಇಸ್ಲಾಮೀ ಸನಾತನವಾದದ ಜತೆ ಗುದ್ದಾಡುತ್ತಾ, ಸ್ಥಳೀಯ ಜನತೆ ಸಂಸ್ಕೃತಿ, ಪಂಥಗಳ ಜತೆ ಬೆರೆಯುತ್ತ, ಫಾರಸಿ ಅರಬಿಗಳಲ್ಲದ ಮೂರನೇ ಭಾಷೆಯನ್ನು ಸೂಫಿಗಳು ಕಂಡುಕೊಂಡರು. ಅದರಲ್ಲಿ ಅನುಭಾವದ ಅಭಿವ್ಯಕ್ತಿಗೆ ಬೇಕಾದ ಪ್ರತಿಮಾತ್ಮಕತೆಯನ್ನು ರೂಢಿಸಿಕೊಂಡರು. ಇದರಿಂದ ಮತಧರ್ಮಗಳಾಚೆ ಹೋಗಿ ಮಾನವ ಐಕ್ಯವನ್ನು ಪ್ರತಿಪಾದಿಸಲು ಅವರಿಗೆ ಸಾಧ್ಯವಾಯಿತು.' ಪಿಂಜಾರರನ್ನು ಉರ್ದು ಭಾಷೆ ಪ್ರಭಾವಿಸಿದುದಕ್ಕೆ ಸೂಫಿಗಳ ಈ ಪ್ರಯತ್ನ ಸಹಕಾರಿಯಾಯಿತು ಎಂಬಂತೆ ಕಾಣುತ್ತದೆ. ಯಾಕೆಂದರೆ ಈಗಾಗಲೇ ಪಿಂಜಾರರು ಬಹುಧಾರ್ಮಿಕತೆಯ ಜೀವನವಿಧಾನವನ್ನು ಅಳವಡಿಸಿಕೊಂಡು ಅವುಗಳಾಚೆಗಿನ ಮನುಷ್ಯನನ್ನು ಕಂಡುಕೊಳ್ಳುವ ಮತ್ತು ಹುಸಿ ಧಾರ್ಮಿಕತೆಯ ನಿರರ್ಥಕತೆಯನ್ನು ಅರಿಯುವ ಪ್ರಯತ್ನದಲ್ಲಿದ್ದರು. ಹಾಗೆಂತಲೇ ಇವತ್ತಿಗೂ ಕರ್ನಾಟಕ ಮತ್ತು ಆಂಧ್ರಪ್ರದೇಶದ ಗಡಿಭಾಗದ ಜಿಲ್ಲೆಯ ಊರುಗಳಲ್ಲಿ ಬಹುಭಾಷಿಕತೆ ಸ್ಪಷ್ಟವಾಗಿ ಕಂಡುಬರುತ್ತದೆ. ಪಿಂಜಾರನೂ, ಕರ್ನಾಟಕದ ತತ್ವಪದಕಾರನೂ ಆಗಿದ್ದ ಮೋಟ್ನಳ್ಳಿ ಹಸನಸಾಬನ ಬಗ್ಗೆ ಬರೆಯುವಾಗ ವಿದ್ವಾಂಸರೊಬ್ಬರು ಹೀಗೆ ಬರೆಯುತ್ತಾರೆ, 'ಗುರುಮಠಕಲ್ ಮೊದಲು ಮಾಡಿಕೊಂಡು ಯಾದಗಿರಿ ಸೇಡಂ ತಾಲ್ಲೂಕುಗಳ ಆಂಧ್ರದ ಗಡಿಹಳ್ಳಿಗಳಲ್ಲಿ ವಿಚಿತ್ರ ಪರಿಸ್ಥಿತಿ ಇದೆ. ಮನೆಮಾತು ಮಾತ್ರ ತೆಲುಗು. ವ್ಯವಹಾರ ಭಾಷೆ ಉರ್ದು. ಬರವಣಿಗೆ ಮರಾಠಿ, ಧಾರ್ಮಿಕ ಸಾಂಸ್ಕೃತಿಕ ಭಾಷೆ ಕನ್ನಡ'1. ಇಂತಹ ಪರಿಸ್ಥಿತಿ ರಾಜ್ಯಾದ್ಯಂತ ಚದುರಿ ಹೋದ ಪಿಂಜಾರರಲ್ಲಿ ಕಂಡುಬರುತ್ತದೆ. ಅಲ್ಲಿನ ಪ್ರಾದೇಶಿಕತೆಯ ಅನಿವಾರ್ಯ ಒತ್ತಡಗಳಿಂದ ಭಾಷೆಗಳು ಬದಲಾಗಬಹುದೇ ಹೊರತು ಮೂಲಪರಿಸ್ಥಿತಿ ಬೇರೆಯಾಗುವುದಿಲ್ಲ. ಆದುದರಿಂದ 'ಈ ವಿಚಿತ್ರ ಪರಿಸ್ಥಿತಿ ಯಾಕಾಗಿ ಉಂಟಾಯಿತು? ಕರ್ನಾಟಕ ಆಂಧ್ರ ಗಡಿಭಾಗಗಳಲ್ಲಿ ಈ ಹಳ್ಳಿಗಳು

ಇರುವುದರಿಂದ ಕನ್ನಡ ತೆಲುಗು ಇವೆ. ಆದಿಲಶಾಹಿ ಕಾಲದಲ್ಲಿ ಮರಾಠಿ, ಹೈದ್ರಾಬಾದ್ ನಿಜಾಮರ ಕಾಲದಲ್ಲಿ ಉರ್ದು ಆಡಳಿತಭಾಷೆಯಾಗಿದ್ದರಿಂದ ಉರ್ದು ಮರಾಠಿಗಳಿವೆ. ರಾಜಕೀಯ ಕಾರಣಕ್ಕಾಗಿ ಉರ್ದು ಮರಾಠಿಗಳು ವ್ಯವಹಾರ ಮತ್ತು ಬರವಣಿಗೆಗಳಲ್ಲಿ ಇರುವುದು ಸರಿ. ಆದರೆ ತೆಲುಗು ಮನೆ ಮಾತಾಗಿ ಕನ್ನಡ ಸಾಂಸ್ಕೃತಿಕ ಭಾಷೆಯಾಗಿ ಇರುವುದರ ಕಾರಣ ಸ್ಪಷ್ಟವಾಗುವುದಿಲ್ಲ'2 ಎಂಬ ಮಾತಿಗೆ ಪಿಂಜಾರ ಜನಾಂಗದ ಚರಿತ್ರೆ ಮತ್ತು ಜೀವನವಿಧಾನದಲ್ಲಿ ಉತ್ತರ ಕಂಡುಕೊಳ್ಳಬಹುದಾಗಿದೆ.

ಪಿಂಜಾರರು ಮತ್ತವರ ಭಾಷೆಯ ಕುರಿತು ಮಾತನಾಡುವಾಗ ಕರ್ನಾಟಕದ ಸೂಫಿ ಸಾಹಿತ್ಯವನ್ನು ಗಮನದಲ್ಲಿಟ್ಟುಕೊಳ್ಳಬೇಕಾಗಿದೆ. 'ಸೂಫಿಗಳೆಂದರೆ ಕೇವಲ ಯೋಗಸಾಧನೆ ಮಾಡುತ್ತಿದ್ದ ಸಂತರಲ್ಲ. ಕವಿಗಳು ವಿದ್ವಾಂಸರು, ವಿರಕ್ತರು, ಸಂಸಾರಿಗಳು, ಶಾಸ್ತ್ರಕಾರರು, ಸಂಗೀತಕಾರರು ,ಪ್ರಭುತ್ವ ವಿರೋಧಿಗಳು, ವ್ಯವಸ್ಥೆಯ ಭಾಗವಾಗಿದ್ದವರು, ಸನಾತನಿಗಳು, ನಿರಂಕುಶಮತಿ ತತ್ವಜ್ಞಾನಿಗಳು - ಹೀಗೆ ಅದೊಂದು ಬಹುರೂಪಿಯಾದ ಲೋಕ' ಸೂಫಿಗಳ ಸಾಹಿತ್ಯ ಕೂಡ ದೊರೆಯಿರಲಿ ಗುಲಾಮನಿರಲಿ ಮನುಷ್ಯನ ಹಂಗು ತೊರೆದ, ತನ್ನ ಒಳಗೇ ಇರುವ ದೈವವನ್ನು ಅರಿಯುವ, ತಾನೇ ದೈವವಾಗುವ ಧೋರಣೆಯನ್ನು ಪ್ರಕಟಿಸುತ್ತದೆ. ಎಲ್ಲ ಮತಧರ್ಮಗಳ ಆಚರಣೆಗಳ ಆಚೆಯಲ್ಲಿ ಮನುಷ್ಯನ ಐಕ್ಯವನ್ನು ಕಾಣುವುದರಲ್ಲಿ ಸೂಫಿಗಳ ಆಸಕ್ತಿಯಿದೆ. ಪಿಂಜಾರರು ರೂಪಿಸಿಕೊಂಡಿರುವ ಜೀವನವಿಧಾನಕ್ಕೂ ಸೂಫಿಗಳ ಮನೋಧರ್ಮಕ್ಕೂ ಇಲ್ಲಿ ಸಂಬಂಧವಿದೆ ಎನಿಸುತ್ತದೆ. ಕರ್ನಾಟಕದ ಸೂಫಿಗಳ ಆರಾಧನಾ ಕೇಂದ್ರಗಳಿಗೆ ಇವರು ನಿಷ್ಠರಾಗಿರುವುದು, ಸೂಫಿ ಹಿನ್ನೆಲೆಯ ಜನರ ಹೆಸರುಗಳು ಪಿಂಜಾರರಲ್ಲಿ ಜನಪ್ರಿಯವಾಗಿರುವುದೂ ಅದನ್ನೇ ಸೂಚಿಸುತ್ತದೆ.

ಇನ್ನು ಪಿಂಜಾರ ಜನಾಂಗದಲ್ಲಿ ಕಂಡು ಬರುವ ಸಾಹಿತ್ಯದ ಚರ್ಚೆ ಮಾಡಬಹುದು. ಪಿಂಜಾರ ಜನಾಂಗದಲ್ಲಿ ಸಾಮಾನ್ಯವಾಗಿರುವ 'ರಿವಾಯಿತಿ' ಪದಗಳು ಅವರ ಸಾಮಾಜಿಕ ಧಾರ್ಮಿಕ ಮನೋಧರ್ಮವನ್ನು ಪ್ರಕಟಿಸುವ ಸಾಹಿತ್ಯಕ ರೂಪಗಳೂ ಆಗಿವೆ. ರಿವಾಯಿತಿ ಪದಗಳ ವಿಶ್ಲೇಷಣೆ ಮಾಡುವ ಮುನ್ನ ಪಿಂಜಾರರು ಮತ್ತು ಸಾಹಿತ್ಯವನ್ನು ಕುರಿತು ಎರಡು ಮುಖ್ಯ ನೆಲೆಯಲ್ಲಿ ಚರ್ಚಿಸಬಹುದಾಗಿದೆ.

೧. ಪಿಂಜಾರರಲ್ಲಿ ದೊರೆಯುವ ಜನಪದ ಸಾಹಿತ್ಯ.

೨. ಪಿಂಜಾರರು ಮತ್ತು ಆಧುನಿಕ ಕನ್ನಡ ಸಾಹಿತ್ಯ.

ಈ ಮೇಲಿನ ಎರಡು ಮುಖ್ಯ ನೆಲೆಗಳನ್ನು ಸಂಕ್ಷಿಪ್ತವಾಗಿ ವಿಶ್ಲೇಷಿಸಿಕೊಳ್ಳಬಹುದು.

೧) ಪಿಂಜಾರರಲ್ಲಿ ದೊರೆಯುವ ಜನಪದ ಸಾಹಿತ್ಯ : ಪಿಂಜಾರ ಜನಾಂಗದಲ್ಲಿ ಮುಖ್ಯವಾಗಿ ರಿವಾಯಿತಿ ಪದಗಳು, ಲಾವಣಿಗಳು, ಕತೆಗಳು, ಗಾದೆ, ಒಗಟುಗಳು ದೊರೆಯುತ್ತವೆ. ಈ ಸಾಹಿತ್ಯ ಪ್ರಕಾರಗಳಲ್ಲಿ ರಿವಾಯಿತಿ ಪದಗಳನ್ನು ವಿಶೇಷವಾಗಿ ಮೊಹರಂ ಹಬ್ಬದಲ್ಲಿ ಹಾಡಲಾಗುತ್ತದೆ. ಮೊಹರಂ ಪದಗಳು ಎಂದೂ ಇವುಗಳನ್ನು ಕರೆಯಲಾಗುತ್ತದೆ. ಈ ಪದಗಳ ಬಗೆಗಿನ ಸ್ಥೂಲವಾದ ಅಧ್ಯಯನವೊಂದು ಹೀಗಿದೆ. 'ಹಿಂದೂ-ಮುಸ್ಲಿಮರು ಒಟ್ಟಿಗೆ ಸೇರಿ ಪರಸ್ಪರ ಪ್ರೀತಿ ವಿಶ್ವಾಸಗಳಿಂದ ಆಚರಿಸುವ ಹಬ್ಬ ಮೊಹರಂ.

ಮಹ್ಮದ್ ಪೈಗಂಬರರ ಮೊಮ್ಮಗ ಹಜರತ್ ಇಮಾಮ್ ಹುಸೇನ್. ಇವರು ತಮ್ಮ ಅನೇಕ ಅನುಯಾಯಿಗಳ ಜತೆಗೆ ದುಷ್ಟನಾದ ಯಜೀದನ ಸೈನ್ಯವನ್ನು ಕರ್ಬಲಾದ ಮೈದಾನದಲ್ಲಿ ಎದುರಿಸಿದರು. ನ್ಯಾಯಕ್ಕಾಗಿ ಹೋರಾಡುವ ದಾರಿಯಲ್ಲಿ ಸತ್ತರು. ಹಾಗೆ ಸತ್ತದ್ದು ಮೊಹರಂ ತಿಂಗಳಿನ ಹತ್ತನೆಯ ದಿನ. ಹುತಾತ್ಮ ಇಮಾಮರ ಆದರ್ಶದ ನೆನಪಾಗಿ 'ಮೊಹರಂ' ಹಬ್ಬ ಆಚರಿಸಲ್ಪಡುತ್ತಿದೆ. ಹಳ್ಳಿಗಳ ಉತ್ಸಾಹೀ ಯುವಕರು 'ಕರ್ಬಲಾಮೇಳ' ಕಟ್ಟುವರು. ಶಿಸ್ತಿನಿಂದ ಕುಣಿಯುತ್ತಾ ಹಾಡುತ್ತಾ ಹೋಗುವರು.' ಈ ಹಾಡುಗಳನ್ನು ಕರ್ಬಲಾ ಹಾಡುಗಳೆಂದು ಕೂಡ ಕರೆಯುತ್ತಾರೆ. ಹುಸೇನರ ಹೋರಾಟದ ಚಿತ್ರ ಹಾಡುಗಳಲ್ಲಿ ಹೀಗೆ ಕಂಡುಬಂದಿದೆ :

*ಲಢಾಯಿ ತಯ್ಯಾರ ಆದಾರ ಒಂಟೆಮ್ಯಾಲೆ ಸ್ವಾರಾ*
*ಹೊರಟು ನಿಂತಾರೊ ಕರ್ಬಲಾಭೂಮಿಗೆ ಬಂಧುಬಳಗ ಪೂರಾ*
*ಆರ್‍ಯಾಣದಾಗವರಾ ಕಾಣದ ಮೂರು ದಿವಸ ನೀರಾ*

*ಕುಡದಾರೊ ಕಣ್ಣೀರಾ ಮಕ್ಕಳು ಹುಡುಗರು ಹೆಂಗಸರಾ*
*ಜಂಗ ಎದರ - ಬದರಾ ವೈರಿಯ ಮೋಸಕ ಜಯಕಾರಾ*
*ಶರಣು ಹೋಗದವರಾ ಸ್ವರ್ಗಕೆ ಹೋದಾರೊ ಹಜರತಾರಾ ॥*

ಇಮಾಮರನ್ನು ಕುರಿತು ಸ್ಮರಣೆಯ ಜತೆಯಲ್ಲಿನ ಗೌರವ ಇನ್ನೂ ಮುಂದುವರಿಯುತ್ತದೆ :

*ಧರ್ಮಕ ಸತ್ತವರ ಸಿಗತಾರಾ ಕೋಟಿಗೊಬ್ಬ ಜನರಾ*
*ಮುಸಲಮಾನ ಮಂದ್ಯಾಗ ದೊರೀತಾರ ಹುಸೇನ ಸಾಹೇಬರಾ -*
*ಯಜೀದನವತಾರಾ ನಡೆಸಿಕೊ ಅಧಿಕಾರ ಭರಪೂರಾ*
*ನೋಡಲಾಗದ ಎದುರಾಗಿ ನಿಂತಾರೊ ಹಜರತ ಹುಸೇನರಾ ॥*

ಮೊಹರಂ ಪದಗಳಲ್ಲಿ ಹುಸೇನರ ಕಥೆಗೆ ಸಂಬಂಧಿಸಿದ ಮುಖ್ಯವಾದ ಹಾಡುಗಳು ಇವೆ. ಇವುಗಳ ಜತೆಗೆ ಇಸ್ಲಾಂ ಮತದ ಮಹಾಪುರುಷರ ಜೀವನ ಮೌಲ್ಯಗಳ ಸುತ್ತಲೂ ಹೆಣೆದಿರುವ ಪವಾಡದ ಕಥೆಗಳು ಕೂಡ ಕಂಡುಬರುತ್ತವೆ. ಇತಿಹಾಸದಲ್ಲಿ ಕಾಣದಿರುವ ಪವಾಡಗಳನ್ನು ವ್ಯಕ್ತಿಗಳ ಚರಿತ್ರೆಗೆ ಲಗತ್ತಿಸುವ ಚಾಳಿಯು ಇಂಡಿಯಾದ ಸಂಸ್ಕೃತಿಯ ಮೂಲಕ ಈ ಕಥೆಗಳಿಗೆ ಹರಿದಿರುವುದನ್ನು ನಾವು ಕಾಣುತ್ತೇವೆ. ಇಸ್ಲಾಂ ಪವಾಡ ಕಥೆಗಳ ಮೇಲೆ ಸ್ಥಳೀಯ ಜನಪದ ಕಥೆಗಳ ಪ್ರಭಾವ ಆಗಿರುವುದನ್ನು ಗುರುತಿಸುವುದು ಕೂಡ ಕಷ್ಟವೇನೂ ಆಗಿಲ್ಲ.

'ಬೀಬಿ ಫಾತಿಮಾಳ ಭಕ್ತಿ ಪರೀಕ್ಷೆ'ಯು 'ಸಿರಿಯಾಳ ಸೆಟ್ಟಿ'ಯ ಕಥೆಯನ್ನು ಹೋಲುತ್ತದೆ. 'ಮೌಲಾಲಿ ಗರ್ವಭಂಗ'ಕ್ಕೂ 'ಭೀಮನ ಗರ್ವಭಂಗ'ಕ್ಕೂ ನಂಟು ಇರುವ ರೀತಿಯಲ್ಲಿಯೇ 'ಬೆಳುವನ ಪದ' ಮತ್ತು 'ಶಿಬಿ ಚಕ್ರವರ್ತಿಯ ಕಥೆ'. ಹಾಗೆಯೇ 'ಚಿಗರಿಯ ಕಥೆ' ಮತ್ತು 'ಗೋವಿನ ಹಾಡು'ಗಳ ನಡುವೆ ತೀರಾ ಹತ್ತಿರದ ಸಂಬಂಧ ಕಂಡುಬರುತ್ತದೆ.

ಇಷ್ಟಲ್ಲದೆ ಇಸ್ಲಾಂ ಪರಿಭಾಷೆಗೆ ಯಾವುದೇ ಸಂಬಂಧ ಇಟ್ಟುಕೊಳ್ಳದೆ ಹಾಡಲ್ಪಡುವ ಮೊಹರಂ ಪದಗಳೂ ಕೂಡ ಇವೆ. 'ಪತಿವ್ರತೆ ಪಡೆದ ಫಲ' 'ಹರನಾಮಸ್ಮರಣೆಯ ಮಹತ್ವ' ಮುಂತಾದವುಗಳು ಈ ಗುಂಪಿನವು. ಮೂಲತಃ ಇಸ್ಲಾಂ ಸಂಸ್ಕೃತಿಯಿಂದ ಮೂಡಿಬಂದ ಈ ಪದಗಳ ಮೇಲೆ ಹಿಂದೂ ಸಂಸ್ಕೃತಿಯ ಸ್ಪಷ್ಟವಾದ ಮುದ್ರೆ ಕಾಣುತ್ತಿದೆ. ವೀರಶೈವ ಪರಿಭಾಷೆಯ ಹರ, ಶರಣ, ಮಾದೇವ, ಶಿವ ಮುಂತಾದ ಪದಗಳು ಇಲ್ಲಿ ಹೆಚ್ಚಾಗಿವೆ.' 3

ಇಂಥ ರಿವಾಯಿತಿ ಪದಗಳ ರಚನೆಯ ಸ್ವರೂಪ, ಕಥಾವಸ್ತು, ಭಾಷೆ, ಮೊದಲಾದವುಗಳ ದೃಷ್ಟಿಯಿಂದ ಇವುಗಳನ್ನು ಪ್ರಧಾನವಾಗಿ ಇಸ್ಲಾಂ ಧರ್ಮಕ್ಕೆ ಸಂಬಂಧಿಸಿದ ಪದಗಳು ಹಾಗೂ ಇಸ್ಲಾಮೇತರ ಧರ್ಮಕ್ಕೆ ಸಂಬಂಧಿಸಿದ ಪದಗಳು ಎಂದು ವಿಂಗಡಿಸಬಹುದಾಗಿದೆ. ಪಿಂಜಾರರಲ್ಲಿ ಇಸ್ಲಾಂ ಧರ್ಮದ ಕೆಲವು ಶರಣರನ್ನು ಕುರಿತು ಹಾಡುವುದರ ಜೊತೆಗೆ ಇಸ್ಲಾಮೇತರ ಧರ್ಮಗಳಿಗೆ ಸಂಬಂಧಿಸಿದ ಪದಗಳನ್ನು ಹಾಡಲಾಗುತ್ತದೆ. ಸಾಮಾನ್ಯವಾಗಿ ಹಾಡುವ ಗುಂಪು ಕೇವಲ ಪಿಂಜಾರರಿಂದಲೂ ಕೂಡಿರುವುದಿಲ್ಲ. ಆ ಗುಂಪಿನಲ್ಲಿ ಮುಸ್ಲಿಮರು, ಹಿಂದೂ ಧರ್ಮದವರು ಕೂಡ ಇರುತ್ತಾರೆ. ಪ್ರತಿಯೊಂದು ಗುಂಪಿನಲ್ಲಿ ಒಬ್ಬ ಮುಖ್ಯ ಹಾಡುಗಾರ, ಉಳಿದವರು ಆತನ ದನಿಗೆ ದನಿಗೂಡಿಸುತ್ತ ಇರುವವರು. ಮೊಹರಂ ಹಬ್ಬದ 'ಕತ್ತಲ ರಾತ್ರಿ' ಎಂದು ಕರೆಯುವ ಕೊನೆಯ ದಿನದ ರಾತ್ರಿ ಈ ಪದಗಳನ್ನು ಹಾಡುವ ಎರಡು ಗುಂಪುಗಳು ತಯಾರಾಗುತ್ತವೆ. ಸೇರಿಗೆ ಸವಾ ಸೇರಿನಂತೆ ಒಬ್ಬರು ಹಾಡಿದ ಪದವನ್ನು ಪುನರಾವರ್ತಿಸದೆ ದನಿ ಎತ್ತರಿಸಿ ರಾಗಬದ್ಧವಾಗಿ ಹಾಡುವ ಈ ಪದಗಳು ಕೇಳುವುದಕ್ಕೆ ಹಿತವಾಗಿರುತ್ತವೆ. ಆ ರಾತ್ರಿ ಬೆಳಗಾಗುವವರೆಗೂ ನಡೆಯುವ ಈ ಆಚರಣೆ ವಾಸ್ತವವಾಗಿ 'ದೇವರುಸತ್ತ' ಎಂದು ತಿಳಿದು ದೇವರ ಮಹಿಮೆಯನ್ನು ಶೋಕಪೂರಿತವಾಗಿ ನೆರೆದ ಜನಸ್ತೋಮ ಕಣ್ಮುಚ್ಚದಂತೆ ಮಾಡುತ್ತದೆ. ಈ ರಿವಾಯಿತಿ ಪದಗಳ ಹಿನ್ನೆಲೆಯನ್ನು ಗುರುತಿಸುವುದು ಪಿಂಜಾರರ ಜೀವನವಿಧಾನದ ಮೂಲಸ್ವರೂಪವನ್ನು ತಿಳಿದುಕೊಳ್ಳುವ ದೃಷ್ಟಿಯಿಂದ ಅನಿವಾರ್ಯವಾಗಿದೆ.

ಪಿಂಜಾರರು ಸಾಮಾನ್ಯವಾಗಿ ಮೊಹರಂ ಹಬ್ಬದ ಸಂದರ್ಭದಲ್ಲಿ ಈ ರಿವಾಯಿತು ಪದಗಳನ್ನು ಹಾಡುತ್ತಾರೆ. ಇವುಗಳನ್ನು ಸವಾಲು ಪದಗಳು ಅಥವಾ ತೋಡಿ ಪದಗಳು ಎಂದೂ ಕರೆಯುತ್ತಾರೆ. ಮುಖ್ಯವಾಗಿ ಇಸ್ಲಾಂ ಧರ್ಮದ ಶರಣರನ್ನು ಕುರಿತಂತಿರುವ ಈ ಪದಗಳನ್ನು ಮೊಹರಂ ಕಡೆಯ ದಿನದ ರಾತ್ರಿಯಿಡೀ ನೆರೆದ ಜನಸಮೂಹದಲ್ಲಿ ಹೇಳಲಾಗುತ್ತದೆ. ಪಿಂಜಾರರೂ ಸೇರಿದಂತೆ ಮುಸ್ಲಿಂ ಮತ್ತು ಹಿಂದೂ ಜನಾಂಗದವರೂ ಕೂಡ ಹಾಡುವ ಈ ಪದಗಳು ಕನ್ನಡದ ಜನಪದ ಕಥನ ಗೀತೆಗಳನ್ನು ಹೋಲುತ್ತವೆ. ಪ್ರಧಾನ ಗಾಯಕನೊಂದಿಗೆ ಮೇಳ ಅಥವಾ ಸಂಗಡಿಗರ ರೂಪದಲ್ಲಿ ಇಬ್ಬರು ಮೂವರು ಸಹ ಗಾಯಕರಿರುತ್ತಾರೆ. ಇಂಥ ಎರಡು ಗುಂಪುಗಳು ಎದುರು ಬದುರು ಕುಳಿತು ಒಂದು ಗುಂಪಿನವರ ಹಾಡಿಗೆ ಪ್ರತಿಯಾಗಿ ಸವಾಲು ಹಾಕುತ್ತಾರೆ. ಪಿಂಜಾರರಲ್ಲಿ ಸವಾಲು ಮತ್ತು ತೋಡಿ ಅನ್ನುವ ಪದಗಳಿಗೆ ಒಗಟು ಅನ್ನುವ ಅರ್ಥವೂ ಇದ್ದಂತಿದೆ. ಇಸ್ಲಾಂ ಶರಣರ ಬಗ್ಗೆ ಇರುವ ಈ ಪದಗಳು ಮುಖ್ಯವಾಗಿ ಈ ಲೋಕಸೃಷ್ಟಿಯನ್ನು ಕುರಿತಂತೆ, ಅದರ ಮಹಿಮೆಯ ಬಗ್ಗೆ, ಅವರು ಬಾಳಿ ಬದುಕಿದ ಬಗ್ಗೆ ಒಟ್ಟಾರೆಯಾಗಿ

ಅವರನ್ನು ಹಾಡಿ ಹೊಗಳುವ ನೀತಿ ಪದಗಳಾಗಿವೆ. ಇಂಥ ಪದಗಳು ಕರ್ನಾಟಕದ ಯಾವ ಭಾಗದಲ್ಲಿ ಹೋದರೂ ಒಂದೇ ಬಗೆಯ ಸ್ವರೂಪದವಾಗಿದ್ದು ಪಿಂಜಾರರು ಅವುಗಳನ್ನು ಇಡುಗೋಡಿನ ಕವಿಗಳು ಬರೆದದ್ದು ಎಂದು ಹೇಳುತ್ತಾರೆ. ಈ ಇಡುಗೋಡು ಎಲ್ಲಿದೆ, ಕವಿಗಳ ಹೆಸರೇನು, ಯಾವ ಕಾಲದ ಕವಿ ಇತ್ಯಾದಿ ಪ್ರಶ್ನೆಗಳಿಗೆ ಅವರಲ್ಲಿ ಉತ್ತರವಿಲ್ಲ. ನೆರೆದ ಜನಸಮೂಹವನ್ನು ಉದ್ದೇಶಿಸಿ ಹಾಡುವ ಈ ಪದಗಳಲ್ಲಿ ಇಸ್ಲಾಂ ಶರಣರ ಬದುಕನ್ನು ಗಾಢವಾಗಿ ಕಟ್ಟಿಕೊಡುವ ಕಾವ್ಯಾತ್ಮಕ ಸತ್ವ ಇಲ್ಲ. ಇವುಗಳಲ್ಲಿರುವ ಏಕತಾನತೆಯನ್ನು ಗಮನಿಸಿದರೆ ಒಂದು ಬಗೆಯ ಸಾಹಿತ್ಯ ರಚನೆಯ ಪ್ರಯತ್ನ ಪಿಂಜಾರ ಜನಾಂಗದಲ್ಲಿ ಹಿಂದೆ ನಡೆದಿದೆ ಎಂದು ಊಹಿಸಬಹುದಾಗಿದೆ. ಪಿಂಜಾರರು ತಮ್ಮದೇ ಭಾಷೆಯಲ್ಲಿ ಇಸ್ಲಾಂ ಶರಣರ ಬಗ್ಗೆ ಹೇಳುವ ಈ ಪದಗಳು ಅವರಿರುವ ಕಡೆ ಎಲ್ಲ ಜನಾಂಗದವರ ರಂಜನೆಯ ದೃಷ್ಟಿಯಿಂದ ಜನಪ್ರಿಯವಾದವುಗಳು. ಧರ್ಮ, ದೇವರ ಬಗ್ಗೆ ಭಕ್ತಿಯನ್ನು ಸಾರುವ, ಮನುಷ್ಯ ಬದುಕಿನಲ್ಲಿ ಪ್ರೀತಿ, ಸಮಾನತೆಯನ್ನು ಸ್ಥಾಪಿಸುವ ಕೆಲಸವನ್ನು ಮಾಡಬಲ್ಲ ಈ ಸಮೂಹ ಗೀತೆಗಳು ಕೇಳುಗರಲ್ಲಿ ಕುತೂಹಲ, ಆಸಕ್ತಿಯನ್ನು ಕೆರಳಿಸುತ್ತವೆ. ಇವುಗಳನ್ನು ಹಾಡುವಾಗ ವಿಶೇಷ ಸಂಗೀತದ ಉಪಕರಣಗಳನ್ನೇನೂ ಬಳಸುವುದಿಲ್ಲ. ಗಟ್ಟಿಯಾಗಿ ಹೇಳಬೇಕಾದ ಈ ಪದಗಳು ಸಂವಹನದ ದೃಷ್ಟಿಯಿಂದಲೂ ಸರಳವಾದಂತಹವು. ಸವಾಲು ಹೇಳುವವರು ಆಂಗಿಕ ಅಭಿನಯವನ್ನು ಮಾಡುತ್ತಾ ದನಿ ಎತ್ತರಿಸಿ ಹಾಡುವಾಗ ಇನ್ನೊಂದು ಗುಂಪು ಮೊದಲ ಗುಂಪನ್ನು ಮೀರಿಸುವ ಉತ್ಸಾಹದಿಂದ ಹಾಡುತ್ತದೆ. ಬೇರೆ ಬೇರೆಯ ಊರಿನಿಂದ ಜನ ಬಂದು ಸೇರಿ ಬೆಳಗಾಗುವ ತನಕ ಈ ಪದಗಳನ್ನು ಕೇಳುತ್ತಾರೆ. ತಮಗೆ ಪ್ರಿಯವಾದ ಗುಂಪನ್ನು ಪ್ರೇರೇಪಿಸುವಂತೆ ಚಪ್ಪಾಳೆ ತಟ್ಟಿ, ಚಿಟಿಕೆ ಹೊಡೆದು ಶಭಾಷ್‌ಗಿರಿ ಹೇಳುತ್ತಾರೆ. ಕೆಲವರು ಹಣವನ್ನೂ ಕೊಟ್ಟು ಇನ್ನೊಂದು ಗುಂಪನ್ನು ಸೋಲಿಸುವಂತೆ ಪ್ರಚೋದಿಸುತ್ತಾರೆ. ಒಬ್ಬರ ಮೇಲೆ ಮತ್ತೊಬ್ಬರು ಸವಾಲು ಹಾಕಿ ಹಾಡುವ ರಿವಾಯತಿ ಪದಗಳಲ್ಲಿ ಒಂದು ಗುಂಪು ಮತ್ತೊಬ್ಬರನ್ನು ಜರಿಯುವುದು, ಪಂಥಕ್ಕೆ ಆಹ್ವಾನಿಸುವುದು, ಕೆಣಕುವುದೂ ಇರುತ್ತದೆ. ಒಂದು ಊರಿನಲ್ಲಿ ಈ ಪದಗಳನ್ನು ಹಾಡುವವರಿಲ್ಲದಿದ್ದರೆ ಬೇರೆ ಊರಿನಿಂದ ಕರೆಸಲಾಗುತ್ತದೆ. ಮೊದಲೇ ಹೇಳಿದ ಹಾಗೆ ಈ ಪದಗಳನ್ನು ಕೇವಲ ಪಿಂಜಾರರು ಹಾಡುವುದಿಲ್ಲ. ಪ್ರಧಾನ, ಸಹ ಗಾಯಕರಾಗಿ ಕೂಡ ಉಳಿದ ಜನಾಂಗದವರು ಇರುತ್ತಾರೆ. ಅವರೆಲ್ಲ ಹಿಂದೂ-ಶೂದ್ರ ಸಮುದಾಯಕ್ಕೆ ಸಂಬಂಧಪಟ್ಟವರೇ ಆಗಿರುವುದು ಗಮನಾರ್ಹ. ವಿಶೇಷವೆಂದರೆ ಈ ಹಬ್ಬದಲ್ಲಿ ರಿವಾಯತಿ ಪದ ಹಾಡುವವರು ದೊರೆಯಲಿಲ್ಲವೆಂದಾಗ ಹಿಂದೂ ಜನಾಂಗದ ಅಧ್ಯಾತ್ಮಿಕ ಪ್ರವಚನ ನೀಡಬಲ್ಲ ಯಾರಾದರೊಬ್ಬ ಮಹನೀಯರನ್ನು ಕರೆತರುತ್ತಾರೆ. ಆತನಿಗೆ ಗೌರವಾದರಗಳಿಂದ ನೋಡಿಕೊಳ್ಳುವುದಲ್ಲದೆ ನಿಗದಿಯಾದ ಸಂಭಾವನೆ ಕೂಡ ಇರುತ್ತದೆ. ಇನ್ನೊಂದು ಊರಿನಿಂದ ಬಂದ ರಿವಾಯತಿ ಪದ ಹೇಳುವವರಿಗೂ ಈ ಬಗೆಯ ಗೌರವ ಇರುತ್ತದೆ. ಅನೇಕ ಪದಗಳು ರಾಮಾಯಣ ಮಹಾಭಾರತದಲ್ಲಿ ಬರುವ ಉಪಕತೆಗಳಿಂದ ಕೂಡಿರುತ್ತವೆ. ಹೀಗೆ ವಸ್ತುವನ್ನು ಎಲ್ಲಿಂದ ಪಡೆದರೂ ನೀತಿಬೋಧೆಗಾಗಿ ಅದನ್ನು ಬಳಸಿಕೊಂಡಿರುವುದು ಗೊತ್ತಾಗುತ್ತದೆ. ಯಾವುದೇ ಸಮಾಜ ನೀತಿ ನಿಯಮಗಳ ಚೌಕಟ್ಟಿನಲ್ಲಿ ತನ್ನನ್ನು ರೂಪಿಸಿಕೊಳ್ಳುತ್ತಲೇ ಅದನ್ನು ಮೀರುವ ಪ್ರಯತ್ನವನ್ನು ಮಾಡುತ್ತದೆ. ಪಿಂಜಾರ ಜನಾಂಗ ಹಿಂದೂ-ಮುಸ್ಲಿಂ ಧರ್ಮಗಳ ಆವರಣದಲ್ಲಿ ಬದುಕಿಯೂ ತನ್ನದೇ ಆದ ಸಂಸ್ಕೃತಿಯ ರೂಪವೊಂದನ್ನು ಪಡೆದಿರುವುದು ಕುತೂಹಲಕರವಾದುದು.

ಯಾವ ಊರಿಗೆ ಹೋದರೂ ಭಾಷೆಯ ಪ್ರಾದೇಶಿಕ ದೃಷ್ಟಿಯಿಂದ ಪದಗಳಲ್ಲಿ ವ್ಯತ್ಯಾಸ ಕಂಡು ಬರುತ್ತದೆಯೇ ಹೊರತು ಈ ಪದಗಳನ್ನು ಯಾರೋ ಬರೆದಿರಬಹುದಾಗಿರುವುದು ನಿಜ. ಈ ಪದಗಳ ಸ್ವರೂಪ ಜನರನ್ನು ಉದ್ದೇಶಿಸಿ ಆರಂಭವಾಗುವುದರ ಮೂಲಕ ವಸ್ತುವನ್ನು ಕಡಿಮೆ ಮಾತುಗಳಲ್ಲಿ ಹೇಳಿ ಮುಗಿಸುವಂತಿರುತ್ತದೆ. ಈ ಪದಗಳ ಮೂಲ ಪಿಂಜಾರರಿಗೇ ಗೊತ್ತಿಲ್ಲವಾದ್ದರಿಂದ ಪದಗಳಲ್ಲಿ ಪುನರಾವರ್ತನೆ ಸಾಮಾನ್ಯವಾಗಿದೆ. ಪ್ರತಿ ರಿವಾಯತಿನ ಕೊನೆಯಲ್ಲಿ ಅದನ್ನು ಹೇಳಿದವರ ಮತ್ತು ಹೇಳುತ್ತಿರುವ ಊರಿನ ಹೆಸರನ್ನು ಸೇರಿಸಿ ಹೇಳಲಾಗುತ್ತದೆ. ಎತ್ತರದ ರಾಗದಲ್ಲಿ ಸುಶ್ರಾವ್ಯವಾಗಿ ಕೇಳುವ ಈ ತೋಡಿ ಪದಗಳು ಓದುವಾಗ ಏಕತಾನತೆಯಿಂದ ಕೂಡಿವೆ ಎನ್ನಿಸುತ್ತದೆ. ಅವುಗಳ ಸ್ವಾರಸ್ಯವಿರುವುದು ಗಟ್ಟಿಯಾಗಿ ಹಾಡಿದಾಗ, ಸಮೂಹದಲ್ಲಿ ಕುಳಿತು ಆಲಿಸಿದಾಗ.

ಇಂತಹ ಎಂಭತ್ತೊಂದು ಪದಗಳನ್ನು ಒಂದೆಡೆ ಕಲೆ ಹಾಕಿ ಅವುಗಳ ಹಿನ್ನೆಲೆ ಮತ್ತು ಸ್ವರೂಪಗಳ ಸಮಗ್ರ ಅಧ್ಯಯನವನ್ನು ಡಾ. ದಸ್ತಗೀರ ಅಲ್ಲೀಭಾಯಿ ಅವರು ಮಾಡಿದ್ದಾರೆ. 'ಕರ್ನಾಟಕದ ಮೊಹರಂ ಪದಗಳು' ಎಂಬ ಅವರ ಕೃತಿಯು ಮೊಹರಂ ಮತ್ತು ಇಸ್ಲಾಂ ಕುರಿತು ತಿಳುವಳಿಕೆಯಿಲ್ಲದವರಿಗೆ ಅತ್ಯುತ್ತಮ ಮಾಹಿತಿಗಳನ್ನು ಒದಗಿಸುತ್ತದೆ. ಮೊಹರಂ ಪದಗಳನ್ನು ಡಾ. ದಸ್ತಗೀರ ಅಲ್ಲೀಭಾಯಿ ಅವರು ಕೆಳಕಂಡಂತೆ ವಿಂಗಡಿಸುತ್ತಾರೆ.

೧. ಇಸ್ಲಾಂ ಧರ್ಮಕ್ಕೆ ಸಂಬಂಧಿಸಿದ ಪದಗಳು.

೨. ಇಸ್ಲಾಮೇತರ ಧರ್ಮಕ್ಕೆ ಸಂಬಂಧಿಸಿದ ಪದಗಳು.

*ಇಸ್ಲಾಂ ಧರ್ಮಕ್ಕೆ ಸಂಬಂಧಿಸಿದ ಪದಗಳನ್ನು ಪುನಃ,*

೧. ಕರ್ಬಲಾ ಪದಗಳು

೨. ಖಲೀಫರಿಗೆ ಸಂಬಂಧಿಸಿದ ಪದಗಳು

೩. ಹ। ಮುಹ್ಮದ ಪೈಗಂಬರರಿಗೆ ಸಂಬಂಧಿಸಿದ ಪದಗಳು

೪. ಪೂರ್ವದ ಪೈಗಂಬರರಿಗೆ ಸಂಬಂಧಿಸಿದ ಪದಗಳು

೫. ಸೂಫಿ ಸಂತರಿಗೆ ಸಂಬಂಧಿಸಿದ ಪದಗಳು

೬. ಇಸ್ಲಾಂ ಧರ್ಮ ತತ್ವ ಮಹಿಮಾ ಸಾರುವ ಪದಗಳು

೭. ಇಸ್ಲಾಂ ಧರ್ಮಕ್ಕೆ ಸಂಬಂಧಿಸಿದ ಸವಾಲ್-ಜವಾಬ್ ಪದಗಳು ಎಂದು ವರ್ಗೀಕರಿಸಿದ್ದಾರೆ.

*ಅಲ್ಲದೆ, ಇಸ್ಲಾಮೇತರ ಪದಗಳನ್ನು,*

೧. ಐತಿಹಾಸಿಕ ಪದಗಳು

೨. ಸಾಮಾಜಿಕ ಪದಗಳು

೩. ಇಸ್ಲಾಮೇತರ ಸವಾಲ್-ಜವಾಬ್ ಪದಗಳು ಎಂದು ವಿಭಾಗಿಸಿದ್ದಾರೆ.

ಡಾ. ಅಲ್ಲೀಭಾಯಿ ಅವರು ಮೊಹರಂ ಪದಗಳನ್ನು ಕುರಿತು ಸುಮಾರು 43 ಪುಟಗಳ ಪ್ರಸ್ತಾವನೆಯನ್ನು ಬರೆದಿದ್ದಾರೆ. ಈ ಪ್ರಸ್ತಾವನೆಯಲ್ಲಿ ಮೊಹರಂ ಹಬ್ಬದ ಹಿನ್ನೆಲೆ, ಮೊಹರಂ ಪದಗಳ

ಮೇಲ್ಕಂಡ ವಿಂಗಡಣೆ ಮತ್ತು ಪ್ರತಿಯೊಂದು ರೀತಿಯ ಪದಗಳಿಗೂ ಸಂಕ್ಷಿಪ್ತವಾದ ಸಾಹಿತ್ಯಕ ವಿಶ್ಲೇಷಣೆಯನ್ನು ಕೊಟ್ಟಿದ್ದಾರೆ. ಈ ಪದಗಳು ಇಸ್ಲಾಂ ಧರ್ಮದ ಕುರಿತಾದ ಮಹತ್ವವನ್ನೇ ಸಾರಲಿ ಅಥವಾ ಇಸ್ಲಾಮೇತರ ಧಾರ್ಮಿಕ ಮಹಿಮೆಯನ್ನೇ ಹೇಳಲಿ ಮೂಲಭೂತವಾಗಿ ಈ ಎಲ್ಲ ಪದಗಳಲ್ಲಿ ಸುಂದರವಾದ ಕತೆಯೊಂದು ಅಡಗಿರುತ್ತದೆ. ಎಲ್ಲ ಧಾರ್ಮಿಕ ಆವರಣದಲ್ಲಿರುವಂತೆ ಜೀವನದರ್ಶನವನ್ನು ಸ್ಪಷ್ಟಪಡಿಸಲು ಇಂಥ ಕಡೆಗಳಲ್ಲಿ ಪವಾಡಗಳು ಸಾಮಾನ್ಯವಾಗಿರುತ್ತವೆ. ಡಾ. ಅಲ್ಲೀಭಾಯಿ ಅವರು ಈ ಪದಗಳಲ್ಲಿನ ಕಥನ ಕಲೆಯನ್ನು ಈ ರೀತಿ ಗುರುತಿಸುತ್ತಾರೆ. 'ಕಥನ ಕಲೆಯ ದೃಷ್ಟಿಯಿಂದ ಮೊಹರಂ ಪದಗಳನ್ನು ನೋಡಿದಾಗ ಎಲ್ಲ ಪದಗಳಲ್ಲಿ ಕೆಲವೊಂದು ಸಮಾನ ಲಕ್ಷಣಗಳನ್ನು ಗುರುತಿಸಬಹುದಾಗಿದೆ. ಪ್ರತಿಯೊಂದು ಪದ ನೆರೆದ ಸಭೆಗೆ ವಿನಂತಿಸಿಕೊಂಡು ಪ್ರಾರಂಭವಾಗುತ್ತದೆ. ಅನಂತರ ಹಲವಾರು ಮಾತುಗಳಿಂದ ಎದುರಾಳಿಯನ್ನು ತೆಗಳಿ ಕಥೆ ಪ್ರಾರಂಭಿಸಲಾಗುತ್ತದೆ. ಕೊನೆಯಲ್ಲಿ ಕಥೆಯಲ್ಲಿ ಬಂದ ವಸ್ತು ಮತ್ತು ಉದ್ದೇಶಗಳನ್ನು ಸ್ಪಷ್ಟಪಡಿಸಿ ಕವಿಗಾರರು ಪರಿಚಯ ಹೇಳಿ ಊರು, ಓಣಿ, ದರಗಾ, ಅಂಕಿತ ಇತ್ಯಾದಿ ತಿಳಿಸಿ ಪದ ಮುಗಿಸುವರು - ಇಂಥ ಒಂದು ಕಥಾ ಹಂದರದೊಳಗೆ ಮೊಹರಂ ಪದಗಳು ತಮ್ಮ ರೂಪ ರಂಗನ್ನು ಪ್ರದರ್ಶಿಸುತ್ತವೆ.

ಮೊಹರಂ ಪದಗಳಲ್ಲಿಯ ಕಥೆಗಳಲ್ಲಿ - ಕರ್ಬಲಾ ಕಾಳಗದ ಚಿತ್ರಣ, ಖಲೀಫರ ವ್ಯಕ್ತಿತ್ವ ನಿರೂಪಣೆ, ಪೈಗಂಬರರ ಅಸಾಮಾನ್ಯ ಶಕ್ತಿಯ ಹಿರಿಮೆ, ಸೂಫಿ ಸಂತರ ದೈವೀಶಕ್ತಿ, ಭಕ್ತಿಯ ಪಾರಮ್ಯ, ಪೌರಾಣಿಕ ಅಂಶಗಳ ವಿವರಣೆ, ಐತಿಹಾಸಿಕ ವ್ಯಕ್ತಿಗಳ ಪರಿಚಯ, ಅಂದಿನ ಕಾಲದ ಸಮಾಜ ಚಿತ್ರಣ ಇತ್ಯಾದಿಗಳು ಮುಖ್ಯವಾಗಿ ಮತ್ತು ಹಿತಮಿತವಾಗಿ ಬರುತ್ತವೆ. ಮೊಹರಂ ಪದಗಳಲ್ಲಿ ಬರುವ ಕೆಲ ಶಬ್ದ ಚಿತ್ರಗಳು ಕಥೆಯ ಒಡಲೊಳಗೇ ಬಂದಿರಲಿ, ಅಥವಾ ಸ್ವತಂತ್ರ್ಯವಾಗಿಯೇ ಇರಲಿ, ಕೇಳುಗರ ಮನಸ್ಸನ್ನು ಸೂರೆಗೈಯುವ ಶೈಲಿಯಲ್ಲಿದ್ದು ಉದ್ದೇಶಿತ ವಸ್ತುವಿನ ಚಿತ್ರಣವನ್ನು ಕಣ್ಣಿಗೆ ಕಟ್ಟುವಂತೆ ನಿರೂಪಿಸುತ್ತವೆ.'4

ಡಾ. ಅಲ್ಲೀಭಾಯಿ ಅವರ ಈ ಸುದೀರ್ಘ ಪ್ರಸ್ತಾವನೆ ಮೊಹರಂ ಪದಗಳ ಧಾರ್ಮಿಕ ಹಿನ್ನೆಲೆ ಮತ್ತು ಸಾಹಿತ್ಯಕ ವಿಶ್ಲೇಷಣೆಗಳಿಂದ ಕೂಡಿದೆ. ಮತ್ತು ಅದು ಮೊಹರಂ ಪದಗಳ ಅಧ್ಯಯನದ ಸಂದರ್ಭದಲ್ಲಿ ಅತ್ಯವಶ್ಯಕವಾದ ವಿವರಗಳನ್ನು ಒದಗಿಸುತ್ತದೆ. ಆದರೆ ಈ ಪದಗಳು ಕನ್ನಡದಲ್ಲಿ ರಚನೆಯಾಗಲು ಇದ್ದಂತಹ ಸಾಮಾಜಿಕ ಕಾರಣಗಳನ್ನು ಶೋಧಿಸುವ ಪ್ರಯತ್ನವನ್ನು ಈ ಪ್ರಸ್ತಾವನೆಯಲ್ಲಿ ಅವರು ಮಾಡುವುದಿಲ್ಲ. ಯಾಕೆಂದರೆ ಈ ಹಿಂದೆ ವಿಶ್ಲೇಷಿಸಿದಂತೆ ಭಾರತಕ್ಕೆ ಇಸ್ಲಾಂ ಆಗಮಿಸಿದ ನಂತರ ಅದು ಇಲ್ಲಿನ ದೇಸೀಭಾಷೆಗಳ ಮೂಲಕವೇ ಧಾರ್ಮಿಕ ಪ್ರಚಾರ ಮಾಡುವ ತುರ್ತು ಅದಕ್ಕೆ ಬರಲಿಲ್ಲ. ಬದಲಾಗಿ ಇಸ್ಲಾಂನ ಧಾರ್ಮಿಕ ಗ್ರಂಥ 'ಕುರಾನ್'ನ ಭಾಷೆ ಅರಬ್ಬಿಯಾಗಿತ್ತು. ಇಸ್ಲಾಂನ ಮೌಲ್ಯಾದರ್ಶಗಳು ಇಲ್ಲಿನ ಜನರ ಭಾಷೆಯಲ್ಲಿ ಅನುವಾದಗೊಳ್ಳುವುದಕ್ಕಿಂತ ಮುಖ್ಯವಾಗಿ ಇಸ್ಲಾಂ ಮತಪ್ರಚಾರಕರ, ಮುಖ್ಯವಾಗಿ ಸೂಫಿಸಂತರ ಸಾಮಾಜಿಕ ಕಾರ್ಯಗಳ ಮೂಲಕ ಅದು ಹರಡುತ್ತಿತ್ತು. ಅದಕ್ಕೆ ಪೂರಕವಾಗಿ ಮುಸ್ಲಿಂ ದೊರೆಗಳ ಆಡಳಿತವೂ ಇತ್ತು ಎಂಬುದನ್ನು ಮರೆಯುವಂತಿಲ್ಲ. ವಿಶೇಷವಾಗಿ ಕರ್ನಾಟಕದಲ್ಲಿ ಇಸ್ಲಾಂ

ಧರ್ಮಾನುಯಾಯಿಗಳ ಭಾಷೆ ಕನ್ನಡ ಎಂಬುದನ್ನು ಒಪ್ಪುವಂತಹ ಸಾಮಾಜಿಕ ವಾತಾವರಣವಿಲ್ಲ. ಇಂತಹದ್ದರಲ್ಲಿ 'ರಿವಾಯತಿ' ಪದಗಳು ಕನ್ನಡದಲ್ಲಿ ರಚನೆಯಾಗಿರುವುದಕ್ಕೆ ಏನು ಕಾರಣವಿದ್ದೀತು? ಇಸ್ಲಾಂ ಸೂಫಿಸಂತರು ಕರ್ನಾಟಕದ ಹಿಂದೂ ಅನುಭಾವಿಗಳ ಜೊತೆಯಾಗಿ ನಡೆಸಿದ ಸಮಾಗಮ, ಸಂವಾದ, ಅವರ ಜಾತಿ ಧರ್ಮ ಭಾಷೆಗಳ ಎಲ್ಲೆ ಮೀರಿದ ಮಾನವ ಸಂಬಂಧದ ಸ್ಥಾಪನೆ ಈ ಮೊಹರಂ ಪದಗಳ ರಚನೆಗೆ ಪ್ರೇರಣೆಯಿದ್ದಿರಲಾರದೇ? ಅಲ್ಲದೆ ವೀರಶೈವ ಚಳುವಳಿಯ ಪ್ರಭಾವಕ್ಕೆ ಒಳಗಾದ ಕರ್ನಾಟಕದ ಅನೇಕ ತಳಸಮುದಾಯಗಳು ತಮ್ಮ ಸಾಮಾಜಿಕ ಐಡೆಂಟಿಟಿಯನ್ನು ಗಟ್ಟಿಗೊಳಿಸಿಕೊಳ್ಳುವ ಸಂದರ್ಭದಲ್ಲಿ ಆ ಚಳುವಳಿ ಕಂಡ ಸೋಲು, ತದನಂತರದಲ್ಲಿ ಕೆಲವು ಮುಸ್ಲಿಂ ದೊರೆಗಳಿಂದ ನಡೆಯಿತು ಎನ್ನಲಾದ ಮತಾಂತರದ ಹಿನ್ನೆಲೆಯಲ್ಲಿ ಈ ಮೊಹರಂ ಪದಗಳ ರಚನೆಯ ಕಾರಣವನ್ನು ಕಂಡುಕೊಳ್ಳಬಹುದೇ? ಯಾಕೆಂದರೆ ಈ ತಳಸಮುದಾಯಗಳು ನಾಲಿಗೆ, ದನಿ ಪಡೆದುಕೊಳ್ಳುತ್ತಿದ್ದಂತೆ ಇಸ್ಲಾಂ ಧರ್ಮಕ್ಕೆ ಮತಾಂತರಗೊಳ್ಳಬೇಕಾದ ಅನಿವಾರ್ಯತೆ ಬಂದುದು. ಕ್ರಮೇಣ ಇಸ್ಲಾಂನ ಆದರ್ಶ, ಆಚರಣೆಗಳು ಬದುಕಿನ ಭಾಗವಾಗಿದ್ದು ಈ ಹೊಸ ಬಗೆಯ ಅನುಭವಗಳನ್ನು ತಮಗೆ ಗೊತ್ತಿರುವ ಭಾಷೆಯಲ್ಲೇ ಅಭಿವ್ಯಕ್ತಪಡಿಸಿರಲು ಸಾಧ್ಯ ಎಂಬ ಸಂಶಯಕ್ಕೆ ಅವಕಾಶವಿದೆ. ಬಹಳ ಮುಖ್ಯವಾದ ವಿಚಾರವೆಂದರೆ ಹೀಗೆ ಮತಾಂತರಗೊಂಡ ಪಿಂಜಾರರಿಗೆ ಇವತ್ತಿಗೂ ಕನ್ನಡದಲ್ಲಿರುವ ಪ್ರಭುತ್ವ ಇತರ ಭಾಷೆಗಳಲ್ಲಿಲ್ಲ. ಇತರ ಭಾಷೆಗಳೇ ಬರದ ಪಿಂಜಾರರಿದ್ದಾರೆ. ಪಿಂಜಾರರು ಅತಿ ಉತ್ಸಾಹ, ಶ್ರದ್ಧೆಯಿಂದ ಆಚರಿಸುವ ಮೊಹರಂ ಹಬ್ಬದಲ್ಲಿ ಹಿಂದೂಗಳು ಅಷ್ಟೇ ಉಲ್ಲಾಸದಿಂದ ಭಾಗವಹಿಸುತ್ತಾರೆ ಎಂದರೆ ಕೇವಲ ಈ ಎರಡು ಸಮುದಾಯಗಳ ಭಾವೈಕ್ಯತೆಯ ಅಥವಾ ಆ ಸಂಬಂಧವಾಗಿರುವ ರಾಜಕೀಯ ಕಾರಣಕ್ಕಾಗಿಯಲ್ಲ, ಬದಲಾಗಿ ಸಂವೇದನೆಗಳ ನೆಲೆಯಲ್ಲಿ ಈ ಸಮುದಾಯಗಳು ಸಾಂಸ್ಕೃತಿಕ ಇತಿಹಾಸದ ಏಕರೂಪತೆಯನ್ನು ಹೊಂದಿರುವುದೂ ಕಾರಣವಾಗಿದೆ. ಹಾಗಾಗಿ ಮೊಹರಂ ಪದಗಳು ಕನ್ನಡದಲ್ಲಿ ರಚನೆಯಾಗುವುದಕ್ಕೆ ಪಿಂಜಾರ ಜನಾಂಗದ ಐತಿಹಾಸಿಕ ಹಿನ್ನೆಲೆಯೂ ಇದೆ. ಅಲ್ಲದೆ ಮುಸ್ಲಿಮರನೇಕರು ಕನ್ನಡದಲ್ಲಿ ಈ ಪದಗಳನ್ನು ಹಾಡುವ ಉದ್ದೇಶವೂ ಮುಖ್ಯವಾಗಿ ಪಿಂಜಾರರಿಗೆ ಮತ್ತು ಇತರರಿಗೆ ಇಸ್ಲಾಂ ಧರ್ಮದ ಮಹತ್ವವನ್ನು ತಿಳಿಸುವುದೇ ಆಗಿದೆ. ಇದರೊಂದಿಗೆ ಶತಮಾನಗಳ ಕಾಲದಿಂದ ಕರ್ನಾಟಕದಲ್ಲಿ ಸಹಬಾಳುವೆ ನಡೆಸುತ್ತಿರುವ ಮುಸ್ಲಿಮರು ಯಾಕೆ ಕನ್ನಡದಲ್ಲಿ ತಮ್ಮ ಅನುಭವಗಳ ಅಭಿವ್ಯಕ್ತಿಗೆ ಮುಂದಾಗಲಿಲ್ಲ ? ಅವರ ವಿಶಿಷ್ಟ ಸಂವೇದನೆಯ ಸಾಹಿತ್ಯ ಯಾಕೆ ಸೃಷ್ಟಿಯಾಗಲಿಲ್ಲ ? ಇಲ್ಲಿನ ಜೈನರು, ವೀರಶೈವರು, ವೈದಿಕರು ಕೊನೆಗೆ ಕ್ರೈಸ್ತ ಮಿಶನರಿಗಳು ಕೂಡ ಕನ್ನಡ ಭಾಷೆಗೆ ಸಂಬಂಧಿಸಿದಂತಹ ರಚನಾತ್ಮಕವೂ, ಸೃಷ್ಟಿಶೀಲವೂ ಆದ ಪ್ರಯತ್ನಗಳನ್ನು ಮಾಡಿದವರೇ ಆಗಿದ್ದಾರೆ. ಆದರೆ ಮುಸ್ಲಿಮರಿಂದ ಮಾತ್ರ ಇಂಥ ಪ್ರಯತ್ನಗಳಾಗಲಿಲ್ಲವಲ್ಲ ಎಂಬ ಪ್ರಶ್ನೆಗೆ ನಮ್ಮ ಸಾಮಾಜಿಕ ಇತಿಹಾಸ ಅವರನ್ನು ಆದರಿಸಿದ ರೀತಿಯೇ ಉತ್ತರವಾಗಿದೆ. ಮತ್ತು ಅವರು ಕೂಡ, ವಿಶೇಷವಾಗಿ ಕರ್ನಾಟಕದಲ್ಲಿ ಪ್ರತ್ಯೇಕ ದ್ವೀಪದಂತೆಯೇ ಇದ್ದುಬಿಡುವಲ್ಲಿ ಆಸಕ್ತರಾದಂತಿದೆ. ಆಧುನಿಕ ಕನ್ನಡದ ಸಂದರ್ಭ ಮಾತ್ರ ಈ ಮಾತಿಗೆ ಅಪವಾದದಂತಿದೆ ಎನ್ನುವುದನ್ನು ಅಲ್ಲಗಳೆಯುವಂತಿಲ್ಲ.

ಪಿಂಜಾರ ಜನಾಂಗದಲ್ಲಿ ರಿವಾಯತಿ ಪದಗಳನ್ನು ಹೊರತುಪಡಿಸಿದರೆ ಲಾವಣಿಗಳು, ಬಯಲಾಟದ ಹಾಡುಗಳು, ಕತೆಗಳು, ಗಾದೆ, ಒಗಟುಗಳು ಮುಂತಾದ ಸಾಹಿತ್ಯ ಸಂಪತ್ತು ದೊರೆಯುತ್ತದೆ. ಇವುಗಳಲ್ಲಿ

ಮುಖ್ಯವಾಗಿ ಲಾವಣಿಗಳು ಐತಿಹಾಸಿಕ ವೀರರ ಸಾಹಸಗಾಥೆಯನ್ನು, ಒಳಗೊಂಡಿರುವಂತಹವೇ ಅಧಿಕವಾಗಿವೆ. ಮತ್ತು ಸ್ವಾತಂತ್ರ್ಯದ ಹೋರಾಟ, ಗಾಂಧೀಜಿಯ ವ್ಯಕ್ತಿತ್ವವನ್ನು ಮೆಚ್ಚಿಕೊಂಡಂತಹ ಲಾವಣಿಗಳು ಹಾಗೂ ಆಧುನಿಕತೆಯನ್ನು ತೀವ್ರವಾಗಿ ಅಣಕಿಸುವ, ವಿರೋಧಿಸುವ ಲಾವಣಿಗಳೂ ಇವೆ. ರಾಮಾಯಣ, ಮಹಾಭಾರತ ಹಾಗೂ ಪೌರಾಣಿಕ ಹಿನ್ನೆಲೆಯುಳ್ಳ ಕಥಾಭಾಗವನ್ನು ಹೇಳುವ ಬಯಲಾಟದ ಪದಗಳು ಸಿಗುತ್ತವೆ. ಕತೆಗಳಲ್ಲಿ ಕೂಡ ಇತಿಹಾಸ, ಪುರಾಣ, ನೀತಿಕತೆಗಳು, ಪ್ರಾಣಿಕತೆಗಳು ಮೊದಲುಗೊಂಡು ಸಮಕಾಲೀನ ಸಮಾಜದ ಓರೆ ಕೋರೆಗಳನ್ನು ತಿದ್ದುವಂತಹ ವರ್ತಮಾನದ ಪ್ರಸಂಗಗಳನ್ನು ಕಥೆ ಕಟ್ಟಿ ಹೇಳಲಾಗುತ್ತದೆ. ಪಿಂಜಾರರಲ್ಲಿ ವಿಶೇಷವಾಗಿ ವಯಸ್ಸಾದವರು ಸತ್ತಾಗ, ಯಾರಿಗಾದರೂ ಹಾವು ಕಡಿದು ಅವರಿಗೆ ನಿದ್ದೆ ಬರದಂತೆ ತಡೆಯುವಾಗ ರಾತ್ರಿಯಿಡೀ ಕತೆ ಹೇಳಿಸುವ ರೂಢಿಯಿದೆ. ಈ ಸಂದರ್ಭಗಳಲ್ಲಿ ಸಂಬಂಧಪಟ್ಟವರು ಹಾಜರಿದ್ದು ಕತೆ ಹೇಳುವವರಿಗೆ ಆಗಾಗ್ಗೆ ಬೀಡಿ, ಚಹಾ ಒದಗಿಸುತ್ತಾರೆ. ಮೇಲಿನ ಎಲ್ಲ ಬಗೆಯ ಸಾಹಿತ್ಯ ಪ್ರಕಾರಗಳೂ ಸೇರಿದಂತೆ ಪಿಂಜಾರರ ಜೀವನದಲ್ಲಿ ಬಳಕೆಯಾಗುವ ಒಗಟು, ಗಾದೆಗಳು ಆ ಜನಾಂಗದ ಮೂಲನೆಲೆಯನ್ನು ಸ್ಪಷ್ಟಪಡಿಸುತ್ತವೆ. ಅವೆಲ್ಲ ಹಿಂದೂ ಶೂದ್ರ ಸಮುದಾಯಗಳ ಸಾಮಾಜಿಕ-ಸಾಂಸ್ಕೃತಿಕ ನೆಲೆಯ ಒಟ್ಟಾರೆ ಮುಖವನ್ನು ಪ್ರತಿನಿಧಿಸುವಂತಿವೆ.

ಪಿಂಜಾರರಲ್ಲಿ ಇನ್ನೂ ವಿಶಿಷ್ಟ ಬಗೆಯ ಸಾಹಿತ್ಯ ವಿಪುಲವಾಗಿರುವುದು ಸ್ಪಷ್ಟ. ಇಲ್ಲಿರುವ ಸಾಹಿತ್ಯದ ನೆಲೆಯಲ್ಲಿ ಪಿಂಜಾರರ ಸಂಸ್ಕೃತಿಯನ್ನು ಬೇರೊಂದು ದೃಷ್ಟಿಯಲ್ಲಿ ನೋಡುವುದು ಸಾಧ್ಯವಿದೆ. ಮುಖ್ಯವಾಗಿ ಭಾಷೆಗೆ ಸಂಬಂಧಪಟ್ಟದ್ದು. ಉತ್ತರ ಕರ್ನಾಟಕದ ಭಾಷೆಯ ಎಲ್ಲ ಬಗೆಯ ಪದ ಸಂಪತ್ತು ಪಿಂಜಾರರಲ್ಲಿದೆ. ಧಾರವಾಡ ಭಾಷೆಯ ವೈಶಿಷ್ಟ್ಯ, ದಾವಣಗೆರೆಯ ಸುತ್ತಲಿನ ನುಡಿಗಟ್ಟುಗಳು, ಗ್ರಾಮ್ಯ ಭಾಷೆಗಿರುವ ಸತ್ವ - ಎಲ್ಲವನ್ನೂ ಗಮನಿಸಿದರೆ ಪಿಂಜಾರರು ಕನ್ನಡವನ್ನು ಇತ್ತೀಚೆಗೆ ಕಲಿತವರಲ್ಲ ಅನ್ನುವುದು ಸ್ಪಷ್ಟ. ಅಲ್ಲದೆ ರಿವಾಯಿತು ಪದಗಳನ್ನು ಗಮನಿಸಿದರೂ ಕೂಡ ಇದುವರೆಗೂ ಇಸ್ಲಾಂನ ಶರಣರ ಬಗ್ಗೆ ಕನ್ನಡದಲ್ಲಿ ಸಾಹಿತ್ಯ ರಚನೆಯಾಗದಿರುವ ಕೊರತೆಯನ್ನು ತುಂಬಿಕೊಡುವ ಮಹತ್ವದ ದೃಷ್ಟಿ ಕೂಡ ಅವುಗಳ ರಚನೆಯಲ್ಲಿದ್ದಂತಿದೆ. ಪಿಂಜಾರರು ಅನಿವಾರ್ಯವಾಗಿ ಇಸ್ಲಾಂ ಆಚರಣೆಗಳನ್ನು ಅನುಸರಿಸುವುದಕ್ಕೆ ಬಂದ ಒತ್ತಡಗಳೇ ಅವರು ಆ ಪದಗಳನ್ನು ಕನ್ನಡದಲ್ಲಿ ರಚಿಸಲು ಪ್ರೇರಣೆಯಾಗಿರಬೇಕು. ಭಾಷೆಯ ಮೂಲಕವೇ ಸಂಸ್ಕೃತಿಯ ಮೂಲ ಸಂವೇದನೆಗಳು ಸಂವಹನಗೊಳ್ಳಬೇಕಾದ್ದರಿಂದ ಪಿಂಜಾರರ ಈ ರಚನೆ, ಈ ಪದಗಳು ಇಸ್ಲಾಂ ಶರಣರ ಬಗ್ಗೆ ಅತ್ಯಂತ ಗಾಢವಾಗಿ ಕಟ್ಟಿಕೊಡುವ ಕಲಾತ್ಮಕ ರಚನೆಗಳಲ್ಲವಾದರೂ, ಆ ಬಗೆಯ ಪ್ರಯತ್ನವಾಗಿದೆ. ಅಲ್ಲದೆ ಈ ಪದಗಳು ಪಿಂಜಾರರ ಸಮೂಹವನ್ನು ಮಾತ್ರ ಒಳಗೊಳ್ಳದೇ ಹಿಂದೂ ಜನಾಂಗದವರ ಅವಿನಾಭಾವ ಸೇರ್ಪಡೆಯನ್ನು ಒಳಗೊಳ್ಳುತ್ತದೆ. ಹಿಂದೂ ಮತ್ತು ಪಿಂಜಾರರ ನಡುವಿನ ಭಾವನಾತ್ಮಕ ಸಂಬಂಧವನ್ನು ಸಾಮೂಹಿಕವಾಗಿಯೂ ಗುರುತಿಸಲು ಸಹಾಯಕವಾಗುವ ಇಲ್ಲಿನ ಸಾಹಿತ್ಯ ಪಿಂಜಾರರ ಸಾಮಾಜಿಕ-ಸಾಂಸ್ಕೃತಿಕ ನೆಲೆಯ ಕೇಂದ್ರವನ್ನು ಸ್ಪಷ್ಟವಾಗಿ ತೋರುತ್ತದೆ.

ಇಲ್ಲಿನ ಸಾಹಿತ್ಯದ ಹಿನ್ನೆಲೆಯಲ್ಲಿ ಖಚಿತವಾಗಿ ಗುರುತಿಸಬಹುದಾದದ್ದು ಪಿಂಜಾರರಿಗೆ ಇಸ್ಲಾಂ ತಿಳುವಳಿಕೆಯಾಗಲೀ, ಆ ಕುರಿತ ಆಸಕ್ತಿಯಾಗಲೀ, ಆ ಧರ್ಮ ಪ್ರತಿನಿಧಿಸುವ ಜೀವನ ವಿಧಾನವನ್ನು

ಹತ್ತಿರದಿಂದ ನೋಡುವ ಕುತೂಹಲವಾಗಲೀ ಇಲ್ಲದಿರುವುದು. ಇಸ್ಲಾಂ ಶರಣರ ಬಗ್ಗೆಯೇ ಇರುವ ರಿವಾಯಿತಿ ಪದಗಳನ್ನು ನೋಡಿದರೂ ಆ ಮಾತು ಸ್ಪಷ್ಟವಾಗುತ್ತದೆ. ಅಲ್ಲಿ ಬರುವ ಸಾಂಬ, ಶಿವ, ಭಗವಾನ ಮುಂತಾದ ಪದಗಳು ಮತ್ತು ಸವಾಲು ಪದಗಳ ರಚನೆಯ ಸ್ವರೂಪವನ್ನು ಸೂಕ್ಷ್ಮವಾಗಿ ಗಮನಿಸಿದರೆ ವೀರಶೈವ ಚಳುವಳಿ ಮತ್ತು ಆ ಕಾಲದ ಸಾಹಿತ್ಯ ರಚನೆ (ಮುಖ್ಯವಾಗಿ ಹರಿಹರನ ರಗಳೆಗಳು)ಯ ಪ್ರೇರಣೆ ಮತ್ತು ಪ್ರಭಾವವನ್ನು ಗುರುತಿಸಬಹುದಾಗಿದೆ. ಸಾಮಾಜಿಕ ಅಪಮಾನಕ್ಕೆ ಗುರಿಯಾದ ಕೆಳ ಜನಾಂಗದವರಿಗೆ ವೀರಶೈವ ಚಳುವಳಿಯಿಂದಾಗಿ ದೊರೆತ ಅವಕಾಶ ಮತ್ತು ಇವತ್ತಿಗೂ ಪಿಂಜಾರರು ಕರ್ನಾಟಕದ ಲಿಂಗಾಯ್ತ ಜನರೊಂದಿಗೆ ಬೆರೆಯುವ ಅವರನ್ನು ಗೌರವಿಸುವ ರೀತಿ ಕೂಡ ಪಿಂಜಾರರು ಶೂದ್ರರೆಂಬುದನ್ನು ಮತ್ತಷ್ಟು ಸ್ಪಷ್ಟಪಡಿಸುತ್ತವೆ. ಇಲ್ಲಿನ ಕತೆಗಳಲ್ಲಿ ಬರುವ ಶ್ರಾವಣಮಾಸ ಕಾಲದ ಪುರಾಣ ಹೇಳಿಸುವುದು, ಕತೆಗಳ ಅನೇಕ ಪಾತ್ರಗಳು ವೀರಶೈವ ಧರ್ಮದ ಪ್ರಭಾವವನ್ನೇ ಹೇಳುತ್ತವೆ. ಅತ್ಯಂತ ಕುತೂಹಲದ ಮತ್ತು ಸಂತೋಷದ ಸಂಗತಿ ಎಂದರೆ ಲಿಂಗಾಯ್ತರು, ತಳವಾರರು, ಕುರುಬರು, ಮತ್ತು ಪಿಂಜಾರರ ನಡುವಿನ ಭಾವನಾತ್ಮಕ ಸಂಬಂಧ. ಸಾರ್ವಜನಿಕವಾಗಿಯೇ ಪರಸ್ಪರರು ಮಾವ, ಅಳಿಮಯ್ಯ, ಸೊಸೆ, ಅತ್ತೆ, ಅಣ್ಣ, ಚಿಕ್ಕಪ್ಪ, ದೊಡ್ಡಪ್ಪ ಎಂದು ಪ್ರೀತಿಯಿಂದ ಕರೆದು ಮಾತನಾಡುವುದು ಎಂಥವರಲ್ಲೂ ಮಧುರವಾದ ಭಾವನೆಗಳನ್ನು ಹುಟ್ಟಿಸುತ್ತದೆ. ಈಗಿನ ಕಾಲದ ಹುಡುಗರು ಹಿರಿಯರಿಗೆ ಅರಿವಿಲ್ಲದೆ 'ಮಾವ' ಎಂದರೆ 'ನಾವು ಅಣ್ಣ-ತಮ್ಮುಗಳು ಕಣಲೇ' ಎಂದು ಹೇಳಿ ಅವರಿಗೆ ಬೀಗರಾದವರನ್ನು ತೋರಿಸಿ 'ಅವರು ನಮಿಗೆ ಬೀಗರಾಗ್ಬೇಕು' ಎಂದು ಸಂಬಂಧವನ್ನು ಸ್ಪಷ್ಟಪಡಿಸುವುದು ಪಿಂಜಾರರು ಮತ್ತು ಮೇಲೆ ಹೇಳಿದ ಹಿಂದೂ ಜನಾಂಗಗಳ ನಡುವೆ ಸಾಮಾನ್ಯವಾಗಿರುತ್ತದೆ.

ಒಟ್ಟಾರೆಯಾಗಿ ಪಿಂಜಾರರ ಜೀವನಾನುಭವದ ಅಭಿವ್ಯಕ್ತಿಯೇ ಆಗಿರುವ ಇಲ್ಲಿನ ಸಾಹಿತ್ಯದ ಹಿನ್ನೆಲೆಯಲ್ಲಿ ಅವರ ಸಾಮಾಜಿಕ-ಸಾಂಸ್ಕೃತಿಕ ನೆಲೆಗಳನ್ನು ಗುರುತಿಸುವಾಗ ಪಿಂಜಾರರ ಸಂಸ್ಕೃತಿ ಬಹುಪಾಲು ಪೂರ್ವಾಶ್ರಮದ ಆಚರಣೆ, ಸಂವೇದನೆಗಳನ್ನು ಕಡಿಮೆ, ಆದರೆ ತಾಂತ್ರಿಕ ಅರ್ಥದಲ್ಲಿ, ಇಸ್ಲಾಂ ಆಚರಣೆಯ ಕೆಲವು ಸಂಗತಿಗಳನ್ನು ಒಳಗೊಂಡು ಅತ್ಯಂತ ವಿಶಿಷ್ಟವಾದ ಹಿಂದೂ-ಮುಸ್ಲಿಂ ಭಾವೈಕ್ಯದ, ನಿಜವಾದ ಜಾತ್ಯಾತೀತ ಪರಿಸರವನ್ನು ನಿರ್ಮಿಸಿಕೊಂಡಿದೆ ಎಂದು ಹೇಳಲೇಬೇಕಾಗಿದೆ. ಇಂಡಿಯಾದ ಸಾಮಾಜಿಕ-ಸಾಂಸ್ಕೃತಿಕ ಪರಿಸರ ತೀರ ಗೋಜು ಗೋಜಲಾಗಿ ಅನೇಕ ಸಲ ಅಸಹನೀಯವಾಗಿ ಕಾಣುತ್ತಿರುವ ಈ ಸಂದರ್ಭದಲ್ಲಿ ಪಿಂಜಾರರ ಸಂಸ್ಕೃತಿ ಬಿಟ್ಟುಕೊಡುವ ಜಾತ್ಯಾತೀತ ಪರಿಕಲ್ಪನೆ ಆಶಾದಾಯಕವಾಗಿದೆ.

೨) <u>ಪಿಂಜಾರರು ಮತ್ತು ಆಧುನಿಕ ಕನ್ನಡ ಸಾಹಿತ್ಯ :</u> ಆಧುನಿಕ ಕನ್ನಡ ಸಾಹಿತ್ಯದಲ್ಲಿ ಶಿಶುನಾಳ ಶರೀಫರನ್ನು ಕನ್ನಡದ ಮೊದಲ ಮುಸ್ಲಿಂ ಕವಿ ಎಂದು ಗುರುತಿಸಲಾಗುತ್ತದೆ. ಶಿಶುನಾಳ ಶರೀಫರ ಸಾಹಿತ್ಯದಲ್ಲಿ 'ಮುಸ್ಲಿಂ' ಸಂವೇದನೆಗಳು ದಾಖಲಾಗಿವೆಯೇ ಇಲ್ಲವೇ ಎಂಬ ಚರ್ಚೆಗಿಂತ ಅವರನ್ನು ಅನುಭಾವಿ ಕವಿ, ಬದುಕಿನ ನಿಗೂಢ ತತ್ವಗಳನ್ನು ಪ್ರತಿಮಾತ್ಮಕವಾಗಿ ಕನ್ನಡದಲ್ಲಿ ಹಿಡಿದಿಟ್ಟ ಅಪರೂಪದ ದಾರ್ಶನಿಕ ಎಂದು ಪ್ರಶಂಸಿಸಲಾಗುತ್ತದೆ. ಪ್ರಾಚೀನ ಕನ್ನಡ ಸಾಹಿತ್ಯವನ್ನು ಜೈನ, ವೀರಶೈವ, ವೈದಿಕ ಎಂದು ವಿಭಾಗಿಸುವ ಹಾಗೆ ಆಧುನಿಕ ಕನ್ನಡ ಸಾಹಿತ್ಯವನ್ನು ಧಾರ್ಮಿಕ ಸಂವೇದನೆಗಳ ಹಿನ್ನೆಲೆಯಲ್ಲಿ

ವಿಶ್ಲೇಷಿಸುವ ಕ್ರಮ ಇಲ್ಲ, ಅದು ಸಾಧ್ಯವೂ, ಸಾಧುವೂ ಅಲ್ಲ. ಆದರೆ ಬಂಡಾಯ ಸಾಹಿತ್ಯ ಚಳುವಳಿ ಕನ್ನಡ ನೆಲದ ಹತ್ತಾರು ದನಿಯಿಲ್ಲದ ಜನಾಂಗಗಳಿಗೆ ಮಾತನಾಡುವ, ಬರೆಯುವ ಚೈತನ್ಯವನ್ನು ತುಂಬಿತು. ಅದು ಈ ನೆಲದ ಸಾಮಾಜಿಕ ಇತಿಹಾಸದಲ್ಲಿ ಆಗಿಹೋದ ತಳವರ್ಗಗಳ ಶೋಷಣೆ, ಉಳ್ಳವರ, ಮೇಲ್ಜಾತಿಗಳ ದೌರ್ಜನ್ಯವನ್ನು ದಾಖಲಿಸುತ್ತ ಹೊಸ ಬಗೆಯ ಸಂವೇದನೆಗಳು ಪ್ರಕಟವಾಗಲು ತಕ್ಕ ವೇದಿಕೆಯನ್ನು ನಿರ್ಮಾಣ ಮಾಡಿತು. ಮುಖ್ಯವಾಗಿ ದಲಿತರು, ಮಹಿಳೆಯರು ಮತ್ತು ಅಲ್ಪಸಂಖ್ಯಾತರು ಅನುಭವಿಸುವ ಸಾಮಾಜಿಕ ಅಪಮಾನಗಳು ಮತ್ತು ಅವುಗಳನ್ನು ವಿರೋಧಿಸುವ ಸೈದ್ಧಾಂತಿಕ ಪ್ರತಿಭಟನೆಯ ನೆಲೆಗಳು ಈ ಚಳುವಳಿಯ ಸ್ವರೂಪವನ್ನು ಗಟ್ಟಿಗೊಳಿಸಿದುವು. ಈ ಹಿನ್ನೆಲೆಯಲ್ಲಿ ಹುಟ್ಟಿಕೊಂಡ ನೂರಾರು ಬರಹಗಾರರ ಕೃತಿಗಳು ಕನ್ನಡ ಸಾಹಿತ್ಯದಲ್ಲಿ ಹೊಸ ಬಗೆಯ ಅನುಭವದ ಗ್ರಹಿಕೆಯನ್ನು, ಭಾರತೀಯ ಇತಿಹಾಸ, ಸಮಾಜವನ್ನು ರಚನಾತ್ಮಕ ಸಂಶಯಗಳಿಂದ ನೋಡುವ ಕ್ರಮವನ್ನು ತಂದುಕೊಟ್ಟವು. ಸಮಾಜವಾದ, ಎಡಪಂಥೀಯ ವಿಚಾರಧಾರೆ ಮತ್ತು ಸ್ವಾತಂತ್ರ್ಯೋತ್ತರ ಭಾರತದ ಸಾಂವಿಧಾನಿಕ ಆಶಯಗಳು ಈ ಸಾಹಿತ್ಯದ ತಾತ್ವಿಕ ಧೋರಣೆಗಳಾಗಿ ಜನಪರವಾದ, ಸರ್ವಸಮಾನವಾದ ಉಳ್ಳವರ ದೌರ್ಜನ್ಯವನ್ನು ಖಂಡಿಸುವ, ಇಲ್ಲದವರ ಬಗ್ಗೆ ಅನುಕಂಪಿಸುವ ಸಮಾಜ ನಿರ್ಮಾಣದ ಕನಸನ್ನು ಹೆಣೆದುಕೊಟ್ಟವು. ಇದರ ಪರಿಣಾಮವಾಗಿ ದಲಿತರು, ಮಹಿಳೆಯರಂತೆಯೇ ಮುಸ್ಲಿಮರೂ ಕೂಡ ಕನ್ನಡದ ನೆಲದಲ್ಲಿ ತಮ್ಮ ವಿಶಿಷ್ಟ ಅನುಭವಗಳಾದ ಸಾಮಾಜಿಕ ಅಭದ್ರತೆ ಮತ್ತು ಅಪಮಾನಗಳನ್ನು ಪ್ರಕಟಿಸುತ್ತಲೇ ಮುಸ್ಲಿಂ ಧಾರ್ಮಿಕ ಮೂಲಭೂತವಾದದ ಅಸಹ್ಯ ಮನೋಧರ್ಮಗಳನ್ನು ತಣ್ಣಗೆ ಪ್ರತಿಭಟಿಸಿದರು. ಮುಸ್ಲಿಂ ಬರಹಗಾರರ ಈ ಬಗೆಯ ಬದ್ಧತೆಗೆ ಹೆಗಲೆಣೆಯಾಗಿ ನಿಂತ ಮುಸ್ಲಿಮೇತರ ಕನ್ನಡ ಲೇಖಕರು, ಪ್ರಜ್ಞಾವಂತರು ತಮ್ಮ ವಿಚಾರ ಮತ್ತು ಬರಹಗಳ ಮೂಲಕ ಮುಸ್ಲಿಮರ ಆತಂಕಗಳನ್ನು ಕೊಂಚಮಟ್ಟಿಗೆ ನಿವಾರಿಸುವ, ಅವುಗಳಿಗೆ ಕಾರಣಗಳನ್ನು ಶೋಧಿಸುವ ಪ್ರಯತ್ನ ಮಾಡಿದರು. ಇಂಥ ಸಂವೇದನೆಗಳ ಸಂದರ್ಭದಲ್ಲಿ 'ಮುಸ್ಲಿಂ' ಸಂವೇದನೆಯ ವಿಶಿಷ್ಟತೆಯನ್ನು ಗುರುತಿಸುವ ಸಾಹಿತ್ಯಕ ಪ್ರಯತ್ನಗಳು ನಡೆದವು. 1991ರ ಆಗಸ್ಟ್, 24-25ರಲ್ಲಿ ಶಿವಮೊಗ್ಗದಲ್ಲಿ ನಡೆದ 'ಕನ್ನಡ ಸಾಹಿತ್ಯ ಮತ್ತು ಮುಸ್ಲಿಂ ಸಂವೇದನೆ' ಎಂಬ ವಿಚಾರ ಸಂಕಿರಣ ಈ ನಿಟ್ಟಿನಲ್ಲಿ ಮೊದಲ ಪ್ರಯತ್ನವಾಗಿದೆ. ಈ ವಿಚಾರ ಸಂಕಿರಣದ ಉದ್ಘಾಟನೆಯಲ್ಲಿ ಶಿಶುನಾಳ ಶರೀಫರ ಭಾವಚಿತ್ರವನ್ನು ಅನಾವರಣ ಮಾಡಿ ಅದಕ್ಕೆ ಹೂವಿನ ಹಾರ ಹಾಕಲಾಯಿತು. ಇಡೀ ಎರಡೂ ದಿನಗಳಲ್ಲಿ ನಡೆದ ಚರ್ಚೆಯಲ್ಲಿ ಹುಟ್ಟಿನಿಂದ ಮುಸ್ಲಿಮರಾಗಿದ್ದು ಕನ್ನಡ ಸಾಹಿತ್ಯದಲ್ಲಿ ಕ್ರಿಯಾಶೀಲರಾಗಿದ್ದ ಲೇಖಕರ ಬರವಣಿಗೆ ಮತ್ತು ಅದರ ಚಾರಿತ್ರಿಕ ಅವಶ್ಯಕತೆಯನ್ನು ಕುರಿತು ಸಂವಾದ ನಡೆಯಿತು. ಇಲ್ಲಿ ಶಿಶುನಾಳರ ಸಾಹಿತ್ಯದ ಭಾಷೆಗೆ ಇದ್ದಂತಹ ಚಾರಿತ್ರಿಕ ಹಿನ್ನೆಲೆಯತ್ತ ಗಮನಿಸಿದ್ದರೆ ಪಿಂಜಾರರ ಮೂಲದ ಕುರಿತು ಕೆಲವಾದರೂ ಸೂಕ್ಷ್ಮಗಳು ಹೊರಡುತ್ತಿದ್ದವು. ಯಾಕೆಂದರೆ ಶಿಶುನಾಳರು ಪಿಂಜಾರರಾಗಿದ್ದರು ಎನ್ನುವ ಚರ್ಚೆಗಿಂತ ಅವರ ಭಾಷೆ ಮತ್ತು ಸಂವೇದನೆಗಳ ನೆಲೆಯಲ್ಲಿ ನಡೆದ ಸಂವಾದದ ಪರಿಣಾಮವಾಗಿ ಅವರು ಹುಟ್ಟಿನಿಂದ ಮುಸ್ಲಿಮರಾಗಿದ್ದರೇ ಹೊರತು ಮುಸ್ಲಿಂ ಸಂವೇದನೆಯ ವಿಶಿಷ್ಟತೆಯನ್ನು ಅಭಿವ್ಯಕ್ತಿಸಲಿಲ್ಲ ಎನ್ನುವುದು ನಿರ್ಧಾರವಾಯಿತು. ಅದು ಸರಿ ಕೂಡ. ಆದರೆ ಆನಂತರದಲ್ಲಿ ಅಸ್ತಿತ್ವಕ್ಕೆ ಬಂದ ಕರ್ನಾಟಕ

ರಾಜ್ಯ ನದಾಫ್ / ಪಿಂಜಾರರ ಸಂಘ ತನ್ನ ಪ್ರತಿ ಸಭೆ-ಸಮಾರಂಭಗಳನ್ನು ಶಿಶುನಾಳರ ಭಾವಚಿತ್ರ ಅನಾವರಣದ ಮೂಲಕವೇ ಪ್ರಾರಂಭಿಸಲು ಶುರುಮಾಡಿತು. ಇದರ ಅರ್ಥ ಏನು ? ಹಿಂದೂ ಧರ್ಮಕ್ಕೆ ನಿಷ್ಠರಾಗಿದ್ದುಕೊಂಡು ತಮ್ಮ ಪ್ರತ್ಯೇಕ ಐಡೆಂಟಿಟಿಯನ್ನು ಗುರುತಿಸಿಕೊಳ್ಳುವ ಲಿಂಗಾಯಿತ, ಗೌಡ, ಕುರುಬ, ನಾಯಕ, ಉಪ್ಪಾರ, ಮಡಿವಾಳ, ಲಂಬಾಣಿ ಮತ್ತು ಹರಿಜನ - ಗಿರಿಜನರ ಹಾಗೆ ಇಸ್ಲಾಂ ಧರ್ಮಕ್ಕೆ ಪರಮ ನಿಷ್ಠರಾಗಿದ್ದುಕೊಂಡೂ ಪಿಂಜಾರರು ತಮ್ಮ ಪ್ರತ್ಯೇಕ ಐಡೆಂಟಿಟಿಯನ್ನು ಉಳಿಸಿಕೊಳ್ಳುವ ಸಾಮಾಜಿಕ ಸುಧಾರಣೆಯ ಉದ್ದೇಶ ಈ ಸಂಘಕ್ಕಿದೆ. ಮತ್ತು ಹೀಗೆ ಪ್ರತ್ಯೇಕವಾಗಿ ಗುರುತಿಸಿಕೊಳ್ಳುವ ಎಲ್ಲ ಮತೀಯ ಸಂಘಟನೆಗಳಿಗಿರುವ ರಾಜಕೀಯ ಬಲವನ್ನು ಪ್ರದರ್ಶಿಸುವ ಗೀಳು ಈ ಸಂಘಕ್ಕೆ ಇದ್ದಂತಿಲ್ಲ. ಮುಖ್ಯವಾಗಿ ಸಂಘಟನೆಯ ಉದ್ದೇಶದಿಂದ ರಚಿತವಾದ ಈ ಸಂಘ ಇದುವರೆಗೂ ಶೈಕ್ಷಣಿಕ, ಸಾಮಾಜಿಕ, ಧಾರ್ಮಿಕ ಸುಧಾರಣೆಯ ತನ್ನ ಆಶಯಗಳನ್ನು ಚರ್ಚಿಸಿದೆ. ಯಾವ ಸಂದರ್ಭದಲ್ಲೂ ತನ್ನ ರಾಜಕೀಯ ನಿಲುವುಗಳನ್ನು ಪ್ರಕಟಿಸಿಲ್ಲ. ಇರಲಿ, ಈ ಬಗೆಗಿನ ಚರ್ಚೆ ಪಿಂಜಾರರ ರಾಜಕೀಯ ಜೀವನ ಕುರಿತಾದ ವಿವರಗಳನ್ನು ವಿಶ್ಲೇಷಿಸುವಾಗ ಇನ್ನಷ್ಟು ಸ್ಪಷ್ಟವಾಗುತ್ತದೆ. ಇಲ್ಲಿನ ಚರ್ಚೆಯ ಮುಖ್ಯವಾದ ದೃಷ್ಟಿ ಕನ್ನಡದಲ್ಲಿ ಶಿಶುನಾಳರು ಬರೆಯುವುದಕ್ಕೆ ಇದ್ದಂತಹ ಚಾರಿತ್ರಿಕ ಕಾರಣಗಳನ್ನು ಹುಡುಕುವುದು. ಶತಮಾನಗಳ ಉದ್ದಕ್ಕೂ ಇಲ್ಲಿ ಬದುಕಿರುವ ಮುಸ್ಲಿಮರು ಕನ್ನಡದಲ್ಲಿ ಸಾಹಿತ್ಯ ರಚನೆಯ ಪ್ರಯತ್ನ ಮಾಡುವುದಕ್ಕೆ ಶಿಶುನಾಳರವರೆಗೆ ಕಾಯಬೇಕಾಯಿತೇಕೆ ? ಇದು ಮುಖ್ಯ ಪ್ರಶ್ನೆ.

ಈ ಪ್ರಶ್ನೆಯ ನೆಪದಲ್ಲಿ ಕನ್ನಡ ಸಾಹಿತ್ಯದಲ್ಲಿ ಮುಸ್ಲಿಂ ಸಂವೇದನೆಯನ್ನು ಗುರುತಿಸುವಾಗ ಎದುರಾಗುವ ಕೆಲವು ಅನುಮಾನಗಳನ್ನು ಇಲ್ಲಿ ಚರ್ಚಿಸಬಹುದು. ಇದರಿಂದ ಈಗಾಗಲೇ ವ್ಯಕ್ತವಾಗಿರುವ ಮುಸ್ಲಿಂ ಸಂವೇದನೆ ತನಗೆ ತಾನೇ ಪರಿಪೂರ್ಣವಾದುದಲ್ಲ ಎನ್ನುವುದು ಸ್ಪಷ್ಟವಾಗುತ್ತದೆ. ಅಲ್ಲದೆ ಕನ್ನಡ ನೆಲ ಮತ್ತು ಸಾಹಿತ್ಯ ಸೃಷ್ಟಿ ಕೂಡ ಮುಸ್ಲಿಮರನ್ನು ಕುರಿತಾದ ಅಸೀಮ ತಿರಸ್ಕಾರ ಮತ್ತು ಉಪೇಕ್ಷೆಯನ್ನು ಹೊಂದಿರುವುದಕ್ಕೆ ಹೇಗೋ ಹಾಗೇ ಪ್ರೀತಿ, ವಿಶ್ವಾಸ, ಅಭಿಮಾನ, ಔದಾರ್ಯವನ್ನು ಒಳಗೊಂಡಿರುವುದಕ್ಕೂ ಸಾಕ್ಷಿಗಳು ದೊರೆಯುತ್ತವೆ. ಶಿಶುನಾಳರನ್ನು ಅಪಾರ ಜನಪ್ರಿಯತೆಯಿಂದ ಹಾಡಿ ಹೊಗಳಿದ ಈ ನೆಲ ಅನಂತರದ ಅಕಬರ ಅಲಿ, ನಿಸಾರ್ ಅಹಮದ್‌ರಂತಹ ಕವಿಗಳು, ಬಂಡಾಯ ಸಂದರ್ಭದ, ಸಾರಾ, ಬಾನು, ಬೊಳುವಾರು, ಕಟ್ಪಾಡಿ, ರಶೀದ್, ದರ್ಗಾ ಮೊದಲಾದವರ ಸಾಹಿತ್ಯ ಸೃಷ್ಟಿಯನ್ನು ಒಳ್ಳೆಯ ಮನೋಭಾವದಿಂದ ಸ್ವೀಕರಿಸಿದೆ. ಆದರೆ ಕನ್ನಡದ ಮಹತ್ವದ ಲೇಖಕರ ಬರವಣಿಗೆಯಲ್ಲಿ ಕೂಡ ಮುಸ್ಲಿಮರ ಕುರಿತು 'ಸರ್ವ ಜನಾಂಗದ ಶಾಂತಿ ತೋಟ' ಎನ್ನುವಂತಹ ಮಾಮೂಲಿಯಾದ ಉದಾರ ಭಾವನೆಯ ಹೊರತಾಗಿ ಅನನ್ಯ ಮುಸ್ಲಿಮನೊಬ್ಬನ ಪಾತ್ರ ಸೃಷ್ಟಿಯೇ ಇಲ್ಲ. ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರು 'ಕನ್ನಡದ ಮೌಲ್ವಿ' ಎನ್ನುವ ಉತ್ತಮ ಪ್ರಬಂಧ ಬರೆದಿದ್ದಾರೆ. ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಪ್ರಾಸಂಗಿಕವಾಗಿ ಬರುವ 'ಸಾಬಿ', ರಾವಬಹದ್ದೂರರ 'ಗ್ರಾಮಾಯಣ'ದಲ್ಲಿನ 'ಪಿಂಜಾರಲಾಡ', 'ಕರ್ವಾಲೋ'ದಲ್ಲಿನ 'ಪ್ಯಾರ', 'ಚಿದಂಬರ ರಹಸ್ಯ'ದ 'ರಫಿ', ಮೊದಲಾದ ಪಾತ್ರಗಳನ್ನು ಗಮನಿಸಿದರೆ ಇಲ್ಲೆಲ್ಲಾ 'ಅಳಿದ ಮೇಲೆ' ಕಾದಂಬರಿಯ ಯಶವಂತರಾಯ, 'ಬೆಟ್ಟದ ಜೀವ'ದ 'ಗೋಪಾಲಯ್ಯ', 'ಮರಳಿ ಮಣ್ಣಿಗೆ'

ಕಾದಂಬರಿಯಲ್ಲಿನ 'ಸರಸೋತಿ', 'ಗೃಹಭಂಗದ' 'ನಂಜಮ್ಮ', 'ಕಾನೂರು ಹೆಗ್ಗಡತಿ'ಯ 'ಹೂವಯ್ಯ', 'ಮಲೆಗಳಲ್ಲಿ ಮದುಮಗಳು'ನ ಗುತ್ತಿ, ತಿಮ್ಮಿಯಂತಹ ಪಾತ್ರಗಳು ತುಂಬಿಕೊಂಡಂತೆ ಅವು ಮನಸ್ಸನ್ನು ತುಂಬಿಕೊಳ್ಳುವುದಿಲ್ಲ. ಅಂತಹ ಜೀವನಪ್ರೀತಿಯೂ ಆ ಪಾತ್ರಗಳಿಗಿಲ್ಲ. ಇದಕ್ಕೇನು ಕಾರಣವಿರಬಹುದು? 'ರೂಪದರ್ಶಿ'ಯಂತಹ ಕಾದಂಬರಿಯನ್ನು ನೆನೆಸಿಕೊಂಡರೆ ಅಂತಹ ಸಾಧ್ಯತೆ ಮುಸ್ಲಿಂ ಬದುಕಿನಲ್ಲಿ ಕಂಡು ಬರದೇ ಹೋದದ್ದಕ್ಕೆ ಮುಸ್ಲಿಮರಿಗೂ ಇತರರಿಗೂ ಇರುವ ಸಾಂಸ್ಕೃತಿಕ ದೂರವೇ ಕಾರಣ ಎನ್ನದೇ ವಿಧಿಯಿಲ್ಲ. ಹಾಗಾಗಿ ಪಿಂಜಾರರೂ ಒಳಗೊಂಡಂತೆ ಒಟ್ಟು ಮುಸ್ಲಿಮರ ಬದುಕು ಮುಸ್ಲಿಮರ ಒಳಗಿನಿಂದಲೇ ರೂಪುಗೊಳ್ಳುತ್ತ ಅದು ಅನ್ಯ ಸಾಂಸ್ಕೃತಿಕ ಬೇರುಗಳನ್ನು ಒಳಗೊಳ್ಳುವ ಅಪೂರ್ವ ಕ್ರಿಯಾಶೀಲತೆಗಾಗಿ ಕಾಯಬೇಕಿದೆ. ಕನ್ನಡದಲ್ಲಿ ಬರೆದಿರುವ ಮುಖ್ಯ ಮುಸ್ಲಿಂ ಲೇಖಕರ ಕತೆ, ಕಾವ್ಯ, ಕಾದಂಬರಿಗಳಲ್ಲೂ ಮೇಲೆ ಹೆಸರಿಸಲಾದಂತಹ ಪಾತ್ರಗಳಿಗೆ ಸಮನಾದ ದಟ್ಟ ಜೀವನಾನುಭವಗಳನ್ನು ತುಂಬಿಕೊಡಬಲ್ಲ ಪಾತ್ರಗಳು ಇಲ್ಲ ಎನ್ನುವುದನ್ನು ಗಮನಿಸಿದಾಗ 'ಮುಸ್ಲಿಂ ಸಂವೇದನೆ' ತನ್ನ ನಿಜನೆಲೆಯಲ್ಲಿ ಪ್ರಕಟಗೊಂಡಿಲ್ಲ. ಅದು ಸ್ವಯಂಪೂರ್ಣವಾಗಿಲ್ಲ ಎನ್ನುವುದು ತಿಳಿಯುತ್ತದೆ. ಈ ಹಿನ್ನೆಲೆಯಲ್ಲಿ ಮುಸ್ಲಿಂ ಸಂವೇದನೆಯನ್ನು ಗ್ರಹಿಸುವಾಗ ಎದುರಾಗುವ ಸಾಮಾನ್ಯ ತೊಂದರೆಗಳನ್ನು ಮತ್ತು ಆ ಕುರಿತಾದ ಕೆಲ ಅನುಮಾನಗಳನ್ನು ಇಲ್ಲಿ ವಿವೇಚಿಸಬಹುದಾಗಿದೆ.

ಕನ್ನಡ ಸಾಹಿತ್ಯದಲ್ಲಿ ದಲಿತ ಸಂವೇದನೆ, ಮಹಿಳಾ ಸಂವೇದನೆ ಹಾಗೂ ಮುಸ್ಲಿಂ ಸಂವೇದನೆಗಳನ್ನು ಕುರಿತ ಚಿಂತನೆಗಳು ಹೊಸ ಬಗೆಯ ವಿಮರ್ಶೆಯ ನೆಲೆಯನ್ನು ಸೃಷ್ಟಿಸಿದ್ದು ನಿಜ. ಈ ನೆಲೆ ಬಹುಮಟ್ಟಿಗೆ ಕನ್ನಡದ ಹೊಸ ಬರಹಗಾರರ ಸಾಹಿತ್ಯವನ್ನು ದೃಷ್ಟಿಯಲ್ಲಿಟ್ಟುಕೊಂಡು ನಡೆಸಿದ ಈ ಚರ್ಚೆ ಇಂಡಿಯಾದ ಸಾಮಾಜಿಕ ರಚನೆಯ ಒಳಗಡೆಯೇ ಆಕಾರ ಪಡೆದುಕೊಂಡ ಸಮಾಜವಾದೀ ಧೋರಣೆಯನ್ನು ಪ್ರಕಟಿಸಿದೆ. ಯಜಮಾನ ಸಂಸ್ಕೃತಿಯ ಆಕ್ರಮಣಕಾರೀ ನಿಲುವಿನಿಂದಾಗಿ ಮೇಲಿನ ಮೂರೂ ಜನ ಸಮುದಾಯಗಳು ವಿವಿಧ ಕಾರಣಗಳಿಗಾಗಿ ವಿವಿಧ ಬಗೆಯ ಯಾತನೆಯನ್ನು ಅನುಭವಿಸಿವೆ, ಅನುಭವಿಸುತ್ತಲೂ ಇವೆ. ಈ ಜನಸಮುದಾಯಗಳು ತನ್ನ ಒಳಗೆ ಕಟ್ಟಿಕೊಂಡ ಅದಮ್ಯ ಕನಸುಗಳು, ಅಗಾಧವಾದ ಆಶಯಗಳು ಸಾಹಿತ್ಯದಲ್ಲಿ ತಣ್ಣನೆಯ ಆಕ್ರೋಶವಾಗಿ, ವಿಷಾದವಾಗಿ ಅಭಿವ್ಯಕ್ತಗೊಂಡಿವೆ. ಈ ಅಭಿವ್ಯಕ್ತಿ ಕೆಲವು ಸಲ ಶೋಷಣೆಯ ಮತ್ತು ದಾರುಣವಾದ ಮಾನವೀಯ ರೂಪದಲ್ಲಿದ್ದರೆ ಮತ್ತೆ ಕೆಲ ಸಲ ತಪ್ತ ಸಂವೇದನೆಗಳ ರೂಪದಲ್ಲಿದೆ.

ಸಾಹಿತ್ಯದಲ್ಲಿ ಲೇಖಕನ ವಿಶಿಷ್ಟ ಸಂವೇದನೆಗಳನ್ನು ಗುರುತಿಸುವಾಗ ಆ ಲೇಖಕನ ಧರ್ಮ ಮತ್ತು ಜಾತಿಯ ಸಂಬಂಧವಾದ ಅನುಭವಗಳ ಪ್ರಮಾಣವನ್ನು ಗಮನದಲ್ಲಿಟ್ಟುಕೊಳ್ಳುವುದು ಸಹಜವಾಗಿದೆ. ಮೇಲಿನ ಸಮುದಾಯಗಳ ಸಂವೇದನೆಯನ್ನು ಪ್ರತ್ಯೇಕವಾಗಿ ಚರ್ಚಿಸುವಾಗ 'ದಲಿತ' ಎನಿಸಿಕೊಳ್ಳುವವನು ಹಿಂದೂ ಧರ್ಮದ ಒಳಗಿನವನಾಗುತ್ತಾನೆ ಮತ್ತು ಅಷ್ಟರಮಟ್ಟಿಗೆ ಹಿಂದೂ ಧರ್ಮದಿಂದ ಅವನಿಗೆ ದತ್ತವಾದ ಅನುಭವದ ವಲಯದೊಳಗೆ ಚರ್ಚಿತನಾಗುತ್ತಾನೆ. ಅಂದರೆ 'ಹಿಂದೂ' ಅನ್ನುವುದು ಒಂದು ಧರ್ಮವಾದರೆ ಅದರ ತೆಕ್ಕೆಯಲ್ಲಿ ಹತ್ತಾರು ಬಗೆಯ ಸಮಾಜ, ಉಪ ಸಮಾಜಗಳಿವೆ. ಇವುಗಳಲ್ಲಿ ಪರಸ್ಪರವಾಗಿರುವ ಒಳಸಂಬಂಧಗಳು ಮತ್ತು ಒಳಭೇದಗಳ ಪರಿಣಾಮವಾಗಿ ದಲಿತನ ಸಂವೇದನೆಗೆ ನಿಖರತೆ ಪ್ರಾಪ್ತವಾಗುತ್ತದೆ.

ಆದರೆ, ಮಹಿಳಾ ಸಂವೇದನೆಯನ್ನು ಕುರಿತಂತೆ ಇದೇ ಮಾತು ನಿಜವಾಗುವುದಿಲ್ಲ. ಮಹಿಳೆ ಒಂದು ನಿರ್ದಿಷ್ಟ ಧರ್ಮದ ನೆಲೆಯಲ್ಲಿ ಮಾತ್ರ ಚರ್ಚೆಗೊಳಪಡದೆ ಎಲ್ಲ ಧರ್ಮಗಳ ಆವರಣದಲ್ಲಿ 'ದಲಿತತ್ವ'ವನ್ನು ಪಡೆಯುತ್ತಾಳೆ. ಮತ್ತು ಇದು ಜಾಗತಿಕ ಮಟ್ಟದ ವ್ಯಾಪ್ತಿಯನ್ನು ಪಡೆಯುತ್ತದೆ. ಈ ದೃಷ್ಟಿಯಲ್ಲಿ ದಲಿತನೊಬ್ಬನ 'ದಲಿತತ್ವ'ಕ್ಕಿಂತ ಮಹಿಳೆಯೊಬ್ಬಳ 'ದಲಿತತ್ವ' ಹೆಚ್ಚು ತೀವ್ರವಾದುದು, ದಾರುಣವಾದುದು. ಪುರುಷ ಪ್ರಣೀತವಾದ ಎಲ್ಲ ಬಗೆಯ ಸಾಂಸ್ಕೃತಿಕ ಮತ್ತು ಸಾಮಾಜಿಕವಾದ ಯಜಮಾನಿಕೆಯಲ್ಲಿ ಪ್ರತಿಭಟಿಸುವ ಸಾಮರ್ಥ್ಯವಿದ್ದೂ ಎದುರು ನಿಲ್ಲಲಾಗದಂತಹ ಅಸಂಘಟಿತ ಅಸಹಾಯಕತೆಯನ್ನು ಅನುಭವಿಸುತ್ತಾಳೆ. ಮಹಿಳೆ ಇಂಥ ಅನುಭವಗಳನ್ನು ಸಂವೇದನೆಗಳನ್ನಾಗಿಸುವಾಗ ಕೂಡ ಆಕೆಗೆ, ಆಕೆ ಬಳಸುವ ಭಾಷೆಗೆ ಈ ಬಗೆಯ ಅಸಹಾಯಕತೆ ಕಾಡಿದ ನಿದರ್ಶನಗಳನ್ನು ಕೊಡಬಹುದು. ಮಹಿಳೆಯ ಮನಸ್ಸು ಚರಿತ್ರೆ ಮತ್ತು ವರ್ತಮಾನಗಳಿಗೆ ತೆರೆದುಕೊಳ್ಳುವುದಕ್ಕಿಂತ ಹೆಚ್ಚಾಗಿ ಪುರಾಣಕ್ಕೆ ತೆರೆದುಕೊಂಡು ಅದನ್ನು ಆಕ್ರಮಿಸಿಯೂ ಬಿಡುತ್ತದೆ. ಹೀಗಾಗಿ ಮಹಿಳೆಯನ್ನು ಕಾಡುವ ಈ ನೆಲೆ ಆಯಾ ಧರ್ಮಪ್ರಣೀತವಾದ ಒಟ್ಟಾರೆ 'ಹಿಂಜರಿತ'ವೇ ಆಗಿದೆ.

ದಲಿತ ಮತ್ತು ಮಹಿಳಾ ಸಂವೇದನೆಗಳನ್ನು ಕುರಿತ ಮೇಲಿನ ನನ್ನ ಅಭಿಪ್ರಾಯಗಳನ್ನು ಇನ್ನಷ್ಟು ಸ್ಪಷ್ಟಗೊಳಿಸಬಹುದಾದರೂ ನನ್ನ ಸದ್ಯದ ಉದ್ದೇಶ ಮುಸ್ಲಿಂ ಸಂವೇದನೆಯನ್ನು ಆ ಎರಡು ಸಂವೇದನೆಗಳಿಗಿಂತ ಭಿನ್ನ ನೆಲೆಯಲ್ಲಿ ಅರ್ಥೈಸುವುದಾಗಿದೆ. ಈ ಮೂರು ಬಗೆ ಸಂಕೀರ್ಣವಾಗಿರುವುದರಿಂದ ಯಾವುದು ಹೆಚ್ಚು, ಯಾವುದು ಕಡಿಮೆ ಎನ್ನುವ ತೂಕ ಹಾಕುವ ಅಥವಾ ಮೌಲ್ಯ ನಿರ್ಣಯ ಮಾಡುವ ಕೆಲಸಕ್ಕೆ ಕೈಹಾಕದೆ ಆ ಸಂಕೀರ್ಣತೆಗೆ ಕಾರಣವಾಗಿರಬಹುದಾದ ಅಂಶಗಳನ್ನು ಕಂಡುಕೊಳ್ಳುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಮುಸ್ಲಿಂ ಸಂವೇದನೆ ಎಂದ ತಕ್ಷಣ ದಲಿತನೊಬ್ಬನ ಸಂದರ್ಭದಲ್ಲಿ ವಿಶ್ಲೇಷಣೆಗೊಳಪಡುವ 'ಹಿಂದೂ' ಧರ್ಮದ ಹಾಗೆಯೇ ಮುಸ್ಲಿಮನ ಸಂದರ್ಭದಲ್ಲಿ 'ಇಸ್ಲಾಂ' ಧರ್ಮ ವಿಶ್ಲೇಷಣೆಗೊಳಪಡುತ್ತದೆ. ಇದಿಷ್ಟೇ ಆಗಿಬಿಟ್ಟಿದ್ದರೆ ದಲಿತ ಮತ್ತು ಮುಸ್ಲಿಂ ಸಂವೇದನೆಗಳನ್ನು ಹೀಗೆ ಪ್ರತ್ಯೇಕವಾಗಿ ಗುರುತಿಸುವ ಪ್ರಮೇಯವೇ ಇರುತ್ತಿರಲಿಲ್ಲ. ಆದರೆ ಭಾರತೀಯ ಮುಸ್ಲಿಮನೊಬ್ಬನ ಸಂವೇದನೆಗಳನ್ನು ಅರಬ್‌ರಾಷ್ಟ್ರಗಳ ಮುಸ್ಲಿಮನ ಸಂವೇದನೆಗಳ ಜೊತೆಯಲ್ಲಿಟ್ಟು ನೋಡುವುದು ಹೇಗೆ ಸಾಧ್ಯವಿಲ್ಲವೋ ಹಾಗೆ ಹಿಂದೂ ಧರ್ಮದ ಒಳಗೇ ಚರ್ಚೆಗೊಳಪಡುವ 'ದಲಿತ'ನ ಸಂವೇದನೆಗಳನ್ನು, ಇಸ್ಲಾಂನ ಒಳಗೂ ಹೊರಗೂ ಚಾಚಿಕೊಳ್ಳುವ ಮುಸ್ಲಿಮನ ಸಂವೇದನೆಗಳ ಜೊತೆಯಲ್ಲಿ ನೋಡುವುದು ಸಾಧ್ಯವಿಲ್ಲ. ಅಲ್ಲದೆ ಭಾರತೀಯ ಮುಸ್ಲಿಮನು ಎದುರಿಸಬಹುದಾದ ಪೂರ್ವಾಗ್ರಹಗಳು, ಅನುಮಾನ ಆತಂಕಗಳು ಅವನಿಗೆ ವಿಶಿಷ್ಟವಾದ ಭಿನ್ನ ನೆಲೆಯನ್ನು ರೂಪಿಸುತ್ತವೆ.

ಕನ್ನಡ ಸಾಹಿತ್ಯದ ಹಿನ್ನೆಲೆಯಲ್ಲಿ ನನ್ನ ಈ ಅಭಿಪ್ರಾಯವನ್ನು ವಿಶದಪಡಿಸಿಕೊಳ್ಳಬಹುದೇನೋ. ಕ್ರಿ.ಶ. 7ನೆಯ ಶತಮಾನದಷ್ಟು ಹಿಂದೆಯೇ ಭಾರತಕ್ಕೆ ಮುಸ್ಲಿಮರ ಆಗಮನವಾಗಿತ್ತೆಂದು ಚರಿತ್ರೆ ಹೇಳುತ್ತದೆ. ವ್ಯಾಪಾರಿಗಳ ಅಥವಾ ಸಾಮ್ರಾಜ್ಯಶಾಹಿಗಳ ಆಗಮನ ಮಾತ್ರ ಇದಾಗಿರದೆ ಭಿನ್ನ ಭಾಷೆ ಮತ್ತು

ವಿಶಿಷ್ಟ ಸಂಸ್ಕೃತಿಯ ರೂಪಗಳೊಂದಿಗೆ ಇಡೀ ಜನಾಂಗವೇ ಇಲ್ಲಿನ ಒಟ್ಟು ಪರಿಸರದೊಂದಿಗೆ ಬೆರೆತುಹೋಯಿತು. ಭಿನ್ನ ಧರ್ಮವೊಂದರ ಆಗಮನವನ್ನು ಭಾರತದ ಯಜಮಾನ ಸಂಸ್ಕೃತಿ ಅಸಹನೆಯಿಂದಲೂ, ಎಂದೂ ಸ್ಥಾವರವಾಗಬಯಸದ ಇಲ್ಲಿನ ಉಪಸಂಸ್ಕೃತಿಗಳು ಮುಗ್ಧ ಔದಾರ್ಯದಿಂದಲೂ ಕಂಡವು. ಅಸಹನೆ ಇದ್ದ ಕಡೆಯೆಲ್ಲಾ ಸಂವಾದ ಸಾಧ್ಯವಾಗದೆ ಸಂಘರ್ಷ ಹಿಂಸೆಯನ್ನು ಆಶ್ರಯಿಸುತ್ತದೆ. ಇದು ಭಾರತದಲ್ಲಿ ಹಿಂದೂ ಮುಸ್ಲಿಂ ಇಬ್ಬರನ್ನೂ ಒಳಗೊಂಡ ಭಕ್ತಿಪಂಥಕ್ಕೆ ಕಾರಣವಾಯಿತು. ಇದು ವಾಸ್ತವವಾಗಿ ಸ್ಥಾವರ ರೂಪಿಯಾದ 'ಧರ್ಮ'ವನ್ನು ದಾಟಿ ಜಂಗಮರೂಪಿಯಾದ 'ಧಾರ್ಮಿಕತೆ'ಯನ್ನು ಕಟ್ಟಿಕೊಂಡ ರೋಮಾಂಚಕಾರಿ ಚರಿತ್ರೆ. 'ಧಾರ್ಮಿಕತೆ' ಎಲ್ಲವನ್ನೂ ಎಲ್ಲರನ್ನೂ ಒಳಗೊಳ್ಳುತ್ತ ಹೋದಂತೆ ಯಜಮಾನ ಸಂಸ್ಕೃತಿ ಇದನ್ನು ನಿರ್ಲಕ್ಷಿಸುತ್ತಲೇ ಬಂದುದರ ಪರಿಣಾಮವಾಗಿ ಒಂದರ ವಿರುದ್ಧ ಮತ್ತೊಂದು ಸಾಮ್ರಾಜ್ಯಶಾಹಿ ಧೋರಣೆಯ ಮೂಲಕ ಸೇರತೊಡಗಿದವು. ಸ್ಥಳೀಯವಾದ ಹಿಂದೂ ಧರ್ಮ 'ಇಸ್ಲಾಂ' ಪರಕೀಯವೆಂದೂ ಅದರ ಆಗಮನ ಹಿಂದೂ ಧರ್ಮದ ಬುನಾದಿಗೆ ದೊಡ್ಡ ಅಪಾಯವಿದೆಯೆಂದೂ ಭಾವಿಸಿತು ಮತ್ತು ಅದರ ವಿರುದ್ಧದ ಅಸಹನೆಯಿಂದಾಗಿಯೇ ವಿಜಯನಗರದಂತಹ ಸಾಮ್ರಾಜ್ಯ ಸ್ಥಾಪನೆಯೂ ಆಯಿತು. ವಿಶೇಷವಾಗಿ ಕನ್ನಡ ನಾಡಂತೂ ವಿದ್ಯಾರಣ್ಯರನ್ನು ಹಿಂದೂ ವೈಭವದ ಪುನರ್ ಸಂಸ್ಥಾಪನಾಚಾರ್ಯರೆಂದೇ ಭಾವಿಸಿ ಸಂಭ್ರಮಪಟ್ಟಿತು. ಜೈನ, ಬೌದ್ಧ ಧರ್ಮದ ತತ್ವಗಳಿಂದ ಸಾಕಷ್ಟು ಹಾನಿಗೊಳಗಾಗಿದ್ದ ಹಿಂದೂ ಯಜಮಾನ ಸಂಸ್ಕೃತಿ ಚೇತರಿಸಿಕೊಳ್ಳುತ್ತಿದ್ದಂತೆಯೇ ಇಸ್ಲಾಂನ ಆಗಮನ ಔದಾರ್ಯದ ಬದಲು ಅಸಹನೆಯನ್ನೇ ಹುಟ್ಟಿಸಿತು. ಭಾರತವನ್ನಾಳಿದ ಮುಸ್ಲಿಂ ದೊರೆಗಳನೇಕರ ಧೋರಣೆಯೂ ಇದಕ್ಕೆ ಮತ್ತಷ್ಟು ಪುಷ್ಟಿಯನ್ನು ಕೊಟ್ಟಿತು. ಇದರಿಂದ ಉಂಟಾದ ಗಾಢ ಪರಿಣಾಮವೆಂದರೆ ಜೈನ ಬೌದ್ಧ ಧರ್ಮಗಳನ್ನು ತನ್ನ ತೆಕ್ಕೆಯ ಒಳಗೇ ಅಪ್ಪಿಕೊಂಡಂತೆ ಹಿಂದೂ ಧರ್ಮ 'ಇಸ್ಲಾಂ'ನ್ನು ಊರೊಳಗೆ ಬಿಟ್ಟುಕೊಂಡಿತೇ ವಿನಾಃ ಮನದೊಳಗೆ ಬಿಟ್ಟುಕೊಳ್ಳಲೇ ಇಲ್ಲ.

ಹಿಂದೂ ಧರ್ಮ ಗತಿಸಿ ಹೋದ ತನ್ನ ವೈಭವವನ್ನು ಮತ್ತೆ ಕಟ್ಟಿಕೊಳ್ಳಲು ಸ್ವತಃ ತಾನಾಗಿಯೇ ಪ್ರಯತ್ನಿಸದೇ ಅನ್ಯಧರ್ಮವೊಂದರ ಆಗಮನವನ್ನು ನೆಪವಾಗಿಸಿಕೊಂಡಿದ್ದು ಮತ್ತು ಅದರ ಹತಾಶೆಯನ್ನು ಭಕ್ತಿಪಂಥದ ರಚನೆಗಳಲ್ಲಿ ಕಾಣಬಹುದು. ತನ್ನ ಒಳಗಿನ ಲೋಪ-ದೋಷಗಳ ಪರಿಣಾಮವಾಗಿ ತಾನು ಅನಾಕರ್ಷಣೆಗೀಡಾಗಬೇಕಾಯಿತೆಂಬ ಆತ್ಮಶೋಧನೆಯ ಹಾದಿಯನ್ನು ಅನುಸರಿಸದೇ, ಅನ್ಯಧರ್ಮದ ಬಗ್ಗೆ ಆತಂಕ ಬಿತ್ತುವ ಚಾಳಿಯಿಂದಾಗಿಯೇ ಹಿಂದೂ-ಮುಸ್ಲಿಂ ಸಮುದಾಯದ ನಡುವಿನ ಕಂದರಗಳು ಹಿರಿದಾಗುತ್ತಲೇ ಇವೆ. ಈ ಎರಡೂ ಧರ್ಮಗಳು ಚರಿತ್ರೆಯಲ್ಲಿ ಮುಖಾಮುಖಿಗೊಂಡದ್ದೇ ಹೀಗೆ. ಆದುದರಿಂದ ವರ್ತಮಾನ ಹೆಚ್ಚು ಕ್ರೂರವಾಗುತ್ತಿರುತ್ತದೆ.

ಅನ್ಯಧರ್ಮವೊಂದರ ಆಗಮನವನ್ನು 'ಆಕ್ರಮಣ'ವೆಂದು ಭಾವಿಸಿದ ಬಗೆಯಲ್ಲಿಯೇ 'ಆತಂಕ'ವನ್ನು ಗುರುತಿಸಬಹುದಾಗಿದೆ ಮತ್ತು ಇಂತಹ ಆತಂಕಕ್ಕೆ ಮುಖ್ಯ ಕಾರಣ ಸಾಮ್ರಾಜ್ಯ ವಿಸ್ತರಣೆಯೇ ಪ್ರಧಾನ ಉದ್ದೇಶವುಳ್ಳವರಾದ ಸಾಮ್ರಾಟರೊಂದಿಗೇ ಈ ಧಾರ್ಮಿಕ ನಂಟನ್ನು ತಳುಕುಹಾಕಿ ನೋಡಿದ್ದು. ನಿರಂಕುಶ ಪ್ರಭು ಧರ್ಮ ಪ್ರಸಾರದ ಹೊಣೆಯನ್ನು ನಿಭಾಯಿಸಿದ್ದು ಯಾವ

ಚರಿತ್ರೆಯಲ್ಲಿದೆ? ಮುಸ್ಲಿಮರೊಂದಿಗೆ ಭಾರತಕ್ಕೆ ಬಂದ ಅರಬ್ ಭಾಷೆ ಮತ್ತು ಅದರ ಲಿಪಿ ಕೂಡ ಇಂತಹದ್ದೇ ರೀತಿಯ ಪೂರ್ವಾಗ್ರಹಗಳನ್ನೂ ಸೃಷ್ಟಿಸಿಬಿಟ್ಟಿತು. ಭಾರತೀಯರು ಪೂರ್ವಮುಖಿ ಆರಾಧಕರಾದರೆ ಮುಸ್ಲಿಮರು ಪಶ್ಚಿಮಮುಖಿ ಆರಾಧಕರು. ಭಾರತೀಯ ಭಾಷೆಯ ಬರವಣಿಗೆ ಮತ್ತು ಓದುವ ಕ್ರಮ ಎಡದಿಂದ ಬಲಕ್ಕೆ ಆದರೆ ಮುಸಲ್ಮಾನರ ಭಾಷೆ ಇದಕ್ಕೆ ತದ್ವಿರುದ್ಧ. ಧಾರ್ಮಿಕವಾದ ವಿಶಿಷ್ಟ ಸಂವೇದನೆಗಳನ್ನೂ ಕೇವಲ ಅದರ ನಂಬಿಕೆಯ ನೆಲೆಯಲ್ಲಿ ನೋಡದೇ ಭಾಷೆಯೂ ಕೂಡ ಸಾಂಸ್ಕೃತಿಕ ಸಂವೇದನೆಗಳನ್ನು ರೂಪಿಸುವಲ್ಲಿ ಪ್ರಧಾನ ಪಾತ್ರ ವಹಿಸುತ್ತದೆ ಎನ್ನುವುದನ್ನು ಮರೆಯುವಂತಿಲ್ಲ. ಹೀಗಾಗಿ ಹಿಂದೂಗಳು ಮತ್ತು ಮುಸಲ್ಮಾನರು ಬದುಕನ್ನು ಕುರಿತು ಆಲೋಚಿಸುವ ವಿಧಾನ ಮೂಲಭೂತವಾಗಿ ಭಿನ್ನವೇನಲ್ಲ ಎಂಬ ಅರಿವಿನ ನೆಲೆ ಅಸ್ಪಷ್ಟವಾಗಿ ; ಪೂರ್ವಾಗ್ರಹಗಳಿಂದ, ಚರಿತ್ರೆಯ ಅಪವ್ಯಾಖ್ಯಾನಗಳಿಂದಾಗಿ ಉಂಟಾದ, ಪರಸ್ಪರರನ್ನು ವಿರುದ್ಧದ ನೆಲೆಯಲ್ಲಿ ನೋಡುವಂತಾಯಿತು. ಇದರಿಂದಾಗಿಯೇ ಇವತ್ತಿನ ಸಾಮಾಜಿಕ ವಾಸ್ತವದಲ್ಲಿ ಉದಾರವಾದೀ ಹಿಂದೂಗಳೂ ಸೇರಿದಂತೆ ಕೆಲವು ಸಲ ತಮಾಷೆಯಾಗಿ, ಮತ್ತೆ ಕೆಲವು ಸಲ ನಿಷ್ಠುರವಾಗಿ ಮುಸ್ಲಿಮರನ್ನು 'ಉಲ್ಟಾ ಸಾಬರು' ಎಂದು ಕರೆಯುವುದು ವಾಡಿಕೆಯಾಗಿಬಿಟ್ಟಿದೆ.

ಹಿಂದೂ ಧರ್ಮದ ಉಗ್ರವಾದಿಗಳಿಗೆ, ಭಾರತಕ್ಕೆ ಬ್ರಿಟೀಷರ ಆಗಮನವಾದಾಗ ಮುಸ್ಲಿಮರ ಆಗಮನ, ಮತ್ತು ಅನಂತರದಲ್ಲಿ ಉಂಟಾದ 'ಮುಜುಗರ' ಆಗಿರಲಿಕ್ಕಿಲ್ಲ. ಮುಸ್ಲಿಂ ದೊರೆಗಳ ಆಡಳಿತಾವಧಿಯಲ್ಲಿ ಹೇಗೋ ಬ್ರಿಟೀಷರ ಅವಧಿಯಲ್ಲಿಯೂ ಅಂತಹವರ 'ಸವಲತ್ತು'ಗಳಿಗೇನೂ ಧಕ್ಕೆಯಾಗಿರಲಿಲ್ಲ. ಅಲ್ಲದೆ ಅವಿನ್ನೂ ಹೆಚ್ಚು ಕ್ರಮಬದ್ಧಗೊಂಡವು. ಉದಾರವಾದೀ ಹಿಂದೂ-ಮುಸ್ಲಿಮರ ಒಂದುಗೂಡುವಿಕೆಯಿಂದಾಗಿ ಸ್ವಾತಂತ್ರ್ಯ ಹೋರಾಟ ತೀವ್ರಗೊಂಡಾಗ ಬ್ರಿಟೀಷರೊಂದಿಗೆ ಹತ್ತು ಹಲವಾರು ಬಗೆಯ ಹೊಂದಾಣಿಕೆ ಮಾಡಿಕೊಂಡವರು. ಉಳಿದವರೆಲ್ಲ ಅನೇಕ ಬಗೆಯ ತ್ಯಾಗ, ಬಲಿದಾನಕ್ಕೆ ಸಿದ್ಧವಾಗಿದ್ದರೆ ತಮ್ಮ ಪ್ರಾಣರಕ್ಷಣೆಗಾಗಿ ಬ್ರಿಟೀಷರಲ್ಲಿ ಅಲವತ್ತುಕೊಂಡವರು ಯಾರು ಎನ್ನುವುದು ವಿಚಾರವಂತರಿಗೆ ಗೊತ್ತಿಲ್ಲದ ವಿಷಯವೇನಲ್ಲ. ಇವರೇ ಮುಂದೆ 'ವೀರದೇಶಪ್ರೇಮಿ' ಎನ್ನುವಂತಹ ಬಿರುದುಗಳನ್ನು ಪಡೆದು ಚರಿತ್ರೆಯ ಅಪವ್ಯಾಖ್ಯಾನದಲ್ಲಿ ಅಜರಾಮರರಾಗಿದ್ದಾರೆ. ಬಾಬರಿ ಮಸೀದಿಯನ್ನು ಕೆಡವಿದವರನ್ನೆಲ್ಲಾ 'ದೇಶಭಕ್ತ'ರೆಂದು ಕರೆದು ವೈಭವೀಕರಿಸಲಾಗುತ್ತದೆಯಲ್ಲ ಹಾಗೆ!

ಸ್ವಾತಂತ್ರ್ಯ ಬರುವ ಮೊದಲೇ ಮುಸ್ಲಿಮರ ಬಗೆಗಿದ್ದ ಹಲವು ಬಗೆಯ ಕಟಕಿ, ವ್ಯಂಗ್ಯ ಹಿಂದೂ ಸಮುದಾಯದಲ್ಲಿ ನಿರಂತರವಾಗಿ ಮುಂದುವರೆಯಿತು. ಅದು ಕನ್ನಡ ಸಾಹಿತ್ಯದಲ್ಲಿಯೂ ಬೇರೆ ಬೇರೆ ರೂಪದಲ್ಲಿ ಕಾಣಿಸತೊಡಗಿತು. ಶಿಶುನಾಳ ಷರೀಫರು ಆಧ್ಯಾತ್ಮದ ನಿಗೂಢ ತತ್ವಗಳನ್ನು ಪದವಾಗಿ ಹಾಡಿದಾಗ ಸಂಭ್ರಮಪಟ್ಟವರು ಎಲ್ಲ ಸಮುದಾಯಕ್ಕೆ ಸೇರಿದವರು. ಜನ್ಮತಃ ಮುಸ್ಲಿಮನಾದವನೊಬ್ಬ, ಅದೂ ಕನ್ನಡ ಭಾಷೆಯಲ್ಲಿ ಕಾವ್ಯಕಟ್ಟಿದ್ದು ಅನೇಕ ಹಿಂದೂ ಸನಾತನಿಗಳಿಗೆ 'ಮೆಚ್ಚುಗೆ'ಯಾಯಿತು. ಈ ಮೆಚ್ಚುಗೆ ಶರೀಫರು ಕುಣಿದಾಡುವಂತೆ ಹಾಡಿದ 'ಹಾಕಿದ ಜನಿವಾರವ ಸದ್ಗುರುನಾಥ ಹಾಕಿದ ಜನಿವಾರವ' ಹಾಡಿನಲ್ಲಿ ಸ್ಪಷ್ಟವಾಗುತ್ತದೆ. ಶರೀಫರ ಕಾವ್ಯದಲ್ಲಿ ಮುಸ್ಲಿಮನೊಬ್ಬನ ವಿಶಿಷ್ಟ ಸಂವೇದನೆಯನ್ನು

ಕಾಣಲಾಗದಿದ್ದರೂ 'ಧರ್ಮ'ವನ್ನು ಮೀರಿದ 'ಧಾರ್ಮಿಕತೆ'ಯನ್ನಂತೂ ಗುರುತಿಸಬಹುದು. ಶರೀಫರ ಕಾವ್ಯದಲ್ಲಿ ಈ ಬಗೆಯ ಧಾರ್ಮಿಕತೆಯನ್ನು ಕಾಣದೆ ಅನ್ಯಧರ್ಮೀಯನೊಬ್ಬನ ಬಾಯಿಂದ ತಮ್ಮ ಭಾಷೆ, ತಮ್ಮ ಧರ್ಮದ ಗುಣಗಾನವನ್ನು ಕೇಳಿ ಆನಂದಿಸುವ ಮನಸ್ಸು ಶರೀಫರನ್ನು ಒಳಗಿನವನೆಂದು ಸ್ವೀಕರಿಸಿದೆ ಎಂದು ಹೇಳಲಾಗುವುದಿಲ್ಲ. ಹಿಂದೂ ಧರ್ಮದ ಗೋವಿಂದಭಟ್ಟರನ್ನು ಗುರು ಎಂದು ಒಪ್ಪಿಕೊಂಡು ಅವರಿಗೆ 'ಶೆರೆ' ಇತ್ಯಾದಿಗಳನ್ನು ಒದಗಿಸುವ ನಿಷ್ಠಾವಂತ ಶಿಷ್ಯನೆಂದು ಶರೀಫರನ್ನು ಮೆಚ್ಚುವುದಕ್ಕೆ ಕಾರಣವಿದ್ದಿರಲಾರದೆ? ಇಷ್ಟಾಗಿಯೂ ಶರೀಫರು 'ಪರಕೀಯ'ತೆಯನ್ನು ಅನುಭವಿಸದೇ, ಪರಕೀಯರ ಆಡಳಿತದಲ್ಲಿ ಅಮೂರ್ತ ಆಧ್ಯಾತ್ಮವನ್ನು ಕುರಿತು ಹಾಡಿದುದರ ಅನಿವಾರ್ಯತೆ ಸ್ವಾತಂತ್ರ್ಯದ ತೀವ್ರತೆಗಿಂತ ಬಲವಾಗಿತ್ತೇ ?

ಇದು ಮುಸ್ಲಿಂ ಸಂವೇದನೆಗಿರುವ ಮತ್ತೊಂದು ನೆಲೆಯನ್ನು ಸೂಚಿಸುತ್ತದೆ. ಮುಸ್ಲಿಮರನ್ನು ಭಾರತೀಯ ಸಮಾಜದ ಎಲ್ಲ ಕ್ಷೇತ್ರಗಳು ಚಿತ್ರಿಸಿರುವ ರೀತಿಯಿಂದ ಅದನ್ನು ತಿಳಿದುಕೊಳ್ಳಬಹುದು. ಕನ್ನಡದ ತುಂಬಾ ಮಹತ್ವದ ಲೇಖಕರಲ್ಲಿ ಕೂಡ ಮುಸ್ಲಿಂಪಾತ್ರಗಳ ಸೃಷ್ಟಿ ಅನನ್ಯವಾದದ್ದು ಎನಿಸುವುದಿಲ್ಲ. ಕನ್ನಡದ ಲೇಖಕರು ಬರೆದ ಸಾಹಿತ್ಯದಲ್ಲಿನ ಸಂವೇದನೆಗಳೂ, ಮುಸ್ಲಿಮೇತರರು ಬರೆದ ಸಾಹಿತ್ಯದಲ್ಲಿನ ಪಾತ್ರಸೃಷ್ಟಿಗಳೂ ಸಹಜವಾಗಿ ಭಿನ್ನವಾಗಿವೆ. ಒಟ್ಟು ಹಿಂದೂ ಸಮುದಾಯದಲ್ಲಿ ಮುಸ್ಲಿಮರ ಬಗೆಗಿನ ಭಾವನೆಗಳು ಬಹುಮಟ್ಟಿಗೆ ಕಟಕಿ, ವ್ಯಂಗ್ಯದಿಂದ ಕೂಡಿರುವುದು ಒಡೆದು ಕಾಣುವಂತಿರುತ್ತದೆ. ಮತ್ತು ಮುಸ್ಲಿಮರಿಂದ ಹಿಂದೂ ಸಮುದಾಯ ಯಾವ ರೀತಿಯ ಬದುಕನ್ನು ಆಲೋಚನೆ, ಅಭಿರುಚಿಯನ್ನು ನಿರೀಕ್ಷಿಸುತ್ತದೆ ಎನ್ನುವುದಕ್ಕೆ ಕನ್ನಡ ಸಾಹಿತ್ಯದ ಸಂದರ್ಭದಲ್ಲೇ ಉತ್ತರ ಕಂಡುಕೊಳ್ಳಬಹುದಾಗಿದೆ.

ನಾನು ತುಂಬ ಇಷ್ಟಪಡುವ ನನ್ನ ಗುರುಗಳಾದಜಿ.ಎಚ್. ನಾಯಕ ಅವರು ಕನ್ನಡದ ಹಿರಿಯ ಕಾದಂಬರಿಕಾರರಾದ ಗಳಗನಾಥರ 'ಮಾಧವ ಕರುಣಾವಿಲಾಸ' ಕಾದಂಬರಿಯ ಭಾಷೆ ಮತ್ತು ಶೈಲಿಯನ್ನುಕುರಿತು ಸಂಕಿರಣವೊಂದರಲ್ಲಿ ಆಡಿದ ಮಾತುಗಳು ಹೀಗಿವೆ. 'ಮುಸಲ್ಮಾನ ಪಾತ್ರಗಳಿಗೆ ಸಂಬಂಧಿಸಿದಂತೆ ಬಳಕೆಯಾಗುವ ಭಾಷೆಯಲ್ಲಿ ವ್ಯಂಗ್ಯ, ಕಟಕಿ ಕಾಣುತ್ತದೆ. ಹಿಂದೂ ಪಾತ್ರಗಳಿಗೆ ಸಂಬಂಧಿಸಿದಂತೆ ಭಾಷೆಯಲ್ಲಿ ವ್ಯಂಗ್ಯ, ಕಟಕಿ ಇಲ್ಲ. ಕೀರ್ತಿಸುವ ಧಾಟಿ ಅಥವಾ ಆರಾಧನಾ ದನಿಯಿಂದ ಕೂಡಿದ ಭಾಷೆಯ ಬಳಕೆ ಅಲ್ಲಿದೆ. ಕಾಸಿಂನ ಪಾತ್ರ ಬಂದಾಗಲಂತೂ ಕಟಕಿ, ವ್ಯಂಗ್ಯ ಅತಿಯಾಗಿದೆ. ಅವನು ಹಿಂದೂ ಧರ್ಮದ ಹಿರಿಮೆಯನ್ನು ಗುರುತಿಸಿ ಪರಿವರ್ತನೆ ಹೊಂದುವವರೆಗಿನ ಕಟಕಿ, ವ್ಯಂಗ್ಯಗಳು ಆ ಮೇಲಿನ ನಿರೂಪಣೆಯಲ್ಲಿ ಇಲ್ಲ. ಅಲ್ಲಿ ಅವನಿಂದ ಸಂಸ್ಕೃತ ಶ್ಲೋಕಗಳನ್ನು ಹೇಳಿಸಲಾಗಿದೆ. ಅಲ್ಲೆಲ್ಲಾ ಪ್ರಶಂಸಾತ್ಮಕ ದನಿಯಲ್ಲಿ ಭಾಷೆಯ ಬಳಕೆಯಾಗಿದೆ'5 ಮುಂದುವರೆದು ನಾಯಕರು 'ನಮ್ಮ ಹಳೆಯ ಕನ್ನಡ ಸಾಹಿತ್ಯ ಪರಂಪರೆಯಲ್ಲಿ ಈ ಬಗೆ ಕಾಣಿಸುತ್ತದೆ. ತನ್ನ ಧರ್ಮಸಂಬಂಧವಾದ ವಿಷಯ, ವ್ಯಕ್ತಿ ತತ್ವಗಳನ್ನು ಕುರಿತಾಗಿ ಆರಾಧಕರ ದನಿಯಲ್ಲಿಯೂ, ಅವು ಅನ್ಯಧರ್ಮಸಂಬಂಧವಾದವುಗಳಾಗಿದ್ದರೆ ವಿಡಂಬನೆ, ಕಟಕಿಗಳ ದನಿಯಲ್ಲಿಯೂ ನಮ್ಮ ಕವಿಗಳು ಬರೆದದ್ದಿದೆ'6 ಎಂದಿದ್ದಾರೆ.

ಮುಸ್ಲಿಂ ಸಮುದಾಯವನ್ನು ಕುರಿತು ಅಕಾರಣವಾದ ತಿರಸ್ಕಾರಕ್ಕೆ ಇರಬಹುದಾದ ಹಿಂದೂ ಸಾಂಸ್ಕೃತಿಕ ಅಪೇಕ್ಷೆಗಳೇನು ಎಂಬ ಹುಡುಕಾಟದಲ್ಲಿ ಎದುರಾದ ನನ್ನ ಸಂಶಯಗಳಿಗೆ ಜಿ.ಎಚ್. ನಾಯಕರ ಮಾತುಗಳು ಸಮರ್ಥನೆಯ ಹಾಗಿವೆ. ಈ ಕಾರಣದಿಂದಾಗಿಯೇ ಅಕಬರಅಲಿ, ನಿಸಾರ್‌ಅಹಮದ್ ಅವರಂತಹ ಕವಿಗಳು ಸಾಧ್ಯವಾದಷ್ಟು 'ಒಳಗಿನವರಾಗಲು' ಪ್ರಯತ್ನಿಸಿದಂತೆ ಅವರ ಕಾವ್ಯಸೃಷ್ಟಿಯಿದೆ. ನಿಸಾರ್ ಅವರಂತೂ 'ಬೆಣ್ಣೆಕದ್ದ ಕೃಷ್ಣ'ನಿಂದ ಹಿಡಿದು 'ಇತಿಹಾಸದ ಹಿಮದಲ್ಲಿನ ಸಿಂಹಾಸನ ಮಾಲೆ'ಯವರೆಗೂ ಹಾಡಿ ಸೈ ಅನಿಸಿಕೊಂಡು ಬಿಟ್ಟರು. ಹೀಗೆಂದಾಕ್ಷಣ ಇವರ ಕಾವ್ಯ ಪ್ರೇಮವನ್ನಾಗಲೀ ಸಂವೇದನೆಗಳ ಸಾಚಾತನವನ್ನಾಗಲೀ ಅಲ್ಲಗಳೆದಂತಾಗುವುದಿಲ್ಲ. ಯಾಕೆಂದರೆ 'ನಾನೆಂಬ ಪರಕೀಯ' ಮತ್ತು 'ನಿಮ್ಮೊಡನಿದ್ದೂ ನಿಮ್ಮಂತಾಗದೇ' ಎಂಬಂತಹ ಅವರ ವಿಶಿಷ್ಟ ಕೊರಗನ್ನು ಮರೆಯುವುದಾದರೂ ಹೇಗೆ ?

ನಿಸಾರ್ ಅವರ ಕಾವ್ಯ ಸೃಷ್ಟಿಯನ್ನು ಮೆಚ್ಚಿಕೊಳ್ಳುವವರು ಅವರ ಕಾವ್ಯದ ನಾದ ಮಾಧುರ್ಯದಷ್ಟೇ ಅವರು 'ಮುಸ್ಲಿಂ' ಎಂಬ ಕಾರಣಕ್ಕಾಗಿ ವಿಶೇಷ ಮೆಚ್ಚುಗೆ ವ್ಯಕ್ತಪಡಿಸುತ್ತಾರೆ. ಈ ಬಗೆಯ ಪ್ರಶಂಸೆ ಮಾಡುವವರಿಗೆ 'ಮುಸ್ಲಿಂ' ಹೊರಗಿನವನಾಗಿಯೂ ತಮ್ಮದೆಲ್ಲದರ ಜ್ಞಾನ ಪಡೆದು ತಮಗಿಂತ ಸೊಗಸಾಗಿ ನಿವೇದಿಸಬಲ್ಲವನಾಗಿಯೂ ಕಾಣುತ್ತಾನೆ.

ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯಲ್ಲಿ ಬರುವ ಸಾಬಿಯಿಂದ ಹಿಡಿದು ಪೂರ್ಣಚಂದ್ರ ತೇಜಸ್ವಿಯವರ 'ಕರ್ವಾಲೋ' ಕಾದಂಬರಿಯ ಪ್ಯಾರನವರೆಗೂ 'ಮುಸ್ಲಿಂ' ಪಾತ್ರಗಳನ್ನು ನೋಡಿದರೆ ಅವುಗಳು ಹಾಗೆ ಬಂದು ಹೀಗೆ ಹೋಗುವ, ಪೆದ್ದನಂತೆ, ಬಫೂನ್‌ಗಳಂತೆ, ಕೆಲವೊಮ್ಮೆ ನ್ಯಾಯ ಹೇಳುವ ಸಾಹೇಬನಂತೆ ಕಂಡು ಮರೆಯಾಗಿಬಿಡುತ್ತವೆ. ಈ ಮಾತನ್ನು ಕನ್ನಡದ ಇನ್ನಿತರೆ ಕಲಾ ಕ್ಷೇತ್ರಗಳಲ್ಲಿನ ಮುಸ್ಲಿಂ ಪಾತ್ರಗಳಿಗೂ ಅನ್ವಯಿಸಬಹುದು. ಕನ್ನಡದ ಅನೇಕ ಸಿನಿಮಾಗಳಲ್ಲಂತೂ ಮುಸ್ಲಿಂ ಪಾತ್ರಗಳು, ಅವರ ಭಾಷೆ ಇತ್ಯಾದಿಗಳ ಪ್ರಯೋಗವನ್ನು ನೋಡಿಬಿಟ್ಟರೆ 'ಅಯ್ಯೋ' ಅನಿಸುತ್ತದೆ. ಹೀಗೆ ಸಾಹಿತ್ಯ ಕೃತಿಗಳಲ್ಲಿ, ಮತ್ತಿತರ ಕಲಾಕ್ಷೇತ್ರಗಳಲ್ಲಿ ಮುಸ್ಲಿಮರ ಬಗೆಗೆ ಹಿಂದೂ ಯಜಮಾನ ಸಂಸ್ಕೃತಿಯಿಟ್ಟುಕೊಂಡಿರುವ 'ಅರೆ-ಬರೆ' ತಿಳುವಳಿಕೆಯಿಂದಾಗಿ ಅವರು ಹಾಗೇ ಇರಬಹುದೆಂಬ ಭ್ರಮೆಯನ್ನು ಸಮಾಜದಲ್ಲಿ ಉಳಿಸಿಬಿಟ್ಟಂತಾಗಿದೆ. 'ಪ್ರೊಫೆಸರ್ ಹುಚ್ಚೂರಾಯ' ಎಂಬ ಕನ್ನಡ ಸಿನಿಮಾದಲ್ಲಿ ಅದರ ನಾಯಕ ನಟರಾದ ನರಸಿಂಹರಾಜ ಅವರು ಜಟಕಾ ಹತ್ತಿ 'ಮಲ್ಲೇಶ್ವರಂ'ಗೆ ಹೋಗಲು ತಿಳಿಸುತ್ತಾರೆ. ಮಲ್ಲೇಶ್ವರಂಗೆ ಹೋಗುವ ಹಾದಿ ಜಟಕಾ ಸಾಬಿಗೆ ಗೊತ್ತಿಲ್ಲ. ನಡುವೆ ಎದುರಾದ ಒಂದಿಬ್ಬರನ್ನು ವಿಚಾರಿಸಿದರೆ ಅವರು ತೆಲುಗು, ತಮಿಳು ಭಾಷೆಯಲ್ಲಿ ಏನೋ ಅಂದು ಹೋಗುತ್ತಾರೆ. ಅದು ಪ್ರೊಫೆಸರರಿಗೆ ಅರ್ಥವಾಗುವುದಿಲ್ಲ. ಆದರೆ ಅದೇ ಜಟಕಾಸಾಬಿ ಉರ್ದುಮಿಶ್ರಿತ ಕನ್ನಡದಲ್ಲಿ ಮಾತಾಡುತ್ತಿದ್ದರೆ ಅದು ಅರ್ಥವಾಗುತ್ತದೆ. ಇದರಿಂದ ಪ್ರೊಫೆಸರರಿಗೆ ಹೀಗೆ ಕನ್ನಡ ಮಾತನಾಡುವ ಈ ಜಟಕಾದವನ ಬಗ್ಗೆ ವಿಚಿತ್ರವಾದ ಮೆಚ್ಚುಗೆ ಉಂಟಾಗುತ್ತದೆ. ಈ ಇಡೀ ಸನ್ನಿವೇಶ ಬಂಬಿಸುವ ಧೋರಣೆಯಿಂದಾಗಿ ಇಲ್ಲಿನ ಮುಸ್ಲಿಮನಿಗೆ ತನ್ನನ್ನು ಜನ ಹೀಗಾದರೂ ಮೆಚ್ಚಿಕೊಳ್ಳುತ್ತಾರಲ್ಲಾ ಎಂಬ ಸಮಾಧಾನವೊಂದು ಸಿಗುತ್ತದೆ.

ಇಂಡಿಯಾದ ಮುಸ್ಲಿಮರು ಈ ಬಗೆಯ ಸಮಾಧಾನ ಪಡೆಯವುದಕ್ಕಾಗಿ ಪ್ರಜ್ಞಾಪೂರ್ವಕವಾಗಿ ಯತ್ನಿಸಬೇಕಾಗಿರುವುದೇ ದುರಂತ. ಇದು ಇಲ್ಲಿನ ಭಾಷೆ, ನೆಲಜಲದ ಬಗೆಗಿನ ಹೋರಾಟ, ದೇಶಪ್ರೇಮದಂತಹ ಸಂಗತಿಗಳಲ್ಲಿ ಮುಸ್ಲಿಮರು ತಮ್ಮ ನಿಷ್ಠೆಯನ್ನು ಸಾರ್ವಜನಿಕವಾಗಿ ಪ್ರದರ್ಶಿಸುವ, ಸಾಬೀತುಪಡಿಸುವಂತಹ ಒತ್ತಡಕ್ಕೆ ಒಳಗಾಗುತ್ತಾರೆ. ಇದು 'ಒಳಗಿ'ನವನಾಗುವ ಪ್ರಯತ್ನವೇ? ಬದುಕಿನ ಅನಿವಾರ್ಯತೆಯೇ ? ಇಂಥ ಪ್ರಶ್ನೆಗಳನ್ನು ಕನ್ನಡದ ವೈಚಾರಿಕ ಜಗತ್ತು ಹಾಕಿಕೊಳ್ಳುತ್ತಾ, ಆತ್ಮಾವಲೋಕನವನ್ನು ಮಾಡಿಕೊಳ್ಳುತ್ತಾ ಬಂದಿದೆ. ಆದರೆ ಯಜಮಾನೀ ಸಂಸ್ಕೃತಿಯ ಆಕ್ರಮಣಕಾರೀ ಧೋರಣೆ ಇಂಥ ಸಂವಾದಗಳಿಗೆ ಸವಾಲಾಗುತ್ತಾ ಮುಸ್ಲಿಮರ ಪರ ಚಿಂತಿಸುವ ಮನಸ್ಸುಗಳಿಗೆ ದೇಶದ್ರೋಹದ ಪಟ್ಟಕಟ್ಟುತ್ತಾ ಆಂತಕವೊಡ್ಡುತ್ತಿದೆ. ಇಂಥ ಸಾಂಸ್ಕೃತಿಕ ಹಿಂಜರಿತದಲ್ಲಿ ಮುಸ್ಲಿಂ ಸಂವೇದನೆಗಳ ವಿಶಿಷ್ಟ ನೆಲೆಯನ್ನು ಗುರುತಿಸಬೇಕಾಗಿದೆ.

ಬಂಡಾಯ ಮತ್ತು ದಲಿತ ಸಾಹಿತ್ಯ ಚಳುವಳಿಯ ಪರಿಣಾಮವಾಗಿ ಕನ್ನಡದಲ್ಲಿ ವಿವಿಧ ನೆಲೆಗಳಿಂದ ಬಂದ ಜನಸಮುದಾಯಗಳು ತಂತಮ್ಮ ಸಂವೇದನೆಗಳನ್ನು ಪ್ರಕಟಪಡಿಸಿದವು. ಕನ್ನಡದ ಬಹುಮುಖೀ ಸಂಸ್ಕೃತಿಯ ನಿಜನೆಲೆಗಳು ತನ್ನೆಲ್ಲ ವೈವಿಧ್ಯತೆಯನ್ನು ಉಳಿಸಿಕೊಂಡೇ ಪ್ರಜಾಸತ್ತಾತ್ಮಕ ಹಕ್ಕುಗಳಿಗಾಗಿ ಹೋರಾಡುವ ದನಿಯನ್ನು ಸ್ಥಾಪಿಸತೊಡಗಿದ್ದು ಈಗಲೇ. ಶತಮಾನಗಳಿಂದ ಅಕ್ಷರ ವಂಚಿತರಾಗಿ, ಅಕ್ಷರದಿಂದ ದೊರಕುವ ಎಲ್ಲ ಬಗೆಯ ಸವಲತ್ತುಗಳಿಂದ ದೂರವಾಗಿದ್ದ ಜನಸಮುದಾಯಗಳು ಆ ದೀರ್ಘ ಇತಿಹಾಸದ ನೋವನ್ನೇ ಹಾಡಾಗಿಸುತ್ತ, ಹಾಡಿನ ಮೂಲಕವೇ ಪ್ರಶ್ನಿಸುತ್ತ ತಮ್ಮ ಅಸ್ತಿತ್ವವನ್ನು ಸ್ಥಿರಪಡಿಸಿಕೊಳ್ಳುವ ಪ್ರಯತ್ನ ಮಾಡಿದವು. ಬಂಡಾಯದ ಸಂದರ್ಭದಲ್ಲಿ ಮುಸ್ಲಿಮರು ತೊಡಗಿಸಿಕೊಂಡ ರೀತಿ, ಮತ್ತವರ ಅಭಿವ್ಯಕ್ತಿ ಅನನ್ಯವಾದುದು.

ಮುಸ್ಲಿಂ ಬರಹಗಾರರನೇಕರಿಗೆ ನಿಜಕ್ಕೂ ವೇದಿಕೆಯಾಗಿದ್ದು ಲಂಕೇಶ್ ಪತ್ರಿಕೆ. ಸಾರಾ ಅಬೂಬಕರ್, ಬಾನು ಮುಷ್ತಾಕ್ ಅವರ ಕತೆ, ಕಾದಂಬರಿಗಳು ಏಕಕಾಲಕ್ಕೆ ಮುಸ್ಲಿಮರ ಹಾಗೂ ಮಹಿಳೆಯರ ಬದುಕನ್ನು ಕುರಿತು ಹೊಸಬಗೆಯ ಲೋಕದ ಪರಿಚಯುವನ್ನು ಮಾಡಿಕೊಟ್ಟವು. ಹಾಗೆಯೇ ಬೊಳುವಾರು ಮಹಮ್ಮದ್ ಕುಂಞ, ಫಕೀರ್ ಮಹ್ಮದ್ ಕಟ್ಪಾಡಿ, ಅಬ್ದುಲ್‌ರಶೀದ್, ಬಿ.ಎಂ.ರಶೀದ್ ಮೊದಲಾದವರ ಕತೆ, ಕಾದಂಬರಿಗಳು ಕೂಡ ಮುಸ್ಲಿಂ ಸಮಾಜದ ಒಳತುಡಿತ, ಶೋಷಣೆ, ಹೊಸತನಕ್ಕಾಗಿ ಹಂಬಲಿಸುವ ಮನಸ್ಸುಗಳ ಹಪಹಪಿಕೆಯ ಜೀವನಕ್ರಮಗಳನ್ನು ಪ್ರಕಟಿಸಿದವು. ಈ ಕಾರಣದಿಂದಲೇ ಈ ಎಲ್ಲಾ ಲೇಖಕರು ಕನ್ನಡದಲ್ಲಿ ಅರ್ಥಪೂರ್ಣ ಚರ್ಚೆಗೆ ಒಳಗಾಗಿದ್ದಾರೆ. ಏಕೆಂದರೆ ಇವರು ತಮ್ಮ ಸಾಹಿತ್ಯದ ಮೂಲಕ ಸಾಮಾಜಿಕ ಬದ್ಧತೆಯನ್ನು, ಎಲ್ಲ ಬಗೆಯ ಪ್ರಗತಿಪರ ನಿಲುವನ್ನು ದೃಢಪಡಿಸಿದವರು. ತಮ್ಮ ಸಮಾಜದ ಒಳಗಿನ ಮಿತಿಗಳನ್ನು ಸೂಕ್ಷ್ಮವಾಗಿ ಪ್ರಶ್ನಿಸುತ್ತಲೇ ಸುಧಾರಣೆಯನ್ನು ಕಾಣಬಯಸಿದವರು.

ಸಾರಾ ಅವರ 'ಚಂದ್ರಗಿರಿ ತೀರದಲ್ಲಿ', 'ಮುಸ್ಲಿಂ ಹುಡುಗಿ ಶಾಲೆ ಕಲಿತದ್ದು', ಚಪ್ಪಲಿಗಳು, ವಜ್ರಗಳು, ಮೊದಲಾದ ಕಾದಂಬರಿಗಳಲ್ಲಿ ಮುಸ್ಲಿಂ ಮಹಿಳೆಯು ಪುರುಷರ ಮತ್ತು ಧರ್ಮದ ವಿವಿಧ ಕಾರಣಗಳಿಗಾಗಿ ಅನುಭವಿಸುವ 'ಯಾತನೆ' ಪ್ರಧಾನವಾಗಿದೆ. ಇಲ್ಲಿನ ಪುರುಷರು ಇಸ್ಲಾಂನ್ನು ತಮ್ಮ

ಮೂಗಿನ ನೇರಕ್ಕೆ ಅರ್ಥೈಸಿಕೊಳ್ಳುವ ಮೂಲಕ ಮಹಿಳೆಯರನ್ನು ಕಾಣುವ ದೃಷ್ಟಿಕೋನ ಹೆಚ್ಚು ಕ್ರೂರವಾದುದು. ಆಧುನಿಕತೆಗೆ ತೆರೆದುಕೊಳ್ಳುವ ಹೆಣ್ಣಿನ ಒಳಬಯಕೆಗಳು ಧರ್ಮಾಂಧರ, ಧರ್ಮದ ಅಪವ್ಯಾಖ್ಯಾನ ಮಾಡುವವರ ಉದ್ದಟತನದ ಎದುರು ಸೋತು ಸೊರಗುತ್ತವೆ. ಪ್ರತಿಭಟನೆ ಒಳತೋಟಿಯಾಗಿ ಉಳಿದುಬಿಡುತ್ತದೆ. 'ಹೆಂಗಸರನ್ನು ಕಾಲಿನ ಚಪ್ಪಲಿಯಂತೆ ಬಳಸಿಕೊಳ್ಳಬೇಕು. ಬೇಕಾದಾಗ ಉಪಯೋಗಿಸಿ, ಬೇಡವಾದಾಗ ಮೂಲೆಯಲ್ಲಿ ಬಿಟ್ಟು ಬಿಡಬೇಕು. ಅದು ಬಿಟ್ಟು ತಲೆಯ ಮೇಲಿಟ್ಟುಕೊಂಡರೆ ಹೇಗೆ? ಚಪ್ಪಲಿಯನ್ನು ಎಲ್ಲಿಡಬೇಕೋ ಅಲ್ಲೇ ಇಡಬೇಕು'7. ಇದು ತಂದೆಯೊಬ್ಬ ತನ್ನ ಮಗಳ ವಿಷಯವಾಗಿಯೇ ಅಳಿಯನಿಗೆ ಹೇಳುವ ಮಾತು. ಇದನ್ನು ಕೇಳಿಸಿಕೊಳ್ಳುವ ಮಗಳಿಗೆ ಆಘಾತವಾಗುತ್ತದೆ. ಅಳಿಯನಿಗೆ ಸಿಟ್ಟು ಬಂದರೂ ಅಸಹಾಯಕ. ಇಂಥ ಪುರುಷರ ವ್ಯಾಖ್ಯಾನಗಳ ಪರಿಣಾಮವಾಗಿ ಜಗತ್ತಿನ ಬಹುತೇಕ ಧರ್ಮಗಳೂ ಮಹಿಳೆಯರನ್ನು ಶೋಷಣೆಗೆ ಒಳಪಡಿಸಿವೆ. ಇದನ್ನು ಸಾರಾ ಕಾದಂಬರಿಗಳು ಸೂಕ್ಷ್ಮವಾಗಿ, ತಣ್ಣನೆಯ ವಿಷಾದದಲ್ಲಿ ಅಭಿವ್ಯಕ್ತಿಸುತ್ತವೆ.

ಉಳಿದ ಮುಸ್ಲಿಂ ಲೇಖಕರ ಬಹುಪಾಲು ಕತೆ-ಕಾದಂಬರಿಗಳು ಕೂಡ ಮುಸ್ಲಿಂ ಸಮಾಜದ ನೋವು, ಅಸಹಾಯಕತೆ, ತಬ್ಬಲಿತನವನ್ನು ಅನಾವರಣಗೊಳಿಸುತ್ತಲೇ ಅಲ್ಲಿನ ಮಿತಿಗಳನ್ನು ಹೇಳುತ್ತವೆ. ಈ ಬಗೆಗಿನ ವಿವರಗಳನ್ನು ಹಿಂದೆ ಹೇಳಿದ ಲೇಖಕರ ಕತೆ-ಕಾದಂಬರಿಗಳ ಒಳಗಡೆಯೇ ಇರುವ ಉದಾಹರಣೆಗಳಿಂದ ತಿಳಿದುಕೊಳ್ಳಬಹುದು. ಆದರೆ ಸದ್ಯದ ನನ್ನ ದೃಷ್ಟಿ ಆ ರೀತಿಯ ಸಮೀಕ್ಷೆಯಾಗಿರದೆ, ಒಟ್ಟು ಮುಸ್ಲಿಂ ಲೇಖಕರ ಬರವಣಿಗೆಯ ಒಳತುಡಿತ ಹೇಳುವುದಾಗಿದೆ.

ದಲಿತ ಬಂಡಾಯ ಸಾಹಿತ್ಯ ಚಳುವಳಿಯು ಮಹಿಳೆಯರ ಸಂವೇದನೆಗಳು ಪ್ರಕಟವಾಗಲು ವೇದಿಕೆಯಾದಂತೆ ಕನ್ನಡ ನಾಡಿನ ಅನೇಕ ಪ್ರಗತಿಪರ ಮುಸ್ಲಿಮರೂ ಬರೆಯುವುದಕ್ಕೆ ಪ್ರೇರಣೆಯಾಯಿತೆನ್ನುವುದು ನಿಜವೇ. ಆದರೆ ಈಗ ಬರೆಯುತ್ತಿರುವ ಮುಖ್ಯ ಮುಸ್ಲಿಂ ಲೇಖಕರೆಲ್ಲ ಕರಾವಳಿ ನೆಲೆಯ ವಿಶಿಷ್ಟ ಹಾಗೂ ಭಿನ್ನ ಸಾಮಾಜಿಕ ಪರಿಸರದವರು. ಕಡಲು ಮತ್ತು ಕಡಲಾಚೆಯ ಅರಬ್ ದೇಶಗಳೊಂದಿಗೆ ನಡೆದ ವ್ಯಾವಹಾರಿಕ ಸಂಬಂಧಗಳು ಇವರ ಸಾಹಿತ್ಯದಲ್ಲಿ ಕಂಡುಬರುತ್ತವೆ. ಅರಬ್‌ನ ಮುಸ್ಲಿಮರು ಮತ್ತು ಅವರ ಪವಿತ್ರ ಗ್ರಂಥ ಕುರಾನ್, ಅವರ ಧಾರ್ಮಿಕ ನೀತಿ-ನಿಯಮಗಳು ಕನ್ನಡದ ಕರಾವಳಿ ನೆಲೆಯ ಮುಸ್ಲಿಮರನ್ನು ಸಹಜವಾಗಿ ಪ್ರಭಾವಿಸಿವೆ. ಅರಬ್ ಮೂಲದ ಆರ್ಥಿಕ ಸಂಪತ್ತು ಕನ್ನಡದ ಮುಗ್ಧ, ಮೂಢ, ಬಡ ಮುಸ್ಲಿಂ ಮಹಿಳೆಯರನ್ನು ಕೇವಲ 'ಸರಕು'ಗಳಾಗಿ ನೋಡುವುದಿದೆ. ಇವರ ಸಾಹಿತ್ಯದಲ್ಲಿನ ಗಂಡಸರು ವ್ಯಾಪಾರೀ ಮನೋಧರ್ಮದವರಾದರೆ ; ಮಹಿಳೆಯರು ಗಂಡಸರ 'ಚಪ್ಪಲಿ'ಯಂತೆ, ಕೆಲವೊಮ್ಮೆ ಕೇವಲ ಕತ್ತಲಕೋಣೆಯೊಳಗೆ, ಬುರ್ಖಾದೊಳಗೆ ನಲುಗುವ ಜೀವಚ್ಛವಗಳಾಗಿರುತ್ತಾರೆ. ಪುರುಷ ಕಟ್ಟಿದ ಧರ್ಮ, ಮಹಿಳೆಯ ಸಂದರ್ಭದಲ್ಲಿ ಕಠೋರವಾಗುತ್ತಾ, ಗಂಡಸರ ವಿಚಾರದಲ್ಲಿ ಅವನ ಅನುಕೂಲಕ್ಕೆ ತಕ್ಕಂತೆ ಶಿಥಿಲಗೊಳ್ಳುತ್ತಾ ಹೋಗುತ್ತದೆ. ಕುರಾನ್ ಗಂಡಿಗೆ 'ಸ್ವಾತಂತ್ರ್ಯ'ವಾದರೆ ಹೆಣ್ಣಿಗೆ ಅದೇ 'ಬಂಧನ'ವಾಗುತ್ತದೆ.

ಇದು ಕರಾವಳಿ ಪ್ರದೇಶದ ಮುಸ್ಲಿಂ ಸಮಾಜದ ನಿಜನೆಲೆ ಹೇಳುವ ಅಪರೂಪದ ಕೃತಿಗಳನ್ನು ಕೊಡಲು ಸಾಧ್ಯವಾಯಿತು. ವಿಪರ್ಯಾಸವೆಂದರೆ ಇಂಥದೇ ಸಾಮಾಜಿಕ ಮನೋಧರ್ಮ ಕರ್ನಾಟಕದ

ಇತರೆಡೆಯ ಮುಸ್ಲಿಮರದ್ದೂ ಆಗಿರಬಹುದೆಂಬ ಭ್ರಮೆಯನ್ನು ಇದು ಹುಟ್ಟು ಹಾಕಿಬಿಟ್ಟಿತು. ಆರೆಸೆಸ್ ಹಾಗೂ ವಿಹೆಚ್‌ಪಿಯಂತಹ ಸಂಘಟನೆಗಳು ಮುಸ್ಲಿಮರನ್ನು ಕುರಿತು ಅತಿರಂಜಿತ ಪ್ರಚಾರ ಮಾಡುವುದೂ ಸೇರಿದಂತೆ ಭಾರತೀಯ ಮುಸ್ಲಿಮರನ್ನು ಕುರಿತಾದ ಅಪಕಲ್ಪನೆಗಳೇ ತುಂಬಿಕೊಂಡ ಪೂರ್ವಗ್ರಹೀತ ಮನಸ್ಸುಗಳು ಹೆಚ್ಚಾಗತೊಡಗಿದವು.

ಮೇಲಿನ ಭಾವನೆಗಳಿಗಿಂತ ಭಿನ್ನವಾದ ಮುಸ್ಲಿಮರ ಬದುಕು ಮತ್ತು ಜೀವನ ಕ್ರಮಗಳು ಭಾರತದಲ್ಲಿವೆ ಎನ್ನುವುದು ವಿಚಾರವಂತರಿಗೆ ತಿಳಿದಿದೆ. ಕರ್ನಾಟಕದಲ್ಲೇ ಉರ್ದು ಭಾಷೆಯ ಗಂಧ - ಗಾಳಿ ಗೊತ್ತಿಲ್ಲದ, ಕನ್ನಡವೇ ಅವರ ವೇದನೆ ಸಂವೇದನೆಯಾಗಿರುವ ಲಕ್ಷಾಂತರ ಮುಸ್ಲಿಮರಿದ್ದಾರೆ. ಉತ್ತರ ಕರ್ನಾಟಕದ ಪ್ರತಿಹಳ್ಳಿಗಳಲ್ಲಿ ಕನ್ನಡದ ಸೊಗಡಿನ ಮುಸ್ಲಿಮರನ್ನು ಕಂಡರೆ ಇದೇ ಕರಾವಳಿಯ ಮುಸ್ಲಿಮರು ಮೂಗು ಮುರಿಯುತ್ತಾರೆ. ಹಳೇ ಮೈಸೂರಿನ ಮಂದಿಗೆ ಮುಸ್ಲಿಮನೊಬ್ಬ ಕನ್ನಡ ಬರೆದರೆ, ಓದಿದರೆ ಅದು ವಿಸ್ಮಯವಾಗಿ ತೋರುತ್ತದೆ. ಎಲ್ಲ ಧರ್ಮಗಳ ಹಾಗೆ ಭಾರತೀಯ 'ಇಸ್ಲಾಂ'ನಲ್ಲಿ ಕೂಡ ಅನೇಕ ಕಾರಣಗಳಿಗಾಗಿ ವಿವಿಧ ಪಂಗಡಗಳು ಹುಟ್ಟಿಕೊಂಡಿವೆ. ಶೇಕ್, ಪಠಾಣ್, ಸೈಯದ್, ಸುನ್ನಿ, ತಬಲೀಕ್ ಮೊದಲಾದ ಪಂಗಡಗಳು ಜಾಗತಿಕ ಮಟ್ಟದಲ್ಲಿಯೂ ಇದ್ದು ಅವೆಲ್ಲಾ ತಮತಮಗೆ ಶ್ರೇಷ್ಠತೆಯ ಹಣೆ ಪಟ್ಟಿ ಹಚ್ಚಿಕೊಂಡಿವೆ. ಪರಸ್ಪರ ಕೊಡು-ಕೊಳ್ಳುವ ಸಂಬಂಧವಿಲ್ಲದ ಈ ಪಂಗಡಗಳು ಪ್ರಾರ್ಥಿಸುವ ಮಸೀದಿಗಳ ರಚನೆಯಲ್ಲಿಯೂ, ಪ್ರಾರ್ಥನೆಯ (ನಮಾಜಿನ) ಕ್ರಮದಲ್ಲಿಯೂ ವಿಶಿಷ್ಟತೆ ಹೊಂದಿವೆ. ಮದುವೆ, ಸಾವಿನಂತಹ ಸಂದರ್ಭಗಳಲ್ಲಿ ಈ ವಿಶಿಷ್ಟತೆ ಎದ್ದು ಕಾಣುತ್ತಿರುತ್ತದೆ. ಇಷ್ಟಲ್ಲದೆ ಈ ಮೇಲಿನ ಪಂಗಡಗಳ ನಿರ್ಲಕ್ಷಕ್ಕೆ ಗುರಿಯಾಗಿ 'ನೆಲದಾಧಾರವಿಲ್ಲದ ಮುಗಿಲಾಸರೆ ಸಿಗದ' ಪುಡಿ ಜನಾಂಗಗಳೂ ಇಲ್ಲಿವೆ. ಪಿಂಜಾರ, ತೊಂಡೆ, ಚಪ್ಪರ್‌ಬಂದ್, ದರವೇಶಿ, ಮೊದಲಾದ ಜನಾಂಗಗಳ ಸಾಮಾಜಿಕ ನೋವು, ಹತಾಶೆ, ಅಭದ್ರತೆಗಳು ಇನ್ನೂ ಅಕ್ಷರ ಲೋಕಕ್ಕೆ ಅಪರಿಚಿತವಾಗೇ ಉಳಿದಿವೆ. ಹೀಗಿರುವಾಗ ಧರ್ಮಾಂಧರ ಭಾವಾತಿರೇಕವನ್ನೇ ಒಗ್ಗಟ್ಟು ಎನ್ನಬಹುದಾದರೆ ಅದು ಮುಸ್ಲಿಮರಲ್ಲಿ ಮಾತ್ರವಲ್ಲ. ಇತರ ಧರ್ಮಗಳಲ್ಲೂ ಇದ್ದೇ ಇರುತ್ತದೆ. ಇನ್ನೂ ಬುರ್ಖಾ ಹಾಕಲು ಸಾಧ್ಯವೇ ಇರದಂತಹ ಸಾಮಾಜಿಕ - ಆರ್ಥಿಕ ಪರಿಸರದಲ್ಲಿ ಉತ್ತರ ಕರ್ನಾಟಕದ ಹಳ್ಳಿಯ ಮುಸ್ಲಿಂ ಮಹಿಳೆಯರಿದ್ದಾರೆ ಮಾತ್ರವಲ್ಲ. ಅದನ್ನು ಉಪೇಕ್ಷೆಯಿಂದ ನೋಡುವ ಮನೋಧರ್ಮದವರೂ ಅವರಾಗಿದ್ದಾರೆ. ಅಲ್ಲದೆ ಮುಸ್ಲಿಂ ಗಂಡಸೊಬ್ಬ ಏಳು ಜನ ಹೆಂಡತಿಯರನ್ನು ಕಟ್ಟಿಕೊಳ್ಳುವ, ಹೆಂಡತಿ ಬೇಡವೆನಿಸಿದಾಗ 'ತಲಾಖ್' ಹೇಳಿ ಬಿಡುವ ಸಾಮಾಜಿಕ ಕೌಟುಂಬಿಕ ಸ್ವರೂಪ ಭಾರತೀಯ ಮುಸ್ಲಿಮರಲ್ಲಿಯೇ ವಿರಳವಾದುದು. ಯಾಕೆಂದರೆ ಉತ್ತರ ಕರ್ನಾಟಕದ ಮುಸ್ಲಿಂ ಗಂಡಸೊಬ್ಬ ಹೆಂಡತಿಯನ್ನು ಬಿಟ್ಟ ಎಂದರೆ ಇಡೀ ಸಮಾಜ ಅವನನ್ನು ಕೀಳಾಗಿ ನೋಡುತ್ತದೆ. ಸ್ವತಃ ಹೆಣ್ಣೂ ಸಹ ಆ ಗಂಡಿನ ಜನ್ಮವನ್ನು ಜಾಲಾಡಿಬಿಡುವ ಧೈರ್ಯದವಳೇ ಆಗಿದ್ದಾಳೆ. 'ಅಲ್ಲಾ'ನನ್ನು ಪರಮೋಚ್ಚ ದೈವ ಎಂದು ಮೇಲಿನ ಪಂಗಡಗಳು ನಂಬುವುದು ನಿಜವಾದರೂ ಸಾಂದರ್ಭಿಕವಾಗಿ, ಮೂಲಾಶ್ರಮದ ಸಂವೇದನೆಯ ಫಲವಾಗಿ, ಕೊನೆಗೆ ಎಲ್ಲವನ್ನೂ ಮೀರಿದ ಮಾನವತೆಯ ಪರಿಣಾಮವಾಗಿ 'ಇತರೆ' ದೈವಗಳ ಆರಾಧಕರೂ ಇದ್ದಾರೆ.

ಇಷ್ಟೆಲ್ಲ ಚರ್ಚೆಯ ಉದ್ದೇಶವಿಷ್ಟೇ ; ಕನ್ನಡದ ಮುಸ್ಲಿಂ ಲೇಖಕರ ಬರವಣಿಗೆಯಲ್ಲಿ ಒಟ್ಟು 'ಕರ್ನಾಟಕದ ಮುಸ್ಲಿಂ ಸಂವೇದನೆ'ಯನ್ನು ಗುರುತಿಸುವುದರಿಂದ ಆ ಜನಾಂಗವನ್ನು ಕುರಿತಾದ 'ಪೂರ್ವಾಗ್ರಹ'ಗಳನ್ನಷ್ಟೇ ಎತ್ತಿ ತೋರಿಸಿದಂತಾಗಿ ಅಪೂರ್ಣವಾಗುತ್ತದೆ. ಇಸ್ಲಾಂ ಧರ್ಮ ಒಂದಾದರೆ ಅದರ ಒಳಗಿನ ಸಮಾಜಗಳು, ಈ ಸಮಾಜಗಳ ನಂಬಿಕೆಯ ನೆಲೆಗಳೂ ಬೇರೆ ಬೇರೆ ಹಾಗೂ ಅನೇಕ. ಕನ್ನಡದಲ್ಲಿ ಕರಾವಳಿ ಭಾಗದ ಮುಸ್ಲಿಂ ಬರಹಗಾರರು ಬರೆದದ್ದು ಇಸ್ಲಾಂ ಧರ್ಮದ ಆ 'ಒಂದು ಸಮಾಜದ' ಕನಸು ಮತ್ತು ಹತಾಶೆಗಳನ್ನು. ಇಸ್ಲಾಂನ್ನು ಅನುಸರಿಸುವ ಇತರ ಸಮಾಜಗಳ ಜೀವನಕ್ರಮ ಮತ್ತು ಸಂವೇದನೆಗಳು ಅಕ್ಷರದಲ್ಲಿ ದಾಖಲಾಗುವ ಕಾಲಕ್ಕೆ 'ಮುಸ್ಲಿಂ ಸಂವೇದನೆ' ಎನ್ನುವುದು ಅದರ ಎಲ್ಲ ಸಾರ್ಥಕತೆಯೊಂದಿಗೆ ಪೂರ್ಣವಾದೀತೇನೋ !

ಕನ್ನಡದಲ್ಲಿ ಕರಾವಳಿ ಪ್ರದೇಶದ ಮುಸ್ಲಿಮರು ಬರೆದ, ಬರೆಯುತ್ತಿರುವ ಸಾಹಿತ್ಯವನ್ನು ಮುಖ್ಯವಾಗಿ ಪರಿಗಣಿಸುವ ಬೆಲೆ ಕಟ್ಟುವ ಕೆಲಸ ನಡೆಯುತ್ತಿರುವಾಗಲೂ ಈ ಮುಸ್ಲಿಮರಿಗೆ ಕನ್ನಡ ಅಭಿವ್ಯಕ್ತಿ ಹೇಗೆ ಸಾಧ್ಯವಾಯಿತು ಎನ್ನುವ ಚರ್ಚೆ ನಡೆಯುವುದಿಲ್ಲ. ಮುಸ್ಲಿಮರಾಗಿದ್ದು ಕನ್ನಡದಲ್ಲಿ ಎಷ್ಟು ಸೊಗಸಾಗಿ ಮಾತನಾಡುತ್ತಾರೆ, ಬರೆಯುತ್ತಾರೆ ಎಂಬ ಮೆಚ್ಚುಗೆಯ ಉದ್ಗಾರಗಳು ಇವರ ಬಗ್ಗೆಯೂ ಬರುತ್ತಿರುತ್ತವೆ. ಆದರೆ ಈ ಮುಸ್ಲಿಮರು ಕೇರಳದ ಪ್ರಭಾವವುಳ್ಳವರು, ಬ್ಯಾರಿಗಳು, ನವಾಯಿತರು, ಮಾಪಿಳ್ಳೆಗಳು ಮೊದಲಾದ ಹೆಸರಿನಿಂದ ಕರೆಯಲಾಗುವ ಇವರ ಭಾಷೆಯನ್ನು ಕುರಿತು ಚರ್ಚಿಸುವಾಗ ಕೇರಳದ ಮುಸ್ಲಿಮರ ನಡವಳಿಕೆಗಳನ್ನು ತಿಳಿದುಕೊಳ್ಳಬೇಕು. ಜೊತೆಯಲ್ಲಿ ಇಡೀ ದಕ್ಷಿಣ ಭಾರತದಲ್ಲಿ ಕರ್ನಾಟಕವನ್ನು ಅದರಲ್ಲೂ ಹಳೇ ಮೈಸೂರು ಪ್ರದೇಶವನ್ನು ಹೊರತುಪಡಿಸಿದರೆ ಕೇರಳ, ಆಂಧ್ರಪ್ರದೇಶ ಮತ್ತು ತಮಿಳುನಾಡಿನ ಮುಸ್ಲಿಮರು ಹೆಚ್ಚಾಗಿ ಆಯಾ ರಾಜ್ಯದ ಭಾಷೆಗಳನ್ನು ಆಡುತ್ತಾರೆ. ಕ್ರಮವಾಗಿ ಮಲಯಾಳಂ, ತೆಲುಗು ಮತ್ತು ತಮಿಳುಗಳೇ ಅವರ ಸಾಂಸ್ಕೃತಿಕ ಭಾಷೆಯಾಗಿವೆ. ಉರ್ದು ಅವರಿಗೆ ಕೇವಲ ವ್ಯಾವಹಾರಿಕ ಭಾಷೆ ಮತ್ತು ಅಲ್ಲಿನ ಬಹುಸಂಖ್ಯೆಯ ಮುಸ್ಲಿಮರಿಗೆ ಉರ್ದು ಬರುವುದೇ ಇಲ್ಲ. ಆ ಕಾರಣದಿಂದಲೇ ಕರಾವಳಿಯ ಮುಸ್ಲಿಂ ಲೇಖಕರು ಕನ್ನಡದಲ್ಲಿ ಬರೆಯುವುದು ಸಹಜವಾಗಿದೆ. ಕೇರಳದ ಮಹತ್ವದ ಲೇಖಕ ವೈಕಂ ಬಷೀರ್ ಅವರ ಸಾಹಿತ್ಯವನ್ನು ಚರ್ಚಿಸುವಾಗ ಮುಸ್ಲಿಂ ಲೇಖಕನ ಸಾಹಿತ್ಯವೆಂಬಂತೆ ನೋಡಲಾಗುವುದಿಲ್ಲ. ಮತ್ತು ಅವರ ಭಾಷೆಯ ಕುರಿತು 'ಮುಸ್ಲಿಮರಾಗಿದ್ದು ಮಲಯಾಳಂನಲ್ಲಿ ಎಷ್ಟು ಚೆನ್ನಾಗಿ ಬರೆಯುತ್ತಾರಲ್ಲಾ' ಎಂಬ ಉದ್ಗಾರಗಳು ವ್ಯಕ್ತವಾಗುವುದಿಲ್ಲ. ಕರ್ನಾಟಕದಲ್ಲಿ ಮಾತ್ರ ಯಾಕೆ ಈ ಪರಿಸ್ಥಿತಿಯಿದೆ? ಈ ಹಿನ್ನೆಲೆಯ ಕಾರಣಗಳನ್ನು ಈ ಹಿಂದೆ ಚರ್ಚಿಸಿದ ಐತಿಹಾಸಿಕ ನೆಲೆಯಲ್ಲಿ ಕಂಡುಕೊಳ್ಳಬಹುದು. ಯಾಕೆಂದರೆ ಕರ್ನಾಟಕದಲ್ಲಿ ಹೈದರಾಬಾದ್ ನಿಜಾಮ ಮತ್ತು ಬಿಜಾಪುರದ ಆದಿಲ್‌ಷಾಹಿ ಆಡಳಿತ ಹಾಗೂ ಹಳೆಯ ಮೈಸೂರು ಪ್ರಾಂತ್ಯದಲ್ಲಿ ಹೈದರಾಲಿ, ಟಿಪ್ಪುಸುಲ್ತಾನ್ ಆಡಳಿತದ ಹಿನ್ನೆಲೆ ಇಲ್ಲಿನ ಬಹುಸಂಖ್ಯಾತರನ್ನು ಮುಸ್ಲಿಮರ ವಿಚಾರದಲ್ಲಿ ನಿರ್ದಿಷ್ಟ ದೂರದಲ್ಲಿಟ್ಟಿರುವಂತೆ ಕಾಣುತ್ತದೆ. ಇಷ್ಟಾಗಿಯೂ ಉತ್ತರ ಕರ್ನಾಟಕದ ಹಲವು ಪ್ರದೇಶದಲ್ಲಿ ದಟ್ಟವಾಗಿರುವ ಪಿಂಜಾರ ಜನಾಂಗದ ಸಾಂಸ್ಕೃತಿಕ ಭಾಷೆ ಕನ್ನಡವೇ ಆಗಿದ್ದು ಅವರ ಸಂವೇದನೆ ಮತ್ತು ಒಡನಾಟಗಳು ಕನ್ನಡ ಸಾಹಿತ್ಯದಲ್ಲಿನ್ನೂ ಅಭಿವ್ಯಕ್ತಿ ಪಡೆಯಬೇಕಿದೆ.

ಕನ್ನಡದ ಬಂಡಾಯ ಸಾಹಿತ್ಯ ಚಳುವಳಿಯಲ್ಲಿ ತೊಡಗಿಸಿಕೊಂಡಿರುವ ಹತ್ತಾರು ಮುಸ್ಲಿಂ ಯುವಕವಿಗಳು ಈ ಹಿನ್ನೆಲೆಯಿಂದ ಬಂದವರಾಗಿದ್ದಾರೆ. ರಾಮುನಮುಲಿ, ಅಬ್ಬಾಸಅಲಿ ನದಾಫ್, ಮೆಹಬೂಬ ಯಮ್ಮಿ, ಅಕ್ಬರ ಸಿ. ಕಾಲಿಮಿರ್ಚಿ, ಖಾಸಿಂಸಾಬ, ಇಮಾಮಸಾಬ, ಪೀರಬಾಷಾ, ದಸ್ತಗೀರ್‌ಸಾಬ್ ದಿನ್ನಿ, ಖಾಜಾವಲಿ ಈಚನಾಳ, ಡಿ.ಎಂ. ನದಾಫ್, ಡಿ.ಬಿ. ರಜಿಯಾ, ಕೆ. ಶರೀಫಾ ಮೊದಲಾದವರು ತಮ್ಮ ಅನುಭವಗಳ ವಿಶಿಷ್ಟತೆಯನ್ನು ದಾಖಲು ಮಾಡುತ್ತಿದ್ದಾರೆ. ತುಂಬ ಮಹತ್ವದ್ದನ್ನು ಇನ್ನೂ ಕಟ್ಟಿಕೊಡಬೇಕಾದ ಇವರು ತಮ್ಮ ಕಾವ್ಯಕ್ರಿಯೆಯ ಮೂಲಕ ಕರ್ತೃತ್ವ ಶಕ್ತಿಯನ್ನು ಸಾಬೀತುಪಡಿಸಬೇಕಿದೆ. ಇವರೆಲ್ಲ ಬರವಣಿಗೆಯಲ್ಲಿ ವ್ಯಕ್ತಪಡಿಸುವ ಬದ್ಧತೆಯನ್ನು ಗಮನಿಸಿದರೆ ಕನ್ನಡ ಸಾಹಿತ್ಯಕ್ಕೆ ಹೊಸ ಬಗೆಯ ಮುಸ್ಲಿಂ ಸಂವೇದನೆ ಪ್ರಾಪ್ತವಾಗುವ ವಿಶ್ವಾಸವಂತೂ ಹುಟ್ಟುತ್ತದೆ.

ಪಿಂಜಾರರು ಮತ್ತು ಕನ್ನಡ ಸಾಹಿತ್ಯ ಸಂದರ್ಭವನ್ನು ಕುರಿತ ಈವರೆಗಿನ ವಿವೇಚನೆ ತನ್ನಷ್ಟಕ್ಕೆ ತಾನು ಪರಿಪೂರ್ಣವೆಂದೂ, ಇದು ಅಂತಿಮವಾದುದು ಎಂದೂ ಭಾವಿಸಬೇಕಾಗಿಲ್ಲ. ಪಿಂಜಾರರ ಸಾಂಸ್ಕೃತಿಕ ಸಂವೇದನೆಗಳ ಅಧ್ಯಯನದ ಈ ಸಂದರ್ಭದಲ್ಲಿ ಕನ್ನಡದಲ್ಲಿ ಹೆಚ್ಚು ಪ್ರಸ್ತುತವಾಗಿರುವ ಸಂವೇದನೆಗಳ ಚರ್ಚೆಯಲ್ಲಿ ಪ್ರಶ್ನಿಸಬೇಕಾದ ಕೆಲವು ಅನುಮಾನಗಳನ್ನಷ್ಟೇ ಇಲ್ಲಿ ಪ್ರಸ್ತಾಪಿಸಲಾಗಿದೆ. ಆದರೆ ಕನ್ನಡ ಸಾಹಿತ್ಯ ಇವತ್ತು ವಿಚಿತ್ರ ಬಿಕ್ಕಟ್ಟುಗಳನ್ನು ಎದುರಿಸುತ್ತಿದೆ. ಹಾಗೆ ನೋಡಿದರೆ ಒಟ್ಟು ಕನ್ನಡದ ಸಾಮಾಜಿಕ ಸಂದರ್ಭವೇ ಅಂತಹ ಬಿಕ್ಕಟ್ಟಿನಲ್ಲಿದೆ. ಜಾಗತೀಕರಣದ ಪರಿಣಾಮವಾಗಿ 'ಸಾಹಿತ್ಯ' ಮತ್ತು 'ವೈಚಾರಿಕತೆ' ಮಾರುಕಟ್ಟೆಯಲ್ಲಿ ಸ್ಪರ್ಧಿಸಬೇಕಾದ ಇಕ್ಕಟ್ಟು ಒಂದು ಕಡೆಯಾದರೆ ಭಾರತದ ಬಹುಸಂಖ್ಯಾತ - ಅಲ್ಪಸಂಖ್ಯಾತರ ಮೂಲಭೂತವಾದ ಸಾಹಿತ್ಯವನ್ನು ದಮನ ಮಾಡುತ್ತಿರುವ ಸಂದಿಗ್ಧ ಮತ್ತೊಂದು ಕಡೆ. ಈ ಎಲ್ಲ ಬಿಕ್ಕಟ್ಟುಗಳನ್ನು ಆಗಾಗ್ಗೆ ಚರ್ಚೆಗೆ ಒಳಪಡಿಸಿ ಪರ್ಯಾಯವಾದ ಚಿಂತನಮಾರ್ಗಗಳನ್ನು ತೆರೆಯುತ್ತಿದ್ದ ಅಸಾಧಾರಣ ಪ್ರತಿಭೆಯ, ಜನಪರ ಕಾಳಜಿಯ ಡಾ. ಡಿ.ಆರ್. ನಾಗರಾಜ್ ಮತ್ತು ಪಿ. ಲಂಕೇಶರಂಥವರ ನಿಧನದಿಂದಾಗಿ ಇಡೀ ಸಾರಸ್ವತ ಲೋಕ ಮಾತು ಕಳೆದುಕೊಂಡು ಮೌನವಾದಂತೆ ಕಾಣುತ್ತಿದೆ. ಬರಹಗಾರರ ಪ್ರಗತಿಪರ ವಿಚಾರಗಳನ್ನು ದೇಶದ್ರೋಹದ ಸಂಗತಿಗಳೆಂದು ಬಿಂಬಿಸುವ, ಪ್ರತಿಭಟಿಸುವವರ ಮೇಲೆ ದೈಹಿಕ ಹಲ್ಲೆ ಮಾಡುವ ಹುಸಿ ರಾಷ್ಟ್ರಪ್ರೇಮದ ಸಂಘಟನೆಗಳು ತಮ್ಮ ವಿಕೃತಿಗಾಗಿ ಕನಿಷ್ಠ ಪಶ್ಚಾತ್ತಾಪವನ್ನು ಅನುಭವಿಸುತ್ತಿಲ್ಲ. ಚಳುವಳಿಗಳು ಸತ್ತುಹೋಗಿ ಹೋರಾಟಗಾರರು ಅಧಿಕಾರ ರಾಜಕಾರಣದ ಬೆನ್ನೇರಿ ಹೊರಟಿದ್ದರೆ ಜೀವಮಾನದುದ್ದಕ್ಕೂ ಒಂದೇ ಒಂದು ಉತ್ತಮ ಸಾಲನ್ನು ಬರೆಯದ ಸ್ವಯಂಘೋಷಿತ ಬರಹಗಾರರನೇಕರು ಮೂಲಭೂತವಾದದ ಪ್ರತಿಪಾದಕರಾಗಿದ್ದಾರೆ. ಇಂತಹದರ ನಡುವೆ ಮತಧರ್ಮಗಳಾಚೆ ನಿಂತು ಜೀವಸಮುದಾಯದ ಉನ್ನತಿಗಾಗಿ ದನಿಎತ್ತಿ ಮಾತನಾಡುವವರೂ ಇದ್ದಾರೆ ಎನ್ನುವುದು ಸದ್ಯ ಆಶಾದಾಯಕ ಸಂಗತಿಯಾಗಿದೆ.



---

ಅಡಿಟಿಪ್ಪಣಿಗಳು:

1 - ಕರ್ನಾಟಕ ಸೂಫಿಗಳು - ಡಾ. ರಹಮತ್ ತರೀಕೆರೆ - ಕನ್ನಡ ವಿಶ್ವವಿದ್ಯಾನಿಲಯ - ಪರಿಷ್ಕೃತ ಮುದ್ರಣ - ೨೦೦೧, ಪುಟ-೧೮೮.

2 - ಅದೇ - ಪುಟ-೧೮೮

3 - ಜನಪದ ಸಾಹಿತ್ಯ - ಕಾಳೇಗೌಡ ನಾಗವಾರ - ಯುಗಾದಿ ಪ್ರಕಾಶನ - ಪ್ರಥಮ ಮುದ್ರಣ - ೧೯೯೬, ಪುಟ-೯೭

4 - ಮೊಹರಂ ಪದಗಳು - ಡಾ. ದಸ್ತಗೀರ್ ಅಲ್ಲೀಭಾಯಿ - ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು - ೧೯೯೯ - ಪುಟ XXXVii

5 - ನಿಜದನಿ - ಜಿ.ಹೆಚ್.ನಾಯಕ - ಅಕ್ಷರ ಪ್ರಕಾಶನ - ಪ್ರಥಮ ಮುದ್ರಣ - ೧೯೮೮ - ಪುಟ-೨೨೪

6 - ಅದೇ, ಪುಟ-೨೨೫

7 - ಚಪ್ಪಲಿಗಳು - ಸಾರಾ ಅಬೂಬಕರ್ - ನವಕರ್ನಾಟಕ ಪ್ರಕಾಶನ - ಪ್ರಥಮ ಮುದ್ರಣ - ೧೯೮೯ - ಪುಟ-೧೭

ಅಧ್ಯಾಯ - ೬

# ಆರ್ಥಿಕ ಜೀವನ

ಜನಾಂಗವೊಂದರ ಸಾಂಸ್ಕೃತಿಕ ಅಧ್ಯಯನದ ಮುಖ್ಯ ಚರ್ಚೆ ಆ ಜನಾಂಗದ ಆರ್ಥಿಕ ಸ್ಥಿತಿ-ಗತಿಗಳ ವಿಶ್ಲೇಷಣೆಯನ್ನು ಒಳಗೊಳ್ಳುತ್ತದೆ. ಆರ್ಥಿಕ ಸ್ಥಾನ-ಮಾನಗಳ ವಿವರಗಳ ಮೂಲಕವೇ ಸಮಾಜ, ಧರ್ಮ, ಸಂಸ್ಕೃತಿ ಮೊದಲಾದವುಗಳು ಅರ್ಥಪಡೆದುಕೊಳ್ಳುತ್ತವೆ. ಹಾಗೆ ನೋಡಿದರೆ ಆರ್ಥಿಕ ಹಿತಾಸಕ್ತಿಯಿಲ್ಲದ ಧರ್ಮಕ್ಕಾಗಲೀ, ಸಮಾಜಕ್ಕಾಗಲೀ ಪ್ರತ್ಯೇಕ ಅಸ್ತಿತ್ವಗಳೇ ಇಲ್ಲ ಎನ್ನಬಹುದು. ಮನುಷ್ಯನ ಆರ್ಥಿಕ ಜೀವನ ಕ್ರಮದ ಹಿನ್ನೆಲೆಯನ್ನು ವಿವೇಚಿಸಿದಂತೆ ಇಂದಿನ ನಾಗರಿಕ ಸಮಾಜ ಹೆಚ್ಚು ಕ್ರೂರವೂ, ಸ್ವಾರ್ಥ ಕೇಂದ್ರಿತವೂ ಆಗಿ ಕಾಣುತ್ತದೆ. ಈ ಆರ್ಥಿಕತೆ ಮನುಷ್ಯ ಜೀವನದ ಮೂಲಭೂತ ಪ್ರವೃತ್ತಿಗಳಿಗೆ ಅಂಟಿಕೊಂಡಿರುವಂತಹದು. 'ಹಸಿವು' ಆಹಾರಾನ್ವೇಷಣೆಗೆ ಕಾರಣವಾಗಿದೆ. ಮೂಲ ಮಾನವನಿಂದ ಆಹಾರದ ಹುಡುಕಾಟ ಆರಂಭವಾಗಿ ಮನುಷ್ಯನ ಬದುಕಿಗೆ ಒಂದು ಬಗೆಯ ಸ್ಥಿರತೆ ಬರುವವರೆಗೆ ಈ ಹುಡುಕಾಟ ನಿರಂತರವಾಗಿದೆ. ಕಾಡುವಾಸಿಯಾಗಿದ್ದ ಮನುಷ್ಯ ಹಳ್ಳಿ, ನಗರಗಳನ್ನು ಸೃಷ್ಟಿಸಿಕೊಂಡು ತನ್ನ ಆಹಾರಕ್ಕಾಗಿ ಅನೇಕ ಬಗೆಯ ಉತ್ಪಾದನಾ ವಿಧಾನಗಳನ್ನು ಉದ್ದಕ್ಕೂ ಕಂಡುಕೊಂಡ ಇತಿಹಾಸವಿದೆಯಲ್ಲಾ ಅದು ಮೂಲತಃ ಕಾಡು ಮತ್ತು ಊರುಗಳ ನಡುವಿನ ಸಾಂಸ್ಕೃತಿಕ ಸಂಬಂಧಗಳ ಚರಿತ್ರೆಯೇ ಆಗಿದೆ. ಕಾಡು ಸಂಸ್ಕೃತಿಗಳ ನಿಜನೆಲೆಯನ್ನು ಪ್ರತಿನಿಧಿಸುತ್ತ ಜಂಗಮ ಸ್ವರೂಪಿಯಾಗಿದ್ದರೆ ಊರುಗಳಲ್ಲಿನ ಸಂಸ್ಕೃತಿ ನಿರ್ಮಾಣ ಸ್ಥಾವರವೂ, ಅಹಂಕಾರ ಪ್ರತಿಷ್ಠೆಗಳ ಪ್ರದರ್ಶನದ ಸಾಧನವೂ ಆಗಿ ಕಂಡುಬಂದಿದೆ. ಮನುಷ್ಯನ ಆಹಾರೋತ್ಪಾದನೆಯೇ ಅವನ ಒಟ್ಟು ಚಟುವಟಿಕೆಗಳ ಮೂಲ ಪ್ರೇರಣೆಯಾಗಿರುವುದರಿಂದ ಅದು ಸಸ್ಯಾಹಾರ - ಮಾಂಸಾಹಾರಗಳೆಂಬ ಎರಡು ರೀತಿಯಲ್ಲಿ ವ್ಯಕ್ತವಾಗುತ್ತಾ ಬಂದಿದೆ. ಆಹಾರಕ್ಕಾಗಿ ಬೇಟೆಯಾಡುತ್ತಿದ್ದ ಮನುಷ್ಯ ಬರುಬರುತ್ತಾ ಆಹಾರೋತ್ಪಾದನೆಯ ವಿವಿಧ ಮಾರ್ಗಗಳ ಹಿನ್ನೆಲೆಯಲ್ಲಿ 'ಬೇಟೆ'ಯನ್ನು ಒಂದು ಆಚರಣೆಯನ್ನಾಗಿ, ಮಾಡಿಕೊಂಡ. ಮನುಷ್ಯ ಮೂಲತಃ ಕಾಡಿನಲ್ಲಿದ್ದವನೆಂಬ ಬಗ್ಗೆ ಯಾವ ವಿವಾದವೂ ಇಲ್ಲ. ಗೆಡ್ಡೆ ಗೆಣಸುಗಳನ್ನು ತಿಂದು ಜೀವಿಸುತ್ತಿದ್ದ ಮನುಷ್ಯ 'ಬೇಟೆ'ಯ ಮೂಲಕವೂ ಆಹಾರ ಸಂಗ್ರಹಿಸುತ್ತಿದ್ದ. ಬೇಟೆಯು ಅಂದಿನ ಪ್ರಮುಖ ಆಹಾರೋತ್ಪಾದನ ಸಾಧನವಾಗಿತ್ತು. ಆದರೆ ಇದೇ 'ಬೇಟೆ' ಈಗ ಏನಾಗಿದೆಯೆಂಬುದನ್ನು ಗಮನಿಸಿದರೆ ಸಂಸ್ಕೃತಿಯ ಸ್ಥಿತ್ಯಂತರ ಹಾಗೂ ಚಲನಶೀಲತೆಯ ಸ್ವರೂಪದ ಅರಿವಾಗುತ್ತದೆ. ಪ್ರಮುಖ ಉತ್ಪಾದನಾ ವಿಧಾನವಾಗಿದ್ದ 'ಬೇಟೆ' ಬರಬರುತ್ತ ಒಂದು ಪ್ರಾಸಂಗಿಕ ಕ್ರಿಯೆಯಾಯಿತು. ರಾಜರ 'ಹವ್ಯಾಸ'ವಾಯಿತು, ಉತ್ಪಾದನಾ ವಿಧಾನವೊಂದು ಹವ್ಯಾಸವಾಗಿ ಪರಿವರ್ತನೆಗೊಂಡ ಪ್ರಕ್ರಿಯೆಯಲ್ಲೇ ಊರುಗಳ ಹುಟ್ಟು ಸಂಭವಿಸಿದೆ. ಊರುಗಳು ಹುಟ್ಟಿ ಪಾಳೇಪಟ್ಟುಗಳು ರಚನೆಯಾಗುವ ವೇಳೆಗೆ ಕಾಡಿನ ಕೋಟ್ಯಾಂತರ ಮನುಷ್ಯರು ಊರಿನ ಮನುಷ್ಯರಾಗಿದ್ದರು ; ಅವರ ಉಡುಪು ಬದಲಾಗಿತ್ತು ; ವಸತಿ ಬದಲಾಗಿತ್ತು ; ಆಹಾರ ವಿಧಾನ

ಬದಲಾಗಿತ್ತು. ಈ ಸಂದರ್ಭದಲ್ಲಿ - ಕಾಡಿನ ಪ್ರಮುಖ ಆರ್ಥಿಕ ಚಟುವಟಿಕೆಯಾಗಿದ್ದ 'ಬೇಟೆ' ಹವ್ಯಾಸವಾಗಿತ್ತು. ಕಾಡಿನಲ್ಲಿ ನಿತ್ಯಾಹಾರವಾಗಿದ್ದ ಮಾಂಸಾಹಾರವು ಊರಿನಲ್ಲಿ 'ಹಬ್ಬದ ಆಹಾರ'ವಾಗಿತ್ತು. ಊರಿನ ಸಂಸ್ಕೃತಿ ಮತ್ತಷ್ಟು ವಿಸ್ತರಿಸುತ್ತಾ, ವಿಕಾಸವಾಗುತ್ತ ಹೋದಂತೆ ಬೇಟೆಯು ಜನರ ಆಚರಣೆಯಾಗ ಹತ್ತಿತ್ತು. ಕೆಲವು ಹಬ್ಬಗಳಂದು ಊರಿನ ಜನ ಬೇಟೆಗೆಂದು ಹೋಗಿ - ಹುಲಿಯನ್ನಲ್ಲ - ಹೊಲದಲ್ಲಿರುವ ಬೆಳ್ಳಿ ಇಲಿಯನ್ನಾದರೂ ಹಿಡಿದು ತರುತ್ತಾರೆ. ಅದರ ಮಾಂಸದ ಚೂರುಗಳನ್ನು ಹಂಚಿಕೊಳ್ಳುತ್ತಾರೆ. ಕಾಡಿನ ಸಂಸ್ಕೃತಿಯಲ್ಲಿದ್ದ ಸಾಮೂಹಿಕ ಉತ್ಪಾದನೆ ಮತ್ತು ಸಮಾನ ಹಂಚಿಕೆಯು ಹಬ್ಬದಲ್ಲಿ 'ಆಚರಣೆ'ಯಾಗಿ ಪರಿವರ್ತನೆ ಹೊಂದಿರುವುದು ಊರಿನ ಒಂದು ವ್ಯಾಖ್ಯಾನವೂ ಆಗಿದೆ. ಊರು ಮತ್ತು ರಾಜ್ಯಗಳ ಉದಯದೊಂದಿಗೆ ಸಾಮೂಹಿಕ ಉತ್ಪಾದನೆ. ಸಮಾನ ಹಂಚಿಕೆಗಳ ಕಲ್ಪನೆ ಕಣ್ಮರೆಯಾಗುತ್ತಾ ಬಂದದ್ದು ಈಗ ಇತಿಹಾಸದ ಸಂಗತಿಯಾದ್ದರಿಂದ, ಊರಿನ ಸಂಸ್ಕೃತಿಯಲ್ಲಿ ಕೇವಲ ಒಂದು ನೆನಪಾಗಿ ಆಚರಣೆಯಾಗಿ ಪರಿವರ್ತನೆ ಹೊಂದಿದ 'ಬೇಟೆ' ಊರನ್ನು ವ್ಯಾಖ್ಯಾನ ಮಾಡುವ ಒಂದು ಮಾನದಂಡವಾಗುವುದು ಸಹಜ. ಇನ್ನೊಂದು ಮುಖ್ಯ ಬದಲಾವಣೆಯನ್ನು ಇಲ್ಲಿ ಗಮನಿಸಬಹುದು.

ಕಾಡಿನಲ್ಲಿದ್ದ ಮನುಷ್ಯ ಪ್ರಾಣಿಗಳ ಜೊತೆ ಬದುಕುತ್ತ ಕೆಲವನ್ನು ಸಾಕುತ್ತ, ಕೆಲವನ್ನು ಕೊಲ್ಲುತ್ತ ಇದ್ದ ವೈರುಧ್ಯ ವಿಶೇಷವಾದುದು, ಕೊಲ್ಲುವ ಕ್ರಿಯೆಯನ್ನು ಒಂದು ಅನಿವಾರ್ಯ ಆಹಾರೋತ್ಪಾದನಾ ವಿಧಾನ ಎಂದು ಭಾವಿಸಿದ್ದರಿಂದ ಅಂದು ಹಿಂಸೆಯ ಕಲ್ಪನೆ ಇರಲು ಸಾಧ್ಯವಿಲ್ಲ. ಊರುಗಳು ಹುಟ್ಟಿ ಬೆಳೆಯುತ್ತ ಬಂದಂತೆ ಹಿಂಸೆ-ಅಹಿಂಸೆಗಳ ಕಲ್ಪನೆಗಳು ಬಲಿಯುತ್ತ ಬಂದಿವೆ. ಇದಕ್ಕೆ ಮುಂಚೆಯೇ ಆಹಾರೋತ್ಪಾದನೆಯ ವಿವಿಧ ವಿಧಾನಗಳು ಬೆಳೆದು 'ಬೇಟೆ' ಅನಿವಾರ್ಯವಾಗಿಲ್ಲ. ಹೀಗಾಗಿ 'ಬೇಟೆ' ಎಂಬುದು 'ಹಿಂಸೆ'ಯಾಗಿ ಕಾಣಿಸತೊಡಗಿದೆ. ಕಾಡಿನ ಸಂಸ್ಕೃತಿಯ ಸಂಬಂಧವುಳ್ಳ 'ಬೇಟೆ'ಯು ರಾಜರಿಗೆ ಹವ್ಯಾಸವಾಗಿ, ಜನರಿಗೆ ಆಚರಣೆಯಾಗಿ ಉಳಿದು ಈಗ ಬೇರೆ ಬೇರೆ ಅರ್ಥಗಳನ್ನು ಪಡೆದಿದೆ. ಈ ಪ್ರಕ್ರಿಯೆಯಲ್ಲಿ ಕಾಡಿನಿಂದ ಊರಿಗೆ ವಿಕಾಸ ಹೊಂದಿದ ಸಂಸ್ಕೃತಿಯು ಹಿಂಸೆಯಿಂದ ಅಹಿಂಸೆಯ ಕಡೆಗೆ ಸಾಗುತ್ತ ಬಂದದ್ದನ್ನು ಕಾಣಬಹುದು. ಆದರೆ ಊರಿನ ಸಂಸ್ಕೃತಿಯಲ್ಲಿ ಮೂರ್ತ 'ಹಿಂಸೆ' ಕಡಿಮೆಯಾದಂತೆ ಕಂಡರೂ ಅಮೂರ್ತ ಹಿಂಸೆ ಜಾಸ್ತಿಯಾಗಿದೆ. ಊರುಗಳ ಒಕ್ಕೂಟದಲ್ಲಿ ಹುಟ್ಟಿದ ರಾಜ ವ್ಯವಸ್ಥೆ ಮತ್ತು ಇಂದಿನ ಪ್ರಜಾಪ್ರಭುತ್ವ ವ್ಯವಸ್ಥೆಗಳು ತಮ್ಮದೇ ರೀತಿಯಲ್ಲಿ ಹಿಂಸೆಯನ್ನು ಅಂತರ್ಗತ ಮಾಡಿಕೊಂಡು ಜನರಿಗೆ ಹಿಂಸೆ ಕೊಟ್ಟ - ಕೊಡುತ್ತಿರುವ ಸಂದರ್ಭಗಳು ಸಾಕಷ್ಟಿವೆ. ಒಂದು ಸಹಜ ಉತ್ಪಾದನಾ ವಿಧಾನವಾಗಿದ್ದ 'ಬೇಟೆ'ಯು ಆಚರಣೆಯ ಮಟ್ಟಕ್ಕೆ ಬಂದಾಗ, ಬೇಟೆಯೊಳಗಿನ ಹಿಂಸೆಯ ಕಲ್ಪನೆಯು ಸಾಮಾಜಿಕ - ರಾಜಕೀಯ ವ್ಯವಸ್ಥೆಯ ಒಳಸೇರಿದ್ದು ಒಂದು ವಿಪರ್ಯಾಸವೇ ಸರಿ! ಈಗ ಮನುಷ್ಯ - ಮನುಷ್ಯನನ್ನೇ ಹಿಂಸಿಸುವ ಬೇಟೆಯಾಡುವ ವಾತಾವರಣವಿದೆ; ಪ್ರಾಣಿ ದಯೆಯ ಪ್ರಚಾರ ಬಿರುಸಾಗಿದೆ. ಪ್ರಾಣಿ ದಯೆಗೆ ಧರ್ಮದ ಲೇಪನವೂ ಸಿಕ್ಕಿ ಹಸುವಿನಂಥ ಪ್ರಾಣಿಗಳಿಗೆ ದೈವಸ್ಥಾನದ ಪುಣ್ಯ ಲಭ್ಯವಾಗಿದೆ. ಮನುಷ್ಯ ಮಾತ್ರ ಹಿಂಸಾರಭಸಮತಿಯಾಗಿ ವರ್ತಿಸುತ್ತಿದ್ದಾನೆ. ಹೇಗೆ ಕಾಡಿನಲ್ಲಿ ಹೊರಗಡೆಗೆ

ಗೊತ್ತಾಗುತ್ತಿದ್ದ ಹಿಂಸೆ ಊರಿನಲ್ಲಿ ಒಳಗಿಳಿಯುತ್ತ ಬಂದಿದೆ ಪ್ರಾಣಿಗಳಿಗೆ 'ಪುಣ್ಯ' ಕೊಟ್ಟು ಮನುಷ್ಯನಿಗೆ ಪಾಪದ ಪಟ್ಟ ಕಟ್ಟುವ ಕ್ರಿಯೆ ವ್ಯವಸ್ಥಿತವಾಗಿ ನಡೆಯುತ್ತಿದೆ.1

ಇದು ಹಸಿವು ಹಿಂಗಿಸಿಕೊಳ್ಳುವುದಕ್ಕಾಗಿ ಆಹಾರೋತ್ಪಾದನೆ ಮಾಡುತ್ತ ಹೊರಟ ಮನುಷ್ಯ ಅದನ್ನು ಎಲ್ಲ ಕಾಲದಲ್ಲಿ ಆರ್ಥಿಕ ಚಟುವಟಿಕೆಗಳ ಕೇಂದ್ರ ಮಾಡಿಕೊಂಡು ಮನುಷ್ಯರ ವಿಚಾರದಲ್ಲಿ ಶೋಷಣೆ ಮತ್ತು ಕ್ರೌರ್ಯದ ಅಸ್ತ್ರದಂತೆ ಪ್ರಯೋಗಿಸಿದ ಕತೆ. ಸಂಪನ್ಮೂಲಗಳ ಲಭ್ಯತೆ ಮತ್ತು ಅವುಗಳ ನಿರ್ದಿಷ್ಟ ಬಳಕೆಯ ವಿಧಾನದ ಅರಿವಿನಿಂದಾಗಿ ಮನುಷ್ಯ ಸ್ವತಃ ತಾನೇ ಉತ್ಪಾದನಾ ಕೇಂದ್ರಗಳನ್ನು ಮಾಡಿಕೊಂಡ. ಕ್ರಮೇಣ ಆರ್ಥಿಕ ಸಂಪತ್ತಿನ ಸಂಗ್ರಹಣೆ ಮತ್ತು ವಿನಿಮಯಗಳಿಂದಾಗಿ ಬಂಡವಾಳ ವೃದ್ಧಿಯಾದಂತೆ ತಾನು ಊಳಿಗಮಾನ್ಯದ ಧಣಿಯಾಗಿ, ಪ್ರಭುವಾಗಿ, ಉದ್ಯಮಪತಿಯಾಗಿ ಸಾಮಾಜಿಕ-ರಾಜಕೀಯ ನೀತಿ -ನಿರೂಪಣೆಗಳ ನಿರ್ವಾಹಕನಾಗಿ ಮನುಷ್ಯ ಸುಲಿಗೆಯ ವ್ಯಾಪಕ ವ್ಯವಸ್ಥೆಯೇ ತಾನಾದ. ಇದರೊಂದಿಗೆ ಬೌದ್ಧಿಕತೆಯನ್ನು ಹತ್ತಿಕ್ಕುತ್ತ ಅತಿಭಾವುಕ ನೆಲೆಯಲ್ಲಿ ಮನುಷ್ಯನನ್ನು ದುರ್ಬಲನನ್ನಾಗಿ ಮಾಡಿದ ಧಾರ್ಮಿಕ ವ್ಯವಸ್ಥೆಯೂ ಸೇರಿಕೊಂಡು ಒಟ್ಟಾರೆ ಅಸಹಾಯಕರನ್ನು, ಮುಗ್ಧರನ್ನೂ, ನಿರಂತರವಾಗಿ ಅನ್ಯಾಯದ ಕತ್ತಲಲ್ಲಿರುವಂತೆ ನೋಡಿಕೊಂಡದ್ದು ಈ ಬಗೆಯ ಆರ್ಥಿಕ-ಧಾರ್ಮಿಕ ಹಿತಾಸಕ್ತಿ ಕೇಂದ್ರಗಳೇ. ಧರ್ಮ ಯಾವತ್ತೂ ಜೀವನದರ್ಶನ ಪ್ರತಿಪಾದನೆಯಲ್ಲಿ ನಿರರ್ಥಕ ಅಧ್ಯಾತ್ಮ, ಪರಮಾತ್ಮಗಳನ್ನು ವೈಭವೀಕರಿಸಿ, ಮನುಷ್ಯ ಸಾಮಾಜಿಕ-ರಾಜಕೀಯ ಸಮಾನತೆ-ಸವಲತ್ತುಗಳ ಕಡೆಗೆ ನಿರ್ಲಕ್ಷ್ಯ ತಳೆಯುವಂತೆ ಮಾಡುತ್ತ ಬಂದಿದೆ. ಮತ್ತು ಕೆಲವರ ಪಾಲಿಗೆ ಈ ಧರ್ಮವೇ ಆ ಎಲ್ಲ ಸುಖ ಸಂಪತ್ತುಗಳ ನಿರಾಯಾಸ ಅನುಭೋಗಕ್ಕೆ ಕಾರಣವಾಗಿದೆ. ಇದರಿಂದಲೇ ನೈಸರ್ಗಿಕ ಸಂಪತ್ತಿನ ಸಮಾನ ಹಂಚಿಕೆಯಾಗದೆ ಮನುಷ್ಯ ಸಮುದಾಯಗಳ ನಡುವೆ ಅನೇಕ ಪಂಗಡಗಳು ಹುಟ್ಟಿ ಬೇರೆ ಬೇರೆ ಉತ್ಪಾದನಾ ಮಾರ್ಗಗಳು ತೆರೆದುಕೊಂಡು ಪರಸ್ಪರರಲ್ಲಿ ಅನುಮಾನ, ಅಪನಂಬಿಕೆ, ಅವಿಶ್ವಾಸಗಳು ಮನೆಮಾಡಿದವು. ಪರಿಣಾಮವಾಗಿ ಊರು, ನಗರಗಳನ್ನು ಮೀರಿ ಪ್ರಾಂತ್ಯ, ರಾಜ್ಯ, ದೇಶ-ದೇಶಗಳ ನಡುವೆ ಯುದ್ಧಗಳೇ ನಡೆದವು, ನಡೆಯುತ್ತಿವೆ. ವಾಸ್ತವವಾಗಿ ದೊರೆಗಳ ನಡುವಿನ ಯುದ್ಧಗಳಿಗೆ ರಾಜಕೀಯವಾದ ಹಿತಾಸಕ್ತಿಗಿಂತ ಆರ್ಥಿಕ ಹಿನ್ನೆಲೆಯ ಲಾಭಾಂಶಗಳೇ ಕಾರಣವಾಗಿವೆ. ಸ್ಥಳೀಯವಾಗಿ ಲಭ್ಯವಾಗುವ ನೆಲ, ಜಲ, ಮರ, ಕಲ್ಲು ಮೊದಲಾದ ಎಲ್ಲವನ್ನೂ ಆರ್ಥಿಕ ದೃಷ್ಟಿಯಿಂದ ಬೆಲೆ ಕಟ್ಟತೊಡಗಿದುದರಿಂದ ಸಹಜವಾಗಿ ಪೈಪೋಟಿ ಶುರುವಾಯಿತು. ಈ ಪೈಪೋಟಿ ಹಿಂಸಾತ್ಮಕ ನೆಲೆ ಪಡೆದುಕೊಂಡಾಗಲೆಲ್ಲಾ ಮನುಷ್ಯ ವೈಯಕ್ತಿಕ ರಕ್ಷಣೆ ಮತ್ತು ಪ್ರತಿಷ್ಠೆಯ ಅಂಶಗಳನ್ನು ಮುಂದೊಡ್ಡಿ ಆರ್ಥಿಕ ಕ್ಷೇಮದ ಆಸಕ್ತಿಯನ್ನು ಉಪೇಕ್ಷಿಸಿದ್ದಾನೆ. ಆರ್ಥಿಕ ಕ್ಷೇಮಕ್ಕಾಗಿ ಮನುಷ್ಯ ಏನೆಲ್ಲ ಕಸುಬುಗಳನ್ನು ಹುಡುಕಿಕೊಂಡಿದ್ದಾನೆ! ಎಲ್ಲ ಕಸುಬು ಮತ್ತು ವೃತ್ತಿಗಳ ಹುಡುಕಾಟ ಹಾಗೂ ಅವಲಂಬನೆ ಹೊಟ್ಟೆಯ ಹಸಿವು ತಣಿಸುವುದಕ್ಕಾಗಿಯೇ ಎನ್ನುವುದು ನಿಜವಾದರೂ ವಾಸ್ತವವಾಗಿ ಅವೆಲ್ಲವೂ 'ಕುಟುಂಬ'ವೆಂಬ ಕಾರ್ಖಾನೆಯಲ್ಲಿ ಸರಕು ಉತ್ಪಾದಿಸುವ ಮಿನಿ ಉದ್ದಿಮೆಗಳೇ ಆಗಿವೆ. ಒಂದು ಕುಟುಂಬದ ಸದಸ್ಯರ ಹೊಟ್ಟೆ-ಬಟ್ಟೆ, ಮನೆ-ಮಠಗಳಂತಹ ಸಾಮಾನ್ಯ ಅಗತ್ಯಗಳನ್ನು ಪೂರೈಸುವ ಮೂಲ ಉದ್ದೇಶ ವೃತ್ತಿಗಳಿಗಿದ್ದರೂ

ಅವುಗಳಿಗೆ ಸಮಾನ ಸಾಮಾಜಿಕ ಐಡೆಂಟಿಟಿಗಳಿಲ್ಲ ; ಸಮಾನ ಆರ್ಥಿಕ ಲಾಭಾಂಶಗಳಿಲ್ಲ, ಸಮಾನ ಮಾರುಕಟ್ಟೆಯ ಜಾಲಗಳಿಲ್ಲ. ಆದರೆ ಜನವರ್ಗಗಳ ನಡುವೆ ಇಂತಹ ಅಂಶಗಳೇ ಮುಖ್ಯವಾಗಿ ವೃತ್ತಿಗಳಿಗನುಗುಣವಾಗಿ ಮೇಲು-ಕೀಳುಗಳೆಂಬ ಸಾಮಾಜಿಕ ಅನಿಷ್ಟಗಳು ಅಂಟಿಕೊಂಡು ಬಿಟ್ಟಿವೆ. ಇದರ ಜೊತೆಗೆ ವೃತ್ತಿಗೂ ಧಾರ್ಮಿಕ ಪಾವಿತ್ರ್ಯದ ಸ್ಪರ್ಶ ತಗುಲಿ ವೃತ್ತಿ ಸಂಬಂಧವಾದ ಸಲಕರಣೆಗಳಿಗೂ ಅದು ವ್ಯಾಪಿಸಿಬಿಟ್ಟಿದೆ. ಪ್ರತಿಯೊಂದು ಜನಸಮುದಾಯಗಳೂ ತಮ್ಮ ಅನ್ನಾಹಾರದ ಅಗತ್ಯಗಳಿಗಾಗಿ ಅವಲಂಬಿಸಿರುವ ವೃತ್ತಿಗಳನ್ನು ಪ್ರೀತಿಸುವ, ಗೌರವಿಸುವ ಕೆಲವೊಮ್ಮೆ ನಿಂದಿಸುವ ಪರಿಪಾಠವಿದೆ. ಇಂತಹ ಹಿನ್ನೆಲೆಯಲ್ಲಿ ಪಿಂಜಾರ ಜನಾಂಗದ ಸಾಂಪ್ರದಾಯಿಕ ಹಾಗೂ ಅವಲಂಬಿತ ವೃತ್ತಿಗಳು ಪಿಂಜಾರರಿಗೆ ಯಾವ ಬಗೆಯ ಆರ್ಥಿಕ ಬದುಕನ್ನು ತಂದುಕೊಟ್ಟಿವೆ ಎಂಬುದನ್ನು ನೋಡಬೇಕಾಗಿದೆ.

## ೬.೧ *ಸಾಂಪ್ರದಾಯಿಕ ವೃತ್ತಿ*

ಪಿಂಜಾರರ ಸಾಂಪ್ರದಾಯಿಕ ವೃತ್ತಿ ಅವರ ಹೆಸರೇ ಸೂಚಿಸುವಂತೆ ಹಾಸಿಗೆ ತಯಾರಿಸುವುದು. ಪಿಂಜಾರ - ನದಾಫ್ ಎಂಬ ಹೆಸರುಗಳಿಗಿರುವ ಅರ್ಥ ಹತ್ತಿಯನ್ನು ಪಿಂಜುವುದು ಎಂದು ಈಗಾಗಲೇ ತಿಳಿಯಲಾಗಿದೆ. ಈ ಕಸುಬು ಮೇಲ್ನೋಟಕ್ಕೆ ಸರಳ ಎನ್ನುವಂತಿದೆ. ಒಂದು ಕಮಾನು, ಒಂದು ಕೊಡತಿ, ಮೂರಡಿ ಉದ್ದನೆಯ ಕೋಲು ಮುಖ್ಯವಾದ ಸಲಕರಣೆಗಳು. ಇದರೊಂದಿಗೆ ಸಂಸ್ಕರಿಸಿದ ಹತ್ತಿ ಮತ್ತು ಆ ಹತ್ತಿಯನ್ನು ತುಂಬಲು ಬೇಕಾದ ಬಟ್ಟೆಯನ್ನು ಕೆಲವು ಪಿಂಜಾರರು ಸೈಕಲ್ಲಿನಲ್ಲಿಟ್ಟುಕೊಂಡು ತಿರುಗಿದರೆ ಕೆಲವರು ಇವುಗಳನ್ನು ಕೊಡಿಸುವಂತೆ ಹಾಸಿಗೆ ತಯಾರಿಸಲು ಹೇಳಿದವರಿಗೆ ತಿಳಿಸುತ್ತಾರೆ. ಒಂದು ದಬ್ಬಳ, ದಪ್ಪನೆಯ ದಾರದುಂಡೆ ಇವರಿಗೆ ಬೇಕಾದ ಮತ್ತೆರಡು ಸಾಮಾನುಗಳಾಗಿವೆ. ಈ ವೃತ್ತಿಯ ಕುರಿತಾಗಿ ಪಿಂಜಾರರಿಗೆ ವಿಶೇಷ ನಂಬಿಕೆಗಳೇನೂ ಇದ್ದಂತೆ ಕಂಡುಬರುವುದಿಲ್ಲ. ಮೊದಲಿನಿಂದಲೂ ನಮ್ಮ ಹಿರಿಯರು ಮಾಡಿಕೊಂಡು ಬಂದಿದ್ದಾರೆ. ನಾವೂ ಇದನ್ನೇ ಮುಂದುವರಿಸಿಕೊಂಡು ಬಂದಿದ್ದೇವೆ ಎನ್ನುವುದಷ್ಟೇ ಅವರಿಂದ ಸಿಗುವ ಉತ್ತರವಾಗಿದೆ. ಕೆಲವರಂತೂ ತೀರ ಉಪೇಕ್ಷೆಯಿಂದ 'ಹೊಟ್ಟೆ ಹೊರೆಯುವುದಕ್ಕೆ ಏನಾದರೂ ಮಾಡಬೇಕಲ್ಲ, ಮಾಡ್ತಿದೀವಿ' ಎಂದು ಬಿಡುತ್ತಾರೆ. ತಮ್ಮ ಜನಾಂಗದ ಕುರಿತು ಸ್ಪಷ್ಟ ಇತಿಹಾಸವನ್ನೇ ತಿಳಿದುಕೊಳ್ಳದವರು ಇನ್ನು ವರ್ತಮಾನ, ಭವಿಷ್ಯವನ್ನು ರೂಪಿಸಿಕೊಳ್ಳುವುದಾದರೂ ಹೇಗೆ ? ಸಾಮಾಜಿಕವಾಗಿ ನಿಯಂತ್ರಣಾಧಿಕಾರ ಹೊಂದಿದ ಪ್ರಬಲ ಜನಾಂಗಗಳ ನಿರ್ಲಕ್ಷ್ಯದ ಪರಿಣಾಮವಾಗಿ ಪಿಂಜಾರರಂಥ ಜನಾಂಗಗಳು ತಮ್ಮ ಸಾಂಸ್ಕೃತಿಕ ಇತಿಹಾಸವನ್ನು ಕಟ್ಟಿಕೊಳ್ಳಲಾಗದ ಅಸಹಾಯಕತೆಯಿಂದ ಬಳಲಿವೆ. ಆರ್ಥಿಕವಾದ ಚೈತನ್ಯ ತುಂಬಬಲ್ಲ ಕಸುಬುಗಳು ಕೂಡ ಇಂಥ ಜನಾಂಗಗಳ ಪಾಲಿಗೆ ನಿರಂತರ ಬಡತನವನ್ನು ದಯಪಾಲಿಸಿವೆ. ಇವರ ಭಾಗಕ್ಕೆ ಶ್ರಮದಾನ ಮಾತ್ರ ಉಳಿದು ಉತ್ಪಾದನೆ, ವಿನಿಮಯ, ಹಂಚಿಕೆಯಂತಹ ಲಾಭದಾಯಕ ಸಂಗತಿಗಳು ಉಳ್ಳವರ ಪ್ರತಿಷ್ಠೆಯನ್ನು ಹೆಚ್ಚಿಸಿವೆ. ಪಿಂಜಾರರು ಕೂಡ ಹಾಸಿಗೆ ತಯಾರಿಸುವ ಕಾಯಕವನ್ನು ಕೇವಲ ಸಾಂಪ್ರದಾಯಿಕವಾಗಿ ಮುಂದುವರಿಸಿಕೊಂಡವರಾಗಿದ್ದು ಇದನ್ನೇ ಉದ್ದಿಮೆಯನ್ನಾಗಿ ಅಭಿವೃದ್ಧಿ

ಮಾಡಿಕೊಳ್ಳುವ ಅವಕಾಶ ಮಾತ್ರ ಉಳ್ಳವರದ್ದಾಗಿದೆ. ಬಂಡವಾಳಿಗರ ಉದ್ದಿಮೆಗಳಲ್ಲಿ ಕೂಲಿಕಾರರಾಗಿ ಶ್ರಮದಾನ ಮಾಡುತ್ತ ಜೀವನ ನಿಭಾಯಿಸುವ ಪಿಂಜಾರರು ಆರ್ಥಿಕವಾಗಿ ಶತಮಾನಗಳ ಸ್ಥಿತಿಯನ್ನು ಮುಂದುವರಿಸಿಕೊಂಡು ಬಂದಿದ್ದಾರೆ.

ಹಾಸಿಗೆ, ದಿಂಬು ತಯಾರಿಸುವುದಕ್ಕೆ ಮುಖ್ಯವಾಗಿ ಪಿಂಜಾರರು ಹೊಂದಿರುವ ಉಪಕರಣಗಳು ಬೆಸ್ಕಿ ಅಥವಾ ಕಮಾನು ಮತ್ತು ಕೊಡತಿ. ಕೊಡತಿಯನ್ನು ಸಾಮಾನ್ಯವಾಗಿ ಕಮಾನಿನ ಒಂದು ಭಾಗದಲ್ಲಿ ಕಟ್ಟಲಾಗಿರುತ್ತದೆ. ಕಮಾನಿನ ಒಂದು ತುದಿಯಲ್ಲಿ ಅಗಲವಾದ ನುಣುಪು ಹಲಗೆಯ ತುಂಡೊಂದನ್ನು ಹೊಂದಿಸಿರುತ್ತಾರೆ. ಅದರ ಹೊರತುದಿಯಿಂದ ಹಿಡಿದು ಕಮಾನಿನ ಇನ್ನೊಂದು ಚಿತ್ರಾಕಾರದ ತುದಿಯವರೆಗೆ ತೊಗಲಿನ, ದುಂಡಾಗಿ ಹೊಸೆದ ದಾರವನ್ನು ಕಟ್ಟಿರುತ್ತಾರೆ. ಕಮಾನಿನ ನಡುವೆ ತೊಗಲಿನ ಬೆಲ್ಟ್ ರೀತಿಯ ಪಟ್ಟಿಯನ್ನು ಸುತ್ತಿದ್ದು ಹತ್ತಿ ಹೊಡೆಯುವಾಗ ನೆಲದಲ್ಲಿ ಹಾಕಿದ ಹತ್ತಿಗೆ ದಾರ ತಗಲುವಂತೆ ಹೊಂದಿಸಿಟ್ಟು ಆ ಪಟ್ಟಿಯಿಂದ ಮೇಲಕ್ಕೆ ಕಮಾನನ್ನು ಕಟ್ಟಿ ಒಂದು ಕೈಯಲ್ಲಿ ಕಮಾನು ಮತ್ತೊಂದು ಕೈಯಲ್ಲಿ ಕೊಡತಿ ಹಿಡಿಯುತ್ತಾರೆ. ಹತ್ತಿಗೆ ತಗಲುವಂತಿದ್ದ ದಾರಕ್ಕೆ ಕೊಡತಿಯಿಂದ ಹೊಡೆದಂತೆಲ್ಲ ಹತ್ತಿ ದಾರದಿಂದ ತುಂಡಾಗುತ್ತದೆ. ದಾರಕ್ಕೂ ಸುತ್ತಿಕೊಳ್ಳುತ್ತದೆ. ಸುತ್ತಮುತ್ತ ಸಿಡಿಯುತ್ತದೆ. ಹೀಗೆ ಸಿಡಿದ ಹತ್ತಿಯನ್ನು ದುಂಡಗೆ ಮಾಡುತ್ತ ದಾರಕ್ಕೆ ಸುತ್ತಿಕೊಂಡ ಹತ್ತಿಯನ್ನು ಬಿಡಿಸುತ್ತ ಹತ್ತಿಯ ಧೂಳನ್ನು ತಡೆಯಲು ಮೂಗು, ಬಾಯಿಗೆ ತೆಳುವಾದ ಬಟ್ಟೆಯೊಂದನ್ನು ಕಟ್ಟಿಕೊಂಡು ಕೆಲಸ ಮಾಡುತ್ತಾರೆ. ಒಂದು ಹಾಸಿಗೆಗೆ ಸಾಕಾಗುವಷ್ಟು ಹತ್ತಿಯನ್ನು ಪುಡಿಮಾಡಿ (ಇದನ್ನು ಮೊದಲೇ ತೂಕ ಮಾಡಿಕೊಂಡಿರುತ್ತಾರೆ) ಬಟ್ಟೆಯ ಮೂರು ಭಾಗಗಳನ್ನು ಹೊಲಿದು ಹತ್ತಿ ತುಂಬಲೆಂದು ಬಿಟ್ಟಿದ್ದ ಇನ್ನೊಂದು ಭಾಗದಲ್ಲಿ ಹತ್ತಿಯನ್ನು ತುಂಬುತ್ತಾ, ಅದರ ಒಳಭಾಗದಲ್ಲಿ ಸಮನಾಗಿ ಹರಡುತ್ತಾ ಬರುತ್ತಾರೆ. ತುಂಬಿದ ನಂತರ ಬಾಯಿ ಹೊಲಿದು ಕೋಲಿನಿಂದ ಒಂದು ಕಡೆಯಿಂದ ಮತ್ತೊಂದು ಕಡೆಯವರೆಗೆ ಸಮನಾದ ಏಟುಗಳನ್ನು ಒತ್ತೊತ್ತಾಗಿ ಕೊಡುತ್ತಾರೆ. ಆಮೇಲೆ ದಬ್ಬಳ ಮತ್ತು ದಾರದಲ್ಲಿ ಹಾಸಿಗೆಯ ನಡುವಿನ ಚುಟಿಕೆ ಹೊಲಿಗೆಗಳನ್ನು ಹಾಕಿ ಗಂಟು ಹಾಕುತ್ತಾರೆ. ಇದೇ ರೀತಿ ದಿಂಬನ್ನು ತಯಾರು ಮಾಡಿ ಒಂದು ಮೂಲೆಯಲ್ಲಿಡುತ್ತಾರೆ.

ಹೆಗಲ ಮೇಲೆ ಕಮಾನು, ಕೊಡತಿ, ಹಾಸಿಗೆಗೆ ಬೇಕಾದ ಬಟ್ಟೆಯನ್ನು ಹೊತ್ತುಕೊಂಡು ಊರೂರು ಅಲೆಯುವ ಪಿಂಜಾರರು ಹಳೆಯ ಹಾಸಿಗೆಗಳನ್ನು ರಿಪೇರಿ ಮಾಡಿಕೊಡುವುದು, ಹೊಸ ಹಾಸಿಗೆಗಳನ್ನು ಮಾಡಿಸುವಂತೆ ಜನರನ್ನು ಪ್ರೇರೇಪಿಸುವುದು ಮಾಡುತ್ತಾರೆ. ಕೆಲವರು ಸೈಕಲ್‌ನಲ್ಲಿ ಹೀಗೇ ಹೊತ್ತುಕೊಂಡು ತಿರುಗುತ್ತಾರೆ. ಒಂದು ಊರಿಗೆ ಬಂದರೆಂದರೆ ಶಾಲೆ ಗುಡಿಕಟ್ಟೆಯಲ್ಲಿ ಉಳಿದುಕೊಂಡು ಊರಿನಲ್ಲಿ ಹಾಸಿಗೆ ರಿಪೇರಿ ಎಂದು ಸಾರುತ್ತಾರೆ. ಅವರು ತಂಗಿದ್ದಲ್ಲಿಗೇ ಬಂದು ಕೆಲವರು ಹಾಸಿಗೆ ರಿಪೇರಿ ಮಾಡಿಸಿದರೆ ಮತ್ತೆ ಕೆಲವರು ಅವರನ್ನೇ ತಾವಿರುವಲ್ಲಿಗೆ ಕರೆದೊಯ್ಯುತ್ತಾರೆ. ಹಳ್ಳಿಗಳಲ್ಲಿರುವ ಈ ಪಿಂಜಾರರೆಲ್ಲ ಹೆಂಡತಿ ಮಕ್ಕಳನ್ನು ಕಟ್ಟಿಕೊಂಡು ತಿರುಗುವುದರಿಂದಾಗಿ ಬಂದ ಕಡೆಯ ಎಲ್ಲ ಸಂಸ್ಕೃತಿಗಳಲ್ಲಿ ಅನಿವಾರ್ಯವಾಗಿ ಬೆರೆತು ಹೋಗಿದ್ದಾರೆ. ಹೆಚ್ಚಾಗಿ ನಡೆದೇ ಪ್ರಯಾಣ ಮಾಡುವ

ಪಿಂಜಾರರು ತಮಗೆ ಹಾಸಿಗೆ ಮಾಡುವುದರಿಂದ ಬರುವ ಅಷ್ಟಿಷ್ಟು ಹಣದಲ್ಲಿ ಕಾಳುಕಡೆ ಕೊಂಡುಕೊಂಡು ಇದ್ದಲ್ಲಿ ಕಲ್ಲಿನ ಒಲೆ ಹೂಡಿ ಅಡಿಗೆ ಬೇಯಿಸಿಕೊಂಡು ತಿನ್ನುತ್ತಾರೆ. ಒಂದೇ ಕಡೆ ಹತ್ತಾರು ದಿನ ಉಳಿಯಬೇಕಾಗಿ ಬಂದಾಗ ಹಣದ ಬದಲು ಧವಸವನ್ನೇ, ಅದರಲ್ಲೂ ಗಿರಣಿಗೆ ಹಾಕಿಸಿದ ಹಿಟ್ಟನ್ನೇ ಕೇಳಿ ಪಡೆಯುತ್ತಾರೆ. ಹೀಗೆ ಬಂದು ಹಳ್ಳಿಗಳಲ್ಲಿದ್ದಾಗ ಹಾಸಿಗೆಯ ಕೆಲಸವಿಲ್ಲದ ಅನೇಕರು ಇತರ ರೈತರ ಸಣ್ಣಪುಟ್ಟ ಬದುಕುಗಳಿಗೆ ಹೋಗುವುದು, ಕೂಲಿ ಮಾಡುವುದು, ನಿಧಾನವಾಗಿ ರೈತಾಪಿ ಕೆಲಸಗಳನ್ನು ಕಲಿಯುವುದಕ್ಕೆ ಕಾರಣವಾಗಿರಬೇಕು. ಜೊತೆಗೆ ಅತಿ ಮುಖ್ಯವಾಗಿ ಆಧುನಿಕತೆ ಬರುತ್ತಿದ್ದಂತೆ ಹತ್ತಿಯ ಗಿರಣಿಗಳು ಪಿಂಜಾರರ ಜೀವನವನ್ನೇ ಕಿತ್ತುಕೊಂಡು ಅವರ ಕೈಗಳನ್ನು ಕಟ್ಟಿತು. ಆಗ ಅನಿವಾರ್ಯವಾದದ್ದು ರೈತಾಪಿಗೆ ಸಂಬಂಧಿಸಿದ ಕೂಲಿ-ನಾಲಿ.

ಮೂಲ ಕಸುಬಾದ ಈ ಹಾಸಿಗೆ ತಯಾರು ಮಾಡುವುದು ಈಗೀಗ ನಗರಗಳಲ್ಲೇ ಹೆಚ್ಚು. ಹಳ್ಳಿಗಳಲ್ಲಿರುವ ಇದೇ ಕಸುಬಿನಲ್ಲಿ ಮುಂದುವರಿದಿರುವ ಪಿಂಜಾರರು ನಗರಗಳಲ್ಲಿ ಬಂದು ಜೀವನ ನಡೆಸುವವರಲ್ಲ, ಅಂಥ ಸ್ಥಿತಿವಂತರೂ ಅಲ್ಲ. ಆದರೆ ಯಾವ ಆಧುನಿಕತೆಯ ಪರಿಣಾಮವಾಗಿ ಪಿಂಜಾರರು ತಮ್ಮ ವೃತ್ತಿಯನ್ನು ಹಂತಹಂತವಾಗಿ ಬಿಡುವಂತಾಯಿತೋ ಅದೇ ಆಧುನಿಕತೆಯಿಂದ ಹಳ್ಳಿಯ ಪಿಂಜಾರರೆಲ್ಲ ನಗರವನ್ನು ಸೇರಲಾರಂಭಿಸಿದರು. ಹತ್ತಿ ಗಿರಣಿಗಳನ್ನು ಕೊಂಡ ಮಾಲೀಕರಲ್ಲಿ ಸಂಬಳ ಸಾರಿಗೆ ಸೇರಿಕೊಂಡರು. ಕರ್ನಾಟಕದ ಎಲ್ಲ ಮುಖ್ಯ ನಗರಗಳಲ್ಲಿರುವ ಹಾಸಿಗೆಯ ಅಂಗಡಿಗಳಲ್ಲಿ ಪಿಂಜಾರರು ಒಂದು ಹಾಸಿಗೆ ತಯಾರಿಸಿಕೊಟ್ಟು ಯಜಮಾನರಿಂದ ಅದರ ಕೂಲಿ ಪಡೆದು ತಮ್ಮ ಶ್ರಮವನ್ನು ಅವರಿಗೊಪ್ಪಿಸಿ ಹೋಗುತ್ತಾರೆ. ಒಂದು ಹಾಸಿಗೆಯನ್ನು ಪೂರ್ಣ ಮಾಡಿಕೊಟ್ಟರೆ ಪಿಂಜಾರನಿಗೆ ಸಿಗುವುದು ಕೇವಲ ೧೫ ರಿಂದ ೨೦ ರೂಪಾಯಿ ಮಾತ್ರ. ಗಿರಣಿ ಮಾಲೀಕರು ಸಾಮಾನ್ಯವಾಗಿ ಹಿಂದೂ ಧರ್ಮಕ್ಕೆ ಸೇರಿದವರು. ನಿತ್ಯ ಹೀಗೆ ಬಂದು ಹಾಸಿಗೆ ತಯಾರಿಸಿಕೊಟ್ಟು ಮಾಲೀಕನನ್ನು ಶ್ರೀಮಂತನನ್ನಾಗಿ ಮಾಡುವ ಪಿಂಜಾರರು ಸಂಘಟಿತರಾಗಿಲ್ಲ. ಇವರ ಜೀವನಕ್ಕೆ ಸರ್ಕಾರದಿಂದಾಗಲೀ, ಮಾಲೀಕರಿಂದಾಗಲೀ ಯಾವ ಬಗೆಯ ಭದ್ರತೆಯೂ ಇಲ್ಲ, ಯಜಮಾನ ದಿನವೂ ಕೆಲಸ ಕೊಡುತ್ತಾನೆಂದು ನಂಬುವ ಹಾಗಿಲ್ಲ. ಅದು ಆತನ ಲಾಭವನ್ನು ಅವಲಂಬಿಸಿರುತ್ತದೆ. ಮತ್ತು ಕೆಲವು ಸೀಸನ್‌ಗಳಲ್ಲಿ (ಮದುವೆ ಇತ್ಯಾದಿಯಂತಹ) ಮಾತ್ರ ಕೆಲಸ ಹೆಚ್ಚಿರುತ್ತದೆ. ಉಳಿದಂತೆ ಅದೇ, ಯಜಮಾನ ಕರೆದರೆ ಬರಬೇಕು, ಇಲ್ಲದಿದ್ದರೆ ಇಲ್ಲ. ಹಾಗಾಗಿ ನಗರದಲ್ಲಿರುವ ಪಿಂಜಾರ ಕೂಡ ನೆಮ್ಮದಿಯಿಂದಿಲ್ಲ. ಇವರು ಸಂಘಟಿತರಾಗದಿರುವುದಕ್ಕೆ ಕೂಡ ಶೈಕ್ಷಣಿಕ ಹಿಂದುಳಿದಿರುವಿಕೆ ಮತ್ತು ಧಾರ್ಮಿಕ ಸಂದಿಗ್ಧಗಳು ಕಾರಣವಾಗಿವೆ. ಹಾಗಾಗಿ ಒಬ್ಬನೇ ಯಜಮಾನನನ್ನು ಅವಲಂಬಿಸದೆ ಮೂರ್‍ನಾಲ್ಕು ಕಡೆ ಕೆಲಸ ಮಾಡುತ್ತಾರೆ. ಅದು ಸಾಧ್ಯವಿಲ್ಲದಾಗ ಹಮಾಲಿ ಕೆಲಸ, ಬೀಡಿ ಕಟ್ಟುವುದು, ಚಿಲ್ಲರೆ ಅಂಗಡಿ ನಡೆಸುವುದು, ಬಸ್ಸು, ಲಾರಿ, ಗ್ಯಾರೇಜುಗಳಲ್ಲಿ ದುಡಿಯುವುದು ಹೀಗೆ ಯಾವುದು ಹೊಟ್ಟೆಯನ್ನು ತುಂಬಿಸಬಲ್ಲದೋ ಆ ಬದುಕನ್ನು ಅವಲಂಬಿಸಿದ್ದಾರೆ.

ಈ ಹಾಸಿಗೆ ಮಾಡುವ ಕಾಯಕದಲ್ಲಿ ಪಿಂಜಾರ ಗಂಡಸರೇ ಪ್ರಧಾನವಾಗಿದ್ದರೂ ಪಿಂಜಾರ ಹೆಣ್ಣುಮಕ್ಕಳೂ ಕೂಡ ಗಂಡಸರೊಂದಿಗೆ ಹತ್ತಿ ಸಂಸ್ಕರಿಸುವ, ತುಂಬುವ ಕೆಲಸಗಳಲ್ಲಿ

ತೊಡಗಿಸಿಕೊಳ್ಳುತ್ತಾರೆ. ಹತ್ತಿ ಪುಡಿ ಮಾಡುವಾಗಿನ ಧೂಳಿನಿಂದಾಗಿ ವಿವಿಧ ರೋಗರುಜಿನಗಳಿಗೆ ಪಿಂಜಾರರು ತುತ್ತಾಗುತ್ತಾರೆ. ಅನೇಕರು ಬಾಯಿ ಮೂಗಿಗೆ ಬಟ್ಟೆ ಕಟ್ಟಿಕೊಂಡರೂ ಪ್ರಯೋಜನವಿಲ್ಲವೆಂದು ಬಟ್ಟೆ ಕಟ್ಟಿಕೊಳ್ಳದೇ ಕೆಲಸ ಮಾಡುತ್ತಾರೆ. ಪಿಂಜಾರರು ಈ ಕೆಲಸದಲ್ಲಿ ನೆಮ್ಮದಿಯನ್ನು ಕಾಣದಿದ್ದರೂ ಮೂಲವೃತ್ತಿಯನ್ನು ಬಿಡಲಾರದ ಭಾವನಾತ್ಮಕ ಸಂಬಂಧವನ್ನು ಇದರೊಂದಿಗೆ ಕಂಡುಕೊಂಡಿದ್ದಾರೆ.

## ೬.೨ ವೃತ್ತಿ ಸಂಬಂಧದ ಸಲಕರಣೆಗಳು

ಪಿಂಜಾರರು ತಮ್ಮ ಸಾಂಪ್ರದಾಯಿಕ ವೃತ್ತಿಯನ್ನು ನಿರ್ವಹಿಸಲು ಅವಶ್ಯಕವಾದ ಸಲಕರಣೆಗಳ ಮಟ್ಟಿಗೆ ತುಂಬ ಕಡಿಮೆ ಖರ್ಚು ಮಾಡಿದರೆ ಸಾಕು. ಹಿಂದೆ ಹೇಳಿದಂತೆ, ಕಮಾನು, ಕೊಡತಿ, ದಬ್ಬಳ, ದಾರದುಂಡೆ ಇವೇ ಅವರ ಸಲಕರಣೆಗಳು. ಉಳಿದಂತೆ ಹತ್ತಿ ಹಾಗೂ ಅದನ್ನು ತುಂಬುವುದಕ್ಕೆ ಅಗತ್ಯವಾದ ಬಟ್ಟೆಯನ್ನು ಹಾಸಿಗೆ ಹೊಲಿಸಿಕೊಳ್ಳುವವರೇ ತಂದುಕೊಡುತ್ತಾರೆ. ಕೆಲವು ಪಿಂಜಾರರು ಹತ್ತಿ, ಹಾಗೂ ಬಟ್ಟೆಯನ್ನು ತಾವೇ ಸ್ವತಃ ಖರೀದಿಸಿ ತಲೆಮೇಲೆ, ಸೈಕಲ್‌ನಲ್ಲಿ ಹೊತ್ತು ಊರೂರು ತಿರುಗುವವರೂ ಇದ್ದಾರೆ.

ಕಮಾನು ಮತ್ತು ಕೊಡತಿಯನ್ನು ಯಾವ ಮರದಿಂದ ಮಾಡಿಸುತ್ತೀರಿ? ಎಂದು ಕೇಳಿದರೆ ಪಿಂಜಾರರು ಅದಕ್ಕೆ ಇಂಥದೇ ಮರ ಬೇಕೆಂದೇನೂ ಇಲ್ಲ, ನಮಗೆ ಕಡಿಮೆ ದುಡ್ಡಿಗೆ ಲಭ್ಯವಾಗುವ ಯಾವುದಾದರೂ ಜಂಗಲ್‌ವುಡ್ ಆದರೂ ಸಾಕು ಎನ್ನುತ್ತಾರೆ. ಕಮಾನಿಗೆ ಕೆಲವರು ಬಿಲ್ಲು ,ಬೆಸ್ಕಿ ಎಂದೂ ಕರೆಯುತ್ತಾರೆ. ಐದಾರು ಅಡಿ ಉದ್ದದ ದುಂಡನೆಯ ಹಿಡಿ ಗಾತ್ರದ ಕೋಲಿಗೆ ಎರಡೂ ತುದಿಯಲ್ಲಿ ಒಂದು ಕಡೆಗೆ ಸ್ವಲ್ಪ ದೊಡ್ಡದಾದ, ಇನ್ನೊಂದು ಕಡೆಗೆ ಚಿಕ್ಕದಾದ ಹಲಗೆಯನ್ನು ಒಂದೇ ಮುಖನಾಗಿ ಬರುವಂತೆ ಜೋಡಿಸಿ ಈ ಎರಡೂ ಹಲಗೆಗಳಿಗೆ ಹೊಂದುವಂತೆ ತೊಗಲಿನ ದಾರವನ್ನು ಕಟ್ಟಿರುತ್ತಾರೆ. ಇದು ಬಿಲ್ಲಿನ ಹಾಗೆ ಬಾಗಿರದಿದ್ದರೂ ಬಿಲ್ಲಿನ ಕಲ್ಪನೆಯನ್ನು ತರುತ್ತದೆ. ಹತ್ತಿಯ ಗಂಟನ್ನು ಬಿಡಿಸಿಕೊಳ್ಳುವ ಜಾಗದಲ್ಲಿ ಆಳೆತ್ತರದ ಹಾರಿಗೋ, ತೊಲೆಗೋ ತೆಳ್ಳನೆಯ ಹಗ್ಗ ಮತ್ತು ಸೈಕಲ್‌ನ ಹಳೆಯ ಟ್ಯೂಬನ್ನು ಕಟ್ಟಿ ಅದರ ಒಂದು ಕೊನೆಯನ್ನು ಬಿಲ್ಲಿನ ಹಿಡಿಕೆಗೆ ಕಟ್ಟುತ್ತಾರೆ. ಬಿಲ್ಲಿನ ಹಿಡಿಕೆಯ ನಡುಭಾಗವನ್ನು ಎಡಗೈಯಲ್ಲಿ ಹಿಡಿದುಕೊಂಡು ಅದರ ತೊಗಲಿನ ದಾರ ನೆಲದಲ್ಲಿ ಸುರಿದ ಹತ್ತಿಯ ರಾಶಿಗೆ ತಗಲುವಂತೆ ಹೊಂದಿಸಿಕೊಳ್ಳುತ್ತಾರೆ. ಮೂಗು, ಬಾಯಿಗೆ ಟವೆಲ್ಲು ಅಥವಾ ಕರವಸ್ತ್ರ ಕಟ್ಟಿಕೊಂಡು ಬಲಗೈಯಲ್ಲಿ ಕೊಡತಿ ಹಿಡಿದು ತೊಗಲಿನ ದಾರಕ್ಕೆ ಹಿತವಾಗಿ ಲಯಬದ್ಧವಾಗಿ ಏಟು ಹಾಕುತ್ತಾರೆ. ಈ ದಾರಕ್ಕೆ ಸಿಕ್ಕ ಹತ್ತಿ ಏಟು ಬಿದ್ದಂತೆ ಗಂಟು ಬಿಡಿಸಿಕೊಂಡು ಬಿಡಿಯಾಗಿ ಎಳೆಎಳೆಯಾಗಿ ಶುದ್ಧವಾಗುತ್ತದೆ. ಹೀಗೆ ಬಿಡಿಯಾದ ಹತ್ತಿಯನ್ನು ಬಟ್ಟೆಗೆ ತುಂಬಲಾಗುತ್ತದೆ.

ಸಾಮಾನ್ಯವಾಗಿ ಹಾಸಿಗೆ ತಯಾರಿಸುವ ಆರ್ಡರ್ ಸಿಕ್ಕ ತಕ್ಷಣ ಹತ್ತಿ ಮತ್ತು ಬಟ್ಟೆಯ ಆಯ್ಕೆಯನ್ನು ಮಾಡಲು ಹೇಳಲಾಗುತ್ತದೆ. ಪಿಂಜಾರರು ತೋರಿಸಿದ ವಿವಿಧ ಬೆಲೆಯ, ಗುಣಮಟ್ಟದ ಹತ್ತಿ ಹಾಗೂ

ಬಟ್ಟೆಯನ್ನು ಹಾಸಿಗೆ ಮಾಡಿಸುವವರು ಆರಿಸುತ್ತಾರೆ. ಅದರಂತೆ ಪಿಂಜಾರರು ಮೊದಲು ಬಟ್ಟೆಯನ್ನು ಟೈಲರ್ ಹತ್ತಿರ ತೆಗೆದುಕೊಂಡು ಹೋಗಿ ಅಳತೆಗೆ ಸರಿಯಾಗಿ ಕತ್ತರಿಸಿ ಮೂರು ಕಡೆ ಪೂರ್ತಿ ಹೊಲಿಗೆ ಹಾಕಿಸುತ್ತಾರೆ. ಹಾಗೂ ನಾಲ್ಕನೆಯ ಕಡೆ ಕೂಡ ಹತ್ತಿಯನ್ನು ಒಳಗೆ ತುಂಬಲು ಅನುಕೂಲವಾಗುವಂತೆ ಒಂದು ಅಡಿಯಷ್ಟು ಜಾಗ ಬಿಟ್ಟು ಹೊಲಿಸುತ್ತಾರೆ. ಈ ಹೊಲಿಗೆಯ ಖರ್ಚನ್ನು ಅವರೇ ನಿಭಾಯಿಸುತ್ತಾರೆ. ಅಲ್ಲಿಂದ ಬಂದವರೇ ಹತ್ತಿಯನ್ನು ಕಮಾನಿನಿಂದ ಒಡೆದು ಗಂಟು ಬಿಡಿಸುತ್ತಾರೆ. ಹತ್ತಿಯನ್ನು ಮೊದಲೇ ಹಾಸಿಗೆಗೆ ಬೇಕಾದಷ್ಟನ್ನು ತೂಕ ಹಾಕಿ ಇಟ್ಟುಕೊಂಡಿರುತ್ತಾರೆ. ಸಿಂಗಲ್ ಹಾಸಿಗೆಗೆ, ದಿಂಬಿಗೂ ಸೇರಿ, ಹದಿನಾಲ್ಕರಿಂದ ಹದಿನೈದು ಕೆಜಿಯಷ್ಟು ಹತ್ತಿಯನ್ನು ತುಂಬಲಾಗುತ್ತದೆ. ಕನಿಷ್ಠ ಹತ್ತು ಕೆ.ಜಿ, ಗರಿಷ್ಠ ಹದಿನೈದು ಕೆ.ಜಿ. ಹತ್ತಿ ಸಿಂಗಲ್ ಹಾಸಿಗೆಗೆ ಬೇಕಾಗುತ್ತದೆ. ಡಬ್ಬಲ್ ಹಾಸಿಗೆಗೆ ಇಪ್ಪತ್ತೈದರಿಂದ ಮೂವತ್ತು ಕೆ.ಜಿ. ಹತ್ತಿಯನ್ನು ಎರಡು ದಿಂಬುಗಳಿಗೂ ಸೇರಿ ಬಳಸಲಾಗುತ್ತದೆ. ಸಿಂಗಲ್ ಹಾಸಿಗೆ, ದಿಂಬಿಗೆ ಎರಡೂವರೆ ಮೀಟರ್, ಡಬ್ಬಲ್ ಹಾಸಿಗೆ ದಿಂಬಿಗೆ ಐದು ಮೀಟರ್ ಬಟ್ಟೆ ಬೇಕಾಗುತ್ತದೆ. ಹತ್ತಿಯನ್ನು ಕಮಾನಿನಿಂದ ಪಿಂಜಿದ ನಂತರ ಹೊಲಿಸಿಕೊಂಡು ಬಂದ ಬಟ್ಟೆಯ ಚೀಲದೊಳಗೆ ಕೈಯಿಂದ ತುಂಬುತ್ತಾರೆ. ತುಂಬುವಾಗಲೇ ಮೂಲೆಗೆ ಮತ್ತು ಎಲ್ಲಾ ಕಡೆಗೆ ಸಮನಾಗಿರುವಂತೆ ಹತ್ತಿಯನ್ನು ಹೊಂದಿಸಲಾಗುತ್ತದೆ. ತುಂಬಿದ ನಂತರ ನಾಲ್ಕನೆಯ ಕಡೆಯಲ್ಲಿ ಹೊಲಿಯದೆ ಬಿಟ್ಟಿದ್ದ ಜಾಗವನ್ನು ಸೂಜಿ, ದಾರದಿಂದ ತಾವೇ ಹೊಲಿದು ಬಿಡುತ್ತಾರೆ. ನಂತರ ಸುಮಾರು ಮೂರಡಿ ಉದ್ದನೆಯ ಕೋಲಿನಿಂದ ಒಂದು ಕಡೆಯಿಂದ ಸಮನಾಗುವಂತೆ ಏಟುಕೊಡುತ್ತಾ ಹಾಸಿಗೆಯ ಒಳಗಿರುವ ಹತ್ತಿ ಸಮತಟ್ಟಾಗುವಂತೆ ಅದುಮುತ್ತಾರೆ. ಆಮೇಲೆ ಹಾಸಿಗೆಯನ್ನು ಮಡಿಸಿದರೂ ಹತ್ತಿ ಇನ್ನೊಂದು ಕಡೆ ಜರುಗದಂತೆ ಸಮನಾದ ಅಳತೆಗೊಂದರಂತೆ ಸಿಂಗಲ್ ಹಾಸಿಗೆಗೆ ಸುಮಾರು ೧೨ ರಿಂದ ೧೪ ಕಡೆ ಚುಟಿಕೆ ಹಾಕುತ್ತಾರೆ. ಉದ್ದನೆಯ ಸೂಜಿ ಮತ್ತು ದಾರದಿಂದ ಈ ಚುಟಿಕೆ ಹಾಕಿದರೆ ಹಾಸಿಗೆ ಪೂರ್ತಿ ರೆಡಿಯಾದಂತೆ. ತಯಾರಾದ ಹಾಸಿಗೆಯನ್ನು ಅವರೇ ಸಂಬಂಧಪಟ್ಟವರ ಮನೆ ಒಳಗೆ ಒಯ್ದು ಇಡುತ್ತಾರೆ. ಹಳ್ಳಿಗಳನ್ನು ತಿರುಗಾಡುತ್ತಾ ಸುತ್ತಾಡುವ ಪಿಂಜಾರರು ಈ ಹಾಸಿಗೆ ತಯಾರಿಸುವುದಕ್ಕಾಗಿ ಆಯಾ ಮನೆಯವರ ಮನೆಯಂಗಳವನ್ನೋ ಹಿತ್ತಲನ್ನೋ ಆಯ್ದುಕೊಳ್ಳುತ್ತಾರೆ. ಸಣ್ಣಪುಟ್ಟ ನಗರಗಳಲ್ಲಿ ಈ ಕೆಲಸ ಮಾಡುವವರು ತಾವು ಇಟ್ಟುಕೊಂಡ ಶೆಡ್ಡುಗಳಲ್ಲೇ ಇದಕ್ಕೆ ಅವಕಾಶ ಮಾಡಿಕೊಂಡಿರುತ್ತಾರೆ. ಹಾಸಿಗೆಯನ್ನು ತಯಾರಿಸಿಟ್ಟ ನಂತರವೇ ತಮ್ಮ ಮಜೂರಿಯನ್ನು ಪಡೆದು ಮುಂದಿನ ಆರ್ಡರ್‌ಗಳಿಗಾಗಿ ಸೈಕಲ್ ಹತ್ತುತ್ತಾರೆ.

ಈಗ ಕಮಾನು ಬಳಸಿ ಹತ್ತಿ ಪಿಂಜುವವರು ತುಂಬ ಕಡಿಮೆ. ಯಾಕೆಂದರೆ ಆಧುನಿಕತೆ ಈ ಕೆಲಸ ಮಾಡುವವರಿಗೆ ಹಗುರವಾಗಿರುವುದನ್ನು ಕಲಿಸಿದೆ. ಈಗ ಈ ಕೆಲಸ ಮಾಡುವ ಅನೇಕರು ಕಮಾನು, ಕೊಡತಿಯ ಬದಲು ಮೂರಡಿ ಉದ್ದನೆಯ ಬಿದಿರುಕೋಲನ್ನಷ್ಟೇ ಬಳಸುತ್ತಾರೆ. ನೆಲದಲ್ಲಿ ಗೊಬ್ಬರ ಚೀಲಗಳಿಂದ ತಯಾರಿಸಿದ ಪ್ಲಾಸ್ಟಿಕ್ ಪಾಟನ್ನು ಹಾಸಿ ಅದರ ಮೇಲೆ ಹತ್ತಿಯನ್ನು ಸುರಿದು ಕೋಲಿನಿಂದ ಹತ್ತಿಯ ಗಂಟು (ಸಿಕ್ಕು) ಬಿಡುವಂತೆ ಬೀಸಿ ಬೀಸಿ ಒಡೆಯುತ್ತಾರೆ. ಇದೇ ಕೆಲಸವನ್ನು ಕಮಾನು, ಕೊಡತಿಯಿಂದ ಮಾಡಿದರೆ ಕೆಲಸವೇನೋ ಶುದ್ಧವಾಗುತ್ತದೆ. ಆದರೆ ಆಧುನಿಕ ಮನಸ್ಸು ಶುದ್ಧತೆಗಿಂತ ಕೆಲಸ ಬೇಗ ಬೇಗ ಆಗುವುದನ್ನು ಬಯಸುತ್ತದೆ. ಕಮಾನು, ಕೊಡತಿಯಿಂದ ಕೆಲಸದ ಗುಣಮಟ್ಟ

ಒಳ್ಳೆಯದಾಗಿದ್ದರೂ ಒಂದು ಹಾಸಿಗೆ ತಯಾರಿಸಲು ಕನಿಷ್ಠ ಎರಡು ಮೂರು ಗಂಟೆ ಬೇಕಾಗುತ್ತದೆ. ಆದರೆ ಕೋಲಿನಿಂದ ಹತ್ತಿ ಪಿಂಜುವುದು ಬೇಗ ಆಗುತ್ತದೆ ಮತ್ತು ಗಂಟೆಗೊಂದು ಹಾಸಿಗೆ ತಯಾರಿಸಿಬಿಡುತ್ತಾರೆ. 'ಕಮಾನು' ಈಗಿನ ಪಿಂಜಾರರಲ್ಲಿ ಹೆಚ್ಚಾಗಿ ಕಾಣದಿರುವುದಕ್ಕೆ ಅವರು ಇನ್ನೂ ಒಂದು ಕಾರಣವನ್ನು ಕೊಡುತ್ತಾರೆ. ಕಮಾನಿಗೆ ಕಟ್ಟುವ ತೊಗಲಿನ ದಾರ ಈಗ ಮೊದಲಿನಂತೆ ಸಿಗುವುದಿಲ್ಲ. ಕುರಿ ಕೊಯ್ದು ಮಾಂಸ ಮಾರಾಟ ಮಾಡುವವರು ಕುರಿಯ ಉದ್ದನೆಯ ಕರುಳನ್ನು ಒಣಗಿಸಿ ಆ ದಾರವನ್ನು ತಯಾರಿಸುತ್ತಿದ್ದರು. ಕುರಿಯ ಹಸಿ ಕರುಳನ್ನು ತಿಂಗಳಾನುಗಟ್ಟಲೆ ಬಿಸಿಲಿನಲ್ಲಿ ಒಣಗಿಸುತ್ತಿದ್ದರು. ಆದರೆ ಈಗ ಕುರಿಯ ಕರುಳನ್ನು ತುಂಡು ತುಂಡಾಗಿ ಕತ್ತರಿಸಿ 'ಬೋಟಿ' ಎಂದು ಮಾರಲಾಗುತ್ತದೆ. ಮತ್ತು ಹೋಟೆಲ್ ಉದ್ಯಮದವರಿಂದ ಈ ಬೋಟಿಗೆ ಹೆಚ್ಚು ಬೆಲೆಯೂ ಸಿಗುತ್ತದೆ. ಆದ್ದರಿಂದ ತೊಗಲಿನ ಈ ದಾರದ ಕೊರತೆಯನ್ನು ಅನುಭವಿಸಿದ ಪಿಂಜಾರರು ಅದರ ಬದಲಿಗೆ ಪ್ಲಾಸ್ಟಿಕ್ ವೈರನ್ನು ಬಳಸುವುದನ್ನು ರೂಢಿ ಮಾಡಿಕೊಂಡರು. ಕ್ರಮೇಣ ಈ ಕಮಾನನ್ನು ಕೈಬಿಟ್ಟು 'ಕೋಲು' ಹಿಡಿದುಕೊಂಡರು.

ಇನ್ನೂ ಕಾಲ ಕಳೆದಂತೆಲ್ಲಾ ಕೆಲವು ಪಿಂಜಾರರು ಈ ಕೋಲನ್ನು ಕೈಬಿಟ್ಟು ಆಧುನಿಕವಾದ, ಕೈಯಲ್ಲಿ ತಳ್ಳಬಹುದಾದಂತಹ ಹತ್ತಿ ಪಿಂಜುವ ಯಂತ್ರವನ್ನು ಕಂಡುಕೊಂಡವರಿದ್ದಾರೆ. ಎಲ್ಲೋ ಕೆಲವರು ಈ ಯಂತ್ರದಿಂದ ಹತ್ತಿಯನ್ನು ಪಿಂಜಿ ಹಾಸಿಗೆ ತಯಾರು ಮಾಡಿಕೊಡುತ್ತಾರೆ. ಆದರೆ ಬಹಳಷ್ಟು ಜನ ಪಿಂಜಾರರು ಸೈಕಲ್ ಹಿಂದಿನ ಕ್ಯಾರಿಯರ್‌ನಲ್ಲಿ ಹತ್ತಿ ತುಂಬಿದ ಗೋಣಿಚೀಲವನ್ನಿಟ್ಟುಕೊಂಡು ಹ್ಯಾಂಡಲ್ ಪೈಪಿಗೆ ಕೋಲು ಸಿಕ್ಕಿಸಿಕೊಂಡು ಸೈಕಲ್ ತುಳಿಯುತ್ತ ಹೊರಡುತ್ತಾರೆ. ಹಳ್ಳಿ ಪಟ್ಟಣ ನಗರಗಳೆನ್ನದೆ ಹೀಗೆ ಸೈಕಲ್ ತುಳಿಯುವ ಪಿಂಜಾರರನ್ನು ಕಾಣಬಹುದು. ಹತ್ತಿ ಹಾಗೂ ಹಾಸಿಗೆಯ ಬಟ್ಟೆಯನ್ನು ಖರೀದಿಸುವುದಕ್ಕೆ ಇವರು ಹತ್ತಿರದ ಪಟ್ಟಣಗಳಿಗೇ ಹೋಗಬೇಕು. ಅಲ್ಲಿ ದೊಡ್ಡ ಬಂಡವಾಳಸ್ಥರು ಹಾಸಿಗೆಯ ಶೋರೂಂಗಳನ್ನೇ ತೆರೆದಿರುತ್ತಾರೆ. ಅಂತಹವರ ಹತ್ತಿರ ಹತ್ತಿ ಹಾಗೂ ಬಟ್ಟೆಯನ್ನು ಕೆಲವರು ಖರೀದಿಸಿ ಹಳ್ಳಿಗಳಲ್ಲಿ ಸುತ್ತಾಡಿ ಹಾಸಿಗೆ ತಯಾರಿಸಿಕೊಡುತ್ತಾರೆ. ಇನ್ನು ಅನೇಕರು ನಗರಗಳ ಈ ಶೋರೂಂನಲ್ಲಿ ದಿನಗೂಲಿಗಳಾಗಿ ಕೆಲಸ ನಿರ್ವಹಿಸುತ್ತಾರೆ. ಆ ಸಾಹುಕಾರ ದೊಡ್ಡ ಜಿನ್ನಿಂಗ್ ಫ್ಯಾಕ್ಟರಿಗಳಿಂದ ಹತ್ತಿಯನ್ನು ಲೋಡುಗಟ್ಟಲೆ ತರಿಸಿಕೊಳ್ಳುತ್ತಾನೆ. ಇಂತಹ ಕಡೆ ನಿಷ್ಠೆ ಶ್ರದ್ಧೆಯಿಂದ ಉತ್ತಮ ಗುಣಮಟ್ಟದ ಹಾಸಿಗೆ ತಯಾರಿಸುವ ಪಿಂಜಾರರ ಮನೆಗಳಲ್ಲಿ ಹಾಸಿಗೆಗಳೇ ಇರುವುದಿಲ್ಲ. ಅವರ ಮನೆಗಳಲ್ಲಿ ಗೋಣಿಚೀಲ, ಪ್ಲಾಸ್ಟಿಕ್ ಪಾಟು, ಈಚಲು ಅಥವಾ ಕಡ್ಡಿ ಚಾಪೆಗಳು ಕಂಡುಬರುತ್ತವೆ. ನಗರದ ಜನರು ಬಯಸುವಂತಹ ಉತ್ತಮಮಟ್ಟದ ದುಬಾರಿ ಹಾಸಿಗೆಗಳನ್ನು ಹಳ್ಳಿಯ ಜನರು ಅಪೇಕ್ಷಿಸುವುದಿಲ್ಲ. ಅದಕ್ಕೆ ಅವರ ಆರ್ಥಿಕ ಸ್ಥಿತಿ ಅನುಮತಿ ಕೊಡುವುದಿಲ್ಲ. ಆದುದರಿಂದ ಹಳ್ಳಿಗಳಲ್ಲಿ ಸುತ್ತಾಡಿ ಹಾಸಿಗೆ ಹಾಕಿಕೊಡುವ ಪಿಂಜಾರರು ಕೂಡ ಹಳ್ಳಿಯ ಜನರ ಹಣಕಾಸಿನ ಪರಿಸ್ಥಿತಿಗನುಗುಣವಾದ ಕಡಿಮೆ ದರ್ಜೆಯ ಹತ್ತಿ ಹಾಗೂ ಬಟ್ಟೆಯನ್ನು ಖರೀದಿಸುತ್ತಾರೆ. ಇನ್ನೂ ಒಂದು ಕಾರಣವೆಂದರೆ ದುಬಾರಿ ಹತ್ತಿ ಹಾಗೂ ಬಟ್ಟೆಯನ್ನು ಖರೀದಿಸಲು ಮೊದಲು ಪಿಂಜಾರರೇ ಬಂಡವಾಳ ಹಾಕಬೇಕಲ್ಲ, ಅದು ಅವರಿಗೂ ಸಾಧ್ಯವಾಗುವುದಿಲ್ಲ. ಇಂತಹ ಆರ್ಥಿಕ ಕಾರಣಗಳಿಗಾಗಿ ಪಿಂಜಾರರು ಸಂಘಟನೆಯಿಲ್ಲದೆ ಶೈಕ್ಷಣಿಕ

ಸುಧಾರಣೆಗಳಿಲ್ಲದೆ ಸಾಮಾಜಿಕವಾಗಿ ಹಿಂದುಳಿದಿದ್ದಾರೆ. ಈ ಸಾಂಪ್ರದಾಯಿಕ ವೃತ್ತಿಯಲ್ಲಿರುವ ಕೆಲವು ಪಿಂಜಾರರು ಈ ವೃತ್ತಿಯನ್ನು ಪೂರ್ತಿ ಕೈಬಿಟ್ಟು ಕೃಷಿಗೆ ಸಂಬಂಧಿಸಿದ ಕೆಲಸಗಳು ಮತ್ತು ವ್ಯಾಪಾರಕ್ಕೆ ಸಂಬಂಧಪಟ್ಟ ಕೆಲಸಗಳಲ್ಲಿ ತೊಡಗಿದ್ದಾರೆ.

ಕೆಲವರಿದ್ದಾರೆ, ಅವರು ಆಂಧ್ರಪ್ರದೇಶದಿಂದ ಬಂದು ನೂರಾರು ವರ್ಷಗಳಿಂದ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ವಾಸವಾಗಿದ್ದಾರೆ. ಮನೆಯಲ್ಲಿ ತೆಲುಗು ಮಾತನಾಡುತ್ತಾ ಹೊರಗೆ ಬಂದರೆ ಉರ್ದು, ಕನ್ನಡ, ಹಿಂದಿ, ತಮಿಳು ಹೀಗೆ ಸಂದರ್ಭಕ್ಕೆ ತಕ್ಕಂತೆ ಭಾಷೆಯನ್ನು ಕಲಿತಿದ್ದಾರೆ. ಮತ್ತು ಇವರದೇ ಅಂದರೆ ಹಾಸಿಗೆಯ ಕೆಲಸ ಮಾಡುವವರದೇ ಒಂದೊಂದು ಏರಿಯಾ ಮಾಡಿಕೊಂಡು, ಸಾಮಾನ್ಯವಾಗಿ ಇವರೆಲ್ಲ ನಗರಗಳ ಸ್ಲಂನಲ್ಲಿ ವಾಸ ಮಾಡುತ್ತಾರೆ. ಅಂತಹ ಕಡೆ ಯಾರದೋ ಜಾಗವನ್ನು ಬಾಡಿಗೆಗೆ ತೆಗೆದುಕೊಂಡು ಶೆಡ್ಡು ತಯಾರಿಸಿಕೊಂಡು ದೂರದ ತಮಿಳುನಾಡಿನ ತಿರಪುರದ ಮಿಲ್ಲುಗಳಿಂದ ಲೋಡುಗಟ್ಟಲೆ ಹತ್ತಿಯನ್ನು ತಂದು ಹಾಸಿಗೆ ತಯಾರಿಸುತ್ತಾರೆ. ಒಂದು ಲೋಡಿಗೆ ಮೂರರಿಂದ ಮೂರೂವರೆ ಟನ್ ಹತ್ತಿ ಬರುತ್ತದೆ. ಅದರಲ್ಲಿ ಪಿಂಜಿದ ನಂತರ ವ್ಯರ್ಥವಾಗಿ ಹೋಗುವ ಹತ್ತಿಯನ್ನು ಹೊರತುಪಡಿಸಿ ಉಳಿದ ಹತ್ತಿಯಲ್ಲಿ ನೂರಾರು ಹಾಸಿಗೆಗಳನ್ನು ತಯಾರಿಸಬಹುದು. ಅದನ್ನು ಗೋಣಿಚೀಲ, ಮೂಟೆಗಳಲ್ಲಿ ತುಂಬಿಕೊಂಡು ಹಳ್ಳಿಗಳಲ್ಲಿ ತಿರುಗಾಡುತ್ತಾ ಹೊರಡುತ್ತಾರೆ.

ಪಿಂಜಾರರ ಈ ವೃತ್ತಿಗೆ ಅಗತ್ಯವಾದ ಸಲಕರಣೆಗಳು ಕಡಿಮೆ ಸಂಖ್ಯೆಯವೇ ಆದರೂ ಈ ವೃತ್ತಿಯಿಂದ ಪಿಂಜಾರರು ಅನುಭವಿಸುವ ದೈಹಿಕ ಯಾತನೆಗಳು ಹಲವಾರು. ಊರೂರು ಸುತ್ತಿ ಸೈಕಲ್ ತುಳಿಯುವ ಇವರು ಹತ್ತಿಯ ಧೂಳಿಗೆ ಕಣ್ಣು ಮೂಗು ತೆರೆದುಕೊಂಡು ಈ ಧೂಳಿನಿಂದ ವಿಚಿತ್ರವಾದ ನೆಗಡಿ, ತಲೆನೋವುಗಳನ್ನು ಅನುಭವಿಸುತ್ತಾರೆ. ಈ ಧೂಳಿನ ನಿರಂತರ ಸೇವನೆ ಮತ್ತು ಅಸ್ವಚ್ಛ ಪರಿಸರದ ಕಾರಣ ಪಿಂಜಾರರಲ್ಲಿ ಅನೇಕರು ಅಸ್ತಮಾ, ಕ್ಷಯರೋಗದಿಂದ ಬಳಲುತ್ತಿದ್ದಾರೆ. ಇತ್ತ ಧಾರ್ಮಿಕವಾಗಿ ಪ್ರಧಾನವಾದ ಐಡೆಂಟಿಯ ಆಸರೆಯಿಲ್ಲ, ಅತ್ತ ಆರ್ಥಿಕವಾಗಿ, ಸಾಮಾಜಿಕವಾಗಿ ಕೂಡ ಭದ್ರತೆ ಇಲ್ಲ. ಇಂತಹ ಪರಿಸ್ಥಿತಿಯಲ್ಲಿ ಪಿಂಜಾರರ ಒಟ್ಟಾರೆ ಅಧ್ಯಯನವು ಇವರ ನೋವುಗಳನ್ನು ಎಲ್ಲ ಬುಡಕಟ್ಟು ಜನಾಂಗಗಳ ಯಾತನೆಯ ಸ್ವರೂಪದಲ್ಲಿ ಅರ್ಥಮಾಡಿಕೊಳ್ಳುವ, ಸಾಂಸ್ಕೃತಿಕ ಜಗತ್ತಿಗೆ ಪರಿಚಯ ಮಾಡಿಕೊಡುವ ಪ್ರಯತ್ನವಾಗಿದೆ.

## ೬.೩ ವೃತ್ತಿ ಸಂಬಂಧದ ಸಲಕರಣೆಗಳ ತಯಾರಿಕೆ ಮತ್ತು ಅವುಗಳ ಬಗೆಗಿನ ನಂಬಿಕೆ, ಆಚರಣೆಗಳು ಮತ್ತು ವಿಧಿ ನಿಷೇಧಗಳು

ಹಿಂದೆ ಹೇಳಿದಂತೆ ಪಿಂಜಾರರು ತಮ್ಮ ವೃತ್ತಿಯಲ್ಲಿ ಬಳಸುವ ಸಲಕರಣೆಗಳು ಕಮಾನು, ಕೊಡತಿ, ಕೋಲು, ಉದ್ದನೆಯ ಸೂಜಿ ಮತ್ತು ದಾರದುಂಡೆ. ಹಾಸಿಗೆ ತಯಾರಿಸಲು ಬೇಕಾದ ಕಚ್ಚಾವಸ್ತು ಹತ್ತಿ ಮತ್ತು ಹಾಸಿಗೆಯ ಬಟ್ಟೆ. ಇವುಗಳನ್ನು ಪಿಂಜಾರರು ಬಳಸುವಾಗ ಅವರದ್ದೇ ಆದ ವಿಶಿಷ್ಟ ನಂಬಿಕೆಗಳು ಇರುವಂತೆ ಕಾಣುತ್ತದೆ. ಸಾಮಾನ್ಯವಾಗಿ ಕಮಾನು ಮತ್ತು ಕೊಡತಿಯನ್ನು ಸ್ಥಳೀಯವಾಗಿ ಲಭ್ಯವಿರುವ

ಬಡಗಿಯವರ ಹತ್ತಿರ ಮಾಡಿಸುತ್ತಾರೆ. ಕಮಾನು ಹಾಗೂ ಕೊಡತಿಯನ್ನು ಮಾಡಿಕೊಡುವ ಬಡಗಿಗೆ ಯಾವ ಮರ ಬೇಕೆಂದು ಕೇಳಿ ತಿಳಿದುಕೊಂಡು ಅಂತಹ ಮರವನ್ನು ಇವರೇ ತಂದುಕೊಡುತ್ತಾರೆ. ಸಾಮಾನ್ಯವಾಗಿ ಸ್ಥಳೀಯವಾಗಿ ಸಿಗುವ ಜಾಲಿ, ಬೇವು, ಮಾವು, ಮೊದಲಾದ ಮರಗಳಿಂದ ಇವುಗಳನ್ನು ತಯಾರಿಸಲಾಗುತ್ತದೆ. ತಯಾರಿಸಿಕೊಟ್ಟ ಬಡಗಿಗೆ ನಿರ್ದಿಷ್ಟ ಕೂಲಿಯನ್ನು ಕೊಡಲಾಗುತ್ತದೆ. ಒಮ್ಮೆ ತಯಾರಿಸಿಕೊಂಡ ಕಮಾನು ಹಾಗೂ ಕೊಡತಿ ಪಿಂಜಾರನ ಜೀವಮಾನದುದ್ದಕ್ಕೂ ಬರುತ್ತದೆ ಮತ್ತು ಕೆಲವೊಮ್ಮೆ ಎರಡು ಮೂರು ತಲೆಮಾರುಗಳವರೆಗೂ ಅವುಗಳನ್ನು ಬಳಸಲಾಗುತ್ತದೆ. ಇಂಥ ಸಂದರ್ಭದಲ್ಲಿ ಇದು ತಮ್ಮ ಪೂರ್ವಿಕರು ಬಳಸಿದ್ದು, ಇದು ಅನ್ನ ಕೊಡುವ ದೇವರು, ಇದು ಅದೃಷ್ಟದ್ದು ಎಂದು ನಂಬಲಾಗುತ್ತದೆ. ಹೊಸದಾಗಿ ತಯಾರಿಸಿದ ಕಮಾನು, ಕೊಡತಿಗಳನ್ನು ಬಳಸುವ ಮುನ್ನ ಪಿಂಜಾರರು ಮೈ ತೊಳೆದುಕೊಂಡು ಮುಲ್ಲಾನನ್ನು ಕರೆಸಿ 'ಓದಿಕೆ' ಮಾಡಿಕೊಡುವಂತೆ ಕೇಳುತ್ತಾರೆ. ಕಮಾನು, ಕೊಡತಿಗಳನ್ನು ಗಂಧ ಹಚ್ಚಿ, ಊದಿನಕಡ್ಡಿಯನ್ನು ಬೆಳಗುತ್ತಾರೆ. ಓದಿಕೆ ಮುಗಿದ ನಂತರ ಅಲ್ಲಿ ನೆರೆದ ಕೆಲವರಿಗೆ ಸಕ್ಕರೆ ಹಂಚಲಾಗುತ್ತದೆ: ಇದನ್ನು ಸಂಭ್ರಮದ ಆಚರಣೆಯನ್ನಾಗಿ ಪಿಂಜಾರರು ಹಮ್ಮಿಕೊಳ್ಳುವುದಿಲ್ಲ. ಬದಲಾಗಿ ಔಪಚಾರಿಕವಾಗಿ ಗಂಧ ಹಚ್ಚಿ, ಸಕ್ಕರೆ ಓದಿಸುವ ಪರಿಪಾಠವನ್ನಿಟ್ಟುಕೊಂಡಿದ್ದಾರೆ. ಮೇಲೆ ಹೇಳಿದ ಎಲ್ಲ ಸಲಕರಣೆಗಳನ್ನು ಕುರಿತಂತೆ ಪಿಂಜಾರರಲ್ಲಿ ಇವು ತಮಗೆ ಅನ್ನ ಕೊಡುವ ದೇವರು ಎಂಬ ಸಾಮಾನ್ಯ ಭಾವನೆಯಿದೆ. ಕೆಲಸಕ್ಕೆ ಹೊರಡುವಾಗ ಇವುಗಳನ್ನು ಭಕ್ತಿಪೂರ್ವಕವಾಗಿ ಮುಟ್ಟಿ ಕಣ್ಣಿಗೆ, ತುಟಿಗೆ ಒತ್ತಿಕೊಳ್ಳುತ್ತಾರೆ. ಮತ್ತು ಆ ದಿನದ ಮಟ್ಟಿಗೆ ಒಳ್ಳೆಯ ಆರ್ಡರ್‌ಗಳು ಸಿಗಲಿ ಎಂದು ಮನದಲ್ಲೇ ಮನೆದೇವರನ್ನು ಕೇಳಿಕೊಳ್ಳುತ್ತಾರೆ. ತಲೆಮಾರುಗಳ ಹಿಂದಿನ ಪಿಂಜಾರರು ಅಲ್ಲಾ ಸೇರಿದಂತೆ ಹಿಂದೂ ಸಮುದಾಯದ ಅನೇಕ ದೇವರಿಗೆ ನಡೆದುಕೊಳ್ಳುತ್ತಿದ್ದುದು ತಿಳಿದು ಬರುತ್ತದೆ. ಹೊಸದಾಗಿ ಹಾಸಿಗೆ ಹಾಕುವುದನ್ನು ಕಲಿಯುವ ಹುಡುಗರಿಗೆ ಶ್ರದ್ಧೆಯಿಂದ ಕಲಿಸಿಕೊಡಲಾಗುತ್ತದೆ.

ಮೇಲೆ ತಿಳಿಸಿದ ಸಲಕರಣೆಗಳನ್ನು ಪ್ರತೀ ಸಲ ಬಳಸುವಾಗಲೂ ಓದಿಕೆ ಮಾಡಿಸುವ ರೂಢಿಯಿಲ್ಲ. ಆದರೆ ಪ್ರತೀಸಲ ಇವುಗಳನ್ನು ಹೊತ್ತು ಹೊರಡುವಾಗ ಮುಟ್ಟಿ ಸಾನು ಮಾಡಿಕೊಳ್ಳುವುದು ಒಳ್ಳೆಯ ಆದಾಯಕ್ಕೆ ಹಾರೈಸುವುದೂ ಇದೆ. ಕೆಲಸ ಮುಗಿಸಿಕೊಂಡು ಬಂದ ನಂತರ ಇವೆಲ್ಲವುಗಳನ್ನು ಮುತುವರ್ಜಿಯಿಂದ ಮನೆಯ ಒಂದು ಮೂಲೆಯಲ್ಲಿಡಲಾಗುತ್ತದೆ.

ಪಿಂಜಾರರ ಈ ಸಾಂಪ್ರದಾಯಿಕ ವೃತ್ತಿಯ ಹೊರತಾಗಿ ಅವರು ತೊಡಗಿಕೊಂಡಿರುವ ರೈತಾಪಿ ಕೆಲಸಗಳಲ್ಲಿ ಮಾತ್ರ ಅವರ ಮೂಲಾಶ್ರಮದ ಆಚರಣೆ, ನಂಬಿಕೆಗಳನ್ನು ಸ್ಪಷ್ಟವಾಗಿ ಕಾಣಬಹುದಾಗಿದೆ. ವಿಶೇಷವಾಗಿ ಉತ್ತರ ಕರ್ನಾಟಕದ ಹಳ್ಳಿಗಳಲ್ಲಿ ಕೃಷಿಗೆ ಸಂಬಂಧಿಸಿದ ಚಟುವಟಿಕೆಗಳಲ್ಲಿ ಹೆಚ್ಚಾಗಿ ಪಿಂಜಾರರು ನಿರತರಾಗಿದ್ದಾರೆ. ವ್ಯವಸಾಯಕ್ಕೆ ಅಗತ್ಯವಾದ ನೊಗ, ಪಟಗಣ್ಣಿ, ಬಾರುಕೋಲು, ರಂಟೆ, ಕುಂಟೆ, ಕೂರಿಗೆ, ಹಲುಬೆ, ಮೆರಿಗೋಲು, ಗೋರೆ, ಕುಡ, ತಾಳು, ಕುಡುಗೋಲು, ಕುರ್ಚಿಗೆ, ಕವೆಗೋಲು, ಮೇಣಿ, ಮಿಣಿ - ಮೊದಲಾದವುಗಳನ್ನು ತಾವೇ ತಯಾರಿಸಿಕೊಳ್ಳಬಲ್ಲ ಬಹುವಿಧವಾದ ಕಲೆಗಾರರು

ಪಿಂಜಾರರಲ್ಲಿದ್ದಾರೆ. ದನಕರುಗಳಿಗೆ ಬೇಕಾದ ಹಗ್ಗ, ಮೂಗುದಾಣ, ಕೊಳದಂಡಿ, ಬಾರುಕೋಲು ಮತ್ತು ಹುಲ್ಲು, ಸೊಪ್ಪೆ ಹೇರಿಕೊಂಡು ಬರುವುದಕ್ಕೆ ಅಗತ್ಯವಾದ ಮಿಣಿಗಳನ್ನು ಪಿಂಜಾರರಲ್ಲಿ ಕೆಲವರು ಅತ್ಯಂತ ಕಲಾತ್ಮಕವಾಗಿ ಹೊಸೆದು, ಹೆಣೆದು ಇಟ್ಟುಕೊಳ್ಳುತ್ತಾರೆ. ಪುಂಡಿ ಅಥವಾ ರಗಸಪಟ್ಟೆಯ ನಾರನ್ನು ಇದಕ್ಕಾಗಿ ಬಳಸುತ್ತಾರೆ. ಪುಂಡಿಯನ್ನು ಬೆಳೆಯುವ ರೈತರಿದ್ದಾರೆ. ಹೊಲಗಳಲ್ಲಿ ಬೆಳೆದ ರಗಸಪಟ್ಟೆಯನ್ನು ಕತ್ತರಿಸಿ ಮುಳ್ಳುಗಳನ್ನು ಸವರಿ ಅದನ್ನು ಗಾಡಿಯಲ್ಲಿ ತಂದು ಹಳ್ಳದಲ್ಲಿ ಗುಂಡಿ ತೆಗೆದು ತಿಂಗಳುಗಟ್ಟಲೆ ಹೂತುಬಿಡುತ್ತಾರೆ. ನಂತರ ಅದು ಚೆನ್ನಾಗಿ ಕೊಳೆತಿರುವುದನ್ನು ತಿಳಿದುಕೊಂಡು ಹೊರತೆಗೆದು ಕಲ್ಲುಚಪ್ಪಡಿಯ ಮೇಲಿಟ್ಟುಕೊಂಡು ಕೊಡತಿಯಿಂದ ತದೆಯುತ್ತಾರೆ. ಪಟ್ಟೆಯ ಮೇಲಿನ ಕೊಳೆ ಎಲ್ಲಾ ಹೋಗಿ ನಾರು ಉಳಿದುಕೊಳ್ಳುತ್ತದೆ. ಅದನ್ನು ಬಿಸಿಲಿಗೆ ಒಣ ಹಾಕುತ್ತಾರೆ. ಒಣಗಿದ ನಂತರ ಕುಕ್ಕುರುಗಾಲಿನಲ್ಲಿ ಕೂತು ಒಂದು ಹೆಬ್ಬೆರಳಲ್ಲಿ ನಾರನ್ನು ಮೆಟ್ಟಿಕೊಂಡು ಹುರಿ ಮಾಡುತ್ತಾ ಹಗ್ಗ ಹೊಸೆಯುತ್ತಾರೆ. ಬರಲು ಕಟ್ಟುವುದು, ಬಣವೆ ಒಟ್ಟುವುದು, ಬೇಲಿ ನೆಡುವುದು, ಬಡಗಿ ಕೆಲಸ ಕಲಿತು ವ್ಯವಸಾಯದ ಮರಮುಟ್ಟುಗಳನ್ನು ಮಾಡುವುದು, ಬಲೆಹೆಣೆದು ಮೀನು ಹಿಡಿಯುವುದು - ಹೀಗೆ ಪಿಂಜಾರರು ನಾನಾವಿಧವಾದ ಕೃಷಿಗೆ ಸಂಬಂಧಿಸಿದ ಕೆಲಸಗಳಲ್ಲಿ ನುರಿತವರಾಗಿದ್ದಾರೆ. ಈ ಎಲ್ಲ ಸಂದರ್ಭಗಳಲ್ಲಿಯೂ ಅವರಿಗೆ ತಮ್ಮ ಪ್ರಾದೇಶಿಕವಾದ ಬಹುಸಂಖ್ಯಾತ ಸಮುದಾಯಗಳವರ ನಂಬಿಕೆಗಳೇ ಮುಖ್ಯವಾಗಿವೆ. ಅವರ ಸಾಂಸ್ಕೃತಿಕ ಪ್ರಭಾವವೇ ಆಗಿರುವ ಮೂಲಾಶ್ರಮದ ತಿಳುವಳಿಕೆಗಳು ಅವರ ಜೀವನ ವಿಧಾನವನ್ನು ರೂಪಿಸಿದಂತಿವೆ.

ಬೇಸಾಯುವನ್ನು ಅನೇಕ ಪಿಂಜಾರರು ಅವಲಂಬಿಸಿದ್ದರೂ ಸ್ವಂತ ಜಮೀನು, ದನಕರು, ಮುಟ್ಟುಗಳನ್ನಿಟ್ಟುಕೊಂಡು ಬೇಸಾಯ ಮಾಡುವವರು ಒಟ್ಟಾರೆ ಕಡಿಮೆ ಎಂದೇ ಹೇಳಬೇಕು. ಸ್ವಂತ ಜಮೀನು ಹೊಂದಿದವರು ವ್ಯವಸಾಯಕ್ಕೆ ಸಂಬಂಧಿಸಿದ ಆಚರಣೆಗಳನ್ನು ಕೂಡ ಈಗಾಗಲೇ ಬೇರೆ ಜನಾಂಗದ, ಸಂಸ್ಕೃತಿಯ ಆಚರಣೆಗಳ ಪ್ರಭಾವದಿಂದಲೇ ಆಚರಿಸುತ್ತಾರೆ. ಪಿಂಜಾರರ ಸಂಸ್ಕೃತಿಯನ್ನು ಕುರಿತು ಮಾತನಾಡುವಾಗ ಈ 'ಪ್ರಭಾವ' ಅನ್ನುವ ಪದದ ಬಳಕೆಯನ್ನು ಎಚ್ಚರದಿಂದ ಗಮನಿಸಬೇಕಾಗುತ್ತದೆ. ಪಿಂಜಾರರಿಗೆ ಸಂಸ್ಕೃತಿಯ ಪ್ರಭಾವವೇನಾದರೂ ಆಗಿದ್ದರೆ ಅದು ಮುಸ್ಲಿಂ ಸಂಸ್ಕೃತಿಯ ಪ್ರಭಾವ ಮಾತ್ರ. ಅದರಲ್ಲೂ ತೀರ ತಾಂತ್ರಿಕವೆನ್ನುವಂತಹ ಅರ್ಥದಲ್ಲಿ ಅವರಲ್ಲಿ ಕಂಡುಬರುತ್ತದೆ. ಹಾಗಾಗಿ ಬೇಸಾಯ ಮಾಡುವವರು ಅಪರೂಪವಾಗಿರುವ ಮುಸ್ಲಿಮರಿಗಿಂತ ಪಿಂಜಾರರು ಹೆಚ್ಚಾಗಿ ಕೃಷಿ ಕೆಲಸದಲ್ಲಿ ತೊಡಗಿರುವುದಕ್ಕೆ ಪಿಂಜಾರರು ತಮ್ಮ ಮೂಲವೃತ್ತಿ ಹಾಸಿಗೆ ತಯಾರಿಸುವುದನ್ನು ನಾಗರಿಕ ಜಗತ್ತು ಬೆಳೆದ ಹಾಗೆ ಬಿಡುತ್ತಾ ಬಂದಿರುವುದು ಕಾರಣವೇ ಹೊರತು ಧಾರ್ಮಿಕ ಹಿನ್ನೆಲೆಯಲ್ಲಿ ಉಂಟಾದ ಪ್ರಭಾವವಲ್ಲ ಅನ್ನುವುದನ್ನು ಗಮನದಲ್ಲಿಟ್ಟುಕೊಳ್ಳಬೇಕು.

ಪಿಂಜಾರರು ಭರತ ಹುಣ್ಣಿಮೆ ಅಂತ ಆಚರಿಸುವಾಗಲೇ ಬಿತ್ತ ಬೇಕಾದ ಬೀಜಗಳನ್ನು ದೇವರಿಗೆ (ಯಾವುದೇ ಸ್ಥಳೀಯ ದೇವರು) ಹರಕೆ ಕಟ್ಟುತ್ತಾರೆ. ಈ ಹರಕೆ ಕಟ್ಟಿಟ್ಟು ಬೀಜಗಳನ್ನು ಬಿತ್ತುವ ಮೊದಲು ಆ ದೇವರಿಗೆ ಮೂರು ಹಿಡಿ ಕಾಳುಗಳನ್ನು ಅರ್ಪಿಸಿ ಒಳ್ಳೆಯ ಬೆಳೆಯನ್ನು ಕೊಡುವಂತೆ ಬೇಡಿಕೊಳ್ಳುತ್ತಾರೆ.

ಚೌಡಮ್ಮ, ನಾಯಕನಹಟ್ಟಿ ತಿಪ್ಪೇಸ್ವಾಮಿ, ಎಲ್ಲಮ್ಮ, ಮಸೀದಿ, ದರ್ಗಾ, ಹೀಗೆ ಯಾವುದೇ ದೇವರ ಸನ್ನಿಧಿಯಲ್ಲಿ ಅವರು ಈ ಹರಕೆಯನ್ನು ಪೂರೈಸುತ್ತಾರೆ. ಬಿತ್ತುವಾಗ ಹೊಲಕ್ಕೆ ತೆಂಗಿನಕಾಯಿ, ಕರ್ಪೂರ, ಊದಿನಕಡ್ಡಿ, ಅಂಗುದಾರ, ಬಾಳೆಹಣ್ಣು, ಗಂಧ ತೆಗೆದುಕೊಂಡು ಹೋಗಿ ಬೇಸಾಯ ಹೂಡಿ ಕರ್ಪೂರ ಹಚ್ಚಿ ತೆಂಗಿನಕಾಯಿ ಒಡೆದು ಊದಿನ ಕಡ್ಡಿಯಿಂದ ಸುತ್ತಲೂ ತಿರುಗಿ ಬೆಳಗುತ್ತಾರೆ. ಅಂಗುದಾರವನ್ನು ನೇಗಿಲು ಅಥವಾ ಕೂರಿಗೆಗೆ ಕಟ್ಟಿ ಗಂಧ ಹಚ್ಚಿ ಭೂಮಿಗೆ, ಎತ್ತುಗಳಿಗೆ ಅಡ್ಡಬಿದ್ದು ನೇಗಿಲನ್ನು ಮುಟ್ಟಿ ಸಾನು ಮಾಡಿ ಬೇಸಾಯ ಶುರು ಮಾಡುತ್ತಾರೆ.

ಜೋಳ, ರಾಗಿ, ಶೇಂಗ ಮುಂತಾದ ಬೆಳೆಗಳು ಬೆಳೆದು ನಿಂತಿದ್ದಾಗ ಸೋರೆಗೆ ಸುಣ್ಣ ಬಳಿದು ಕಣ್ಣು ಬಾಯಿ ಮಾಡಿ ಕೋಲಿಗೆ ನೇತು ಹಾಕಿ ಹೊಲದಲ್ಲಿ ಇಡುತ್ತಾರೆ. ಅದಕ್ಕೆ 'ಬೆಚ್ಚು ' ಅನ್ನುತ್ತಾರೆ.

ಬೆಳೆಗೆ ರೋಗರುಜಿನ ಬಾರದಂತೆ ದೇವರಲ್ಲಿ ಹರಕೆ ಕಟ್ಟಿಕೊಳ್ಳುವುದಿದೆ. ಮತ್ತು ಉರುಸಿಗೋ ಜಾತ್ರೆಗೋ ಹೋದಾಗ ಸಕ್ಕರೆ ಓದಿಸಿಕೊಂಡೂ ಬರುತ್ತಾರೆ. ಇದರ ಉದ್ದೇಶ ಬೆಳೆ ಫಲವತ್ತಾಗಿರಲಿ ಎಂಬುದೇ ಆಗಿದೆ.

ಬೆಳೆ ಕೊಯ್ಯುವಾಗಲೂ ಪಿಂಜಾರರು ಕಾಯಿ ಒಡೆದು ಊದಿನಕಡ್ಡಿ ಬೆಳಗುತ್ತಾರೆ. ಮನೆಗೆ ಹಿರಿಯರಾದವರು ಮೊದಲು ಕೊಯ್ಯುತ್ತಾರೆ. ಅದು ಅವರವರ ಕೈಗುಣವನ್ನು ಅವಲಂಬಿಸಿರುತ್ತದೆ. ರಾಶಿ ಪೂಜೆ ಪಿಂಜಾರರಲ್ಲಿ ಸಾಮಾನ್ಯವಾಗಿದೆ. ರಾಶಿ ದುಂಡಗೆ ಮಾಡಿ ತೂರಿ ಮತ್ತೊಂದು ಕಡೆ ಒಂದಕ್ಕಿಂತ ಒಂದು ಚಿಕ್ಕದಿರುವಂತೆ ಮೂರು ರಾಶಿಗಳನ್ನು ಮಾಡುತ್ತಾರೆ. ರಾಶಿಯ ನೆತ್ತಿಯಲ್ಲಿ ಮೆರಿಗೋಲು, ಹಲುಬೆ, ಗ್ವಾರೆ ಮುಂತಾದ ಸಾಮಾನುಗಳನ್ನು ನೆಡುತ್ತಾರೆ. ತೆಂಗಿನಕಾಯಿ, ಮಾವಿನೆಲೆ, ಊದುಬತ್ತಿ, ಕರ್ಪೂರ, ಹೂವು, ಮಂಡಕ್ಕಿ, ಬೆಲ್ಲ ಮುಂತಾದುವನ್ನು ತಂದು ಪೂಜೆ ಮಾಡಿ ಬಂದಿದ್ದವರಿಗೆ ಬೆಲ್ಲ ಮಂಡಕ್ಕಿ ಹಂಚುತ್ತಾರೆ. ಜೊತೆಗೆ ಮಕ್ಕಳಿಗೆ, ಸೊಸೆಯರಿಗೆ, ಮನೆಯ ಹೆಣ್ಣುಮಕ್ಕಳಿಗೆ ಮತ್ತು ತೂರುವ, ತುಂಬವ ಕೆಲಸ ಮಾಡಿದವರಿಗೆ ಧಾರಾಳವಾಗಿ ಮೊರ ಅಥವಾ ಗೂಡೆಯಲ್ಲಿ ಧಾನ್ಯವನ್ನು ಕೊಡಲಾಗುತ್ತದೆ.

ಧಾನ್ಯವನ್ನು ಅಳೆದು ಚೀಲಕ್ಕೆ ತುಂಬುವಾಗ ಪಿಂಜಾರರು ಸೇರನ್ನು ಬಳಸುತ್ತಾರೆ. ಮೊದಲನೆಯ ಸೇರು ಹಾಕುವಾಗ 'ಒಂದು' ಅನ್ನದೆ 'ಹೆಚ್ಚಲಿ' ಅನ್ನುತ್ತಾರೆ. ಹಾಗೇ ಏಳನೆಯ ಸೇರು ಹಾಕುವಾಗ 'ಮತ್ತೊಂದು' ಅನ್ನುತ್ತಾರೆ. ಇದು ಏಳನೆಯ ಅಂಕೆಯ ಬಗ್ಗೆ ಅವರಿಗಿರುವ ದೃಷ್ಟಿಯನ್ನು ತೋರಿಸುತ್ತದೆ. ಬೆಳೆಗೆ ಮುಡುಪು ಕಟ್ಟುವುದು, ಬೆಳೆ ಹೆಚ್ಚಾಗಿ ಚೆನ್ನಾಗಿ ಬಂದರೆ ಹರಕೆ ಕಟ್ಟಿಕೊಂಡ ದೇವರಿಗೆ 'ಕಂದೂರಿ' ಮಾಡುವುದು (ಅಂದರೆ ಕೋಳಿನೋ, ಕುರಿನೋ ಕೊಯ್ಸಿ ಅಡಿಗೆ ಮಾಡಿ ಹಲವರಿಗೆ ಊಟ ಕೊಡುವುದು) ಪಿಂಜಾರರ ಆಚರಣೆಯಲ್ಲಿ ಕಂಡುಬರುತ್ತದೆ.

## ೬.೪ ಅವಲಂಬಿತ ವೃತ್ತಿ

ಪಿಂಜಾರರು ತಮ್ಮ ಸಾಂಪ್ರದಾಯಿಕ ಕಸುಬಿನಿಂದ ವಿಮುಖರಾಗುತ್ತಿರುವುದು ನಿಧಾನವಾಗಿಯಾದರೂ ಕಂಡುಬರುತ್ತಿದೆ. ಅದೇ ಕಸುಬನ್ನು ಆಧುನಿಕ ವಿದ್ಯಮಾನಗಳ ಜೊತೆಗೆ ಏಗುತ್ತಾ ಸ್ಪರ್ಧಾತ್ಮಕ ವ್ಯಾವಹಾರಿಕ

ಜಗತ್ತಿನೊಂದಿಗೆ ಸೆಣಸಾಡುವವರೂ ಇಲ್ಲವೆಂದಲ್ಲ. ಇಂಥವರು ಬ್ಯಾಂಕುಗಳು, ಅಲ್ಪಸಂಖ್ಯಾತರ ನಿಗಮ ಮತ್ತಿತರ ಕಡೆಯಿಂದ ಸಾಲ-ಸೋಲ ಮಾಡಿ ನಗರಗಳಲ್ಲಿ ಬೆಡ್ಡಿಂಗ್ ಶೋರೂಂಗಳನ್ನು ತೆರೆದಿದ್ದಾರೆ. ಇವರಲ್ಲಿ ಕೇವಲ ಹತ್ತಿಯಿಂದ ಮಾಡಿದ ಹಾಸಿಗೆಗಳಲ್ಲದೆ ಕರ್ಲಾನ್, ಬೆಡ್‌ಸೀ, ಮೊದಲಾದ ಕಂಪನಿಯ ಆಕರ್ಷಕ ಹಾಸಿಗೆಗಳೂ ದೊರಕುತ್ತವೆ. ನಗರಗಳಲ್ಲಿ ಇತ್ತೀಚೆಗೆ ಹೆಚ್ಚಾಗುತ್ತಿರುವ ಒಳಾವರಣದ ಅಲಂಕಾರಿಕ ವಸ್ತುಗಳಾದ ಕುಷನ್‌ಗಳು, ದಿವಾನ್‌ಸೆಟ್, ಟೇಬಲ್‌ಕ್ಲಾತ್, ಟಿವಿ ಕವರ್, ಪುಟ್‌ಮ್ಯಾಟ್ರೆಸ್, ಸೊಳ್ಳೆ ಪರದೆಗಳು, ಮುಂತಾದ ಅತ್ಯಾಧುನಿಕ ವಸ್ತುಗಳನ್ನು ಇಲ್ಲಿ ಮಾರಾಟ ಮಾಡುಲಾಗುತ್ತದೆ. ಇಲ್ಲಿ ಹತ್ತಿಯ ವಿವಿಧ ಗುಣಮಟ್ಟದ ಹಾಸಿಗೆಗಳಿಗೂ ಆರ್ಡರ್ ತೆಗೆದುಕೊಳ್ಳಲಾಗುತ್ತದೆ. ನಗರಗಳಲ್ಲಿ ಈ ತರಹದ ಮಳಿಗೆಗಳನ್ನು ತೆರೆದುಕೊಂಡಿರುವ ಪಿಂಜಾರರ ಸಮಸ್ಯೆ ಎಂದರೆ ಮುಖ್ಯವಾಗಿ ಕಾಡುತ್ತಿರುವ ಸಾಮಾಜಿಕ ಅಭದ್ರತೆ. ಬಹುಸಂಖ್ಯಾತರಾದರೆ ಅವರವರ ಧರ್ಮದ, ದೇವರ, ಅಥವಾ ತಮಗೆ ಪ್ರಿಯರಾದ ತಂದೆ-ತಾಯಿ, ಮಕ್ಕಳ ಹೆಸರುಗಳನ್ನು ಅಂಗಡಿಗಳಿಗೆ ಇಟ್ಟುಕೊಳ್ಳಲಾಗುತ್ತದೆ. ಆದರೆ ಮುಸ್ಲಿಮರಿಗೆ ಇರುವ, ಅದೂ ನಗರಗಳಲ್ಲಿ ಹೆಚ್ಚಾಗಿರುವ ಹಿಂದೂ-ಮುಸ್ಲಿಂ ಗಲಭೆಗಳ ಭೀತಿಯ ಹಿನ್ನೆಲೆಯಲ್ಲಿ ಉಂಟಾಗುವ ಆಸ್ತಿ ಹಾಗೂ ಜೀವಹಾನಿಯ ಆತಂಕದಿಂದಾಗಿ ಅವರು ತಮ್ಮ ಮಳಿಗೆಗಳಿಗೆ ಬೇರೆಯದೇ ಆದ ಹೆಸರುಗಳನ್ನಿಟ್ಟುಕೊಳ್ಳುತ್ತಾರೆ. ಇದು ತಮ್ಮ ಜೀವ ಹಾಗೂ ಆಸ್ತಿಯನ್ನು ರಕ್ಷಿಸಿಕೊಳ್ಳುವ ಸಲುವಾಗಿ ಅವರು ಹುಡುಕಿಕೊಂಡಿರುವ ತಂತ್ರವೆಂದೇನೂ ಭಾವಿಸಬೇಕಿಲ್ಲ. ಅಂತಹ ಅರಕ್ಷಕ ಭಾವನೆ ಅವರಿಗೆ ಕಾಡುವುದು ನಿಜವೂ ಹೌದು. ಆದರೆ ಅದರ ಜೊತೆಗೆ ತಾವು ಬದುಕಿದ ನೆಲದ ಮೇಲಿನ ಪ್ರೀತಿ, ನಿಷ್ಠೆಯನ್ನು ಪ್ರದರ್ಶಿಸುವಂತಹ ಜರೂರು ಅಲ್ಲಿನ ಅಲ್ಪಸಂಖ್ಯಾತರಿಗೆ ಉಂಟಾಗಿರುವುದನ್ನು ಅವರು ಎದುರಿಸುವ ಸಾಮಾಜಿಕ ಅಭದ್ರತೆಯ ಹಿನ್ನೆಲೆಯಲ್ಲಿ ನೋಡಬೇಕು. ಅಂದರೆ ಬಹುಸಂಖ್ಯಾತರನ್ನು ಮೆಚ್ಚಿಸಲು, ವ್ಯಾಪಾರದ ದೃಷ್ಟಿಯಿಂದ ಕೂಡ ಇಂಥ ಹೆಸರುಗಳನ್ನು ಇಟ್ಟುಕೊಳ್ಳಬಹುದೇನೋ! ಆದರೆ ಗಮನಿಸಬೇಕಾದುದು, ಭಾರತ್ ಬೆಡ್ಡಿಂಗ್ಸ್, ಕರ್ನಾಟಕ ಬೆಡ್ಡಿಂಗ್ಸ್, ಹಿಂದೂಸ್ತಾನ್ ಷೋರೂಂ ಮೊದಲಾದ ಹೆಸರುಗಳನ್ನು ಇಡಬೇಕಾದ ಹಿಂದಿನ ಮನೋಸ್ಥಿತಿಯನ್ನು ! ಎಲ್ಲೋ ಒಂದು ಕಡೆ ಇಲ್ಲಿನ ಬಹುಸಂಖ್ಯಾತರಲ್ಲಿ ಮುಸಲ್ಮಾನರು ಈ ದೇಶವನ್ನು ಪ್ರೀತಿಸುವುದಿಲ್ಲ, ಅವರಿಗೆ ದೇಶಾಭಿಮಾನವಿಲ್ಲ, ಅವರು ಪಾಕಿಸ್ತಾನದ ಪರವಾಗಿರುತ್ತಾರೆ, ಎಂದು ಮೊದಲಾದ ಭಾವನೆಗಳಿರುತ್ತವೆ. ಮತ್ತು ಅವು ಕೋಮುಗಲಭೆಯಲ್ಲಿ ಕ್ರಿಯಾರೂಪಕ್ಕಿಳಿದು ಮುಸ್ಲಿಮರ ಜೀವ ಮತ್ತು ಆಸ್ತಿ ನಾಶದಂತಹ ಕೃತ್ಯಕ್ಕೆ ಕಾರಣವಾಗುತ್ತವೆ. ಹೀಗೆ ಮಾಡುವವರು ಎರಡೂ ಧರ್ಮದಲ್ಲಿರುತ್ತಾರಾದರೂ ಬಹುಸಂಖ್ಯಾತರಿಂದ ಪ್ರಭಾವಿತವಾದ, ಸಂಘಟಿತವಾದ ಹಿಂಸಾಚಾರಕ್ಕೆ ಅಮಾಯಕರು ಬಲಿಯಾಗುತ್ತಿರುತ್ತಾರೆ. ಆದ್ದರಿಂದ ದೇಶಪ್ರೇಮವನ್ನು ಬಹಿರಂಗವಾಗಿ ಹಾಜರುಪಡಿಸಿಕೊಳ್ಳಬೇಕಾದಂತಹ ಒಳತುಡಿತ ಅಲ್ಪಸಂಖ್ಯಾತರಿಗೆ ಯಾವಾಗಲೂ ಕಾಡುವಂತಹ ವಿಷಯವಾಗಿದೆ.

ನಗರಗಳಲ್ಲಿ ಅಲ್ಲಲ್ಲಿ ವಿರಳವಾಗಿ ಈ ತೆರನ ಬೆಡ್ಡಿಂಗ್ಸ್ ಮಳಿಗೆಗಳನ್ನು ತೆರೆಯುವವರು ಕೆಲವರಿದ್ದರೆ ಹಳ್ಳಿಗಳಲ್ಲಿ ಸಾಂಪ್ರದಾಯಿಕ ವೃತ್ತಿ ಮುಂದುವರಿಸಿಕೊಂಡು ಹೋಗಲಾಗದ ಕೆಲವರು ನಗರಗಳಿಗೆ ವಲಸೆ ಹೋಗಿ ಜೀವನೋಪಾಯಕ್ಕೆ ನಾನಾ ನಮೂನಿ ಕೆಲಸಗಳನ್ನು ಮಾಡುತ್ತಿದ್ದಾರೆ. ಹಳ್ಳಿಗಳಲ್ಲಿರುವವರು

ಸಾಂಪ್ರದಾಯಿಕ ಬದುಕಿಗೆ ಪೂರ್ತಿ ಶರಣು ಹೊಡೆದು ಕೃಷಿಗೆ ಸಂಬಂಧಿಸಿದ ಕೆಲಸ ಕಾರ್ಯಗಳಲ್ಲಿ ನಿರತರಾಗಿದ್ದಾರೆ. ಪಿಂಜಾರರು ಹೀಗೆ ಅವಲಂಬಿಸಿರುವ ಇತರೆ ವೃತ್ತಿಗಳನ್ನು ಕುರಿತು ಚಿಂತಿಸಬಹುದಾಗಿದೆ.

ಹಾಸಿಗೆ ರಚನೆಯ ಪ್ರಧಾನ ವೃತ್ತಿಯನ್ನು ಬಿಟ್ಟರೆ ಪಿಂಜಾರರ ನಂತರದ ಮುಖ್ಯ ಕೆಲಸ ರೈತಾಪಿ ಬದುಕಿಗೆ ಸಂಬಂಧಿಸಿದ್ದು. ಬಯಲು ಸೀಮೆಯ ವ್ಯವಸಾಯದಲ್ಲಿ ಹೆಚ್ಚಾಗಿ ತೊಡಗಿರುವ ಪಿಂಜಾರರು ಅಲ್ಲಲ್ಲಿ ನೀರಾವರಿಗೂ ಸಂಬಂಧಿಸಿದ ಕೆಲಸಗಳನ್ನು ಮಾಡುತ್ತಾರೆ. ಬಹುಸಂಖ್ಯಾತ ಪಿಂಜಾರರಿಗೆ ಸ್ವಂತ ಜಮೀನಿಲ್ಲ. ಇಂತಹವರೆಲ್ಲ ಜಮೀನ್ದಾರರ ಹೊಲಗದ್ದೆಗಳಿಗೆ ಕೂಲಿ ಹೋಗುತ್ತಾರೆ. ರಾಗಿ, ಶೇಂಗ, ಜೋಳ ಮುಂತಾದುವನ್ನು ಬಿತ್ತುವುದು, ಹತ್ತಿ, ಸೂರ್ಯಪಾನ, ಇತ್ಯಾದಿ ಬೀಜಗಳನ್ನು ಊರುವುದು, ಮೆಣಸಿನಗಿಡ ಹಚ್ಚುವುದು, ಉಳ್ಳಾಗಡ್ಡೆ ಕೀಳಲು ಹೋಗುವುದು ಮುಂತಾದ ಕೆಲಸಗಳಿಗೆ ಸಾಮಾನ್ಯವಾಗಿ ಹೆಣ್ಣುಮಕ್ಕಳು ಹೆಚ್ಚಾಗಿ ಹೋಗುತ್ತಾರೆ. ರಂಟೆ, ಕೂರಿಗೆ, ಕುಂಟೆ, ಎಡೆಕುಂಟೆ ಮುಂತಾದ ಬೇಸಾಯದ ಕೆಲಸಕ್ಕೆ ಗಂಡಸರಿರುತ್ತಾರೆ. ಎತ್ತು ಮತ್ತು ಬೇಸಾಯದ ಮುಟ್ಟುಗಳನ್ನೆಲ್ಲ ಹೊಲದ ಯಜಮಾನರೇ ಒದಗಿಸಿರುತ್ತಾರೆ. ಬೇಸಾಯ ಹೂಡಿಕೊಂಡು ಹೊಲ ಉಳುವುದು, ಆರಗುವುದು ಮುಂತಾದ ಕೆಲಸಕ್ಕೆ ಆಳಿನ ರೂಪದಲ್ಲಿ ಪಿಂಜಾರ ಗಂಡಸರು ಹೋಗುತ್ತಾರೆ. ಹತ್ತಾರು ಎಕರೆ ಭೂಮಿಯ ಮಾಲೀಕರು, ಮೇಲುವರ್ಗದವರು, ಪಿಂಜಾರರ ಧಣಿಗಳು. ಉತ್ತರ ಕರ್ನಾಟಕದ ನೂರಾರು ಹಳ್ಳಿಗಳಲ್ಲಿ ಪಿಂಜಾರರು ಹುಡುಗರು, ದೊಡ್ಡ ಗಂಡಸರಾದಿಯಾಗಿ ಜೀತದಾಳುಗಳಾಗಿ ದುಡಿಯುತ್ತಿದ್ದಾರೆ. ವರ್ಷಕ್ಕಿಷ್ಟು ಹಣ ಎಂದು ಮಾತನಾಡಿ ಅದನ್ನು ಮುಂಗಡ ಪಡೆದ ತಂದೆ-ತಾಯಿಗಳು ಹುಡುಗರನ್ನು ದನ ಕಾಯಲು ಜೀತಕ್ಕಿಡುತ್ತಾರೆ. ಇನ್ನೊಬ್ಬರ ಮನೆ ತಂಗಳು ರೊಟ್ಟಿ ಉಂಡೇ ಬೆಳೆಯುವ ಹುಡುಗರು ದೊಡ್ಡವರಾದಂತೆ ಬೇಸಾಯದ ಕೆಲಸಗಳಿಗೆ ಬಡ್ತಿ ಹೊಂದುತ್ತಾರೆ. ದಣಿ ಸ್ವಲ್ಪ ಧಾರಾಳವಂತನಾದರೆ ಈ ಸಂಬಂಳದಾಳಿಗೆ ಹುಡುಗಿಯನ್ನು ಹುಡುಕಿ ಮದುವೆ ಮಾಡಿ ನೆರಕೆ ಮನೆ ಕಟ್ಟಿಕೊಳ್ಳಲು ಸಹಾಯಮಾಡಿ ಖಾಯಂ ಆಗಿ ತನ್ನ ಹೊಲ ಮನೆಯ ಕೆಲಸಗಳನ್ನು ಆತನಿಗೆ ವಹಿಸಿರುತ್ತಾನೆ. ಯಜಮಾನ ಕೊಡುವ ಕೂಳು ಮತ್ತು ವರ್ಷಕ್ಕೊಂದು ಸಲ ಕೊಡಿಸುವ ಟವೆಲ್ಲು, ಪಂಚೆಯಲ್ಲಿ ಈತನ ಜೀವನದ ಕನಸುಗಳೆಲ್ಲ ಕರಗಿ ಹೋಗುತ್ತವೆ. ಒಡೆಯನ ಮನೆಯಲ್ಲಿ ಸಗಣಿ ಹೊಡೆಯುವುದು, ನೀರು ತರುವುದರಿಂದ ಹಿಡಿದು ದನಕರು, ಹೊಲಮನೆಗಳ ಜವಾಬ್ದಾರಿಯೆಲ್ಲ ಈತನ ಮೇಲಿರುತ್ತದೆ. ಕಳೆ ತೆಗೆಯಲು ಜನ ಹೊರಡಿಸುತ್ತಾನೆ, ಅವರೊಂದಿಗೆ ತಾನೂ ಕಳೆ ಕೀಳುತ್ತಾನೆ, ಹೊಲದಿಂದ ಬರುತ್ತಿದ್ದ ಹಾಗೆ ಕೊಟ್ಟಿದ್ದನ್ನುಂಡು ಮಲಗುತ್ತಾನೆ. ವಿಚಿತ್ರವೆಂದರೆ ಪಿಂಜಾರ ಜೀತದಾಳಿನಿಂದ ಎಲ್ಲ ಕೆಲಸಗಳನ್ನು ಮಾಡಿಸಿಕೊಳ್ಳುವ ಹಿಂದೂ ಶೂದ್ರ ಜನಾಂಗದವರು ಈತನನ್ನು ಅಸ್ಪೃಶ್ಯ ಜೀತದಾಳಿನಂತೆಯೇ ನೋಡಿಕೊಳ್ಳುವುದು ಗಿರಣಿಯಲ್ಲಿ ಜೋಳ ಬೀಸಿಕೊಂಡು ಬರುತ್ತಾನೆ. ಬಾವಿಯಿಂದ ನೀರು ತರುತ್ತಾನೆ. ಆದರೆ ಬಾಗಿಲಲ್ಲೇ ಹೆಂಗಸರು ನಿಂತಿದ್ದು ಅವನ ಕೈಯಿಂದ ಕೊಡಪಾನವನ್ನು ಇಸಿದುಕೊಂಡು ಹೋಗಿ ಹಂಡೆಯಲ್ಲಿ ನೀರನ್ನು ಸುರಿದುಕೊಂಡು ಮತ್ತೆ ನೀರು ತರಲು ಆತನಿಗೆ ಬಿಂದಿಗೆ ಕೊಡುತ್ತಾರೆ. ಈತನಿಗೇ ಮೀಸಲಾದ ಚಂಬು, ಗಂಗಾಳ, ಹಾಸಿಗೆಗಳಿರುತ್ತವೆ. ಇವತ್ತಿಗೂ ಹಳ್ಳಿಯ ಪಿಂಜಾರ ಮೇಲುಜಾತಿಯುವರ ಮನೆಯಲ್ಲಿ ನೀರು ಕುಡಿಯಬೇಕಾಗಿ ಬಂದರೆ ಎರಡೂ ಕೈಯಿಂದ ಬೊಗಸೆ ಮಾಡಿ ಬಾಯಿಗಾನಿಸಿಕೊಂಡು ಬಗ್ಗಿ ನಿಂತು

ಮೇಲಿನಿಂದ ಎತ್ತಿ ಸುರಿಯುವ ನೀರನ್ನು ಕುಡಿಯುತ್ತಾನೆ. ಇದು ಪ್ರದೇಶದಿಂದ ಪ್ರದೇಶಕ್ಕೆ ವ್ಯತ್ಯಾಸವಾಗಬಲ್ಲುದು - ಅಷ್ಟೆ.

ಕೂಲಿ ಆಳುಗಳಾಗಿ ಕೆಲಸಕ್ಕೆ ಹೋಗುವ ಪಿಂಜಾರರ ಗಂಡು-ಹೆಣ್ಣು ಮಕ್ಕಳೆಲ್ಲ ಸಾಮಾನ್ಯವಾಗಿ ಬೆಳಿಗ್ಗೆ ಉಂಡು ಹೋದರೆ ಬರುವುದು ಸಾಯಂಕಾಲವೇ. ಕೆಲವರು ಮಧ್ಯಾಹ್ನದ ಊಟ ಕೊಡುತ್ತಾರೆ. ಮತ್ತೆ ಕೆಲವರು ಕೊಡುವುದಿಲ್ಲ. ಸಾಮಾನ್ಯವಾಗಿ ಆಯಾ ದಿನದ ಕೂಲಿಯನ್ನು ಆಯಾ ದಿನವೇ ಪಡೆಯುತ್ತಾರೆ. ಮತ್ತೆ ಕೆಲವರು ಹಬ್ಬ ಹರಿದಿನಗಳಿಗೆ ಬೇಕಾಗುತ್ತದೆಂದು ಒಟ್ಟಿಗೇ ಪಡೆಯುತ್ತಾರೆ. ಅಪರೂಪಕ್ಕೆಂಬಂತೆ ಕೆಲಕಡೆ ಬೇಸಾಯ ಹೊಡೆಯುವ ಪಿಂಜಾರ ಹೆಣ್ಣುಮಕ್ಕಳಿದ್ದಾರೆ. ಎತ್ತುಗಳ ಹೆಗಲಿಗೆ ನೊಗ ಇಟ್ಟು ಪಟಗಣ್ಣೆ ಬಿಗಿದು ನೊಗದ ಮೇಲೆ ರಂಟೆ, ನೊಗಸುತ್ತು, ಮಿಣಿ ಇಟ್ಟುಕೊಂಡು ಹೊರಟು ಹೊಲದಲ್ಲಿ ಸೊಗಸಾಗಿ ಹೂಡಿಕೊಂಡು ಉಕ್ಕೆ ಹೊಡೆಯುತ್ತಾರೆ. ಎಲ್ಲದಕ್ಕೂ ಗಂಡಸರನ್ನೇ ಕಾಯುತ್ತಾ ಕುಳಿತರೆ ಕೆಲಸ ಕೇಡು ಎಂದೇ ಈ ಹೆಣ್ಣು ಮಕ್ಕಳು ಎಲ್ಲ ಬಗೆಯ ರೈತಾಪಿ ಕೆಲಸಗಳಲ್ಲಿ ತೊಡಗಿಸಿಕೊಂಡಿದ್ದಾರೆ.

ಅಪರೂಪಕ್ಕೆ ಮಳೆ ಕಾಣುವ ಬಯಲುಸೀಮೆಯ ಜನಬೆದ್ದಲು ಜಮೀನುಗಳಲ್ಲಿ ಬೆಳೆಯಲಾಗುವ ಹತ್ತಿಯ ಬೆಳೆಯನ್ನೇ ಹೆಚ್ಚಾಗಿ ಅವಲಂಬಿಸಿದ್ದಾರೆ. ಮತ್ತು ಮೆಣಿಸಕಾಯಿಯ ಬೆಳೆ ಕೂಡ ಇಲ್ಲಿನ ಪ್ರಧಾನ ಪೈರು. ಪಂಪುಸೆಟ್ಟಿನ ಮೂಲಕ ಶೇಂಗ, ರಾಗಿ, ಜೋಳ ಬೆಳೆಯುವ ಈ ಜನ ನೀರಾವರಿಯಿರುವ ಶಿವಮೊಗ್ಗ, ಮಂಡ್ಯದಂತಹ ಜಿಲ್ಲೆಗಳ ಬಗ್ಗೆ ಪವಾಡದಂತಹ ಕತೆಗಳನ್ನೇ ಕಟ್ಟಿಕೊಂಡಿದ್ದಾರೆ. ಪಿಂಜಾರರನೇಕರು ನೀರಾವರಿಯ ಆಸೆಯಿಂದ ಇಂತಹ ಕಡೆ ಬಂದು ನೆಲೆಸಿದ್ದಾರೆ. ಮೊದಮೊದಲು ಕೂಲಿ ಮಾಡುತ್ತಿದ್ದ ಪಿಂಜಾರರು ಆಯಾ ಊರಿನ ಇತರ ಕೂಲಿಗಾರರ ಜೊತೆ ಸೇರಿ ಈಗ ಗುತ್ತಿಗೆ ಮಾಡುತ್ತಾರೆ. ನಾಟಿ ಹಚ್ಚುವ, ಕಬ್ಬು ಕಡಿಯುವ, ಭತ್ತ ಒಕ್ಕಲು ಮಾಡಿಕೊಡುವ ಮುಂತಾದ ಕೆಲಸಗಳಿಗಾಗಿ ಈ ಗುಂಪು ಹೊಲದ ಮಾಲೀಕನೊಂದಿಗೆ ನೇರವಾಗಿ ವ್ಯವಹರಿಸುವುದಿಲ್ಲ. ಗುಂಪಿನ ನಾಯಕ ಅಥವಾ ನಾಯಕಿ ಎಕರೆಗೆ ಇಂತಿಷ್ಟು ಎಂದು ಮಾತನಾಡುತ್ತಾರೆ. ಸಸಿಕಿತ್ತು, ಅಡಕಿ, ನಾಟಿ ಹಚ್ಚಿದ ನಂತರ ಈ ನಾಯಕ ಅಥವಾ ನಾಯಕಿ ಎಲ್ಲರಿಗೂ ಸಮನಾಗಿ ಹಣವನ್ನು ಹಂಚುತ್ತಾರೆ. ಹೀಗೆ ಗುತ್ತಿಗೆ ಮೂಲಕ ಕೆಲಸ ಮಾಡುವುದು, ಮಾಡಿಸುವುದು ಯಜಮಾನರಿಗೂ, ಕೆಲಸಗಾರರಿಗೂ ಲಾಭದಾಯಕವಾದದ್ದು. ಭತ್ತದ ಒಕ್ಕಲು ಮಾಡುವುದಾದರೂ ಅಷ್ಟೆ. ಭತ್ತ ಕೊಯ್ದು ಕಣ ಮಾಡಿ ಅಲ್ಲಿಗೆ ಭತ್ತದ ಹುಲ್ಲನ್ನು ಹಾಕಿ ತುಳಿಸಿ ಕಾಳು ಬೇರೆ, ಹುಲ್ಲು ಬೇರೆ ಮಾಡಿಕೊಡುತ್ತಾರೆ. ಹತ್ತಾರೆಕರೆ ಗದ್ದೆಯ ಸಾಹುಕಾರರು ಗುತ್ತಿಗೆದಾರರನ್ನು ಅನಿವಾರ್ಯವಾಗಿ ಅವಲಂಬಿಸಿರುತ್ತಾರೆ. ಈ ನೀರಾವರಿಯ ಪ್ರದೇಶದಲ್ಲಿ ಬಂದು ವಾಸವಾಗಿರುವ ಕೂಲಿ-ನಾಲಿ ಮಾಡುವ ಪಿಂಜಾರರೇ ನಗರದ ಗಿರಣಿಯಲ್ಲಿ ಕೆಲಸ ಮಾಡುವ ಪಿಂಜಾರರಿಗಿಂತ ಆರ್ಥಿಕ ಸ್ಥಿತಿಯಲ್ಲಿ ಉತ್ತಮವಾಗಿದ್ದಾರೆ.

ಒಂದೆರಡೆಕರೆ ಜಮೀನು ಮಾಡಿಕೊಂಡಿರುವ ಪಿಂಜಾರರೂ ಇದ್ದಾರೆ. ಇವರೆಲ್ಲ ಜೊತೆ ಎತ್ತು, ಅಗತ್ಯವಿರುವ ನೇಗಿಲು, ಕುಂಟೆ, ಕೂರಿಗೆ ಮುಂತಾದ ಮುಟ್ಟುಗಳನ್ನು ಸಾಮಾನ್ಯವಾಗಿ ಹೊಂದಿರುತ್ತಾರೆ. ತಮ್ಮ ಕೆಲಸ ಮುಗಿದ ನಂತರ ಕೂಲಿ ಬೇಸಾಯಕ್ಕೂ ಹೋಗುತ್ತಾರೆ. ಕಡಿಮೆ ಕೆಲಸವಿರುವುದರಿಂದ

ಸಂಬಂಧಿಗಳನ್ನೋ, ಮುಯ್ಯಾಳುಗಳನ್ನೋ ಕರೆದುಕೊಂಡು ನಾಟಿ ಒಕ್ಕಲು ಇತ್ಯಾದಿಯನ್ನು ಮುಗಿಸಿಕೊಳ್ಳುತ್ತಾರೆ. ಸಾಮಾನ್ಯವಾಗಿ ಜುಲೈ-ಆಗಸ್ಟ್‌ನಲ್ಲಿ ಬಿತ್ತನೆ ಕಾರ್ಯ ನಡೆಯುತ್ತದೆ. ಮಳೆಗಾಲ ಮುಗಿಯುವುದರೊಳಗಾಗಿ ಬರುವಂತಹ ಬೆಳೆಗಳನ್ನು ಹಾಕುತ್ತಾರೆ. ಅಲ್ಲಲ್ಲಿ ತರಕಾರಿ ಬೆಳೆದು ಮಾರಾಟ ಮಾಡುವವರೂ ಇದ್ದಾರೆ. ನೀರಾವರಿ ಪ್ರದೇಶದವರು ವರ್ಷಕ್ಕೆ ಎರಡು ಬೆಳೆ ಪಡೆಯುತ್ತಾರೆ. ಭತ್ತ ಈ ಜನರ ಪ್ರಮುಖ ಬೆಳೆ. ಬೀಜಕ್ಕಾಗಿ ತೆಗೆದಿರಿಸಿದ ಭತ್ತವನ್ನು ಚೀಲದಲ್ಲಿ ತುಂಬಿ ಬಾಯಿ ಹೊಲಿದು ಹಳ್ಳ ಅಥವಾ ನೀರು ಹರಿಯುವ ಕಾಲುವೆಯಲ್ಲಿಟ್ಟು ಕಲ್ಲನ್ನು ಹೇರುತ್ತಾರೆ. ಒಂದು ರಾತ್ರಿ, ಹಗಲು ಚೆನ್ನಾಗಿ ನೆನೆದ ನಂತರ ಚೀಲಗಳನ್ನು ಹೊರತೆಗೆದು ಮನೆಯ ಮೂಲೆಯಲ್ಲಿ ಭತ್ತದ ಹುಲ್ಲಿನಿಂದ ಮುಚ್ಚುತ್ತಾರೆ. ಆ ಕಾವಿಗೆ ಭತ್ತ ಒಂದೆರಡು ದಿನದಲ್ಲಿ ಚೆನ್ನಾಗಿ ಮೊಳಕೆಯೊಡೆಯುತ್ತದೆ. ಹೊಲದ ಒಂದು ಕಟ್ಟೆಯನ್ನು ಚೆನ್ನಾಗಿ ರೊಳ್ಳೆ ಹೊಡೆದು, ಕಸಕಡ್ಡಿ ಇಲ್ಲದಂತೆ ಸಮ ಮಾಡಿ ಆ ಬೀಜಗಳನ್ನು ಚೆಲ್ಲುತ್ತಾರೆ. ಸಸಿ ಹಸುರಾಗಿ ಚಿಗುರುವವರೆಗೆ ಕಟ್ಟೆಯಲ್ಲಿ ಹಸಿಯಿರುವಂತೆ ನೋಡಿಕೊಳ್ಳಲಾಗುತ್ತದೆ. ಚಿಗುರಿದ ನಂತರ ಸರ್ಕಾರಿ ಗೊಬ್ಬರ ಹಾಕುತ್ತಾರೆ. ಸಾಮಾನ್ಯವಾಗಿ ೨೦ ರಿಂದ ೩೦ ದಿನದ ನಂತರ ಸಸಿ ನಾಟಿ ಮಾಡಲು ಬರುತ್ತವೆ. ನಾಟಿ ಹಚ್ಚಿದ ನಂತರ ಭತ್ತ ಕೊಯ್ಲಿಗೆ ಬರುವವರೆಗೂ ೨ ರಿಂದ ೩ ಸಲ ಗೊಬ್ಬರ ಹಾಕುತ್ತಾರೆ.

ದನಕರುಗಳನ್ನು ಸಾಕಿಕೊಂಡಿರುವ ಪಿಂಜಾರರು ಅವರಿವರನ್ನು ಕಾಡಿಬೇಡಿ ರಾಗಿಹುಲ್ಲು, ಸೊಪ್ಪು, ಭತ್ತದ ಹುಲ್ಲು ಮುಂತಾದ ಮೇವನ್ನು ಸಂಪಾದಿಸಿ ಪುಟ್ಟ ಬಣವೆಯ ರೂಪದಲ್ಲಿಟ್ಟಿರುತ್ತಾರೆ. ಸ್ವಂತ ಜಮೀನಿರುವವರಿಗೆ ಈ ತೊಂದರೆಯಿರುವುದಿಲ್ಲ. ಮಳೆಗಾಲಕ್ಕೆಂದು ಹುಲ್ಲನ್ನು ಜೋಪಾನವಾಗಿ ಕಾಪಾಡಿಕೊಂಡಿರುತ್ತಾರೆ. ಬಣವೆಯ ಸುತ್ತ ಮುಳ್ಳಿನ ಬೇಲಿ ಹಾಕಿರುತ್ತಾರೆ. ಒಟ್ಟಾರೆ ಪಿಂಜಾರರು ರೈತಾಪಿಗೆ ಸಂಬಂಧಿಸಿದ ಪ್ರತಿಯೊಂದು ಕೆಲಸದಲ್ಲೂ ತೊಡಗಿದ್ದಾರೆ ಎಂದು ಸರಳವಾಗಿ ಹೇಳಬಹುದು. ಈ ಭಾಗದಲ್ಲಿ ಬಹುಸಂಖ್ಯಾತ ಪಿಂಜಾರರು ರೈತರೇ ಆಗಿರುವುದರಿಂದ ಇವರಿಗೆಲ್ಲ ಎತ್ತು ಎಂದರೆ 'ಬಸವಣ್ಣ' ಎಂದು ಅತ್ಯಂತ ಗೌರವ, ಆರಾಧನಾ ಭಾವನೆಯಿದೆ.

ರೈತಾಪಿ ಬದುಕಿಗೆ ಸಂಬಂಧಿಸಿದ ಕಮ್ಮಾರಿಕೆ, ಬಡಗಿತನಗಳಲ್ಲಿ ಪಿಂಜಾರರು ತೊಡಗಿಸಿಕೊಂಡಿದ್ದಾರೆ. ರೈತರಿಗೆ ಅಗತ್ಯವಾದ ಕುಡ, ತಾಳುಗಳನ್ನು ಹಣಿದುಕೊಡುವುದು, ಹಾರೆ, ಗುದ್ದಲಿ ತಯಾರಿಸುವುದು, ಕುಡಗೋಲಿಗೆ ಹಲ್ಲು ಹಾಕುವುದು, ನೇಗಿಲಬಾಳು ಕೆತ್ತುವುದು, ಕುಂಟೆದಿಂಡು, ಮೇಣಿ, ನೊಗ, ಬಂಡಿಯಗಾಲಿಗೆ ಹಳಿ ಹಾಕುವುದು ತಯಾರಿಸುವುದು - ಹೀಗೆ ಪ್ರತಿಯೊಂದನ್ನು ಮಾಡುತ್ತಾರೆ. ಒಬ್ಬನೇ ಪಿಂಜಾರ ರೈತ ಈ ಎಲ್ಲ ಕೆಲಸಗಳನ್ನು ಮಾಡುವ ನಿದರ್ಶನಗಳಿವೆ. ಹೊಳೆ, ನದಿ ದಡಗಳಲ್ಲಿರುವ ಊರಿನ ಪಿಂಜಾರರು ಬಲೆ ಹೆಣೆದುಕೊಂಡು ಮೀನು ಹಿಡಿಯುತ್ತಾರೆ. ರಾಗಿ, ಜೋಳದ ಒಕ್ಕಲು ಮಾಡುವಾಗ ಕಾಳು ತೆನೆ ಬೇರೆ ಮಾಡಲು ಮೆರಿಗೋಲನ್ನು ಬಳಸುತ್ತಾರೆ. ಕಾಳು ಉದುರಿದ ತೆನೆಯನ್ನು, ಕಂಕಿಯನ್ನು ಹಲುಬೆಯಿಂದ ಎಳೆದು ಒಂದುಕಡೆ ದುಂಡಗೆ ಮಾಡುತ್ತಾರೆ. ಕಾಳನ್ನು ಗ್ವಾರೆಯಿಂದ ಎಳೆದು ದುಂಡಗೆ ರಾಶಿ ಮಾಡಿ ಮೊರಗಳಲ್ಲಿ ತುಂಬಿಕೊಂಡು ತೂರುತ್ತಾರೆ. ನಂತರ ಚೀಲಗಳಿಗೆ ತುಂಬುತ್ತಾರೆ. ಬಂಡಿಯ ಎರಡೂ ಅಡಿಗೆಗಳಲ್ಲಿ ಕಣಗೆಗಳನ್ನಿಟ್ಟು ಈಚಲ ಕಡ್ಡಿಯಲ್ಲಿ ಹೆಣೆದ ತಡಕೆಯನ್ನು ಬಿಗಿದು ದನದ

ಗೊಬ್ಬರವನ್ನು ಹೊಲಗಳಿಗೆ ಹೊಡೆಯುತ್ತಾರೆ. ಚಲ್ಕೆ, ಸಗಣಿಪುಟ್ಟಿ ಈ ಸಂದರ್ಭದಲ್ಲಿ ಬಳಕೆಯಾಗುತ್ತದೆ. ಸಗಣಿ ಪುಟ್ಟಿ, ಅಕರಾಗಿ ಪುಟ್ಟಿಗಳನ್ನು ಈಚಲ ಕಡ್ಡಿಯಿಂದ ಹೆಣೆದಿರುತ್ತಾರೆ. ಪಿಂಜಾರರು ಕೊಟ್ಟಿಗೆ ಗುಡಿಸಲು ತೊಗರಿ ಕಡ್ಡಿಯ ಬರಲನ್ನು ಉಪಯೋಗಿಸುತ್ತಾರೆ. ಹೊಲಗಳಲ್ಲಿ ಬೇಲಿಗಳಲ್ಲಿ ಬೆಳೆದ ರಗಸಪಟ್ಟಿಯನ್ನು ಕೊಯ್ದು ಕೆಸರಿನಲ್ಲಿ ತಿಂಗಳಗಟ್ಟಲೆ ಹೂತು ನಂತರ ತೆಗೆದು ಕೊಡತಿಯಿಂದ ಅದನ್ನು ಬಡಿದು ನಾರು ಮಾಡಿ ಒಣಗು ಹಾಕುತ್ತಾರೆ. ಆ ನಾರಿನಿಂದ ವ್ಯವಸಾಯಕ್ಕೆ ಬೇಕಾದ ಹಗ್ಗ, ಮಿಣಿ, ಬಾರುಕೋಲು ಮುಂತಾದುವನ್ನು ಹೊಸೆಯುತ್ತಾರೆ. ಕೆಲವರು ಈ ಕಾರಣಕ್ಕಾಗಿ ಪುಂಡಿ ಬೆಳೆಸಿ ಅದರಿಂದ ನಾರು ತೆಗೆಯುತ್ತಾರೆ.

ಅನೇಕ ಪಿಂಜಾರರು ಬಿತ್ತುವುದರಲ್ಲಿ ವಿಶೇಷವಾಗಿ ನೈಪುಣ್ಯತೆ ಹೊಂದಿದ್ದು ಬಿತ್ತನೆ ಕಾಲದಲ್ಲಿ ಅವರಿಗೆ ಎಲ್ಲಿಲ್ಲದ ಬೇಡಿಕೆಯಿರುತ್ತದೆ. ಬಿತ್ತುವುದಕ್ಕೆ ನೇಗಿಲು ಮತ್ತು ಕೂರಿಗೆಗಳನ್ನು ಬಳಸುತ್ತಾರೆ. ಕಡಿಮೆ ಹೊಲವಿದ್ದವರು ನೇಗಿಲು, ಹೆಚ್ಚು ಹೊಲವಿದ್ದವರು ಕೂರಿಗೆ ಉಪಯೋಗಿಸುತ್ತಾರೆ. ಕೂರಿಗೆಗೆ ಮೂರು ಉಳುವ ತಾಳುಗಳಿದ್ದು ಆ ಮೂರಕ್ಕೂ ಮೂರು ಸಡ್ಡೆಗಳನ್ನು ಕೂರಿಗೆಯ ಹಿಂದಕ್ಕೆ ಕಟ್ಟಿರುತ್ತಾರೆ. ಒಬ್ಬ ಬೇಸಾಯ ಹೊಡೆಯುವವನು ಮತ್ತು ಈ ಮೂರೂ ಸಡ್ಡೆಗಳಲ್ಲಿ ಬಿತ್ತಲು ಮೂರು ಜನರಿರುತ್ತಾರೆ. ಬಿತ್ತುವ ಜನ ಸೊಂಟಕ್ಕೆ ಅರಿವೆಯನ್ನು ಮಡಿಲಿನಂತೆ ಕಟ್ಟಿಕೊಂಡು ಅದರಲ್ಲಿ ಬಿತ್ತನೆ ಕಾಳುಗಳನ್ನು ಹಾಕಿಕೊಂಡಿರುತ್ತಾರೆ. ಒಂದು ಕೈಲಿ ಸಡ್ಡೆ ಹಿಡಿದು ಮತ್ತೊಂದರಲ್ಲಿ ಕಾಳು ತೆಗೆದುಕೊಂಡು ಸಡ್ಡೆಯ ಮೇಲ್ಮುಖದಲ್ಲಿರುವ ರಂಧ್ರದಲ್ಲಿ ಹವಣಾಗಿ ಬಿಡುತ್ತಾ ಹೋಗುತ್ತಾರೆ. ವಿಶೇಷವೆಂದರೆ ಕೂರಿಗೆಯಲ್ಲಿ ಬಿತ್ತುವಾಗ ಮೇಲಿನಂತೆ ನಾಲ್ಕು ಜನರ ಅಗತ್ಯವಿಲ್ಲದಂತಹ ಒಂದು ಉಪಕರಣವಿದೆ. ಅದಕ್ಕೆ ತಲವು ಎನ್ನುತ್ತಾರೆ. ಬುಡುಬುಡಿಕೆಯಾಕಾರದಲ್ಲಿರುವ ಅದರ ತಳಭಾಗದಲ್ಲಿ ಮೂರು ದೊಡ್ಡ ದುಂಡನೆಯ ರಂಧ್ರಗಳಿದ್ದು ಇಲ್ಲಿಂದ ಕೂರಿಗೆಯ ತಾಳುಗಳ ನಡುವಿರುವ ರಂಧ್ರಕ್ಕೂ ಸೇರುವಂತೆ ಮೂರು ಮೂರೂವರಡಿ ಉದ್ದದ ಬಿದಿರು ಗಳಗಳನ್ನು ಹೊಂದಿಸುತ್ತಾರೆ. ತಲವಿನ ಮೇಲ್ಮುಖದಲ್ಲಿ ಸಣ್ಣನೆಯ ಮೂರು ತೂತುಗಳಿದ್ದು ಅಲ್ಲಿ ಕಾಳುಗಳನ್ನು ಬಿಟ್ಟರೆ ಸಮನಾಗಿ ಮೂರೂ ಗಳಗಳಿಂದ ಕೂರಿಗೆ ಹೊಡೆಯುತ್ತಾ ಹೋಗುವ ಸಾಲಿನಲ್ಲಿ ಕಾಳುಗಳು ಬೀಳುತ್ತವೆ. ತಲವಿನ ಸೊಂಟದ ಭಾಗಕ್ಕೆ ಹಗ್ಗ ಕಟ್ಟಿ ಅದು ಅಲ್ಲಾಡದಂತೆ ಸುತ್ತಲೂ ಎಳೆದು ಕೂರಿಗೆಯ ದಿಂಡು, ಈಚುಗಳಿಗೆ ಬಿಗಿದಿರಲಾಗುತ್ತದೆ. ವಿಚಿತ್ರವೆಂದರೆ ಈ ತಲವಿನಲ್ಲಿ ಬಿತ್ತುವ ಮನುಷ್ಯನೇ ಬೇಸಾಯ ಹೊಡೆಯುವವನೂ ಆಗಿರುತ್ತಾನೆ. ಅಂದರೆ ನಾಲ್ಕು ಜನರ ಕೆಲಸವನ್ನು ಒಬ್ಬನೇ ಮಾಡಬೇಕು. ಕೂರಿಗೆಯ ಮೇಣಿ ಹಿಡಿದು ಅದುಮಬೇಕು, ಅಥವಾ ಕಾಲೊಂದನ್ನು ಕೂರಿಗೆಯ ದಿಂಡಿನ ಮೇಲೆ ಊರಿ ತುಳಿಯುತ್ತಾ ಕುಂಟುತ್ತಾ ನಡೆಯಬೇಕು. ಮತ್ತೊಂದು ಕೈಯಲ್ಲಿ ಕಾಳುಗಳನ್ನು ತಲವಿನಲ್ಲಿ ಬಿಡುತ್ತಿರಬೇಕು. ಎತ್ತುಗಳನ್ನು ನೆಟ್ಟಗೆ ಹೊಡೆಯುತ್ತಾ ಸಾಲುಗಳು ವಕ್ರವಾಗದಂತೆ, ಸಮವಾದ ಭಾರ ಬಿಟ್ಟು, ಸಮನಾಗಿ ಕಾಳುಗಳನ್ನು ಉದುರಿಸಬೇಕು. ಈ ಕೆಲಸದಲ್ಲಿ ಅತ್ಯಂತ ನಿಪುಣರಾಗಿರುವ ಪಿಂಜಾರರು, ಕೆಲವರು, ಬಿತ್ತನೆಯ ಕಾಲದಲ್ಲಿ ಬ್ಯುಜಿಯಾಗಿರುತ್ತಾರೆ. ಪಿಂಜಾರರ ರೈತಾಪಿ ಕೆಲಸಗಳಲ್ಲಿ ಕಲಾವಂತಿಕೆ ಜಾಣ್ಮೆಯಿಂದ ಕೂಡಿದ ಈ ಕೆಲಸ ಅತ್ಯಂತ ಕುತೂಹಲಕಾರಿಯಾದುದು.

ನಗರದಲ್ಲಿರುವ ಪಿಂಜಾರರು ಹಾಸಿಗೆ ತಯಾರಿಸುವುದರೊಂದಿಗೆ ಇನ್ನೂ ಅನೇಕ ಉಪಕಸುಬುಗಳನ್ನು ಜೀವನೋಪಾಯಕ್ಕಾಗಿ ಅವಲಂಬಿಸಿದ್ದಾರೆ. ಗಾರೆ ಕೆಲಸ, ಮಂಡಕ್ಕಿ ಉರಿಯುವುದು, ಹಂಡೇವು, ಕೊಡಪಾನಗಳಿಗೆ ಕಲಾಯ ಮಾಡುವುದು, ತರಕಾರಿ ಮತ್ತು ಗೋಣಿಚೀಲ ಮಾರಾಟ, ಎತ್ತಿನ ಕೊಂಬು ಎರೆಯುವುದು, ಬೀಡಿ ಕಟ್ಟುವುದು, ಹಮಾಲಿ ಕೆಲಸ ಮುಂತಾದ ನಾನಾ ಕಸುಬುಗಳಲ್ಲಿ ತೊಡಗಿದ್ದಾರೆ. ವಿದ್ಯಾಭ್ಯಾಸದ ಬಗ್ಗೆಯಾಗಲೀ, ಧಾರ್ಮಿಕ ತಿಳುವಳಿಕೆಯನ್ನು ಕುರಿತಾಗಲೀ ಆಲೋಚಿಸುವುದಕ್ಕೆ ಅಗತ್ಯವಾದ ಸಾಮಾಜಿಕ, ಆರ್ಥಿಕ ಭದ್ರತೆ ಮತ್ತು ನೆಮ್ಮದಿಯೇ ಪಿಂಜಾರರಿಗಿಲ್ಲ. ತೀರ ವಿರಳವಾಗಿ ಅಲ್ಲೊಬ್ಬರು, ಇಲ್ಲೊಬ್ಬರಂತೆ, ಸರ್ಕಾರಿ ನೌಕರಿಯಲ್ಲಿದ್ದಾರೆ. ಉಪಾಧ್ಯಾಯರೋ, ಗುಮಾಸ್ತರೋ, ಜವಾನರೋ ಆಗಿರುವ ಪಿಂಜಾರ ನೌಕರರು ಕೂಡ ವಿಶೇಷವಾದ ಸಾಮಾಜಿಕ ಗೌರವವನ್ನೇನೂ ಪಡೆದಂತಿಲ್ಲ. ಪಿಂಜಾರರ ಒಟ್ಟಾರೆ ಅಭಿವೃದ್ಧಿಗಾಗಿ ಪ್ರಾಮಾಣಿಕವಾಗಿ ಶ್ರಮಿಸಿರುವ ಕೆಲವರ ಪ್ರಯತ್ನವನ್ನು ಮುಸ್ಲಿಮರು ಹತ್ತಿಕ್ಕಿರುವ ವಿಷಯ ಸಂಶೋಧನೆಯ ಸಂದರ್ಭದಲ್ಲಿ ತಿಳಿದುಬಂತು. ಪಿಂಜಾರರನ್ನು ಪ್ರತಿನಿಧಿಸುವಂತಹ ಕೆಲವೇ ಜನರಿದ್ದರೂ ಅವರು ಪ್ರವಾಹದೆದುರು ಈಜಲಾಗದೇ ಸುಮ್ಮನಾದಂತಿದೆ. ಪಿಂಜಾರರ ಜಾತ್ಯಾತೀತ, ಅಂದರೆ ಇಂಡಿಯಾ ಸ್ವತಂತ್ರವಾಗಿ ಜಾತ್ಯಾತೀತ ರಾಷ್ಟ್ರ ಎಂದು ಘೋಷಿಸಿಕೊಳ್ಳುವುದಕ್ಕಿಂತ ನೂರಾರು ವರ್ಷಗಳ ಮೊದಲಿನಿಂದಲೇ ಜಾತಿಗಳನ್ನು ಮೀರಿದ ಸಂಸ್ಕೃತಿಯನ್ನು ಆಚರಣೆಯಲ್ಲಿಟ್ಟುಕೊಂಡಿರುವ ಪಿಂಜಾರರ ಸಂಸ್ಕೃತಿಯ ಪರಿಚಯ ಮಾಡಿಕೊಡುವ ಪುಟ್ಟ ಪ್ರಯತ್ನವೂ ನಡೆದಿಲ್ಲ ಎಂದರೆ ಒಟ್ಟಾರೆ ಜಾತ್ಯಾತೀತ ಆದರ್ಶಕ್ಕೇ ಇರುವ ವ್ಯಂಗ್ಯ ಎಂಥದ್ದೆಂದು ಅರ್ಥವಾಗುತ್ತದೆ. ಬಹುಶಃ ಉಪಸಂಸ್ಕೃತಿ ಎಂದು ಕರೆಯಲಾಗುವ ಎಲ್ಲ ಜನಾಂಗಗಳಲ್ಲಿ ಕೂಡ ಆ ಬಗೆಯ ಜಾತ್ಯಾತೀತ ಆಚರಣೆ ಇರುತ್ತದೆನಿಸುತ್ತದೆ. ಪ್ರಧಾನ ಸಂಸ್ಕೃತಿಗಳ ಗೋಜಲಿನಲ್ಲಿ ಉಪ ಸಂಸ್ಕೃತಿಗಳು ಢಾಳಾಗಿ ಕಾಣದಿರುವುದು ಸಾಧ್ಯವಿದೆ. ಅವುಗಳನ್ನು ಗುರುತಿಸುವುದರ ಜೊತೆ ಈ ಎಲ್ಲ ಜನಾಂಗಗಳಿಗೆ ಸಾಮಾಜಿಕ ನ್ಯಾಯ ಮತ್ತು ಭದ್ರತೆಯನ್ನು ಒದಗಿಸುವುದರ ಮೂಲಕ ಅವುಗಳನ್ನು ಉಳಿಸಿಕೊಳ್ಳುವ ಪ್ರಯತ್ನದಲ್ಲಿ ಸರ್ಕಾರವೂ ಒಳಗೊಂಡಂತೆ ಪ್ರಗತಿಪರರೆಲ್ಲರೂ ತೊಡಗುವ ಅಗತ್ಯವಿದೆ.

ಪಿಂಜಾರರು ರೈತಾಪಿ ಕೆಲಸಗಳಲ್ಲಿ ತೊಡಗಿಕೊಂಡು ಎಲ್ಲ ಬಡ, ಭೂ ರಹಿತ ರೈತರ ಬವಣೆಗಳನ್ನೇ ಅನುಭವಿಸುತ್ತಿದ್ದಾರೆ. ಮುಂಗಾರು ಮಳೆ ಬರುವುದನ್ನೇ ಕಾತರದಿಂದ ನಿರೀಕ್ಷಿಸುತ್ತ ಕೆಲಸಗಳಿಗಾಗಿ ಹುಡುಕುತ್ತಾರೆ. ಪ್ರತಿ ಯುಗಾದಿಯಂದು ಹೊಸ ವರ್ಷದ ಆರಂಭವನ್ನು ಹೊಲಗಳಿಗೆ ಬೇಸಾಯ ಹೂಡುವ ಮೂಲಕ ಆಚರಿಸುತ್ತಾರೆ. ಮಳೆ, ಬೆಳೆ, ಸಮೃದ್ಧಿಯಾಗಿ ಆಗಲೆಂದು ಊರಿನ ಬಸವಣ್ಣ ದೇವರಿಗೋ, ಎಲ್ಲಮ್ಮನಿಗೋ ಹರಕೆ ಹೊತ್ತುಕೊಳ್ಳುತ್ತಾರೆ. ಜೋಳದ ಒಕ್ಕಲನ್ನು ಬೆಳುದಿಂಗಳಲ್ಲಿ ಕೂಡಿಕೊಂಡು ಮಾಡುತ್ತಾರೆ. ಆಕಾಶದ ನಕ್ಷತ್ರಗಳಲ್ಲಿ ಬೇಸಾಯದ ಒಂದು ರೀತಿಯನ್ನೇ ಕಂಡು ಭಾವಿಸುತ್ತ ಪಶ್ಚಿಮದಲ್ಲಿ ಮರೆಯಾಗುತ್ತಿರುವ ಮೂರು ಮೂರರಂತೆ ಸಾಲಾಗಿರುವ ಆರು ನಕ್ಷತ್ರಗಳನ್ನು ತೋರಿಸಿ 'ಆರೆತ್ತಿನ ಕೂರಿಗೆದಳ ಮುಳುಗೋಕೆ ಬಂದಿದೆ' ಎಂದು ಬೇಸಾಯದ ಕೆಲಸಗಳಿಗೆ ಮಬ್ಬಿಗೇ ಜನರನ್ನು ಎಚ್ಚರಿಸುತ್ತಾರೆ. ಕೋಳಿ, ಕಾಗೆಗಳು ಕೂಗುವುದೂ ಅವರ ಎಚ್ಚರದ ಕರೆಗಂಟೆಯಾಗುತ್ತದೆ. ಬರಾಶ್ ಹುಣ್ಣಿಮೆ ಎಂದು ಆಚರಿಸುವ ಪಿಂಜಾರರು ಆ ದಿನದಲ್ಲಿ ಬಿತ್ತುವುದಕ್ಕಾಗಿ ಬೀಜಗಳನ್ನು ದೇವರಿಗೆ

ಹರಕೆ ಕಟ್ಟಿಡುತ್ತಾರೆ. ಹೊಸದಾಗಿ ಎತ್ತುಗಳನ್ನು ಖರೀದಿಸಿಕೊಂಡು ಬಂದರೆ ಅವುಗಳಿಗೆ ಪೂಜೆ ಮಾಡಿ ತೆಂಗಿನಕಾಯಿ ಒಡೆದು ಮನೆಯ ಒಳಗಡೆ (ಕೊಟ್ಟಿಗೆಗೆಲ್ಲ) ಬಿಡುತ್ತಾರೆ. ಮನೆಯನ್ನು ಪ್ರವೇಶಿಸುವ ಎತ್ತು ಎಡಗಾಲನ್ನು ಮುಂದಿಟ್ಟರೆ ಅದು ಆ ಮನೆಯಲ್ಲಿ ಬಹುದಿನಗಳ ಕಾಲ ಇರುತ್ತದೆಂದೂ, ಬಲಗಾಲನಿಟ್ಟು ಬಂದರೆ ಅದು ದೀರ್ಘಕಾಲ ಆ ಮನೆಯಲ್ಲಿರುವುದಿಲ್ಲವೆಂದೂ ನಂಬುತ್ತಾರೆ. ಪ್ರತಿ ಸೋಮವಾರ ಎತ್ತುಗಳಿಗೆ ವಿಶ್ರಾಂತಿ ಕೊಡುವುದಲ್ಲದೆ, ಮೈತೊಳೆದು ಹಕ್ಕೆಯನ್ನು ಶುದ್ಧಮಾಡಿ ವಿಶೇಷ ಪ್ರೀತಿಯಿಂದ ತುರಿಸುತ್ತಾರೆ. ಎತ್ತುಗಳಿಗೆ ಬಸವ, ಶಿವ, ರುದ್ರರಾಮ ಪ್ರಧಾನಿ ಇತ್ಯಾದಿಯಾಗಿ ಹೆಸರಿಟ್ಟು ಕರೆಯುತ್ತಾರೆ. ಗೊಡ್ಡಾದ ಆಕಳುಗಳನ್ನೂ ಬೇಸಾಯಕ್ಕೆ ಬಳಸುವುದುಂಟು. ಪ್ರತೀ ಸಲ ಬಿತ್ತುವಾಗ, ನಾಟಿ ಹಚ್ಚುವಾಗ, ಒಕ್ಕಲು ಮಾಡುವಾಗ ಊದಿನಕಡ್ಡಿ ಬೆಳಗಿ ತೆಂಗಿನಕಾಯಿ ಒಡೆದು ಬೆಳೆ, ಇಳುವರಿ ಚೆನ್ನಾಗಾಗಲಿ ಎಂದು ಬೇಡುತ್ತಾರೆ. ಭೂಮಿತಾಯಿ, ನಮ್ಮವ್ವ ಎಂದೇ ಪ್ರೀತಿಯಿಂದ ಕರೆಯುವ ಪಿಂಜಾರರು ಆಕೆಯನ್ನು ನಂಬಿದವರಿಗೆ ಅವಳೆಂದೂ ಮೋಸಮಾಡುವುದಿಲ್ಲ ಎಂದು ಭಾವಿಸುತ್ತಾರೆ. ಕೆಲವರು ಪ್ರತಿ ಶಿವರಾತ್ರಿಯ ದಿನ ಹೊಲದಲ್ಲಿ ಹುಗ್ಗಿಯ ಅಡಿಗೆ ಮಾಡಿಸಿ ಜನತೆಗೆ ಊಟ ಹಾಕುತ್ತಾರೆ. ಆಯಾಸವಾದಾಗ, ಎಡವಿದಾಗ ತಟಕ್ಕನೆ ಪಿಂಜಾರರ ಬಾಯಿಂದ 'ಬಸವ ಬಸವ' ಎನ್ನುವ ಉದ್ಗಾರ ಹೊರಡುತ್ತದೆ. ಕೆಲವು ಸಲ ಹೆಣ್ಣು ಮಕ್ಕಳಾದಿಯಾಗಿ ಆಗಬಾರದ್ದು ನಡೆದುಹೋದರೆ 'ಶಿವ ಶಿವ' ಅನ್ನುವುದುಂಟು. ಭಗವಂತ, ಪರಮಾತ್ಮ, ಶಿವನೇ, ಶಂಭೋಶಕರ - ಇತ್ಯಾದಿ ಉದ್ಗಾರಗಳು ಪಿಂಜಾರರಲ್ಲಿ ತೀರ ಸಾಮಾನ್ಯ ಬೇರೆಲ್ಲ ದೇವರಿಗಿಂತ ಶಿವನ ಬಗ್ಗೆಯಿರುವ ಪಿಂಜಾರರ ತಿಳುವಳಿಕೆ ವಿಶೇಷವಾದದ್ದು. ಇದೆಲ್ಲ ವೀರಶೈವ ಚಳುವಳಿ ಜನಸಾಮಾನ್ಯರ ವಿಷಯದಲ್ಲಿ ತೋರಿದ ಆಸಕ್ತಿಯ ಪರಿಣಾಮವೇ ಇರಬೇಕು. ವೈದಿಕರ ವಿರುದ್ಧ ಪ್ರತಿ ಸಂಸ್ಕೃತಿಯೊಂದರ ನಿರ್ಮಾಣದ ದೊಡ್ಡ ಪ್ರಯತ್ನವನ್ನು ವೀರಶೈವರು ನಿಜಕ್ಕೂ ಮಾಡಿದವರೆಂಬುದು ಪಿಂಜಾರರಲ್ಲಿರುವ ಆ ಬಗೆಗಿನ ಸಂಗತಿಗಳಿಂದ ತಿಳಿಯುತ್ತದೆ.



---

*ಅಡಿಟಿಪ್ಪಣಿಗಳು :*

1. ಉಪಸಂಸ್ಕೃತಿ ಅಧ್ಯಯನ ಮಾಲೆಯ ಪ್ರಸ್ತಾವನೆ - ಬರಗೂರು ರಾಮಚಂದ್ರಪ್ಪ - ಪುಟ ೩೫-೩೬, ಪ್ರಕಟಣೆ- ಕಸಾಅ-೧೯೯೩

ಅಧ್ಯಾಯ - ೭

# ರಾಜಕೀಯ ಜೀವನ

ಒಂದು ನಿರ್ದಿಷ್ಟ ಪ್ರದೇಶದ ನೈಸರ್ಗಿಕ ಸಂಪತ್ತು ಮತ್ತು ಅಲ್ಲಿನ ಜನ ಹಾಗೂ ಒಟ್ಟು ಜೀವಸಮುದಾಯಗಳ ನಡುವಿನ ನಿಕಟ ಸಂಬಂಧವನ್ನೇ 'ವ್ಯವಸ್ಥೆ' ಎನ್ನುತ್ತೇವೆ. ನೈಸರ್ಗಿಕ ಸಂಪನ್ಮೂಲಗಳನ್ನು ಜೀವಿಗಳ ಅನುಕೂಲಕ್ಕಾಗಿ ಬಳಸಿಕೊಳ್ಳಬೇಕಾದ ಉಚಿತಾನುಚಿತ ಪ್ರಜ್ಞೆ 'ವ್ಯವಸ್ಥೆ'ಗೆ ಇರಬೇಕಾಗುತ್ತದೆ. ಮನುಷ್ಯ ಕಾಡಿನಲ್ಲಿ ಅಲೆದಾಡಿಕೊಂಡು ಉಳಿದ ಪ್ರಾಣಿಗಳಿಗೂ ತನಗೂ ವ್ಯತ್ಯಾಸವಿಲ್ಲದಂತೆ ಬದುಕಿದ ಕಾಲವನ್ನು ದಾಟಿ ಬುದ್ಧಿ ವಿಕಾಸದ ನಂತರದ ದಿನಗಳಲ್ಲಿ ಅಂತಹ ವ್ಯವಸ್ಥೆ ಜಾರಿಗೆ ಬಂದಂತಿದೆ. ಮನುಷ್ಯ ಒಂದು ಕುಟುಂಬವಾಗಿ, ಸಂಘವಾಗಿ, ಸಮಾಜವಾಗಿ ರೂಪುಗೊಳ್ಳುತ್ತಿದ್ದಂತೆ 'ವ್ಯವಸ್ಥೆ'ಗೂ ಒಂದು ನಿರ್ದಿಷ್ಟ ಆಕಾರವನ್ನು ಕೊಡುವ ಪ್ರಯತ್ನ ನಡೆದಿದೆ. ವ್ಯವಸ್ಥೆಯಲ್ಲಿ ಪಾಲುದಾರರಾದ ಸಮುದಾಯಗಳು ಸವಲತ್ತುಗಳಿಗಾಗಿ ಪೈಪೋಟಿ ನಡೆಸುತ್ತ ಸಂಘರ್ಷದ ಹಾದಿಯಲ್ಲಿದ್ದಾಗ ನಿಯಮಗಳು ರೂಪುಗೊಂಡು ಅವೇ ರಾಜಕೀಯ ಸಿದ್ಧಾಂತಗಳಾಗಿ ಪರಿವರ್ತನೆಗೊಂಡಂತಿದೆ. ಸಾಮಾಜಿಕವಾಗಿ, ಆರ್ಥಿಕವಾಗಿ ಪ್ರಬಲನಾಗಿದ್ದವನು ಅಥವಾ ಪ್ರಬಲವಾಗಿದ್ದಂತಹ ಗುಂಪುಗಳು ಈ ಸಿದ್ಧಾಂತಗಳ ರಚನೆಯಲ್ಲಿ ಮಹತ್ವದ ಪಾತ್ರವಹಿಸಿ ತಮ್ಮ ರಕ್ಷಣೆಯ 'ಸುವ್ಯವಸ್ಥೆ'ಯನ್ನು ಮಾಡಿಕೊಂಡವು. ಕ್ರಮೇಣ ರಾಜಕೀಯ ಸಿದ್ಧಾಂತಗಳು ನಿರ್ದಿಷ್ಟ ಪ್ರದೇಶದ ಎಲ್ಲ ಬಗೆಯ ಸಂಪತ್ತನ್ನು ಒಂದು ಅಧಿಕಾರ ಕೇಂದ್ರದಲ್ಲಿ ಕ್ರೋಢೀಕರಿಸಿಕೊಳ್ಳುವ ತಂತ್ರಗಳಾಗಿ ಬದಲಾದವು. ಆಯಾ ಸಂದರ್ಭಕ್ಕೆ ತಕ್ಕಂತಹ ಪಟೇಲ, ಗೌಡ, ಪಾಳೇಗೌರ, ರಾಜ-ಮಹಾರಾಜರುಗಳ ಸಂತಾನ ಉದಯವಾಗಿ ಜೀವ ಸಮುದಾಯದ ಅನುಕೂಲಗಳನ್ನೆಲ್ಲ ಆರ್ಥಿಕ - ಸಾಮಾಜಿಕ ಪ್ರಾಬಲ್ಯ ಹಾಗೂ ದೌರ್ಜನ್ಯಗಳಿಂದ ಕಬಳಿಸುವ ಮೂಲಕ ರಾಜಕೀಯ ಅಧಿಕಾರವನ್ನು ತಮ್ಮ ಅಧೀನದಲ್ಲಿಟ್ಟುಕೊಂಡರು. ಇವರ ಅಧೀನದಲ್ಲಿ ಶೋಷಿತರ ಪ್ರತಿನಿಧಿಗಳಾಗಿ ಆರ್ಥಿಕ-ಸಾಮಾಜಿಕ ಅಸಹಾಯಕತೆಯಲ್ಲಿ ನಲುಗಿದ ನಿಮ್ನವರ್ಗದ ಸಮುದಾಯಗಳು 'ಶ್ರಮ' ಮೂಲ ಸಂಸ್ಕೃತಿಯ ನಿಜನೆಲೆಯನ್ನು ತಣ್ಣಗೆ ಪ್ರಕಟಿಸುತ್ತಾ ಬಂದವು. ಈ ವರ್ಗದ ಬೆವರಿನ ದುಡಿಮೆಯ ಉತ್ಪಾದನೆ ಶ್ರೀಮಂತರ, ಬಂಡವಾಳಶಾಹಿಗಳ ಅನುಭೋಗದ ಸಾಧನವಾದಂತೆ ಅಧಿಕಾರಸ್ಥರ ಕ್ಷೇಮ ರಕ್ಷಣೆಯಲ್ಲಿ ಸದಾ ಸ್ವಹಿತಾಸಕ್ತಿಯನ್ನು ಕಂಡುಕೊಂಡ ಪುರೋಹಿತವರ್ಗ ಬಡವರ ಅಸಹಾಯಕತೆಗೆ ಧಾರ್ಮಿಕ ಮೂಲದ ಮೂಢನಂಬಿಕೆಗಳ ಆವರಣವನ್ನು ಸೃಷ್ಟಿ ಮಾಡಿಬಿಟ್ಟಿತು. ಹೀಗಾಗಿ ಒಟ್ಟು ಬಡವರ 'ಹಣೆಬರಹ' ಪೂರ್ವಜನ್ಮದ ಫಲವಾಗಿರುತ್ತದೆ ಎಂಬಂತಹ ನಂಬಿಕೆಗಳು ಬಡವರ ಪ್ರತಿಭಟನೆ ಹಾಗೂ ಸಂಘಟನೆಯನ್ನು ಹತ್ತಿಕ್ಕಿದ್ದವು. ಇಂಡಿಯಾದಂತಹ ಸಾಮಾಜಿಕ ರಚನೆಯ ಸಂದರ್ಭದಲ್ಲಿ ಈ ಬಗೆಯ ಅಂಶಗಳೇ ಇಲ್ಲಿನ ರಾಜಕೀಯ ಇತಿಹಾಸವನ್ನು ನೆನಪಿಸುವ ಸಂಗತಿಗಳಾಗಿವೆ. ಜನವರ್ಗವನ್ನು ಆರ್ಥಿಕಮೂಲವಾದ ವೃತ್ತಿಗಳ ಹಿನ್ನೆಲೆಯಲ್ಲಿ ಒಡೆದು ಕಟ್ಟಿದ ಈ ಸಮಾಜ ಆ ಬಗೆಯ ಪ್ರಕ್ರಿಯೆಗೆ ಪುರಾಣ

ದೇವರು, ಧರ್ಮದಂತಹ ಅಮೂರ್ತ ಸಂಗತಿಗಳನ್ನು ಆವಾಹಿಸಿಬಿಟ್ಟಿದೆ. ಇಡೀ ಸಮುದಾಯ ಇಂತಹ ಭಾವನಾತ್ಮಕ ಸಂಗತಿಗಳ ಬಗ್ಗೆ ಸದಾ ಚರ್ಚಿಸುವ, ಚಿಂತಿಸುವ ಅತಾರ್ಕಿಕ ಸ್ಥಿತಿಗೆ ತಮ್ಮನ್ನು ಒಗ್ಗಿಸಿಕೊಂಡು ಬಿಟ್ಟಿತು. ಪರಿಣಾಮವಾಗಿ ಬೌದ್ಧಿಕವಾಗಿ ಪ್ರಶ್ನಿಸುವ, ಪ್ರತಿಭಟಿಸುವ ಪ್ರಯತ್ನಗಳ ಹೊರತಾಗಿ ಮೂಕಪಶುಗಳಂತೆ ದುಡಿಯುವುದೇ ತಮ್ಮ ಕರ್ತವ್ಯ ಎನ್ನುವ ನೆಲೆಯನ್ನು ಈ ವರ್ಗಗಳು ತಲುಪಿದವು. ಸಾಮಾಜಿಕ - ಆರ್ಥಿಕ ಸ್ಥಿತಿಗತಿಗಳಿಗೆ ಯಾವಾಗ ಧಾರ್ಮಿಕ ಆಯಾಮ ಪ್ರಾಪ್ತವಾಗುತ್ತದೋ ಆ ಕ್ಷಣಕ್ಕೆ ಲೌಕಿಕವಾದ ನೋವು-ಸಾವು, ಅಪಮಾನಗಳೆಲ್ಲವೂ ತಾತ್ಕಾಲಿಕ ಎನಿಸಿಬಿಡುತ್ತವೆ. ಇಂತಹ ಎಲ್ಲ ಸಂದರ್ಭಗಳನ್ನೂ ತಮ್ಮ ಹಿತಕ್ಕೆ ಬಳಸಿಕೊಂಡ ಮೇಲ್ವರ್ಗಗಳು 'ಹಿತಾನುಭವ'ದಿಂದ ಹೊರ ಬರಲಾಗದಂತೆ ಅನುಕೂಲಕರವಾದ ನೀತಿ ನಿರೂಪಣೆ ಮಾಡಿಕೊಂಡವು. ಸಮುದಾಯ ಕೇಂದ್ರಿತವಲ್ಲದ, ಜನನಿಷ್ಠೆಯಿಲ್ಲದ ಇಂತಹ ನೀತಿಗಳೇ ಕ್ರಮೇಣ ವ್ಯವಸ್ಥೆಯ ರಾಜಕೀಯ ಸ್ವರೂಪವನ್ನು ನಿರ್ಧರಿಸತ್ತವೆ. ರಾಜಕೀಯ ಎನ್ನುವುದು ಸಮಾಜಹಿತವನ್ನು ಕಡೆಗಣಿಸಿ ಉತ್ಪಾದನೆಯ ಎಲ್ಲ ಅಧಿಕಾರಗಳನ್ನು ಕೇಂದ್ರೀಕರಿಸುವ ಮೂಲಕ ವಿತರಣೆ, ವಿನಿಮಯ ಮತ್ತು ಮಾರಾಟ ವ್ಯವಸ್ಥೆಯಿಂದ ಲಭ್ಯವಾಗುವ ಸುಖ, ಲಾಭಗಳ ಲೆಕ್ಕಾಚಾರವಾಗಿ ಬಿಟ್ಟಿದೆ. ಇಂಡಿಯಾ ನಿರಂಕುಶ ಆಡಳಿತದಲ್ಲಿ ಹತ್ತಾರು ರಾಜರುಗಳ ಸೆಣಸಾಟದಲ್ಲಿ ನಲುಗಿ ಅನೇಕ ರಾಜ, ಸಾಮಂತರುಗಳ ಪ್ರಾದೇಶಿಕ ಹಿತಸಾಧನೆಯ ಸ್ವಾರ್ಥದಿಂದ ಪರದೇಶಿಗಳ ಕೈವಶವಾಗಿ ಶತಮಾನಗಳ ಗುಲಾಮಗಿರಿಯನ್ನು ಅನುಭವಿಸಿ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಹೊಂದಿದೆ. ಇದು ಅತ್ಯುತ್ತಮ ವ್ಯವಸ್ಥೆ ಎಂದು ಹೇಳುವಾಗಲೂ ಭಾರತದ ಸ್ವಾತಂತ್ರ್ಯೋತ್ತರ ರಾಜಕೀಯ ನೆಲೆ ಅತ್ಯಂತ ಹತಾಶೆಯ ಸ್ಥಿತಿ ತಲುಪಿರುವುದನ್ನು ಮರೆಯಬಾರದು. ಕಳೆದ ೧೦-೧೫ ವರ್ಷಗಳ ಹಿಂದೆ ರಾಜಕೀಯ ತನ್ನ ಮಿತಿಗಳ ನಡುವೆಯೂ ತತ್ವರಾಜಕಾರಣದ ಕ್ರಿಯಾಶೀಲತೆ ಮತ್ತು ನೈತಿಕ ಜವಾಬ್ದಾರಿಯಿಂದ ಕೂಡಿತ್ತು ಎನಿಸುತ್ತದೆ. ಆವರೆಗಿನ ರಾಜಕಾರಣದಲ್ಲಿ ಗುಪ್ತಗಾಮಿನಿಯಂತಿದ್ದ ಧಾರ್ಮಿಕ ಮೂಲಭೂತವಾದ ಈಚಿನ ವರ್ಷಗಳಲ್ಲಿ ಹೆಚ್ಚು ಆಕ್ರಮಣಶೀಲವಾಗಿದೆ. ಧರ್ಮ ಹಾಗೂ ಸಂಸ್ಕೃತಿ ರಕ್ಷಣೆಯ ನೆಪದಲ್ಲಿ ಅನ್ಯಧರ್ಮೀಯರ ನರಮೇಧ ನಡೆಸಿಯೂ ಪಶ್ಚಾತ್ತಾಪ ಪಟ್ಟುಕೊಳ್ಳದ ಭಂಡ ದೇಶಪ್ರೇಮವನ್ನು ಅದು ಪ್ರಕಟಿಸುತ್ತಿದೆ. ಧರ್ಮ ಮತ್ತು ಸಂಸ್ಕೃತಿಯ ನಿಜನೆಲೆಗಳು ಹಿನ್ನೆಲೆಗೆ ಸರಿದು ಅಧಿಕಾರ ರಾಜಕಾರಣದ ಭಯಂಕರ ಸ್ವರೂಪ ಮೆರೆದಾಡುತ್ತಿರುವ ಈ ಸಂದರ್ಭದಲ್ಲಿ ಜನಾಂಗವೊಂದರ ರಾಜಕೀಯ ಬದುಕನ್ನು ಕುರಿತು ಅಧ್ಯಯನ ಮಾಡುವುದು ಕುತೂಹಲಕರವಾಗಿದೆ.

ಪಿಂಜಾರರ ರಾಜಕೀಯ ಜೀವನ ಅವರ ಸಾಂಸ್ಕೃತಿಕ ಬದುಕಿನ ಅನಾವರಣವೇ ಆಗಿದೆ ಎನ್ನುವುದು ಮುಖ್ಯವಾಗಿದೆ. ಭಾರತದ ಸಾಮಾಜಿಕ ಇತಿಹಾಸದಲ್ಲಿ 'ಹಿಂದೂ-ಮುಸ್ಲಿಂ' ಎಂಬ ಪರಿಭಾಷೆಯೇ ರಾಜಕೀಯ ನೆಲೆಯಲ್ಲಿ ವಿಶ್ಲೇಷಣೆಗೆ ಒಳಗಾಗುತ್ತದೆ. ಇಂಡಿಯಾದ ನೆಲದಲ್ಲಿ ಧರ್ಮ ಹೀಗೆ ಯಾವಾಗಲೂ ರಾಜಕೀಯ ಆಶ್ರಯದಲ್ಲಿದ್ದುಕೊಂಡೇ ತನ್ನ ಆರ್ಥಿಕ ಸಂಪನ್ಮೂಲಗಳನ್ನು ಹೆಚ್ಚಿಸಿಕೊಳ್ಳುತ್ತಿರುತ್ತದೆ. ಹಿಂದೂ-ಮುಸ್ಲಿಂ ಜನಸಮುದಾಯಗಳ ನಡುವಿನ ಸಂಬಂಧಗಳು ದಿನನಿತ್ಯದ ವ್ಯಾವಹಾರಿಕವಾದ ಕೊಡು-ಕೊಳುವ ನೆಲೆಯನ್ನು ದಾಟಿ ತೀವ್ರ ಭಾವನಾತ್ಮಕವಾದ ನೆಲೆಗೂ ಚಾಚಿಕೊಂಡಿವೆ. ಇಲ್ಲೆಲ್ಲ

ಪರಸ್ಪರ ಅವರು ಹಿಂದೂ, ಇವರು ಮುಸ್ಲಿಂ ಎಂಬ ತಿಳುವಳಿಕೆಯಿದ್ದೂ ಸಾಂದರ್ಭಿಕವಾಗಿ ಅದನ್ನು ದಾಟುವ ಪ್ರಯತ್ನದ ಗುರುತಾಗಿ ಅವು ಕಾಣಿಸಿಕೊಳ್ಳುತ್ತವೆ. ಹಳ್ಳಿಗಳು ಮತ್ತು ಸಣ್ಣಪಟ್ಟಣಗಳಲ್ಲಿ ಶತಮಾನಗಳ ಹಿಂದೆ ಹಿಂದೂ-ಮುಸ್ಲಿಂ ಎಂಬ ಪ್ರಜ್ಞೆಯೇ ಕಾಡದಂತಹ ಸಾಮಾಜಿಕ ವಾತಾವರಣವಿತ್ತು. ಅದರಲ್ಲೂ ಪಿಂಜಾರರು ಮತ್ತು ಹಿಂದೂಗಳ ನಡುವೆ ಅನ್ಯಧರ್ಮೀಯವಾದ ಯಾವ ಭೇದಗಳೂ ಕಾಣಿಸಿಕೊಳ್ಳುತ್ತಿರಲಿಲ್ಲ. ಅನೇಕ ಊರುಗಳಲ್ಲಿ ಹಿಂದೂಗಳೇ ಪಿಂಜಾರರ ಕೆಲಮುಖಂಡರನ್ನು ನ್ಯಾಯ ಪಂಚಾಯಿತಿಗಾಗಿ ಆಶ್ರಯಿಸುತ್ತಿದ್ದುದು ತಿಳಿದು ಬರುತ್ತದೆ. ರಾಜಕೀಯ ಎನ್ನುವುದು ಸಮಾಜವನ್ನು ಧಾರ್ಮಿಕ-ಆರ್ಥಿಕ ನೀತಿಗಳ ಆವರಣದಲ್ಲಿ ಸದಾ ನಿಯಂತ್ರಿಸುವ ನಿರ್ದೇಶಿಸುವ ಒಂದು ಪ್ರಚಂಡ ಚೈತನ್ಯವಾಗಿದೆ. ವಾಸ್ತವವಾಗಿ ದೇಶದ ಉತ್ಪಾದನೆ ಮತ್ತು ಅದರ ಸಮಾನ ಹಂಚಿಕೆಯ ಜವಾಬ್ದಾರಿ ರಾಜಕೀಯ ವ್ಯವಸ್ಥೆಯ ಮುಖ್ಯ ಲಕ್ಷಣವಾಗಿದೆ. ಇದರೊಂದಿಗೆ ಹತ್ತಾರು ಧರ್ಮ, ನೂರಾರು ಜಾತಿ-ಉಪಜಾತಿಗಳಿಂದ ಕೂಡಿದ ಇಂಡಿಯಾದಂತಹ ಸಾಮಾಜಿಕ ರಚನೆಯಲ್ಲಿ ಎಲ್ಲ ಜನಾಂಗಗಳನ್ನು ಸಮಾನ ಮನೋಭಾವದಿಂದ ನೋಡಿಕೊಳ್ಳುವುದು ಮುಖ್ಯವಾಗುತ್ತದೆ. ಇಲ್ಲಿನ ಸಮಾಜ ರಚನೆಯಲ್ಲಿ ಮೇಲ್ಜಾತಿಗಳು ಯಾವಾಗಲೂ ರಾಜಕೀಯವಾದ ಆಳ್ವಿಕೆ ನಡೆಸಿಕೊಂಡು ಬಂದಿವೆ. ಭಾರತ ಸ್ವತಂತ್ರವಾಗುವವರೆಗಿನ ರಾಜಕೀಯ ಇತಿಹಾಸದಲ್ಲಿ ಈ ನೆಲದ ಅಪಾರ ಸಂಖ್ಯೆಯ ದಲಿತರು, ಹಿಂದುಳಿದವರು ಬ್ರಾಹ್ಮಣರ ಹಾಗೂ ಉಳಿದ ಮೇಲ್ಜಾತಿಗಳವರ ಪುರೋಹಿತಶಾಹಿ ಮತ್ತು ಪಾಳೆಯಗಾರಿಕೆಯ ಆಡಳಿತದಲ್ಲಿ ನಾಲಗೆ ಕಳೆದುಕೊಂಡು ಪಶುಗಳಿಗಿಂತ ಕಡೆಯಾಗಿ ಬದುಕಿದ್ದಾರೆ. ಸ್ವಾತಂತ್ರ್ಯದ ನಂತರದ ಎರಡು-ಮೂರು ದಶಕಗಳು ಕೂಡ ಇದು ಮುಂದುವರೆದದ್ದಿದೆ. ಮುಖ್ಯವಾಗಿ ಸ್ವಾತಂತ್ರ್ಯಾನಂತರದಲ್ಲಿ ಮೊದಲ ೨-೩ ದಶಕಗಳು ನಿಚ್ಚಳವಾಗಿ ನೆಹರೂ ರಾಜಕೀಯ ಪ್ರಭಾವದ ಆಡಳಿತವಿದ್ದರೆ ನಂತರದಲ್ಲಿ ಸಾಂವಿಧಾನಿಕ ಆಶಯಗಳನ್ನು ನೆಲೆಗೊಳಿಸಿಕೊಳ್ಳುವ ಅಂಬೇಡ್ಕರ್ ಅವರ ರಾಜಕೀಯ ತತ್ವಗಳು ಪ್ರಧಾನವಾದವು. ಆದರೆ ಈ ಸಮಾಜದ ಬಹುಸಂಖ್ಯಾತರಾದ ದಲಿತರು ಹಾಗೂ ಹಿಂದುಳಿದವರು ರಾಜಕೀಯ ಪ್ರವರ್ಧಮಾನಕ್ಕೆ ಬರುವ ಈ ಸಂದರ್ಭವನ್ನು ಇಲ್ಲಿನ ವೈದಿಕ ಪುರೋಹಿತಶಾಹಿ ವರ್ಗ ಬೇರೊಂದು ರೀತಿಯಲ್ಲಿ ಹತ್ತಿಕ್ಕುವ ಕೆಲಸದಲ್ಲಿ ಕ್ರಿಯಾಶೀಲವಾಗಿದೆ. ಈ ನಡುವೆ ಇಡೀ ಇಂಡಿಯಾದಲ್ಲಿ ಮೊದಲಿನಿಂದಲೂ ಹಿಂದೂ-ಮುಸ್ಲಿಮರ ನಡುವೆ ಇರುವ ಧಾರ್ಮಿಕ ದ್ವೇಷವನ್ನು ರಾಜಕೀಯವಾಗಿ ತೀರಿಸಿಕೊಳ್ಳುವ ವ್ಯಾಪಕ ಹುನ್ನಾರ ನಡೆಯುತ್ತಿದೆ. ಮತ್ತು ಸಮಕಾಲೀನ ಜಾಗತಿಕ ಸಂದರ್ಭದ ಇಸ್ಲಾಂ ಉಗ್ರವಾದದ ಹಿನ್ನೆಲೆಯಲ್ಲಿ ಭಾರತೀಯ ಮುಸ್ಲಿಮರನ್ನು ನೋಡುವ ದೃಷ್ಟಿಕೋನದಿಂದಾಗಿ ಭಾರತದ ಮುಸ್ಲಿಂ ಸಮುದಾಯದಲ್ಲಿ ಹೇಳತೀರದ ಆತಂಕಗಳಿವೆ. ಸ್ವಾತಂತ್ರ್ಯ ಹೋರಾಟದಲ್ಲಿ ಒಟ್ಟಾಗಿ ಬ್ರಿಟೀಷರ ವಿರುದ್ಧ ಹೋರಾಡಿದ ಈ ಸಮುದಾಯಗಳ ನಡುವೆ ಭಾರತ ವಿಭಜನೆಯಾಗುತ್ತಿದ್ದಂತೆ ಅಸಾಧಾರಣವಾದ ಕಂದಕಗಳು ಉಂಟಾದದ್ದು ಈಗ ಇತಿಹಾಸ. ಆದರೆ ಅನಂತರದಲ್ಲಿ ಕೂಡ ಭಾರತದಲ್ಲಿ ಉಳಿದ ಮುಸ್ಲಿಮರ ಕುರಿತಾಗಿ ಹಿಂದೂ ಮೂಲಭೂತವಾದಿಗಳು ನಡೆದುಕೊಳ್ಳುತ್ತಿರುವುದು ಅವರ ರಾಜಕೀಯ ಆಕಾಂಕ್ಷೆಗಳನ್ನು ಸೂಚಿಸುತ್ತಿದೆ. ಇಂತಹದರ ಹಿನ್ನೆಲೆಯಲ್ಲಿ ಭಾರತದ ಇತಿಹಾಸದಲ್ಲಿ ಹಲವು ಜನಾಂಗಗಳ ರಾಜಕೀಯ ಸಂಘರ್ಷಗಳನ್ನು, ಅವು ತುಳಿದ ಹಾದಿಯನ್ನು

ನೋಡಿದರೆ ಆರ್ಥಿಕವಾಗಿ, ರಾಜಕೀಯವಾಗಿ ಬಲಶಾಲಿಗಳಾದವರು ಈ ನೆಲದ ಸಾಂಸ್ಕೃತಿಕ - ಸಾಮಾಜಿಕ ರಚನೆಯ ಮೇಲೆ ನಡೆಸಿದ ದಬ್ಬಾಳಿಕೆ ಅರ್ಥವಾಗುತ್ತದೆ. ಸಾವಿರಾರು ವರ್ಷಗಳಿಂದ ಅಕ್ಷರಗಳಿಂದ ವಂಚಿತರಾಗಿದ್ದ ಶೂದ್ರ ಸಮುದಾಯ ಸ್ವಾತಂತ್ರ್ಯಾನಂತರದಲ್ಲಿ ಈ ಅವಕಾಶ ಪಡೆದಂತೆ ರಾಜಕೀಯ ಅಧಿಕಾರ ಪಡೆಯುವ ಸಹಜ ಆಕಾಂಕ್ಷೆಯನ್ನು ತುಳಿಯುವ ಯತ್ನದಲ್ಲಿ ಮೇಲ್ಜಾತಿಗಳಿವೆ. ಹೀಗಿರುವಾಗ ಯಾವಾಗಲೂ ಈ ದೇಶದ ಕಾನೂನಿಗೆ ಬದ್ಧರಾದವರಲ್ಲ, ಭಾರತದ ಬಗ್ಗೆ ದೇಶಾಭಿಮಾನವಿಲ್ಲ ಎಂಬಂತಹ ಆರೋಪಗಳನ್ನೆದುರಿಸುತ್ತಾ ಸದಾ ಆತಂಕದಲ್ಲಿ ಬದುಕು ನಡೆಸುವ ಮುಸ್ಲಿಂ ಸಮುದಾಯದ ರಾಜಕೀಯ ಬದುಕನ್ನು ಕುರಿತು ಆಶಾದಾಯಕವಾಗಿರುವುದು ಹೇಗೆ ? ಅಲ್ಲದೆ 'ಅಲ್ಪಸಂಖ್ಯಾತರು' ಎಂಬ ರಾಜಕೀಯ ಪರಿಭಾಷೆಯಲ್ಲಿ ಮುಸ್ಲಿಮರು ಮಾತ್ರ ಸೇರುತ್ತಾರೆ ಎಂಬಂತಹ ಪೂರ್ವಗ್ರಹಿಕೆಗಳನ್ನಿಟ್ಟುಕೊಂಡ ಹಿಂದೂ ಮೂಲಭೂತವಾದ ಮುಸ್ಲಿಮರ ಕುಟುಂಬಗಳ ನೆಲೆಯಿಂದ ಅವರ ಒಟ್ಟಾರೆ ಸಮಾಜದ ಬಗ್ಗೆ ಕೂಡ ಅನೇಕ ಬಗೆಯ ಹಸಿಸುಳ್ಳುಗಳನ್ನು ಹರಡುತ್ತಿರುತ್ತದೆ. ಇಂತಹದ್ದರ ನಡುವೆ ಅಲ್ಪಸಂಖ್ಯಾತರಲ್ಲಿ ಅಲ್ಪ ಸಂಖ್ಯಾತರಾಗಿರುವ ಪಿಂಜಾರರ ರಾಜಕೀಯ ಬದುಕನ್ನು ಕುರಿತು ಚಿಂತಿಸಬೇಕಾಗಿದೆ.

ಪಿಂಜಾರರ ರಾಜಕೀಯ ಬದುಕನ್ನು ಕುರಿತು ಚಿಂತಿಸುವಾಗ ಸ್ವಾತಂತ್ರ್ಯೋತ್ತರ ಭಾರತದ ರಾಜಕಾರಣದ ದಿಕ್ಕುದೆಸೆಗಳು ನೆನಪಿನಲ್ಲಿರಬೇಕಾದುದರಿಂದ ಈವರೆಗಿನ ಮಾತುಗಳನ್ನು ಹೇಳಬೇಕಾಯಿತು. ಸ್ವಾತಂತ್ರ್ಯಪೂರ್ವದಲ್ಲಿ ಭಾರತೀಯ ರಾಜಕೀಯ ಬದುಕಿನಲ್ಲಿ ಮಹತ್ತರವಾದ ಹೆಜ್ಜೆ ಗುರುತುಗಳನ್ನಿಟ್ಟ ಮುಸ್ಲಿಂ ನಾಯಕರು ಮತ್ತು ಅಧಿಕಾರಿಗಳು ಕೂಡ ಮುಸ್ಲಿಂ ಸಮುದಾಯ ಈ ನೆಲದಲ್ಲಿ ಅನುಭವಿಸುತ್ತ ಬಂದ ಆತಂಕಗಳನ್ನು ಎದುರಿಸಿದ್ದಾರೆ. ಮತ್ತು ವಿಶೇಷವೆಂದರೆ ಆ ನಾಯಕರ ಮೇಲೆ ಅವಿಚ್ಛಿನ್ನ ವಿಶ್ವಾಸ ತೋರಿದ ಹಿಂದೂ ರಾಜಕೀಯ ಪ್ರಮುಖರು ಅವರಿಂದ ಅತ್ಯುತ್ತಮ ಸೇವೆಯನ್ನು ಪಡೆದಿದ್ದಾರೆ. ಸ್ವಾತಂತ್ರ್ಯಪೂರ್ವದ ಭಾರತದ ರಾಜಕಾರಣದಲ್ಲಿ ಹಿಂದೂ ಮೂಲಭೂತವಾದಿಗಳು ಕ್ರಿಯಾಶೀಲವಾಗಿದ್ದರೂ ಅವರು ಮುಸ್ಲಿಂ ಸಮುದಾಯವನ್ನು ಕುರಿತಂತೆ ತಮ್ಮ ಎಂದಿನ ಅನುಮಾನಗಳನ್ನಿಟ್ಟುಕೊಂಡೇ ಇದ್ದರು ಎನ್ನುವುದು ತಿಳಿಯುತ್ತದೆ. ಹಿಂದೂ ಧಾರ್ಮಿಕ ಸಂಘಟನೆಗಳ ವಿಚಾರಧಾರೆಯಲ್ಲಿ ಮುಸ್ಲಿಮರ ಹೊರತಾದ ಭಾರತದ ಕಲ್ಪನೆಯಿದ್ದುದರಲ್ಲಿ ಆಶ್ಚರ್ಯವಿಲ್ಲ ಮತ್ತು ಅದಕ್ಕೆ ಪೂರಕವಾಗಿ ಅವು ಸ್ವಾತಂತ್ರ್ಯ ಹೋರಾಟದ ದಿಕ್ಕುಗಳನ್ನು ರೂಪಿಸುತ್ತಿದ್ದವು. ಮುಸ್ಲಿಮರನ್ನು ಒಟ್ಟಾರೆಯಾಗಿ ದೂರವಿಡುವ ಅವುಗಳ ಪ್ರಯತ್ನವೇ ಭಾರತದ ವಿಭಜನೆಗೆ ಪರೋಕ್ಷ ಕಾರಣವಾಯಿತೆನ್ನುವುದನ್ನು ಮರೆಯುವಂತಿಲ್ಲ. ಶತಮಾನಗಳಿಂದ ಇಲ್ಲಿನ ನೆಲದ ಸಂಸ್ಕೃತಿಯ ಸಂವೇದನೆಗಳ ಭಾಗವಾಗಿ ಬದುಕಿದ ಈ ಸಮುದಾಯವನ್ನು ಕೂಡ ಶೂದ್ರರಂತೆ ಸಾಮಾಜಿಕ-ರಾಜಕೀಯ ಪ್ರಧಾನ ಧಾರೆಯಿಂದ ದೂರವಿಡುವುದು ಸಾಧ್ಯವಾಗದೇ ಹೋದಾಗ ಇದು ಅನಿವಾರ್ಯವಾಯಿತು. ಇಸ್ಲಾಂನ ಸಾಮಾಜಿಕ ಕಾರ್ಯಕ್ರಮಗಳು ಉಂಟು ಮಾಡಿದ ಸಾಮುದಾಯಿಕ ಎಚ್ಚರವನ್ನು ಪುರೋಹಿತಶಾಹಿ ವ್ಯವಸ್ಥೆ ತನಗೊದಗಿದ ಅಪಾಯವೆಂದೇ ಪರಿಗಣಿಸಿದಂತಿದೆ. ಆದುದರಿಂದಲೇ ಬ್ರಿಟೀಷರು ಭಾರತವನ್ನು ಆಳುವಾಗ ಕೂಡ ಕರ್ನಾಟಕದಲ್ಲಿ ಟಿಪ್ಪು ಮತ್ತು ಮೈಸೂರರಸರ ಆಳ್ವಿಕೆಯ ಬಹುಮುಖ್ಯ ಅಧಿಕಾರ

ಕೇಂದ್ರವನ್ನು ಹೊಂದಿದ್ದ ಬ್ರಾಹ್ಮಣರು ಸರ್ ಮಿರ್ಜಾ ಇಸ್ಮಾಯಿಲ್ ಅವರು ದಿವಾನರಾದಾಗ ಕರುಬಿದರು. ಇಸ್ಮಾಯಿಲ್ ಅವರಂತಹ ಮೇಧಾವಿ ಸರ್ ಎಂ. ವಿಶ್ವೇಶ್ವರಯ್ಯನವರು ಆರಂಭಿಸಿದ ಅನೇಕ ದೂರದೃಷ್ಟಿಯ ಸಾಮಾಜಿಕ ಕೈಗಾರಿಕಾ ಪ್ರಗತಿಯ ಕಾರ್ಯಗಳನ್ನು ಸಮರ್ಥವಾಗಿ ಮುಂದುವರಿಸಿದರು. ಅವರ ಕಾರ್ಯವೈಖರಿಯನ್ನು ಸ್ವತಃ ರಾಜರೇ ಮೆಚ್ಚಿಕೊಳ್ಳುತ್ತಿದ್ದರೂ ಪುರೋಹಿತಶಾಹಿ ಮನಸ್ಸಿಗೆ ಇಸ್ಮಾಯಿಲ್ ವಿರುದ್ಧ ಏನಾದರೊಂದು ಪಿತೂರಿ ಮಾಡಬೇಕೆಂದು ಅನಿಸುತ್ತಿತ್ತು. ಅವರ ಈ ರೋಗಗ್ರಸ್ತ ಮನಸ್ಸಿಗೆ ಇಸ್ಮಾಯಿಲ್ ಅವರು 'ಮುಸ್ಲಿಂ' ಎಂಬುದು ತಕ್ಷಣ ಹೊಳೆಯುತ್ತದೆ. ಮರುಕ್ಷಣ ಸಣ್ಣ ನೆಪವೊಂದನ್ನು ಸೃಷ್ಟಿಸಿ ಇಸ್ಮಾಯಿಲ್ 'ಹಿಂದೂ ಸಂಸ್ಕೃತಿ'ಯ ವಿರೋಧಿ ಎಂಬ ಹಣೆಪಟ್ಟಿ ಹಚ್ಚಲಾಗುತ್ತದೆ. ಸರ್ ಮಿರ್ಜಾ ಇಸ್ಮಾಯಿಲ್ ಅವರು ಮೈಸೂರಿಗೆ ಮಾಡಿದ ಸೇವೆಯನ್ನು ಅಪಾರವಾಗಿ ಮೆಚ್ಚುತ್ತಾ ಅರಸರು ಅವರ ಬಗ್ಗೆ ಇಟ್ಟುಕೊಂಡಿದ್ದ ಪ್ರೀತಿ, ವಿಶ್ವಾಸ ಮತ್ತು ಪುರೋಹಿತಶಾಹಿ ಮನಸ್ಸು ಅವರ ಮೇಲೆ ಮಾಡಿದ ಪಿತೂರಿಯನ್ನು ಇಸ್ಮಾಯಿಲ್ ಅವರ ಸಮಕಾಲೀನರೂ ಆಗಿನ ಮೈಸೂರು ಸರಕಾರದಲ್ಲಿ ರೈಲ್ವೆ, ನೀರಾವರಿ, ಲೋಕೋಪಯೋಗಿ, ಶಿಕ್ಷಣ, ಸಹಕಾರ, ಪೊಲೀಸ್, ಕೈಗಾರಿಕೆ ಮತ್ತು ವಿದ್ಯುಚ್ಛಕ್ತಿಗಳಂತಹ ಬಹುಮುಖ್ಯ ಇಲಾಖೆಗಳ ಮಂತ್ರಿಯೂ ಆಗಿದ್ದ ಮಹಮದ್ ಇಮಾಂ ಅವರು ಹೀಗೆ ನೆನೆಯುತ್ತಾರೆ. 'ಸರ್ ಮಿರ್ಜಾರವರು ಬೆಂಗಳೂರು ನಗರವನ್ನು ಅಭಿವೃದ್ಧಿ ಪಡಿಸಲು ಬಹಳ ಆಸಕ್ತರಾಗಿದ್ದರು. ಅವರು ಪ್ರತಿದಿವಸವೂ ಬೆಳಿಗ್ಗೆ ಕುದುರೆ ಸವಾರಿಯಿಂದ ಇಂಜನಿಯರ್ ಮುಂತಾದ ಅಧಿಕಾರಿಗಳೊಂದಿಗೆ ನಗರದ ನಾನಾ ಭಾಗಗಳನ್ನು ಪರಾಂಬರಿಸಿ ಸೂಕ್ತವಾದ ಸಲಹೆ ಕೊಡುತ್ತಿದ್ದರು. ಶ್ರೀ ಅಬ್ಬಾಸ್‌ಖಾನ್‌ರಲ್ಲಿ ಮಿರ್ಜಾರವರಿಗೆ ಬಹಳ ನಂಬಿಕೆಯಿದ್ದಿತು. ಸರ್ ಮಿರ್ಜಾರವರು ಒಂದು ಅಶ್ವತ್ಥ ವೃಕ್ಷವನ್ನು ಕಡಿಯಲು ಆಜ್ಞೆ ಮಾಡಿದರೆಂದು ಕೆಲವರು ಕೋಮುವಾರು ಭಾವನೆಯನ್ನು ಆರೋಪಿಸಲು ಪ್ರಯತ್ನಿಸಿದರು. ೧೯೨೭ರಲ್ಲಿ ವಿಜಯದಶಮಿ ಮಹೋತ್ಸವಕ್ಕೆ ಶ್ರೀಮನ್ಮಹಾರಾಜರು ಬನ್ನಿಮಂಟಪಕ್ಕೆ ದಯಮಾಡಿಸಿ ಪೂಜಾದಿಗಳನ್ನು ಸಲ್ಲಿಸಿ ಜಂಬೂಸವಾರಿಯಿಂದ ಅರಮನೆಗೆ ಮರಳಿ ಹೊರಡುವಾಗ ಶ್ರೀಮನ್ಮಹಾರಾಜರ ಆಜ್ಞೆಯ ಮೇರೆಗೆ ಸರ್ ಮಿರ್ಜಾರವರು ಅಲಂಕರಿಸಿದ ಆನೆಯ ಮೇಲೆ ಸುವರ್ಣದ ಅಂಬಾರಿಯಲ್ಲಿ ಅವರ ಹಿಂದೆ ಕುಳಿತುಕೊಂಡರು. ಈ ಸಂಪ್ರದಾಯವು ಹಿಂದೆ ಇರಲಿಲ್ಲ. ಜಂಬೂ ಸವಾರಿಯು ಹೊರಟಿತು. ಇದು ಕೆಲವರಿಗೆ ಅಸಮಾಧಾನವನ್ನುಂಟು ಮಾಡಿತು. ಜಂಬೂ ಸವಾರಿಯು ಅರಮನೆಯ ಉತ್ತರದ ಮಹಾದ್ವಾರವನ್ನು ಸಮೀಪಿಸಿದಾಗ ಕೆಲವು ಅಸೂಯಾಪರರು ಗಲಭೆ ಮಾಡಿದ ಪ್ರಯುಕ್ತ ಅಂಬಾರಿ ಹೊತ್ತ ಆನೆಯು ಬೆದರಿ ಓಡಲಾರಂಭಿಸಿತು. ಮಾವಟಿಗನು ಕಷ್ಟಪಟ್ಟು ಅದನ್ನು ಹತೋಟಿಗೆ ತಂದುದರಿಂದ ಮಹಾರಾಜರು, ದಿವಾನರು ಕ್ಷೇಮದಿಂದ ಅರಮನೆಯನ್ನು ಸೇರಿದರು. ಮುಸಲ್ಮಾನ್ ದಿವಾನರು ಅಂಬಾರಿಯಲ್ಲಿ ಕುಳಿತುಕೊಳ್ಳಬಹುದೇ ಎಂಬ ವಿಷಯವು ಅಲ್ಲಲ್ಲಿ ತೀವ್ರವಾಗಿ ಚರ್ಚೆಯಾಗುತ್ತಿದ್ದಿತು'1.

ಇಮಾಂ ಅವರು ಮುಂದುವರಿದು ಅಂತಹದ್ದೇ ಪಿತೂರಿಯ ಮತ್ತೊಂದು ಘಟನೆಯನ್ನು ಹೀಗೆ ದಾಖಲಿಸುತ್ತಾರೆ. 'ಕೆಲವು ದಿವಸಗಳ ನಂತರ ಬೆಂಗಳೂರಿನಲ್ಲಿ ಒಂದು ವಿಷಾದ ಘಟನೆಯು ನಡೆಯಿತು. ಸುಲ್ತಾನಪೇಟೆಯ ಸ್ಕೂಲಿನ ಆವರಣದಲ್ಲಿ ವಿದ್ಯಾಗಣಪತಿಯ ಪೀಠವಿದೆ. ಪ್ರತಿವರುಷ ಗಣೇಶಚೌತಿಯ ದಿವಸ ಗಣಪತಿದೇವರಿಗೆ ವಿಜೃಂಭಣೆಯಿಂದ ಪೂಜೆಯು ಜರುಗುತ್ತದೆ. ಈ ಸ್ಕೂಲು ಶ್ರೀ ಅಬ್ಬಾಸ್‌ಖಾನ್‌ರ

ಮನೆಯ ಮುಂದೆಯೇ ಇದೆ. ಆ ವರುಷ ಉತ್ಸವ ಸಮಯದಲ್ಲಿ ಬಹಳ ಜನ ಸೇರಿದ್ದರು. ಯಾವ ಕಾರಣದಿಂದಲೋ ಹಿಂದೂ-ಮುಸ್ಲಿಂರ ಮಧ್ಯೆ ಘರ್ಷಣೆ ಪ್ರಾರಂಭವಾಯಿತು. ಶ್ರೀ ಅಬ್ಬಾಸ್‌ಖಾನ್‌ರ ಮನೆಯಿಂದ ರಿವಾಲ್ವರ್ ಗುಂಡು ಹಾರಿಸಲಾಯಿತು ಎಂದು ಪ್ರಚಾರ ಮಾಡಲಾಯಿತು. ಈ ಘರ್ಷಣೆಗೆ ಅಬ್ಬಾಸ್‌ಖಾನ್‌ರು ಮೂಲ ಕಾರಣರು ಎಂದೂ ಅವರಿಗೆ ಸರ್ ಮಿರ್ಜಾರವರ ಬೆಂಬಲವಿರುವುದು ಎಂದೂ ವದಂತಿ ಬೆಳೆದು ಸರ್ ಮಿರ್ಜಾರವರಿಗೆ ಅಪಕೀರ್ತಿ ತರುವ ಪ್ರಯತ್ನವು ಮುಂದುವರಿಯಿತು. ಮಹಾರಾಜರು ಅವರಲ್ಲಿಟ್ಟಿದ್ದ ನಂಬಿಕೆಗೆ ಧಕ್ಕೆ ತರಲು ಬಹಳ ಪ್ರಚಾರವು ನಡೆಯಿತು. ಆದರೆ ಕೃಷ್ಣರಾಜ ಒಡೆಯರಿಗೆ ಅವರಲ್ಲಿದ್ದ ನಂಬಿಕೆ ಮತ್ತು ವಿಶ್ವಾಸಗಳು ತಿಲಮಾತ್ರವೂ ಕಡಿಮೆಯಾಗಲಿಲ್ಲ. ಸರ್ ಮಿರ್ಜಾರವರು ಧೈರ್ಯವಾಗಿ ತಮ್ಮ ಕೆಲಸವನ್ನು ಮಾಡಬೇಕಾಗಿ ಅವರಿಗೆ ಆಶ್ವಾಸನೆ ಕೊಟ್ಟರು. ಆ ವರುಷದ ಜಂಬೂ ಸವಾರಿಯಲ್ಲಿ 'ಸರ್ ಮಿರ್ಜಾರವರು ಪುನಃ ಆನೆಯ ಮೇಲಿನ ಅಂಬಾರಿಯಲ್ಲಿ ಹಿಂದಿನ ವರ್ಷದಂತೆ ಮಹಾರಾಜರ ಹಿಂಭಾಗದಲ್ಲಿ ಕುಳಿತಿದ್ದರು. ಮಹಾರಾಜರು ಈ ರೀತಿಯಾಗಿ ಮಿರ್ಜಾರವರಲ್ಲಿದ್ದ ತಮ್ಮ ಪೂರ್ಣ ನಂಬಿಕೆಯನ್ನು ವ್ಯಕ್ತಪಡಿಸಿದರು. ಅಲ್ಲಿಂದ ಸರ್ ಮಿರ್ಜಾರವರು ಎಂದಿನಂತೆ ತಮ್ಮ ವಿನಯ, ಸರಳ ಸ್ವಭಾವದಿಂದ ಜನಗಳ ವಿಶ್ವಾಸವನ್ನು ಸಂಪಾದಿಸತೊಡಗಿದರು. ಅವರ ಪುರೋಭಿವೃದ್ಧಿ ಕಾರ್ಯಗಳನ್ನು ನೋಡುತ್ತಾ, ಅವರನ್ನು ಹಿಂದೆ ಕಟುವಾಗಿ ಟೀಕಿಸುತ್ತಿದ್ದವರೂ ಸಹ ಅವರ ಹಿತೈಷಿಗಳಾದರು'2

ಇದು ಹಿಂದೂ ಧಾರ್ಮಿಕ ಮೂಲಭೂತವಾದಿಗಳು, ಅಸಹಿಷ್ಣುಗಳು ಮುಸ್ಲಿಂ ನಾಯಕರು ಮತ್ತು ಅಧಿಕಾರಿಗಳನ್ನು ಕುರಿತಂತೆ ನಡೆದುಕೊಳ್ಳುವ ರೀತಿಯಾಗಿದೆ. ಮುಸಲ್ಮಾನನಾದವನು ಪ್ರಾಮಾಣಿಕನೂ, ದಕ್ಷನೂ ಆಗಿದ್ದರೇ ಹೀಗೆ, ಇನ್ನು ಭ್ರಷ್ಟನೂ ಕುತಂತ್ರಿಯೂ ಆಗಿಬಿಟ್ಟನೆಂದರೆ ಅದು ಹಿಂದೂ ಸಮುದಾಯದವನೊಬ್ಬನ ಭ್ರಷ್ಟತೆಗಿಂತ ಹೆಚ್ಚಿನ ಅಪರಾಧವಾಗಿಬಿಡುತ್ತದೆ. ಇಮಾಂ ಅವರು ಬದುಕಿ ಬಾಳಿದ ಕಾಲದಲ್ಲಿ ಇಂತಹ ಘಟನೆಗಳು ನಡೆದಿವೆ. ಅವುಗಳನ್ನು ಅವರು ಕೂಡ ಬಹಳ ಮುತ್ಸದ್ದಿತನದಿಂದ ಹೇಳಿದ್ದಾರೆ. ಇಂತಹ ಸಾಮಾಜಿಕ ಮನೋಭಾವವಿರುವಾಗ ಪಿಂಜಾರರು ರಾಜಕೀಯವಾಗಿ ಹೇಗೆ ನಿರ್ಲಕ್ಷ್ಯವನ್ನು ಅನುಭವಿಸಿದರು ಎಂಬುದನ್ನು ಇಮಾಂ ಅವರ ಜೀವನವನ್ನು ನೋಡಿದರೆ ತಿಳಿಯುತ್ತದೆ. ಮತ್ತು ಆಗಿನ ಕಾಲಕ್ಕೆ ಬ್ರಾಹ್ಮಣರ ಹೊರತಾಗಿ ಇತರ ಸಮುದಾಯಗಳಲ್ಲಿ ತಮ್ಮ ಜಾತೀಯ ಸಂಘಟನೆ ಹಾಗೂ ಅಭಿವೃದ್ಧಿ ಕುರಿತಾದ ಸಾಮಾಜಿಕ ಕಳಕಳಿಗಳು ಇರಲಿಲ್ಲ. ಆಗಿನ ಸಾಮಾಜಿಕ ಪ್ರಗತಿ ಎಂದರೆ ಸರ್ವ ಜನಾಂಗದವರ ಅಭಿವೃದ್ಧಿಯೇ ಆಗಿತ್ತು.

ಶ್ರೀ ಇಮಾಂಸಾಬ್ ಅವರು ಜಗಳೂರಿನ ಹತ್ತಿರದ ಮರೇನಹಳ್ಳಿಯ ಶ್ರೀಮಂತ ಕುಟುಂಬಕ್ಕೆ ಸೇರಿದವರು. ಅವರ ತಾತನ ಕಾಲದಿಂದಲೂ ಸ್ಥಳೀಯವಾಗಿ ರಾಜಕೀಯ ಸ್ಥಾನಮಾನಗಳನ್ನು ಅನುಭವಿಸಿದ ಮನೆತನ ಅವರದಾಗಿತ್ತು. ವಾಸ್ತವವಾಗಿ ಪಿಂಜಾರರ ರಾಜಕೀಯ ಬದುಕನ್ನು ಇವರಿಂದಲೆ ಆರಂಭಿಸಬೇಕು. ಇಡೀ ಹಳೇ ಮೈಸೂರು ರಾಜ್ಯದಲ್ಲಿ ಜಗಳೂರು ಇಮಾಂ ಸಾಬ್ ಅವರು ನಿಸ್ವಾರ್ಥ ಸೇವೆಗೆ, ಪ್ರಾಮಾಣಿಕತೆಗೆ, ಹಿಂದೂ-ಮುಸ್ಲಿಂ ಬಾಂಧವ್ಯಕ್ಕೆ ಹೆಸರಾಗಿದ್ದಾರೆ. ಅವರು ತಮ್ಮನ್ನು ತಾವು

ಎಂದೂ ಪಿಂಜಾರರು ಅಥವಾ ಮುಸಲ್ಮಾನರು ಎಂದು ಎಲ್ಲಿಯೂ ಹೇಳಿಕೊಂಡಿಲ್ಲವಾದರೂ ಅವರ ಹೆಸರಿನ ಕಾರಣಕ್ಕಾಗಿ ಮುಸ್ಲಿಂ ಎಂದೇ ತಿಳಿಯುವುದು ಸಹಜವಾಗಿತ್ತು. ಪಿಂಜಾರರು ತಮ್ಮ ಇತಿಹಾಸದುದ್ದಕ್ಕೂ ತಾವು ಮುಸ್ಲಿಮರೆಂದೇ ಪರಿಗಣನೆಗೆ ಬರುತ್ತಿರುವುದು ಮತ್ತು ಈ ಬಗೆಯ ಗುರುತಿಸುವಿಕೆಗಿಂತ ಭಿನ್ನವಾಗಿ ತಮ್ಮ ಐಡೆಂಟಿಟಿಯನ್ನು ಕಂಡುಕೊಳ್ಳಬೇಕೆಂಬ ಪ್ರಜ್ಞೆ ಅವರಿಗಿಲ್ಲದಿರುವುದು ಅವರ ಹಿಂದೂ-ಮುಸ್ಲಿಂ ಧಾರ್ಮಿಕ ನೆಲೆಗಳ ಉಭಯರೂಪವನ್ನು ಹೇಳುತ್ತದೆ. ಮತ್ತು ಹಿಂದೆ ಕಂಡುಕೊಂಡಂತೆ ಅವರ ಆಚರಣೆಗಳ ನೆಲೆ ಕೂಡ ಇದನ್ನು ಸಮರ್ಥಿಸುತ್ತದೆ. ಇಮಾಂ ಅವರ ಜೀವಿತದ ಕಾಲ ಹೀಗೆ ಜಾತಿಯ ಮೂಲಕ ಸಾಮಾಜಿಕ-ರಾಜಕೀಯ ಅಧಿಕಾರವನ್ನು ಪಡೆಯುವಂತಹದ್ದಾಗಿರಲಿಲ್ಲ. ಅವರ ಕಣ್ಣೆದುರಿಗಿರುತ್ತಿದ್ದುದು ಕೇವಲ ಸಮಾಜ ಮತ್ತು ಆ ಸಮಾಜದ ಒಟ್ಟಾರೆ ಪ್ರಗತಿ. ಇವತ್ತು 'ಸಮಾಜ' ಅನ್ನುವ ಪದ ಕೂಡ ಸೀಮಿತ ಅರ್ಥ ಪಡೆದುಕೊಂಡು ಬಿಟ್ಟಿದೆ. ಇಮಾಂ ಅವರ ಕ್ರಿಯಾಶೀಲತೆಯ ಅವಧಿಯಲ್ಲಿ ಒಟ್ಟು ಮೈಸೂರು ನಾಡಿನ ಎಲ್ಲ ಕ್ಷೇತ್ರಗಳ ಅಭಿವೃದ್ಧಿಯ ಕನಸುಗಳಿದ್ದವು. ಆ ಕನಸುಗಳನ್ನು ನನಸು ಮಾಡಲು ಬೇಕಾದ ಪ್ರಾಮಾಣಿಕತೆ ಮತ್ತು ದಕ್ಷತೆ ಅವರಿಗಿತ್ತು. ಅವರ ಕಾರ್ಯಗಳಿಗೆ ಬೆಂಬಲವಾಗಿ ಆಡಳಿತ ಕೇಂದ್ರವೂ ಪ್ರೋತ್ಸಾಹಿಸುತ್ತಿತ್ತು. ನಾಲ್ವಡಿ ಕೃಷ್ಣರಾಜ ಒಡೆಯರ ಪ್ರೀತಿ-ವಿಶ್ವಾಸಗಳಿಗೆ ಪಾತ್ರರಾಗಿದ್ದ ಮಿರ್ಜಾರಂತೆಯೇ ಇಮಾಂ ಅವರು ಜಗಳೂರಿನ ಪುರಸಭಾಧ್ಯಕ್ಷರಾಗಿ, ಚಿತ್ರದುರ್ಗ ಜಿಲ್ಲಾ ಬೋರ್ಡಿನ ಅಧ್ಯಕ್ಷರಾಗಿ ನಿರ್ವಹಿಸಿದ ಕಾರ್ಯವೈಖರಿ ಮೈಸೂರು ಮಹಾರಾಜರ ಮೆಚ್ಚುಗೆಗೆ ಪಾತ್ರವಾಗುತ್ತದೆ. ಆಗಿನ ಮೈಸೂರಿನ ಗಡಿಜಿಲ್ಲೆಯಾದ ಚಿತ್ರದುರ್ಗಕ್ಕೆ ಮಹಾರಾಜರು ಭೇಟಿ ಕೊಡುವಷ್ಟರ ಮಟ್ಟಿಗೆ ಇಮಾಂ ಮತ್ತು ಮಹಾರಾಜರ ವಿಶ್ವಾಸವಿತ್ತು. ತಮ್ಮ ಕುಟುಂಬದಲ್ಲೇ ರಾಜಕೀಯ ನಂಟು ಬೆಸೆದುಕೊಂಡು ಬಂದುದರ ಪರಿಣಾಮವಾಗಿ ಇಮಾಂ ಅವರು ವಕೀಲಿ ವೃತ್ತಿಯನ್ನು ಕೈಬಿಟ್ಟು ೧೯೨೬ರ ಹೊತ್ತಿಗೆ ಜಿಲ್ಲಾ ಬೋರ್ಡ್ ಚುನಾವಣೆಯಲ್ಲಿ ಸ್ಪರ್ಧಿಸಿ ಗೆಲ್ಲುತ್ತಾರೆ. ೧೯೨೮ರಲ್ಲಿ ಮೈಸೂರು ವಿಶ್ವವಿದ್ಯಾನಿಲಯದ ಸೆನೆಟ್ ಸದಸ್ಯರಾಗಿ ಆ ಮೂಲಕ ಮೈಸೂರು ಸರ್ಕಾರದ ಪ್ರಜಾಪ್ರತಿನಿಧಿ ಸಭೆಯ ಸದಸ್ಯತ್ವ ಪಡೆಯುತ್ತಾರೆ. ೧೯೩೩ರಲ್ಲಿ ಜಗಳೂರಿನ ಪುರಸಭೆಯ ಪ್ರಥಮ ಅಧ್ಯಕ್ಷರಾಗಿ, ೧೯೩೬ ರಿಂದ ೧೯೪೧ರವರೆಗೆ ಜಿಲ್ಲಾ ಬೋರ್ಡಿನ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಾರೆ. ನಂತರ ಮೈಸೂರು ಮಹಾರಾಜರ ಮಂತ್ರಿಮಂಡಲದಲ್ಲಿ ಖಾಸಗಿ ಮಂತ್ರಿಗಳಾಗಿ ನೇಮಕಗೊಂಡು ರೈಲ್ವೆ, ಅಬಕಾರಿ, ನೀರಾವರಿ, ಲೋಕೋಪಯೋಗಿ, ಶಿಕ್ಷಣ, ಸಹಕಾರ, ಪೊಲೀಸ್, ಕೈಗಾರಿಕೆ ಹಾಗೂ ವಿದ್ಯುಚ್ಛಕ್ತಿ ಖಾತೆಗಳನ್ನು ಒಬ್ಬರೇ ಸಮರ್ಥವಾಗಿ ನಿಭಾಯಿಸಿ ಮಹಾರಾಜರಿಂದ ಮುಷೀರ್-ಉಲ್-ಮುಲ್ಕ್ ಪ್ರಶಸ್ತಿ ಪಡೆಯುತ್ತಾರೆ.

ಇಮಾಂ ಅವರು ಮಹಾರಾಜರ ಆಡಳಿತದಲ್ಲಿ ನಿರ್ವಹಿಸಿದ ಜವಾಬ್ದಾರಿಗಳು, ನಂತರ ಭಾರತ ಸ್ವಾತಂತ್ರ್ಯವನ್ನು ಪಡೆಯುತ್ತಿದ್ದಂತೆಯೇ ಮಹಾರಾಜರ ಆಳ್ವಿಕೆಯನ್ನು ಕೊನೆಗೊಳಿಸುವ ಕಾಂಗ್ರೆಸ್‌ನ ತೀರ್ಮಾನಗಳು ಇಮಾಂ ಅವರ ರಾಜಕೀಯ ಜೀವನದ ಮತ್ತೊಂದು ದಿಕ್ಕನ್ನು ರೂಪಿಸುತ್ತವೆ. ಈ ಕುರಿತಾದ ಒಂದು ಮಾಹಿತಿ ಹೀಗಿದೆ : 'ಸ್ವಾತಂತ್ರ್ಯನಂತರ ಪ್ರಥಮ ಬಾರಿಗೆ ಶ್ರೀ ಚಂಗಲರಾಯರೆಡ್ಡಿಯವರ ಪ್ರಜಾಸರ್ಕಾರದಲ್ಲಿ ಲೆಜಿಸ್ಲೇಟಿವ್ ಸದಸ್ಯರಾಗಿದ್ದ ಇಮಾಮರು ಎಲ್ಲೆಲ್ಲಿಯೂ 'ಕಾಂಗ್ರೆಸ್ ಸನ್ನಿ'

ಹಿಡಿದಿದ್ದ ಆಗಿನ ಕಾಲಕ್ಕೆ ಹತ್ತು ಮಂದಿಯ ಒಂದು ಪುಟ್ಟ ಗುಂಪಿನೊಂದಿಗೆ ಪ್ರಥಮ ವಿರೋಧಿ ಪಕ್ಷದ ನಾಯಕರಾಗಿ ಗುರುತಿಸಿಕೊಂಡು ಜವಾಬ್ದಾರಿಯಿಂದ ಸರ್ಕಾರದ ಕೆಲಸ ಕಾರ್ಯಗಳನ್ನು ರಚನಾತ್ಮಕವಾಗಿ ಟೀಕಿಸುತ್ತಿದ್ದರು.

ಈ ಮಧ್ಯೆ ರಾಜ್ಯದ ಏಕೀಕರಣಕ್ಕಾಗಿಯೂ ಇಮಾಮರು ಶ್ರಮಿಸುತ್ತಾರೆ. ೧೯೫೨ರ ಸಾರ್ವತ್ರಿಕ ಚುನಾವಣೆಯಲ್ಲಿ ಸ್ಪರ್ಧಿಸಿ ಶಾಸನಸಭೆಗೆ ಪುನಃ ಕಿಸಾನ್ ಮಜ್ದೂರ್ ಪ್ರಜಾಪಾರ್ಟಿಯ ಅಭ್ಯರ್ಥಿಯಾಗಿ ಗೆದ್ದು ವಿರೋಧಿ ನಾಯಕರಾಗಿ ಮುಂದುವರಿಯುತ್ತಾರೆ.

ಅವರ ಬದುಕಿನ ಸ್ಪೂರ್ತಿಯಾಗಿದ್ದ ಧರ್ಮಪತ್ನಿ ಶ್ರೀಮತಿ ಚಮನ್ ಬಿ ೧೯೫೬ರಲ್ಲಿ ತೀರಿಕೊಳ್ಳುತ್ತಾರೆ. ಆದರೂ ಅದರಿಂದ ಧೃತಿಗೆಡದೆ ೧೯೫೭ರ ಲೋಕಸಭಾ ಚುನಾವಣೆಯಲ್ಲಿ ಪಿ.ಎಸ್.ಪಿ.ಯಿಂದ ಸ್ಪರ್ಧಿಸಿ ಗೆಲ್ಲುತ್ತಾರೆ. ಈ ಸಂದರ್ಭದಲ್ಲಿ ಶ್ರೀಯುತರು ಜರ್ಮನಿ ಪ್ರವಾಸವನ್ನು ಕೈಗೊಳ್ಳುತ್ತಾರೆ. ೧೯೬೨ರ ಚುನಾವಣೆಯಲ್ಲಿ ಪ್ರಥಮಬಾರಿಗೆ ಲೋಕಸಭಾ ಚುನಾವಣೆಯಲ್ಲಿ ಸೋಲನುಭವಿಸುತ್ತಾರೆ. ಪುನಃ ೧೯೬೭ರಲ್ಲಿ ಚಿತ್ರದುರ್ಗ ಕ್ಷೇತ್ರದಿಂದ ಲೋಕಸಭೆಗೆ ಸ್ಪರ್ಧಿಸಿ ಗೆಲ್ಲುತ್ತಾರೆ. ಈ ವೇಳೆಯಲ್ಲಿಯೂ ಅವರು ಭಾರತದ ಪ್ರತಿನಿಧಿಯಾಗಿ ವಿಶ್ವಸಂಸ್ಥೆಯನ್ನು ಪ್ರವೇಶಿಸುತ್ತಾರೆ.

೧೯೭೧ರಲ್ಲಿ ಲೋಕಸಭೆ ವಿಸರ್ಜನೆಗೊಂಡಾಗ ನೇರವಾಗಿ ತನ್ನ ಹುಟ್ಟೂರಾದ ಜಗಳೂರಿಗೆ ಬಂದು ತಣ್ಣಗೆ ನೆಲಸುತ್ತಾರೆ. ಮುಂದೆ ದೇಶದಲ್ಲಿ ತುರ್ತು ಪರಿಸ್ಥಿತಿ ತಲೆ ಎತ್ತಿದಾಗ ಅದನ್ನು ಒಕ್ಕೊರಲಿನಿಂದ ಖಂಡಿಸಿದ ಇಮಾಮರು ತಮ್ಮ ಇಳಿವಯಸ್ಸಿನಲ್ಲಿಯೂ ಸಹ ಅದರ ವಿರುದ್ಧ ಜನಸಂಘಟನೆಗಾಗಿ ಓಡಾಡುತ್ತಾರೆ.

ದೇಶದಲ್ಲಿ ಪ್ರಥಮಬಾರಿಗೆ ಜನತಾಪಕ್ಷ ಆಡಳಿತಕ್ಕೆ ಬಂದು ರಾಜ್ಯಪಾಲ ಹುದ್ದೆ ತಮ್ಮ ಮನೆಗೇ ಅರಸಿ ಬಂದರೂ ಸಹ ವಯಸ್ಸಿನ ಕಾರಣ ನೀಡಿ ಅದನ್ನು ವಿನಯವಾಗಿ ತಿರಸ್ಕರಿಸುತ್ತಾರೆ.3

ಮೇಲಿನ ಮಾತುಗಳಿಂದ ಇಮಾಮರ ಹೋರಾಟ ಹಾಗೂ ರಾಜಕೀಯ ಮನೋಧರ್ಮಗಳು ಸ್ಪಷ್ಟವಾಗುತ್ತವೆ. ಇಮಾಮರ ತಾತನವರಾಗಿದ್ದ ಫಕೀರ್‌ಸಾಹೇಬರ ಕಾಲದಿಂದಲೂ ರಾಜಕೀಯ ಸ್ಥಾನಮಾನಗಳು ಇವರನ್ನು ಹುಡುಕಿಕೊಂಡು ಬಂದಿವೆ. ರಾಜಕೀಯದಲ್ಲಿ ನೈತಿಕತೆ ಮತ್ತು ಪಾರಮಾರ್ಥಿಕತೆಯನ್ನು ಪ್ರತಿಪಾದಿಸುತ್ತಿದ್ದ ಅವರು ಇಲ್ಲಿನ ಸಾಂಸ್ಕೃತಿಕ ಸಂವೇದನೆಗಳ ಪ್ರತಿರೂಪವಾಗಿದ್ದರು. ಪಿಂಜಾರ ಜನಾಂಗದ ನಿಜನೆಲೆಯಾಗಿರುವ ದ್ವಿಸಂಸ್ಕೃತಿಯ ಪ್ರತಿನಿಧಿಯಂತಿರುವ ಅವರ ಮನೆತನದ ಸಂಸ್ಕಾರಗಳು ಆದರ್ಶಪ್ರಾಯವಾಗಿದ್ದವು. ಮೈಸೂರು ಸರ್ಕಾರದ ಪ್ರಜಾಪ್ರತಿನಿಧಿ ಸಭೆಗೆ ಒಂದು ನೂರು ರೂಪಾಯಿ ಜಮೀನುಗಂದಾಯ ಕೊಡಬಲ್ಲ ಶಕ್ತರನ್ನು ಮಾತ್ರ ಆರಿಸಲು ಅವಕಾಶವಿದ್ದ ಆಗಿನ ಕಾಲದಲ್ಲಿ ಇಮಾಂ ಅವರ ತಾತನವರು ಆ ಮಾನ್ಯತೆಯನ್ನು ಗಳಿಸಿದ್ದರು. ಒಮ್ಮೆ ಇಮಾಂ ಅವರ ತಾತನವರು ದಸರಾ ಮೀಟಿಂಗ್‌ಗೆ ಹೋಗಬೇಕಾಗಿ ಬಂದಾಗ ಅವರ ಸುಖಪ್ರಯಾಣಕ್ಕಾಗಿ ದೇವರಲ್ಲಿ ಪ್ರಾರ್ಥಿಸುತ್ತಾರೆ. ಇಂತಹ ಶುಭ ಸಂದರ್ಭಗಳಲ್ಲಿ ತಾತನವರಿಗಿದ್ದ ಸಾಂಸ್ಕೃತಿಕ

ಮನೋಧರ್ಮವನ್ನು ಅವರು ಹೀಗೆ ಬರೆಯುತ್ತಾರೆ. 'ನಮ್ಮ ತಾತ ಶುಭಶಕುನವಾದರೆ ಮಾತ್ರ ಪ್ರಯಾಣವನ್ನು ಮುಂದುವರಿಸುತ್ತಿದ್ದರು. ಎರಡು ಮೈಲಿ ಹೋಗುವವರೆಗೂ ಅವರ ಪ್ರಯಾಣ ನಿಶ್ಚಿತವಾಗಿರಲಿಲ್ಲ. ದಾರಿಯಲ್ಲಿ ಕಾಗೆ, ಅಥವಾ ಹಂಗಪಕ್ಷಿಯು ಅಡ್ಡ ಬಂದರೆ ಅಥವಾ ಕಟ್ಟಿಗೆ ಹೊರೆ, ಗುದ್ದಲಿ, ಸಲಿಕೆ ಎದುರುಬಂದರೆ ಮನೆಗೆ ವಾಪಸು ಬರುತ್ತಿದ್ದರು. ಅಂತೂ ಮೈಸೂರಿಗೆ ಹೋಗುವ ದಿನ ಶುಭಶಕುನಗಳು ಆಗಿರಬೇಕು'4

ಇಮಾಂ ಅವರಿಗೆ ರಾಜಕೀಯಕ್ಕಿಂತ ದೇಶ ಮುಖ್ಯವಾಗಿತ್ತು. ಭಾರತದ ವಿಭಜನೆಯ ಹಿಂದಿನ ರಾಜಕೀಯವನ್ನು ಅವರು ಕಣ್ಣಾರೆ ಕಂಡವರಾಗಿದ್ದರು. ಮಹಮ್ಮದಾಲಿ ಜಿನ್ನಾ ನೇತೃತ್ವದಲ್ಲಿ ಮುಸ್ಲಿಂ ಲೀಗ್ ರಚಿತಗೊಂಡು ಪ್ರತ್ಯೇಕ ರಾಷ್ಟ್ರಕ್ಕಾಗಿ ಮುಸ್ಲಿಮರ ಸಂಘಟನೆ ಮಾಡಿದ ಅವರ ಪ್ರಯತ್ನವನ್ನು ಕಂಡು ಇಮಾಂ ಅವರು 'ಅಂತೂ ಎಲ್ಲಾ ಮುಸ್ಲಿಮರೂ ಒಂದು ಮಾಯಾಜಾಲದಲ್ಲಿ ಸಿಲುಕಿದರು' ಎಂದು ವಿಷಾದಿಸುತ್ತಾರೆ. ಮತ್ತು 'ಭಾರತದಲ್ಲಿರತಕ್ಕ ಪ್ರತಿಯೊಬ್ಬ ಪ್ರಜೆಯೂ ಪುರುಷರಾಗಲಿ, ಸ್ತ್ರೀಯಾಗಲಿ, ಯಾವ ಜನಾಂಗ ಅಥವಾ ಪಕ್ಷಕ್ಕೆ ಸೇರಿರಲಿ ತಾನು ಭಾರತದ ಪ್ರಜೆಯೆಂದು ಮನಸ್ಸಿನಲ್ಲಿಟ್ಟುಕೊಂಡು ನಡೆದರೆ ಕ್ಷೇಮ' ಎಂದು ತಮ್ಮ ಅಂತರಂಗದ ಇಂಗಿತವನ್ನು ವ್ಯಕ್ತಪಡಿಸುತ್ತಾರೆ.

ಇಮಾಂ ಅವರ ಕಾಲಕ್ಕೆ ರಾಜಕೀಯವೆಂದರೆ ಮತೀಯ ಬಾಂಧವರ ಅಭಿವೃದ್ಧಿಗಾಗಿ ಸಿಕ್ಕ ಅವಕಾಶವಾಗಿರಲಿಲ್ಲ. ಅಥವಾ ವ್ಯಕ್ತಿಯು ಮತ್ತು ಆತನ ಕುಟುಂಬದ ಸ್ವಾರ್ಥಸಾಧನೆಯ ಸಾಧನವಾಗಿರಲಿಲ್ಲ. ಅವರು ರಾಜಕೀಯದಿಂದ ನೆಮ್ಮದಿ ಪಡೆಯುತ್ತಿದ್ದುದೇ ನಾಡಿಗಾಗಿ ಸೇವೆ ಸಲ್ಲಿಸುವುದರ ಮೂಲಕ. ಇಮಾಂ ಅವರೇ ಹೇಳುತ್ತಾರೆ, 'ರಾಜಕೀಯದಲ್ಲಿ ಒಂದು ಸ್ಥಾನ ಪಡೆಯುವುದು ಉದರ ಪೋಷಣೆಗಲ್ಲ, ಅದು ಶಾಶ್ವತವಾದ ಜೀವನ ಮಾರ್ಗವೂ ಅಲ್ಲ. ಇಂಥ ಅವಕಾಶವು ದೊರೆಯುವುದು ಜನಸೇವೆಗೋಸ್ಕರ. ನೈಜವಾದ ಸೇವೆಯನ್ನು ಸಲ್ಲಿಸಿ ಕೃತಾರ್ಥನಾಗಬೇಕೆಂದು ಬಯಸುವವನು ಸ್ವಾರ್ಥತ್ಯಾಗ ಮಾಡಲು ಸಿದ್ಧನಾಗಿರಬೇಕು. ಅದಿಲ್ಲದೆ ರಾಜಕೀಯ ಸ್ಥಾನಮಾನವನ್ನು ಸ್ವಾರ್ಥಸಾಧನೆಗಾಗಿ ದುರುಪಯೋಗ ಮಾಡಿದರೆ ಅದು ನಂಬಿಕೆ ದ್ರೋಹವಾಗಿ ಹೀನಕಾರ್ಯವಾಗುತ್ತದೆ. ದೇಶಸೇವೆಗೆ ಸಚಿವಸ್ಥಾನವೊಂದೇ ಮಾರ್ಗವಲ್ಲ'.5

ಇಂದು ಇಂತಹ ರಾಜಕೀಯವಾದ ನೈತಿಕತೆಯನ್ನು, ಮನೋಧರ್ಮವನ್ನು ಅಪೇಕ್ಷಿಸುವುದೇ ಅಪರಾಧವಾದಂತಿದೆ. ಇಮಾಮರ ರಾಜಕೀಯ ಜೀವನವನ್ನು ಕುರಿತು ಅವರ ಸ್ನೇಹಿತರಾದ ಡಿ.ಎಚ್. ಚಂದ್ರಶೇಖರಯ್ಯನವರು ಬರೆಯುತ್ತಾ 'ಎಲ್ಲೆಲ್ಲಿಯೂ ಭೌತಿಕವಾದುದೇ (Materialism) ಪ್ರಾಮುಖ್ಯತೆಯನ್ನು ಪಡೆದು ದೇಹೇಂದ್ರಿಯಗಳ ಸಂತೃಪ್ತಿಯೇ ಜೀವನದ ಆದ್ಯಂತ ಗುರಿಯಾಗಿ, ಜನರಲ್ಲಿ ಧಾರ್ಮಿಕ ಮತ್ತು ನೈತಿಕ ಭಾವನೆಗಳು ಬಹುಮಟ್ಟಿಗೆ ಇಳಿಮುಖವಾಗುತ್ತಾ ಬಂದಿವೆ ...... ಜನರಲ್ಲಿ ದೈಹಿಕ ಮತ್ತು ನೈತಿಕ ಗುಣಗಳು ಪುನರುಜ್ಜೀವನ ಹೊಂದಿ ರಾಷ್ಟ್ರೀಯ ಶೀಲ (National Character)ವು ಬೆಳೆಯದ ವಿನಃ ಯಾವ ಜನಾಂಗವೂ ಪ್ರಗತಿ, ಪುರೋಭಿವೃದ್ಧಿ ಕಾರ್ಯಗಳಲ್ಲಿ ಯಶಸ್ಸನ್ನು ಗಳಿಸಲಾರದು ..... ಇಮಾಂ ಅವರು ಅಪೇಕ್ಷಿಸಿರುವ ಭದ್ರವಾದ ಸರ್ಕಾರದ ಸ್ಥಾಪನೆಗೆ ನೈತಿಕ ಮತ್ತು ಪಾರಮಾರ್ಥಿಕ ಶಕ್ತಿಗಳು ತಳಪಾಯವಲ್ಲವೇ ?'6 ಎಂದಿದ್ದಾರೆ.

ಇಮಾಂ ಅವರ ಬಗ್ಗೆ ಇಷ್ಟು ವಿವರವಾಗಿ ಬರೆಯುವುದಕ್ಕೆ ಕಾರಣ ಪಿಂಜಾರ ಜನಾಂಗದಲ್ಲಿರುವ ನೈತಿಕ ರಾಜಕಾರಣವನ್ನು ಗುರುತಿಸುವುದು. ಈ ನೈತಿಕತೆ ಧಾರ್ಮಿಕವಾಗಿ ವಿಕಾಸಗೊಂಡು ಪಕ್ವವಾದ ಸಂಸ್ಕಾರದಿಂದ ಬರುವಂತಹದು. ಇಮಾಂ ಅವರು ಪಿಂಜಾರರನ್ನೋ, ಮುಸ್ಲಿಮರನ್ನೋ ದೃಷ್ಟಿಯಲ್ಲಿಟ್ಟುಕೊಂಡು ರಾಜಕೀಯ ಮಾಡಿದ್ದಿದ್ದರೆ, ಅವರ ಬಗ್ಗೆ ಇಷ್ಟು ಮಾತನಾಡುವ ಅಗತ್ಯವಿರಲಿಲ್ಲ. ಇವರು ಪಿಂಜಾರರಾಗಿದ್ದರು ಎನ್ನುವುದಷ್ಟೇ ಈಗ ಈ ಜನಾಂಗಕ್ಕೆ ಉಳಿದಿರುವ ಭಾಗ್ಯವಾಗಿದೆ. ಇಮಾಂ ನಿಧನನಾಂತರದ ರಾಜಕಾರಣವನ್ನು ಗಮನಿಸಿದರೆ ಜಾತಿ, ಹಣ, ಹೆಂಡದ ರಾಡಿಯಲ್ಲಿ ಮನುಷ್ಯನ ನೈತಿಕತೆ ನಾಶವಾಗಿರುವುದು ಕಂಡುಬರುತ್ತದೆ. ಇಮಾಂ ಅವರು ಸ್ವಜಾತಿಗಿರಲಿ, ಸ್ವಂತ ಕುಟುಂಬಕ್ಕೂ ಕೂಡ ರಾಜಕೀಯ ನೆಲೆಯನ್ನು ಕಲ್ಪಿಸದೇ ಹೋದರು. ಅವರ ಒಬ್ಬನೇ ಮಗ ಹಂಜು ಇಮಾಂ ಅಂತರಜಾತಿಯ ವಿವಾಹವಾಗಿ ಉನ್ನತ ಶಿಕ್ಷಣ ಪಡೆದು ಕನ್ನಡದ ಕೆಲವು ಕಲಾತ್ಮಕ ಚಲನಚಿತ್ರಗಳಲ್ಲಿ ನಟಿಸಿ, ನಿರ್ಮಿಸಿ ನಿರ್ಗಮಿಸಿಬಿಟ್ಟರು. ಉಳಿದಂತೆ ಇಮಾಂ ಅವರ ಹೆಣ್ಣುಮಕ್ಕಳು ಯಾವ ಆಡಂಬರವೂ ಪ್ರತಿಷ್ಠೆಯೂ ಇಲ್ಲದೆ ಕೌಟುಂಬಿಕ ಜೀವನವನ್ನು ನಡೆಸುತ್ತಿದ್ದಾರೆ. ಆದರೆ ಇಮಾಂ ಅವರ ಅಣ್ಣನವರಾಗಿದ್ದ ಖಾಸಿಂಸಾಬ್ ಅವರ ಮಕ್ಕಳು ಜಗಳೂರಿನಲ್ಲಿ ಇಮಾಂ ಹೆಸರಿನ ಟ್ರಸ್ಟ್ ಸ್ಥಾಪಿಸಿ ಆ ಮೂಲಕ ಬಡಮಕ್ಕಳ ಶಾಲೆ, ಹಾಸ್ಟೆಲ್‌ನಂತಹ ಶೈಕ್ಷಣಿಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವುದು ಇಮಾಂ ಅವರ ನೆನಪನ್ನು ಶಾಶ್ವತವಾಗಿಸುವ ದಿಶೆಯಲ್ಲಿ ಉತ್ತಮ ಪ್ರಯತ್ನವಾಗಿದೆ.

ಇಮಾಂ ಅವರು ತಮ್ಮ ಜನಾಂಗದ ಸಂಘಟನೆ ಮಾಡದೆಯೂ ಪಿಂಜಾರರ ನಾಯಕರಾಗಿ ನೆನಪಿನಲ್ಲಿ ಉಳಿದಿದ್ದಾರೆ. ಇವರ ಹಾಗೇ ಸ್ವಾತಂತ್ರ್ಯಾನಂತರದಲ್ಲಿ ರಾಜಕೀಯದಲ್ಲಿ ಬೇರೆ ಬೇರೆ ಸ್ಥಾನಮಾನಗಳನ್ನು ಅನುಭವಿಸಿದ ಇನ್ನೂ ಕೆಲವು ಪಿಂಜಾರ ಮುಖಂಡರು ಹೇಳ ಹೆಸರಿಲ್ಲದಂತಾಗಿದ್ದಾರೆ. ಇಂದಿರಾಗಾಂಧಿಯವರ ಸಂಪುಟದಲ್ಲಿ ಗೃಹಖಾತೆಯ ರಾಜ್ಯಸಚಿವರಾಗಿದ್ದ ಎಫ್‌ಎಚ್‌ಮೊಹಸೀನ್, ಲೋಕಸಭಾ ಸದಸ್ಯರಾಗಿದ್ದ ಎಂ.ಎನ್. ನಾಗನೂರ್, ಕರ್ನಾಟಕದ ವಿಧಾನಸಭೆಯ ಸದಸ್ಯರಾಗಿದ್ದ ಎಂ.ಎಂ. ನದಾಫ್ ಮೊದಲಾದವರು ಜನತೆಯ ಯಾವ ಬಗೆಯ ಜವಾಬ್ದಾರಿಗಳನ್ನು ನಿರ್ವಹಿಸದೆ ತಂತಮ್ಮ ಕುಟುಂಬದ ಹಿತವನ್ನು ಕಾಪಾಡಿಕೊಂಡ ಬಗ್ಗೆ ಪಿಂಜಾರರೇ ದೂರುತ್ತಾರೆ. ರಾಜಕೀಯ ಹಾಗೂ ಚುನಾವಣೆಗಳಲ್ಲಿ ಧರ್ಮ, ಜಾತಿ ಪ್ರಧಾನಪಾತ್ರ ವಹಿಸುತ್ತಾ ಬಂದಂತೆ ಪಿಂಜಾರರು ಮೂಲೆಗುಂಪಾಗಿ ಕಳೆದ ಎರಡು ದಶಕಗಳಿಂದ ರಾಜಕೀಯವಾಗಿ ಅವಜ್ಞೆಗೊಳಗಾಗಿದ್ದಾರೆ. ಇಂದಿನ ರಾಜಕೀಯಕ್ಕೆ ಓಟು ತಂದುಕೊಡುವ, ಜನಸಂಖ್ಯೆ ಹೆಚ್ಚಾಗಿರುವ ಜನಾಂಗಗಳ ಬಗ್ಗೆಯೇ ಹೆಚ್ಚು ಆಸಕ್ತಿಯಿದೆ. ಆದ್ದರಿಂದ ಪಿಂಜಾರರು ಬದಲಾಗುತ್ತಿರುವ ಸಾಮಾಜಿಕ-ರಾಜಕೀಯ ಪರಿಸರದಲ್ಲಿ ಮುಸ್ಲಿಮರ ಜೊತೆಗೇ ಗುರುತಿಸಿಕೊಳ್ಳುವುದು ಅನಿವಾರ್ಯವಾಗಿ ಬಿಟ್ಟಿದೆ. ತುರ್ತುಪರಿಸ್ಥಿತಿಯ ನಂತರದ ರಾಜಕೀಯ ವಿದ್ಯಮಾನಗಳು ಇಂಡಿಯಾದಲ್ಲಿ ಸಾಮಾಜಿಕ ನ್ಯಾಯದಂತಹ ಸೈದ್ಧಾಂತಿಕ ರಾಜಕಾರಣದ ನೆಲೆಗಳನ್ನು ಸ್ಪಷ್ಟಪಡಿಸಿದವು. ಆ ಹಿನ್ನೆಲೆಯಲ್ಲಿ ಈ ನೆಲದ ಹಿಂದುಳಿದ ವರ್ಗಗಳು, ಅದುವರೆಗೂ ಕೇವಲ ಮೀಸಲಾತಿಯಂತಹ ಸಾಂವಿಧಾನಿಕ ಹಕ್ಕನ್ನು ಮಾತ್ರ ಅನುಭವಿಸುತ್ತ ಬಂದಿದ್ದ ದಲಿತರು ಹಾಗೂ ಮಹಿಳೆಯರು ಮತ್ತು ಮುಸ್ಲಿಮರು ವಿಶಿಷ್ಟವಾದ ಸಾಮಾಜಿಕ ಸಾಂಸ್ಕೃತಿಕ ಜಾಗೃತಿಯನ್ನು

ಪ್ರಸ್ತುತಪಡಿಸಿದರು. ಇದು ರಾಜಕೀಯವಾಗಿಯೂ ತನ್ನ ನಿಚ್ಚಳ ಪ್ರಭಾವ ಬೀರಿತು. ಕರ್ನಾಟಕದಲ್ಲಿ ಮೊಟ್ಟಮೊದಲ ಬಾರಿಗೆ ಬಂದ ಕಾಂಗ್ರೆಸ್ಸೇತರ ಸರ್ಕಾರಕ್ಕೆ ಈ ಬಗೆಯ ಸಾಮಾಜಿಕ ಸೈದ್ಧಾಂತಿಕ ನೆಲೆ ಕಾರಣವಾಯಿತು. ಆ ಸಂದರ್ಭದಲ್ಲಿ ಗ್ರಾಮ ಪಂಚಾಯತ್ ಇಲಾಖೆಯ ಮಂತ್ರಿಯಾಗಿ ಅಭೂತಪೂರ್ವ ಕಾರ್ಯ ನಿರ್ವಹಿಸಿದ ನಜೀರ್‌ಸಾಬ್ ಅವರಂತಹವರು ಕರ್ನಾಟಕದಲ್ಲಿನ ರಾಜಕಾರಣಕ್ಕೆ ಹೊಸ ಚಾಲನೆಯನ್ನೇ ಕೊಟ್ಟರು. ಇಮಾಂ ಅವರ ರಾಜಕೀಯದ ಕನಸುಗಳನ್ನು ಸ್ಪಷ್ಟವಾಗಿ ಈಡೇರಿಸಹೊರಟ ನಜೀರ್‌ಸಾಬ್ ಅವರು ಸಾಂಪ್ರದಾಯಿಕ ಮುಸ್ಲಿಮರ ವಿರೋಧದಿಂದಾಗಿ ಲೋಕಸಭೆಯ ಚುನಾವಣೆಯಲ್ಲಿ ಸೋಲಬೇಕಾಯಿತು. ಆದರೆ ರಾಜ್ಯದ ಮಂತ್ರಿಯಾಗಿ ಅವರು ಕರ್ನಾಟಕದಲ್ಲಿ ಮಾಡಿದ ಪ್ರಗತಿಪರ, ಜನಪರ ಕಾರ್ಯಕ್ರಮಗಳು ಇಡೀ ಭಾರತದ ರಾಜಕಾರಣದಲ್ಲಿ ಅನುಕರಣೀಯವಾಗಿಬಿಟ್ಟವು. ಅವರು ತಂದ ಅಧಿಕಾರ ವಿಕೇಂದ್ರೀಕರಣದ ಪಂಚಾಯತ್‌ರಾಜ್ ವ್ಯವಸ್ಥೆ ಜನಸಾಮಾನ್ಯರನ್ನು ನಾಡಿನ ಸಾಮಾಜಿಕ ಆರ್ಥಿಕ ಪ್ರಗತಿಯ ಮುಖ್ಯವಾಹಿನಿಯಲ್ಲಿ ಬೆರೆಯುವಂತೆ ಮಾಡಿತು. ಮಾತು ಕಳೆದುಕೊಂಡ ದಲಿತರು, ಮಹಿಳೆಯರು, ಹಿಂದುಳಿದ ವರ್ಗದವರು, ಮುಸ್ಲಿಮರು ದಿಢೀರನೆ ದೊರೆತ ಈ ಅವಕಾಶದಲ್ಲಿ ಅಧಿಕಾರದ ಸವಿಯುಂಡರು. ಪ್ರಜಾತಂತ್ರದ ಅರ್ಥಪೂರ್ಣ ಸಾಧ್ಯತೆಗಳನ್ನು ತೆರೆದುಕೊಟ್ಟ ನಜೀರ್‌ಸಾಬ್ ಅವರ ಈ ದೂರದರ್ಶಿತ್ವ ಅವರ ಕನಸುಗಳ ಸಾಕಾರರೂಪದಂತಿತ್ತು.

ಆ ಸಂದರ್ಭದಲ್ಲಿ ಕರ್ನಾಟಕ ಕಾಂಗ್ರೆಸ್ಸೇತರ ರಾಜಕಾರಣಕ್ಕೆ ಸುಭದ್ರ ನೆಲೆಯಾಗಿತ್ತು. ಇದು ಇಂಡಿಯಾದ ಅನೇಕ ರಾಜ್ಯಗಳಲ್ಲಿ ಹಿಂದುಳಿದವರ ರಾಜಕೀಯ ಪಾದಾರ್ಪಣೆಗೆ ಕಾರಣವಾಯಿತು. ಮತ್ತು ಕಾಂಗ್ರೆಸ್‌ನ ಭ್ರಷ್ಟ ಹಾಗೂ ಪಟ್ಟಭದ್ರ ಅಧಿಕಾರ ಕೇಂದ್ರವನ್ನು ಪ್ರಶ್ನಿಸುತ್ತಲೇ ಅವಕಾಶ ವಂಚಿತರ ಶ್ರೇಯೋಭಿವೃದ್ಧಿಯ ಸಾಮಾಜಿಕ ಎಚ್ಚರದ ಬೀಜವನ್ನು ಬಿತ್ತಿತು. ಈ ಹೋರಾಟದ ಹಾದಿಯಲ್ಲಿ ಅಧಿಕಾರ ರಾಜಕಾರಣವೇ ಮುಖ್ಯವಾಗಿ ಭಿನ್ನಾಭಿಪ್ರಾಯಗಳು ಸಣ್ಣತನದ ಸಂಕೇತವಾಗಿ ಸೈದ್ಧಾಂತಿಕ ರಾಜಕಾರಣ ಮೂಲೆ ಸೇರಿದ್ದನ್ನು ಕಂಡಿದ್ದೇವೆ. ಹಿಂದುಳಿದವರು, ಮಹಿಳೆಯರು, ದಲಿತರು ಮತ್ತು ಮುಸ್ಲಿಮರು ಹಳ್ಳಿ, ನಗರ, ಜಿಲ್ಲೆ, ರಾಜ್ಯ, ದೇಶ ಎನ್ನದೆ ಎಲ್ಲ ಕಡೆ ಅಧಿಕಾರ ಕೇಂದ್ರಗಳಲ್ಲಿ ಮಿಂಚುತ್ತಿರುವುದನ್ನು ಸಹಿಸಿಕೊಳ್ಳಲಾರದ ಪುರೋಹಿತಶಾಹಿ ವ್ಯವಸ್ಥೆ ಈ ಇಡೀ ಸಮುದಾಯವನ್ನು ಹಾದಿ ತಪ್ಪಿಸುವ ಹುನ್ನಾರದಲ್ಲಿ ನಿರತವಾಯಿತು. ಜಾತಿ, ಧರ್ಮ, ದೇವರು, ಸಂಸ್ಕೃತಿ, ಭಾಷೆಗಳನ್ನು ಕುರಿತಂತೆ ಯಾವಾಗಲೂ ಭಾವುಕವಾಗಿ ವರ್ತಿಸುವ ಈ ವರ್ಗಗಳ ಮನೋದೌರ್ಬಲ್ಯವನ್ನು ಬಳಸಿಕೊಂಡ ಹಿಂದೂ ಮೂಲಭೂತವಾದ ಈ ವರ್ಗಗಳು ಪರಸ್ಪರ ಕಚ್ಚಾಡುವಂತಹ ವಾತಾವರಣವನ್ನು ನಿರ್ಮಾಣ ಮಾಡಿದವು. ರಾಮಜನ್ಮ ಭೂಮಿ - ಬಾಬರಿ ಮಸೀದಿ ವಿವಾದ ಆ ಹಿನ್ನೆಲೆಯಲ್ಲಿ ಮುಖ್ಯವಾದುದು. ಇದು ರಾಜ್ಯ, ರಾಷ್ಟ್ರ ರಾಜಕಾರಣದಲ್ಲಿ ಉಂಟುಮಾಡಿದ ಅವಾಂತರಗಳಿಂದಾಗಿ ಹಿಂದುಳಿದ ವರ್ಗಗಳ ಸಾಮಾಜಿಕ ಹೋರಾಟ ದಿಕ್ಕು ದೆಸೆಗಳನ್ನು ಕಳೆದುಕೊಂಡು ಅಧಿಕಾರಕ್ಕಾಗಿ ಏನು ಮಾಡಿದರೂ ಅಪರಾಧವಲ್ಲ ಎಂಬಂತಹ ನೀಚ ನೆಲೆಯನ್ನು ತಲುಪಿತು. ಈ ಹಾದಿಯಲ್ಲಿ ಹೊರಟ ಅಧಿಕಾರ ರಾಜಕಾರಣ ಮತ್ತು ಹಿಂದೂ ಮೂಲಭೂತವಾದದ ಸಮ್ಮಿಶ್ರಪಡೆ ಗುಜರಾತ್ ರಾಜ್ಯವನ್ನು ಪ್ರಯೋಗಶಾಲೆಯನ್ನು ಮಾಡಿಕೊಂಡದ್ದನ್ನು ಮರೆಯುವಂತಿಲ್ಲ. ಉತ್ತರ ಪ್ರದೇಶದ ರಾಜಕಾರಣ ಇಡೀ ದೇಶದ

ರಾಜಕಾರಣವನ್ನು ನಿಯಂತ್ರಿಸುವಂತೆಯೇ ಪ್ರತಿ ರಾಜ್ಯಗಳಲ್ಲಿ ಗುಜರಾತ್‌ನ ವಾತಾವರಣ ನಿರ್ಮಾಣ ಮಾಡಬೇಕೆಂಬ ದುಷ್ಟ ಪ್ರಯತ್ನಗಳು ನಿರೀಕ್ಷಿತ ಫಲವನ್ನು ಕೊಡುತ್ತಿವೆ. ಸದಾ ಸಹಬಾಳ್ವೆಯನ್ನು ಇಲ್ಲಿನ ಸಾಂಸ್ಕೃತಿಕ ತಳಹದಿಯಲ್ಲಿ ನಿರ್ಮಿಸಿಕೊಂಡು ಬಂದ ಈ ನೆಲದ ಅಪಾರ ಮುಗ್ಧ ಜನಸಮುದಾಯದಲ್ಲಿ ಹಿಂದೂ-ಮುಸ್ಲಿಂ ಎಂಬ ಧಾರ್ಮಿಕ ವಿಷವನ್ನು ಬಿತ್ತುವ ಪ್ರಯತ್ನದಿಂದಾಗಿ ಪಿಂಜಾರರಂತಹ ಜನಾಂಗದ ವಿಶಿಷ್ಟ ಸಾಂಸ್ಕೃತಿಕ ರೂಪಗಳು ಭೀತಿಯನ್ನು ಅನುಭವಿಸುತ್ತಿವೆ.

ಇಲ್ಲಿ ಇದನ್ನೆಲ್ಲಾ ಯಾಕೆ ಪ್ರಸ್ತಾಪಿಸಲಾಯಿತೆಂದರೆ ಪಿಂಜಾರರು ಪಂಚಾಯತ್‌ರಾಜ್ ವ್ಯವಸ್ಥೆಯ ಫಲವಾದ ರಾಜಕೀಯ ಅಧಿಕಾರದ ಅವಕಾಶದಲ್ಲಿ ಅನೇಕ ಊರುಗಳಲ್ಲಿ ಗ್ರಾಮ, ತಾಲ್ಲೂಕು, ಜಿಲ್ಲಾ ಪಂಚಾಯಿತಿ ಸದಸ್ಯರಾಗಿದ್ದಾರೆ. ಈ ಅವಕಾಶವನ್ನು ಮುಸ್ಲಿಮರ ಕೋಟಾದಲ್ಲಿ ಅವರು ಪಡೆದಿದ್ದರೂ ಮುಖ್ಯವಾಗಿ ತಮ್ಮ ಸಾಂಸ್ಕೃತಿಕ ನಡವಳಿಕೆಯಿಂದಾಗಿ ಅವರು ಪ್ರಗತಿಪರ ಕಾರ್ಯಗಳಲ್ಲಿ ನಿರತರಾಗಿದ್ದಾರೆ. ಕೆಲವು ಊರುಗಳಲ್ಲಿ ಇವರ ಅಧಿಕಾರಕ್ಕೆ ವಿರೋಧಗಳೇ ಉಂಟಾಗಿಲ್ಲ. ಮತ್ತು ಈ ಹಿನ್ನೆಲೆಯಲ್ಲಿ ರಚಿತವಾದ ಕರ್ನಾಟಕ ರಾಜ್ಯ ಪಿಂಜಾರರ ಸಂಘ ಕೂಡ ತನ್ನ ಸಾಮಾಜಿಕ ಶೈಕ್ಷಣಿಕ ಸುಧಾರಣೆಯ ಕಾರ್ಯಕ್ರಮಗಳನ್ನು ಆರಂಭಿಸಿರುವುದು ಪಿಂಜಾರರ ಬದುಕಿನಲ್ಲಿ ಹೊಸಬಗೆಯ ಆಶೋತ್ತರಗಳನ್ನು ಉಂಟುಮಾಡಿದೆ. ಆಧುನಿಕ ಶಿಕ್ಷಣ ಪದ್ಧತಿಗೆ ತೆರೆದುಕೊಳ್ಳುತ್ತಿರುವ ಪಿಂಜಾರರು ರಾಜಕಾರಣದಲ್ಲಿ ತಮಗೇ ಪ್ರತ್ಯೇಕವಾದ ಸ್ಥಾನಮಾನಗಳನ್ನು ಅಪೇಕ್ಷಿಸುವುದು ಸಾಧ್ಯವಿಲ್ಲವಾದರೂ ಮುಸ್ಲಿಮರ ಪ್ರಾತಿನಿಧ್ಯದ ಒಳಗಡೆಯೇ ತಮ್ಮ ಐಡೆಂಟಿಟಿಯನ್ನು ಸ್ಥಾಪಿಸುವುದು ಅನಿವಾರ್ಯವಾಗಿದೆ. ಇದಕ್ಕೆ ಹಿಂದೆ ಹೇಳಿದ ಧರ್ಮರಾಜಕಾರಣವೂ ಪ್ರೇರಣೆಯಾಗಿದೆ.

ಪಿಂಜಾರರ ರಾಜಕೀಯ ಬದುಕು ಸ್ಪಷ್ಟವಾದ ಸೈದ್ಧಾಂತಿಕ ನೆಲೆಯನ್ನು ಒಳಗೊಂಡಿಲ್ಲ. ಇಲ್ಲಿನ ರಾಜಕಾರಣ ಯಾವತ್ತೂ ಉಳ್ಳವರ ಮುಲಾಜಿನಲ್ಲಿ ಕ್ರಿಯಾಶೀಲವಾಗಿರುವಂತೆ ಪಿಂಜಾರರೂ ಕೂಡ ಬಹುಸಂಖ್ಯಾತ ಉಳ್ಳವರ ಮರ್ಜಿಯಲ್ಲಿರುವಂತಾಗಿದೆ. ಇದು ಕೇವಲ ಪಿಂಜಾರರಿಗೆ ಮಾತ್ರ ಸೀಮಿತವಾದ ಸ್ಥಿತಿಯೇನಲ್ಲ. ಇಲ್ಲಿನ ಎಲ್ಲ ಸಣ್ಣಪುಟ್ಟ ಜಾತಿಗಳು ತಮ್ಮ ಸಾಂಸ್ಕೃತಿಕ ಅನನ್ಯತೆ ಏನೇ ಇರಲಿ ಪ್ರಬಲ ಜಾತಿಯವರ ನಿರ್ಧಾರಗಳಿಗೆ ಬದ್ಧರಾಗಿರಬೇಕಾದ ಸ್ಥಿತಿಯಿದೆ. ಪಿಂಜಾರರ ಸಂಘವನ್ನು ಸ್ಥಾಪಿಸಿದಾಗ ಇಸ್ಲಾಂ ಧರ್ಮದ ಪರಿಧಿಯೊಳಗೇ ಅವರನ್ನು ಪ್ರತ್ಯೇಕವಾಗಿ ಗುರುತಿಸಿ ಅವರ ಸಾಮಾಜಿಕ -ಧಾರ್ಮಿಕ - ಶೈಕ್ಷಣಿಕ ಸುಧಾರಣೆಯ ಉದ್ದೇಶಗಳನ್ನಿಟ್ಟುಕೊಳ್ಳಲಾಗಿತ್ತು. ಹಿಂದೆ ಹೇಳಿದ ಧರ್ಮರಾಜಕಾರಣಗಳ ಅನೈತಿಕ ಸಂಬಂಧದಿಂದಾಗಿ ಪಿಂಜಾರರು ತಮ್ಮ ಜನಸಂಖ್ಯೆಯ ರಾಜಕೀಯ ಬಲವನ್ನು ಪ್ರದರ್ಶಿಸುವುದಾಗಲೀ, ರಾಜಕೀಯ ಉದ್ದೇಶಗಳಿಗಾಗಿ ಜನಾಂಗವನ್ನು ಸಂಘಟಿಸುವುದಾಗಲೀ ಸಾಧ್ಯವಿರಲಿಲ್ಲ. ಈ ಸಂಘಟನೆಯ ಮೂಲಕಾರಣಪುರುಷರಾಗಿರುವ ಜನಾಬ್ ಹಿರೇಹಾಳ್ ಇಬ್ರಾಹಿಂ ಸಾಬ್ ಅವರು ಈ ನಿಟ್ಟಿನಲ್ಲಿ ಪಿಂಜಾರರ ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ ಪ್ರಗತಿ ಹಾಗೂ ಸುಧಾರಣೆಯ ಅನೇಕ ಕನಸುಗಳನ್ನು ಕಂಡರು. ಅದಕ್ಕಾಗಿ ಸರ್ಕಾರದ ಮಟ್ಟದಲ್ಲಿ ಓಡಾಡಿ ಪಕ್ಕದ ಆಂಧ್ರಪ್ರದೇಶ ಹಾಗೂ ತಮಿಳುನಾಡಿನಲ್ಲಿ ಪಿಂಜಾರರಿಗೆ ಕೊಟ್ಟಿರುವಂತೆ ಪ್ರತ್ಯೇಕ ಮೀಸಲಾತಿಯನ್ನು ಕರ್ನಾಟಕದಲ್ಲೂ ಈ

ಜನಾಂಗದ ಮಕ್ಕಳಿಗೆ ಕೊಡಬೇಕೆಂದು ಪ್ರಯತ್ನಿಸಿ ಅದರಲ್ಲಿ ಯಶಸ್ವಿಯಾದರು. ಕರ್ನಾಟಕದ ಉದ್ದಗಲಕ್ಕೆ ತಮ್ಮ ಸ್ವಂತ ಖರ್ಚಿನಲ್ಲಿ ಓಡಾಡಿ ಪಿಂಜಾರರನ್ನು ಸಂಘಟಿಸಿದರು. ಆರಂಭದಲ್ಲಿ ಅತ್ಯುತ್ಸಾಹ ತೋರಿದ ಉತ್ತರ ಕರ್ನಾಟಕದ ಅನೇಕ ನಗರ ಹಳ್ಳಿಗಳ ಪಿಂಜಾರರು ಸಂಘಟನೆಯ ಹೋರಾಟದ ದೀರ್ಘ ಹಾದಿಯನ್ನು ಉಪೇಕ್ಷಿಸಿದರು. ತಕ್ಷಣಕ್ಕೆ ಪ್ರತಿಫಲವನ್ನು ಅಪೇಕ್ಷಿಸಿದರು. ಕಡೆಯ ಪಕ್ಷ ತಮ್ಮ ಮಕ್ಕಳ ವಿದ್ಯಾಭ್ಯಾಸಕ್ಕೆ ಅನುಕೂಲವಾಗುವಂತಹ ಜಾತಿ ದೃಢೀಕರಣ ಪತ್ರವನ್ನು ಸಂಘದಿಂದ ಕೊಡಿಸಲಾಗಲಿಲ್ಲವಲ್ಲಾ ಎಂದು ಕೊರಗಿದರು. ಕೆಲವರು ಈ ಪ್ರಯೋಜನ ಪಡೆದುಕೊಂಡು ಉನ್ನತ ತಾಂತ್ರಿಕ, ವೈದ್ಯಕೀಯ ಶಿಕ್ಷಣವನ್ನೂ, ಉನ್ನತ ಆಡಳಿತ ಸೇವೆಯ ಅಧಿಕಾರವನ್ನೂ ಪಡೆದುಕೊಂಡಿದ್ದಾರೆ. ಇಂತಹವರೆಲ್ಲ ಸಂಘಟನೆಯ ಮೂಲ ಪ್ರಯತ್ನವನ್ನು ಮರೆತುಬಿಟ್ಟಿದ್ದಾರೆ. ಇವತ್ತಿಗೂ ಹಳ್ಳಿಗಳ ಬಡ ಪಿಂಜಾರರು ಈ ಯಾವ ಪ್ರಜ್ಞೆಯಿಲ್ಲದೆ ತಂತಮ್ಮ ನಿತ್ಯದ ಕಾಯಕದಲ್ಲಿ 'ಎಲ್ಲರೊಳಗೊಂದಾಗಿ' ನಿರತರಾಗಿದ್ದಾರೆ. ಬದಲಾಗುತ್ತಿರುವ ರಾಜಕೀಯ - ಧಾರ್ಮಿಕ ಬಿಕ್ಕಟ್ಟಿನಿಂದಾಗಿ ಪಿಂಜಾರರು ತಮ್ಮನ್ನು ಅತಂತ್ರರನ್ನಾಗಿಸಿರುವ ಈ ಸಂಸ್ಕೃತಿಯ ಹೊರಗೆ ಬಂದು ಪೂರ್ಣ ಪ್ರಮಾಣದ ಇಸ್ಲಾಂ ಅನುಯಾಯಿಗಳಾಗುತ್ತಿದ್ದಾರೆ. ಆದರೆ ಬಹುಸಂಖ್ಯಾತ ಪಿಂಜಾರರು ತಮ್ಮ ಮೂಲಸಂಸ್ಕೃತಿಯ ನಿಜವಾದ ಪ್ರತಿಪಾದಕರಂತೆ ಜಾತ್ಯಾತೀತರಾಗಿ ಬದುಕಿದ್ದಾರೆ. ಇವರೊಳಗೆ ಭಾರತದ ಸಾಮಾಜಿಕ ಸಾಮರಸ್ಯದ ನಿಜವಾದ ಹರಿಕಾರರ ರೂಪಗಳನ್ನು ಕಾಣಬಹುದಾಗಿದೆ.



*ಅಡಿಟಿಪ್ಪಣಿಗಳು :-*

1. ಮೈಸೂರು ಆಗ ಮತ್ತು ಈಗ - ಜೆ.ಮಹಮದ್ ಇಮಾಂ, ಪ್ರಕಾಶಕರು : ಇಮಾಂ ಅವರ ಮಕ್ಕಳು, ದಾವಣಗೆರೆ, ಎರಡನೆಯ ಮುದ್ರಣ -೧೯೯೭ - ಪುಟ-೨೦
2. ಅದೇ, ಪುಟ ೨೧
3. ಅದೇ, ಪುಟ-XX
4. ಅದೇ ಪುಟ ೪, ೫
5. ಅದೇ ಪುಟ ೬೬
6. ಅದೇ, ಪುಟ-xiii

ಅಧ್ಯಾಯ - ೮

# ಸಾಮಾಜಿಕ ಮತ್ತು ಸಾಂಸ್ಕೃತಿಕ ಸ್ಥಿತ್ಯಂತರಗಳು

## ೮.೧ ಹಿಂದಿನ ಕಾಲದ ಸಮಾಜದಲ್ಲಿ ಪಿಂಜಾರರ ಸ್ಥಾನಮಾನ

ಪಿಂಜಾರ ಜನಾಂಗದ ಈವರೆಗಿನ ಅಧ್ಯಯನದಲ್ಲಿ ಅವರ ಸಾಮಾಜಿಕ ಸ್ಥಾನಮಾನಗಳನ್ನು ಕುರಿತು ಸ್ಥೂಲವಾದ ಚಿತ್ರವೊಂದು ಸಿಗುವಂತಿದೆ. ಪಿಂಜಾರರು ತಮ್ಮ ಸಾಂಸ್ಕೃತಿಕ ಆಚರಣೆ ಮತ್ತು ಸಾಮಾಜಿಕ ನಡವಳಿಕೆಗಳ ಹಿನ್ನೆಲೆಯಲ್ಲಿ ಈ ಸಮಾಜದ ಒಳಗಿನವರೇ ಆಗಿದ್ದಾರೆ ಎಂಬುದು ಖಾತ್ರಿಯಾಗುತ್ತದೆ. ಭಾರತ ಆರಂಭದಿಂದಲೂ ಅನ್ಯದೇಶೀಯರ ಆಕ್ರಮಣಗಳಿಗೆ ತುತ್ತಾಗುತ್ತ ರಾಜಕೀಯ ಗುಲಾಮಗಿರಿಯನ್ನು ಅನುಭವಿಸಿದರೂ ತನ್ನ ಸಾಮಾಜಿಕ ರಚನೆಯ ಒಳವಿವರಗಳನ್ನು ಬಿಟ್ಟುಕೊಟ್ಟಿಲ್ಲ. ಇಲ್ಲಿನ ಧಾರ್ಮಿಕ ಬದ್ಧತೆಯೊಂದಿಗೇ ಬೆಸೆದುಹೋದ ಸಮಾಜ ಅದರ ಕಟ್ಟು-ಪಾಡುಗಳನ್ನು ರೂಪಿಸಿಕೊಳ್ಳುವಾಗ ಮನುಷ್ಯ ಮತ್ತು ದೇವರ ನಡುವಿನ ಸಂಬಂಧವನ್ನು ಕಟ್ಟಿಕೊಂಡಿದೆ. ದೇವರು, ಧರ್ಮ, ಜಾತಿ, ಪಾಪ-ಪುಣ್ಯ, ಸ್ವರ್ಗ-ನರಕ ಮೊದಲಾದವುಗಳೆಲ್ಲಾ ಒಂದರೊಳಗೊಂದರಂತೆ ಹೆಣೆದುಕೊಂಡು ಇಲ್ಲಿನ ಸಮಾಜದ ತಾರತಮ್ಯ ನೆಲೆಯನ್ನು ರೂಪಿಸಿವೆ. ಪಿಂಜಾರರು ಕೂಡ ಇಂತಹ ರಚನೆಯ ಒಳಗಡೆಯೇ ಆಕಾರ ಪಡೆದುಕೊಂಡವರಾಗಿದ್ದಾರೆ. ಅವರ ಸಾಮಾಜಿಕ ಸ್ಥಾನಮಾನಗಳನ್ನು ಕುರಿತು ಯೋಚಿಸುವಾಗ ಸಹಜವಾಗಿಯೇ ಅವರ ಮೂಲಸಂಸ್ಕೃತಿಯ ರೂಪಗಳು ಕಣ್ಣೆದುರಿಗೆ ಬರುತ್ತವೆ. ಹಿಂದೂ-ಮುಸ್ಲಿಂ ಎನ್ನುವ ರಾಜಕೀಯ ಪರಿಭಾಷೆ ಇಂಡಿಯಾದಲ್ಲಿ ಬ್ರಿಟೀಷರು ಬಂದ ನಂತರದ ದಿನಗಳಲ್ಲಿ ಹೆಚ್ಚು ಬಳಕೆಯಾದುದು ಕಂಡು ಬರುತ್ತದೆ. ಪಿಂಜಾರರು ಮತ್ತು ಹಿಂದೂಗಳ ನಡುವಿನ ಸಂಬಂಧ ಅದಕ್ಕೂ ಮೊದಲಿನಿಂದಲೇ ಭಾವನಾತ್ಮಕವಾಗಿದ್ದುದು ತಿಳಿದು ಬರುತ್ತದೆ. ಹಿಂದಿನ ಕಾಲದ ಪಿಂಜಾರರು ತಮ್ಮ ಸಾಂಪ್ರದಾಯಿಕ ವೃತ್ತಿಯನ್ನು ನಿರ್ವಹಿಸುತ್ತಲೇ ಇಲ್ಲಿನ ಕೃಷಿ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದರು. ಈ ನೆಲದ ಸಾಂಸ್ಕೃತಿಕ ಆಚರಣೆಗಳಾದ ಹಬ್ಬ-ಹರಿದಿನಗಳಲ್ಲಿ ಅವರ ಪಾಲುದಾರಿಕೆ ಸಹಜವಾಗಿರುತ್ತಿತ್ತು. ಅವರ ಕೌಟುಂಬಿಕ ಜೀವನದ ಮದುವೆ-ಮುಂಜಿಯಂತಹ ಸಂಪ್ರದಾಯಗಳು ಕೂಡ ಈ ನೆಲದ ಸಂಸ್ಕೃತಿಯ ಒಳರೂಪಗಳನ್ನು ಬಿಟ್ಟುಕೊಡುತ್ತಿದ್ದವು. ವಾಸ್ತವವಾಗಿ ಮತಾಂತರದ ನಂತರ ಅವರಿಗೆ ಇಸ್ಲಾಂ ಧಾರ್ಮಿಕ ಆಚರಣೆಗಳ ಪ್ರಭಾವಕ್ಕೆ ಒಳಗಾಗುವುದು ಅನಿವಾರ್ಯವಾಯಿತು. ರಾಜಪ್ರಭುತ್ವವನ್ನು ಎದುರು ಹಾಕಿಕೊಳ್ಳಲಾಗದ ಅಸಂಘಟಿತವಾದ ಸಾಮಾನ್ಯ ಜನಸಮುದಾಯ ಎಲ್ಲವನ್ನೂ ಭೀತಿಯ ಆವರಣದಲ್ಲಿ ಅನುಭವಿಸಬೇಕಾಗಿದ್ದಿತು. ಪಿಂಜಾರರು ಕೂಡ ಇದರಿಂದ ಪಾರಾಗುವಂತಿರಲಿಲ್ಲ. ಆದರೆ ಪಿಂಜಾರರು ತಮ್ಮ ಯಾವ ಮೂಲನೆಲೆಯಿಂದ ಬಂದವರೆಂಬುದು ಸ್ಪಷ್ಟವಾಗಿಲ್ಲದಿರುವುದರಿಂದ ಅಂದಿನ ಸಾಮಾಜಿಕ ಸ್ಥಾನಮಾನಗಳು ಅಸ್ಪಷ್ಟವಾಗಿವೆ.

ಹಿಂದೂ ಶೂದ್ರ ಜನಸಮುದಾಯದ ಜೊತೆಗಿನ ಪಿಂಜಾರರ ಒಡನಾಟ ಮತ್ತು ಪಾಲ್ಗೊಳ್ಳುವಿಕೆಯನ್ನು ಗಮನಿಸಿದರೆ ಅವರ ಸಾಮಾಜಿಕ ಸ್ಥಾನಮಾನಗಳ ಚಿತ್ರಣ ದೊರೆಯುತ್ತದೆ.

ಊರಿನ ಯಾವುದೇ ಮುಖ್ಯ ಆಚರಣೆ ಮತ್ತು ಘಟನೆಗಳಲ್ಲಿ ಪಿಂಜಾರರ ಉಪಸ್ಥಿತಿ ಇದ್ದೇ ಇರುತ್ತದೆ. ಉತ್ತರ ಕರ್ನಾಟಕದ ಬಹುಪಾಲು ಹಳ್ಳಿಗಳಲ್ಲಿ ತೇರು ಕಟ್ಟುವುದು, ಜಾತ್ರೆ ನಡೆಸುವುದು, ದೇವರನ್ನು ಹೊರಡಿಸುವುದು, ನ್ಯಾಯಪಂಚಾಯ್ತಿ ಮಾಡುವುದು, ಸುಗ್ಗಿಯ ಆಚರಣೆ - ಹೀಗೆ ಯಾವುದೇ ಸಂದರ್ಭದಲ್ಲಿ ಅವರ ಹಾಜರಾತಿಯಿರುತ್ತದೆ. ಕೆಲವು ಊರುಗಳಲ್ಲಿ ಒಬ್ಬಿಬ್ಬರು ಸ್ಥಿತಿವಂತ ಪಿಂಜಾರರು ಇದ್ದ ಕಾಲಕ್ಕೆ ಅವರು ಊರಿನ ಒಟ್ಟಾರೆ ಸಾಮಾಜಿಕ - ಸಾಂಸ್ಕೃತಿಕ ನಿರ್ಣಯಗಳಲ್ಲಿ ಉಳಿದ ಹಿಂದೂ ಮೇಲ್ಜಾತಿಯ ಸದಸ್ಯರ ಸ್ಥಾನ-ಮಾನದಲ್ಲಿಯೇ ಕಾಣಿಸಿಕೊಳ್ಳುತ್ತಿದ್ದರು. ಆದ್ದರಿಂದ ಹಿಂದೆ ಪಿಂಜಾರರು ಸಾಮಾಜಿಕವಾಗಿ ಅಪಮಾನವನ್ನು ಅನುಭವಿಸುವ ಸ್ತರದಲ್ಲೇನೂ ಇರಲಿಲ್ಲ. ಅವರು ಈಗ ಅನುಭವಿಸುತ್ತಿರುವ ಅಪಮಾನ ತೀರ ಇತ್ತೀಚೆಗೆ ಆರಂಭವಾದುದು ಎನಿಸುತ್ತದೆ. ಅಲ್ಲದೆ ಜಗಳೂರು ಪ್ರಾಂತ್ಯದಲ್ಲಿರುವ ಇಮಾಂ ಅವರ ಮನೆತನದವರ ರಾಜಕೀಯ ಪ್ರಭಾವವನ್ನು ಗಮನಿಸಿದರೆ ಬಹುಶಃ ಎಲ್ಲ ಜಾತಿಯ ಬಡವರೂ ತಮ್ಮ ಜಾತಿಯ ಶ್ರೀಮಂತರ ಬಗ್ಗೆ ಅನೇಕ ಭ್ರಮೆಗಳನ್ನಿಟ್ಟುಕೊಂಡಂತೆ ಕಾಣುತ್ತದೆ. ಹಿಂದಿನಿಂದಲೂ ಪಿಂಜಾರರು ಯಾವುದೇ ಬಗೆಯ ಉನ್ನತ ಸ್ಥಾನಮಾನಗಳನ್ನು ಅನುಭವಿಸದಿದ್ದರೂ ಈ ನೆಲದ ಅಸ್ಪೃಶ್ಯರು ಮತ್ತು ಪಿಂಜಾರರ ನಡುವಿನ ಸಂಬಂಧಗಳು ಕುತೂಹಲಕರವಾಗಿವೆ. ಮುಸ್ಲಿಮರನ್ನು ಸದಾ ದೂರವಿಡುವ ಅಥವಾ ಅವರಿಂದ ದೂರವನ್ನು ಕಾಪಾಡಿಕೊಳ್ಳುವ ಪಿಂಜಾರರು ಅವರಿಂದ ಸಾಮಾಜಿಕ-ಧಾರ್ಮಿಕ ಆಸರೆಯನ್ನು ಬಯಸುತ್ತಲೇ ಇರಲಿಲ್ಲ. ದಲಿತರು ಮತ್ತು ಪಿಂಜಾರರ ನಡುವಿನ ಸಮಾನ ಆರ್ಥಿಕ ಅಂಶವೆಂದರೆ ಈ ಎರಡೂ ಜನಾಂಗದವರು ಹಿಂದೂ ಮೇಲ್ಜಾತಿಯವರ, ಅದರಲ್ಲೂ ಲಿಂಗಾಯಿತರ ಮನೆಗಳಲ್ಲಿ ಜೀತಕ್ಕಿರುವುರು. ಪಿಂಜಾರರ ವಿಚಾರದಲ್ಲಿ ಉದಾರವಾಗಿರುವ ಮೇಲ್ಜಾತಿಗಳು ಅಸ್ಪೃಶ್ಯರ ವಿಚಾರದಲ್ಲಿ ಹಾಗಿಲ್ಲ. ಪಿಂಜಾರರು ಜೀತದಾಳುಗಳಾಗಿರುವುದಕ್ಕೆ ಬಡತನ ಕಾರಣವಾದರೆ ಅಸ್ಪೃಶ್ಯರಿಗೆ ಸಾಮಾಜಿಕ - ಆರ್ಥಿಕ ಕಾರಣಗಳಿರುತ್ತವೆ. ಶ್ರೀಮಂತರ ವಿಚಾರ ಬಿಡಿ, ಆರ್ಥಿಕವಾಗಿ ಬಡವರಾಗಿರುವ ಲಿಂಗಾಯಿತರೂ ಕೂಡ ಅಸ್ಪೃಶ್ಯರನ್ನು ಕೀಳಾಗಿ ಕಾಣುವುದಿದೆ. ಪಿಂಜಾರರ ಜೀತದಾಳು ಬಾವಿಯಿಂದ ನೀರು ತಂದು ಅವರ ಮನೆಯ ಹಂಡೆಗಳನ್ನು ತುಂಬಿಸಬಹುದು. ಆದರೆ ಅಸ್ಪೃಶ್ಯ ಜೀತದಾಳಿಗೆ ಇಂಥ ಔದಾರ್ಯವಿಲ್ಲ. ಮೇಲ್ಜಾತಿಗಳ ಮನೆಗಳಲ್ಲಿ ಉಂಡ ತಟ್ಟೆಯನ್ನು ತೊಳೆದು ಹೊರಗಿಟ್ಟು ಹೋಗುವ ಪಿಂಜಾರನ ರೀತಿಗೂ ತನ್ನದೇ ತಟ್ಟೆಯಲ್ಲಿ ಮುದ್ದೆ ಹಾಕಿಸಿಕೊಂಡು ಉಂಡು ತೊಳೆದಿಟ್ಟುಕೊಳ್ಳುವ ದಲಿತನ ರೀತಿಗೂ ಇರುವ ವ್ಯತ್ಯಾಸವೇ ಪಿಂಜಾರರು ಹಾಗೂ ದಲಿತರಿಗೂ ಇರುವ ಸಾಮಾಜಿಕ ಸಂಬಂಧಗಳನ್ನು ತೋರಿಸುತ್ತದೆ. ಹಿಂದಿನಿಂದ ಪಿಂಜಾರರು ಕೂಡ ದಲಿತರನ್ನು ಹೀಗೇ ನೋಡಿಕೊಳ್ಳುತ್ತಿದ್ದುದಾಗಿ ತಿಳಿದು ಬರುತ್ತದೆ. ಅಂದರೆ ಪಿಂಜಾರರು ಕೂಡ ಮೂಲಭೂತವಾಗಿ ಹಿಂದೂ ಶೂದ್ರಸಮುದಾಯದ ಮೇಲುಸ್ತರದ ಭಾವನೆಗಳನ್ನು ದಲಿತರ ವಿಚಾರದಲ್ಲಿ ಹೊಂದಿದ್ದರು ಎಂದಾಗುತ್ತದೆ.

ಇಲ್ಲಿ ದಲಿತರು ಮತ್ತು ಪಿಂಜಾರರ ನಡುವಿನ ಸಂಬಂಧದ ಪ್ರಸ್ತಾಪ ಯಾಕೆ ಬಂತೆಂದರೆ ಪಿಂಜಾರರು ದಲಿತಮೂಲ ನೆಲೆಯಿಂದ ಬಂದವರಾಗಿದ್ದರೆ ಈ ಬಗೆಯ ಭಾವನೆಗಳು ಬರುತ್ತಿದ್ದವೇ ? ಅಥವಾ ದಲಿತ ನೆಲೆಯಿಂದ ಬಂದೂ ಕೂಡ ಮತಾಂತರದಿಂದ ಪ್ರಾಪ್ತವಾದ ಸಾಮಾಜಿಕ ಹುಸಿ ಪ್ರತಿಷ್ಠೆಯ ಭಾವನೆಗಳು

ಅವರಿಗೆ ಕಾಡುತ್ತಿರಬಹುದೇ ? ಎಂಬ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವುದು ಇದರಿಂದ ಸಾಧ್ಯವಾಗುತ್ತದೆ. ಅಲ್ಲದೆ ಮತಾಂತರಕ್ಕೆ ಒಳಗಾಗಿರುವುದನ್ನು ನಿರ್ಭಿಡೆಯಿಂದ ಒಪ್ಪಿಕೊಳ್ಳುವ ಪಿಂಜಾರರು ಮೂಲದಲ್ಲಿ ದಲಿತರೇ ಆಗಿದ್ದಿರಬಹುದೇ ? ಎನ್ನುವ ಪ್ರಶ್ನೆಗೆ ಸಿಡಿಮಿಡಿಗೊಳ್ಳುತ್ತಾರೆ. ಈ ಎಲ್ಲ ಕಾರಣಗಳಿಂದ ಪಿಂಜಾರರು ಸಮಾಜದಲ್ಲಿ ಸಾಮಾಜಿಕ ಅಪಮಾನದ ಶಾಪವನ್ನೆದುರಿಸುವ ದಲಿತರ ನೆಲೆಯೂ ಅಲ್ಲದ, ಶ್ರೀಮಂತ ಶೂದ್ರವರ್ಗದ ಪಾಳೇಗಾರಿಕೆಯ ನೆಲೆಯೂ ಅಲ್ಲದ ಬಡತನ, ಅಂಧಶ್ರದ್ಧೆ, ಕಠಿಣ ಪರಿಶ್ರಮದ ಸಾಮಾನ್ಯ ಹಿಂದುಳಿದ ಜನಸಮುದಾಯಗಳ ವರ್ಗಕ್ಕೆ ಸೇರಿದವರಾಗಿದ್ದಾರೆ. ಅಪರೂಪಕ್ಕೆಂಬಂತೆ ಪಾರಂಪಾರಿಕವಾದ ಶ್ರೀಮಂತಿಕೆ, ರಾಜಕೀಯ ನಂಟು ಬೆಳೆಸಿಕೊಂಡು ಬಂದವರನ್ನು ಬಿಟ್ಟರೆ ಪಿಂಜಾರರು ಇವತ್ತಿಗೂ ಅಂದಿಗೂ ಅವರ ಸಾಮಾಜಿಕ ಸ್ಥಾನಮಾನಗಳಲ್ಲಿ ಮಹತ್ತರವಾದ ಸ್ಥಿತ್ಯಂತರಗಳನ್ನು ಅನುಭವಿಸಿಲ್ಲ. ಆದರೆ ಸಾಂಸ್ಕೃತಿಕವಾಗಿ ಕೂಡ ಅವರು ಅದೇ ರೀತಿಯ ಗತಿಶೀಲತೆಯನ್ನು ಹೊಂದಿದ್ದಾರೆ ಎಂದು ಹೇಳಲು ಬರುವುದಿಲ್ಲ. ಆಧುನಿಕ ಭಾರತದ ಧರ್ಮ ರಾಜಕಾರಣ, ವಿಜ್ಞಾನ ಹಾಗೂ ತಂತ್ರಜ್ಞಾನದ ಶಿಕ್ಷಣ ಸ್ಪರ್ಧಾತ್ಮಕವಾದ ವ್ಯಾವಹಾರಿಕ ಜಗತ್ತಿನಲ್ಲಿ ಸಾಮಾನ್ಯರೂ ಏಗಬೇಕಾದ ಅನಿವಾರ್ಯತೆಯಿಂದಾಗಿ ಇಲ್ಲಿನ ಜನಾಂಗಗಳು ತಮ್ಮ ಕಟ್ಟಳೆಗಳಲ್ಲಿ ತಕ್ಕ ಮಾರ್ಪಾಡುಗಳನ್ನು ಮಾಡಿಕೊಂಡಿವೆ. ಇಲ್ಲಿಗೆ ಒಂದು ಶತಮಾನದ ಹಿಂದೆ ಇದ್ದ ಜಾತಿಧರ್ಮಗಳನ್ನು ಕುರಿತಾದ ಬದ್ಧತೆ ಈಗ ಶಿಥಿಲಗೊಂಡಿದೆ. ಇವತ್ತು ತನ್ನ ಸಮುದಾಯವನ್ನು ಧಾರ್ಮಿಕ ನೀತಿ-ನಿಯಮಗಳಿಗೆ ಕಟ್ಟಿಹಾಕುವುದು ಸಾಧ್ಯವಿಲ್ಲದಷ್ಟರ ಮಟ್ಟಿಗೆ ಧರ್ಮಗಳು ಜಡಗೊಂಡಿವೆ. ಬೇಕಿರಲಿ, ಬೇಡವಾಗಲಿ ಜಾಗತೀಕರಣ ನಮ್ಮ ಮನೆಗಳ ಅಡಿಗೆ ಮನೆಯನ್ನು ಪ್ರವೇಶ ಮಾಡಿಯಾಗಿದೆ. ಧಾರ್ಮಿಕ ಆಚರಣೆ, ಮಡಿ-ಮೈಲಿಗೆಗಳೆಂದು ಹೆಜ್ಜೆ ಹೆಜ್ಜೆಗೆ ಭಜನೆ ಮಾಡುತ್ತಿದ್ದ ಪುರೋಹಿತಶಾಹಿಯೇ ತನ್ನ ಗರ್ಭಗುಡಿಯ ಬಾಗಿಲನ್ನು ತೆರೆದುಕೊಂಡು ಜಾಗತೀಕರಣದ ಲಾಭಗಳನ್ನು ಪಡೆಯುತ್ತಿದೆ. ಇಂತಹ ಸಂದರ್ಭದಲ್ಲಿ ಪಿಂಜಾರರ ಸಾಂಸ್ಕೃತಿಕ ಸ್ಥಿತ್ಯಂತರಗಳನ್ನು ಕುರಿತು ಯೋಚಿಸುವ ಮೂಲಕ ಉಪಸಂಸ್ಕೃತಿಗಳು ಅದನ್ನು ಎದುರಿಸುವ ಸ್ವರೂಪವನ್ನು ತಿಳಿದುಕೊಳ್ಳಬೇಕಾಗಿದೆ.

## ೮.೨ ಕೈಗಾರಿಕೀಕರಣದ ಪರಿಣಾಮ ಪಿಂಜಾರರ ಇಂದಿನ ಸ್ಥಾನ-ಮಾನ ಮತ್ತು ಸಂಬಂಧಗಳು

ಆಧುನಿಕ ಕೈಗಾರಿಕೆಗಳು ಮುಖ್ಯವಾಗಿ ಭಾರತದ ರೈತಾಪಿ ಜನಸಮುದಾಯದಿಂದ ಹಿಡಿದು ಬಡಗಿ, ಕುಂಬಾರ, ಕಮ್ಮಾರ, ಅಕ್ಕಸಾಲಿಗ, ನೇಕಾರ ಮತ್ತು ಪಿಂಜಾರರಂತಹ ಜನಾಂಗಗಳ ಮೂಲ ಕಸುಬಿನ ಮೇಲೆ ಬೇರೆ ಬೇರೆ ರೀತಿಯ ಪರಿಣಾಮಗಳನ್ನು ಬೀರಿವೆ. ಕೈಗಾರಿಕೆಗಳ ಉತ್ಪನ್ನದಿಂದ ರಾಷ್ಟ್ರದ ಆರ್ಥಿಕ ಅಭಿವೃದ್ಧಿ ಸಾಧ್ಯವಾಗಿರುವಂತೆ ಇಂಥ ಜನಾಂಗಗಳ ಆರ್ಥಿಕ ಹಿಂದುಳಿಯುವಿಕೆಗೂ ಕಾರಣವಾಗಿದೆ. ಮುಖ್ಯವಾಗಿ ಕೈಗಾರಿಕೆಗಳು ಪ್ರಕೃತಿ ಸಂಪತ್ತಿನ ಸಾರ್ಥಕ ಬಳಕೆಯಿಂದ ಜನರ ಅವಶ್ಯಕತೆಗಳನ್ನು ವೇಗವಾಗಿ ಪೂರೈಸುವ ಕೆಲಸ ಮಾಡಿದವು, ನಿಜ. ಆದರೆ ಈ ತ್ವರಿತ ಅಭಿವೃದ್ಧಿಯ ಜೊತೆಗೆ ತಂತಮ್ಮ ಮೂಲಕಸುಬುಗಳನ್ನೇ ನಂಬಿಕೊಂಡು ಹೊಟ್ಟೆ ಹೊರೆದುಕೊಳ್ಳುತ್ತಿದ್ದ ಈ ಜನಸಮುದಾಯಗಳು ದಾರಿ

ಕಾಣದೆ ಪರಿತಪಿಸುವಂತಾಯಿತು. ಇದು ಆ ಜನಾಂಗಗಳ ಆರ್ಥಿಕ ಹಿಂದುಳಿಯುವಿಕೆಗೆ ಕಾರಣವಾಯಿತು ಎಂದು ಮೇಲುನೋಟಕ್ಕೆ ಅನಿಸಿದರೂ ಅದರಿಂದ ಸಾಂಸ್ಕೃತಿಕವಾಗಿ ಕೂಡ ಒಂದು ಬಗೆಯ ಹಿಂಜರಿತ ಉಂಟಾಯಿತು. ಆಧುನಿಕ ಕೈಗಾರಿಕೆಗಳಿಗೆ ಉತ್ಪಾದನೆ, ವಿನಿಮಯ, ವಿತರಣೆಯಂತಹ ವ್ಯಾವಹಾರಿಕ ಪರಿಭಾಷೆ ಹಾಗೂ ಆ ಮೂಲಕ ಲಾಭ-ನಷ್ಟಗಳೇ ಪ್ರಮುಖವಾಗುತ್ತವೆ. ಆದರೆ ಸಾಂಪ್ರದಾಯಿಕ ವೃತ್ತಿಗಳನ್ನು ಅವಲಂಬಿಸಿ ಬದುಕುವ ಜನಾಂಗಗಳಿಗೆ ವ್ಯವಹಾರದ ಹೊರತಾಗಿಯೂ ಸಾಂಸ್ಕೃತಿಕ ಅನನ್ಯತೆ ಮುಖ್ಯವಾಗುತ್ತದೆ. ಆದ್ದರಿಂದ ಕೈಗಾರಿಕೀಕರಣ ಆಧುನಿಕ ಬದುಕಿಗೆ ವೇಗವನ್ನೂ, ಆಕರ್ಷಣೆಯನ್ನೂ ತಂದದ್ದು ನಿಜವಾದರೂ ಪಿಂಜಾರರಂಥ ಜನಾಂಗಗಳ ಆರ್ಥಿಕ ಜೀವನವನ್ನು ಅಸಹನೀಯವಾಗಿಸಿತು. ಪಿಂಜಾರರು ಕಂಡ ಧಾರ್ಮಿಕ ಸ್ಥಿತ್ಯಂತರಕ್ಕಿಂತ ಈ ಬಗೆಯ ಆರ್ಥಿಕ ಹಿಂಜರಿತ ಅವರ ಬದುಕನ್ನು ಅತಂತ್ರವಾಗಿಸಿದೆ.

ಕೈಗಾರಿಕೀಕರಣದಿಂದ ಮೊಟ್ಟಮೊದಲಿಗೆ ಪಿಂಜಾರರ ಸಾಂಪ್ರದಾಯಿಕ ವೃತ್ತಿಯ ಸಲಕರಣೆಗಳು ಮೂಲೆ ಸೇರಿದವು. ದೊಡ್ಡ ಹಾಗೂ ಚಿಕ್ಕಪುಟ್ಟ ನಗರಗಳಲ್ಲಿ ಆಧುನಿಕ ಮಾರುಕಟ್ಟೆಗಳು ಜಾರಿಗೆ ಬಂದು ವ್ಯವಹಾರವನ್ನು ಕೇಂದ್ರೀಕರಿಸಿದವು. ಜನರ ಬಳಿಗೇ ಹೋಗಿ ಹಾಸಿಗೆ ದಿಂಬು ತಯಾರಿಸಿಕೊಡುತ್ತಿದ್ದ ಪಿಂಜಾರರು ಆಧುನಿಕ ಮಾರುಕಟ್ಟೆಯಲ್ಲಿ ದೊರಕುವ ಅತ್ಯಾಕರ್ಷಕವಾದ ಹಾಸಿಗೆಯ ಉತ್ಪನ್ನಗಳ ಎದುರು ಪೈಪೋಟಿ ನಡೆಸುವುದು ಅಸಾಧ್ಯವಾಯಿತು. ಬಂಡವಾಳಶಾಹಿಗಳು ಕಾರ್ಖಾನೆಯ ಉತ್ಪನ್ನಗಳನ್ನು ನೇರವಾಗಿ ಖರೀದಿಸಿ ಮಾರುಕಟ್ಟೆಯನ್ನು ನಿರ್ವಹಿಸುತ್ತಿದ್ದರು. ಜನರು ತಮ್ಮ ಅಗತ್ಯಗಳನ್ನು ಹುಡುಕಿಕೊಂಡು ಅನೇಕ ಬಗೆಯ ಮಾದರಿಗಳಲ್ಲಿ ಇಷ್ಟವಾದುದನ್ನು ಆಯ್ಕೆ ಮಾಡಲಾರಂಭಿಸಿದರು. ಮಾರುಕಟ್ಟೆಯ ಜಾಲ ಅಪಾರ ವೆಚ್ಚದ ಜಾಹೀರಾತುಗಳ ಮೂಲಕ ಗ್ರಾಹಕರನ್ನು ಸೆಳೆಯಿತು. ಜನ ತಮ್ಮ ಮನೆ ಬಾಗಿಲಿಗೆ ಬಂದು ಹತ್ತಿ ಸಂಸ್ಕರಿಸಿ ಹಾಸಿಗೆ ಮಾಡುತ್ತಿದ್ದ ಪಿಂಜಾರನ ಕೆಲಸ, ಅಲ್ಲಿ ಉಂಟಾಗುವ ಧೂಳು - ಇವೆಲ್ಲವುಗಳ ಬದಲಾಗಿ ರೆಡಿಮೇಡ್ ಆಗಿ ದೊರೆಯುವ ವಸ್ತುಗಳಿಗೆ ಹಾತೊರೆಯುವಂತಾಯಿತು. ಪರಿಣಾಮವಾಗಿ ಪಿಂಜಾರರ ದಿನನಿತ್ಯದ ಆದಾಯದಲ್ಲಿ ಗಣನೀಯ ಇಳಿಮುಖವಾಗುತ್ತ ಬಂದಿತು. ಅನಿವಾರ್ಯವಾಗಿ ತಮ್ಮ ಆರ್ಥಿಕ ಹಿಂದುಳಿಯುವಿಕೆಯಿಂದ ಮಾರುಕಟ್ಟೆಯಲ್ಲಿ ಪೈಪೋಟಿ ಮಾಡಲಾಗದೆ ಪಿಂಜಾರರು ಜೀವನೋಪಾಯಕ್ಕಾಗಿ ಇತರೆ ಮಾರ್ಗಗಳನ್ನು ಹುಡುಕಿಕೊಳ್ಳಬೇಕಾಯಿತು. ಇದರಿಂದಾಗಿ ಪಿಂಜಾರರ ಬದುಕಿನಲ್ಲಿ ಆದ ಮುಖ್ಯ ವ್ಯತ್ಯಾಸವೆಂದರೆ ಅವರು ಮಕ್ಕಳು - ಮರಿಗಳನ್ನು ಕಟ್ಟಿಕೊಂಡು ಊರೂರು ಅಲೆಯುವುದು ಕಡಿಮೆಯಾಯಿತು. ಅಲೆಮಾರಿ ಬದುಕು ಬೇರೆ ಬೇರೆ ಭಾಷೆ ಮತ್ತು ಸಾಂಸ್ಕೃತಿಕ ಪರಿಸರಗಳನ್ನು ಪರಿಚಯಿಸುತ್ತಿತ್ತು. ಇದು ಅನೇಕ ಸಲ ಸ್ಥಳೀಯ ಸಂಸ್ಕೃತಿಗಳಲ್ಲಿ ಅನ್ಯಸಂಸ್ಕೃತಿಗಳ ಸಂಯೋಜನೆಗೆ ಕಾರಣವಾಗಿ ಸಾಂಸ್ಕೃತಿಕ ವಿಕಾಸವು ಸಾಮಾಜಿಕ ಸಾಮರಸ್ಯವನ್ನು ಉಂಟುಮಾಡುತ್ತಿತ್ತು. ಪಿಂಜಾರರು ತಮ್ಮ ಸಾಂಪ್ರದಾಯಿಕ ಕಸುಬು ಮತ್ತು ವಲಸೆಯ ಸ್ವರೂಪದ ಜೀವನದಿಂದ ವ್ಯಾಪಾರ - ವಹಿವಾಟಿನ ಜೀವನಕ್ರಮಕ್ಕೆ ಕಾಲಿಡುವಂತಾಯಿತು. ಅನೇಕರು ಕೃಷಿ ಕೂಲಿಗೆ ಅಂಟಿಕೊಂಡರು. ಇವತ್ತಿಗೂ ಪಟ್ಟಣಗಳ ಬಸ್‌ಸ್ಟ್ಯಾಂಡ್‌ಗಳಲ್ಲಿ, ಕೃಷಿ ಉತ್ಪನ್ನ ಮಾರುಕಟ್ಟೆಗಳಲ್ಲಿ ಹಮಾಲಿ ಕೆಲಸ ಮಾಡುವ ಅನೇಕ ಪಿಂಜಾರರು ಇಲ್ಲಿಯೂ ತಮ್ಮ ಬಹುಭಾಷಿಕ ಹಾಗೂ

ಬಹುಧಾರ್ಮಿಕ ಜೀವನ ವಿಧಾನಗಳಲ್ಲಿ ಕಂಡು ಬರುತ್ತಾರೆ. ಬಡವ-ಶ್ರೀಮಂತರೆನ್ನದೆ ನಗರಗಳತ್ತ ವಲಸೆ ಹೊರಟಿರುವ ಗ್ರಾಮೀಣ ಜನಸಮುದಾಯ ಕೇವಲ ಕೆಲಸ ಹುಡುಕಿಕೊಂಡೇ ಹೋಗುತ್ತಿಲ್ಲ. ಆಳುವ ವ್ಯವಸ್ಥೆ ಯಾವಾಗಲೂ ಶಿಕ್ಷಣ, ಆರೋಗ್ಯ, ವಿದ್ಯುತ್, ನೀರು ಸರಬರಾಜು, ರಸ್ತೆ ಮೊದಲಾದ ವಿಚಾರಗಳಲ್ಲಿ ನಗರಗಳ ಪರವಾಗಿರುತ್ತದೆ. ಆದುದರಿಂದ ಆಧುನಿಕತೆಗೆ ಸಾಧ್ಯವಾದಷ್ಟು ಒಡ್ಡಿಕೊಳ್ಳುವ ಮೂಲಕ ನಾಗರಿಕರಾಗಬೇಕೆಂದು ಬಯಸುತ್ತಾರೆ. ನಗರಗಳಲ್ಲಿರುವವರೆಲ್ಲಾ ನಾಗರಿಕರೇ ? ಎನ್ನುವ ಪ್ರಶ್ನೆ ಬೇರೆ. ಯಾಕೆಂದರೆ ನಗರಗಳಲ್ಲಿನ ವ್ಯಾವಹಾರಿಕ ಸ್ಪರ್ಧೆ ಮತ್ತು ಕೇಂದ್ರೀಕೃತವಾಗುತ್ತಿರುವ ಬಂಡವಾಳದಿಂದಾಗಿ ಮೋಸ, ಕೊಲೆ, ವ್ಯಾಪಕವಾದ ಅನೈತಿಕತೆ, ಧಾರ್ಮಿಕ ಭಂಡತನ ನಗರಗಳನ್ನು ತಲ್ಲಣಗೊಳಿಸುತ್ತಿವೆ. ಆದರೆ ಪಿಂಜಾರರು ನಗರಗಳಿಗೆ ಹೋಗುವುದು ತಮ್ಮ ಶೈಕ್ಷಣಿಕ, ಸಾಮಾಜಿಕ ಸುಧಾರಣೆಗಲ್ಲ. ಹಣ್ಣು, ಹೂವು ಮಾರಾಟ, ಗುಜರಿ ಅಂಗಡಿ, ವೈನ್‌ಶಾಪ್‌ಗಳಲ್ಲಿ ಕೆಲಸ, ಆಟೋರಿಕ್ಷಾ ಓಡಿಸುವುದು, ರಸ್ತೆಬದಿಯಲ್ಲಿ ಬೀಡಿ ಸಿಗರೇಟು ಅಂಗಡಿ ಇಡುವುದು, ಗೋಣಿಚೀಲ ಮಾರಾಟ - ಹೀಗೆ ಜೀವನ ನಿರ್ವಹಣೆಗೆ ಸಾಧ್ಯವಾದುದೆಲ್ಲವನ್ನು ಅವರು ಮಾಡುತ್ತಾರೆ. ಹಿಂದೆ ಹೇಳಿದಂತೆ ಅನೇಕರು ಅನ್ಯಜಾತಿಯ ಶ್ರೀಮಂತರು ಇಟ್ಟುಕೊಂಡ ಹಾಸಿಗೆಯ ದೊಡ್ಡ ಅಂಗಡಿಗಳಲ್ಲಿ ದಿನಗೂಲಿಯಂತೆ ಕೆಲಸ ಮಾಡುತ್ತಾರೆ. ಹಳ್ಳಿಗಳಲ್ಲಿ ಉಳಿದವರು ಕೃಷಿ ಕೆಲಸ, ಬಡಗಿತನ, ಕಮ್ಮಾರಿಕೆ, ಗಾರೆ ಕೆಲಸ, ಬಳೆ ಮಾರುವುದು, ಮೊದಲಾದ ಕಸುಬುಗಳನ್ನು ಅವಲಂಬಿಸಿದ್ದಾರೆ.

## ೮.೩ ಇತರ ಸಮುದಾಯ ಮತ್ತು ಸಮಾಜಗಳೊಂದಿಗಿನ ಸಂಬಂಧಗಳು

ಕೈಗಾರಿಕೀಕರಣದಿಂದ ಉಂಟಾದ ಸಾಮಾಜಿಕ ಪರಿವರ್ತನೆಯ ಹಾದಿಯಲ್ಲಿ ಪಿಂಜಾರರು ಮುಖ್ಯವಾಗಿ ಸಾಂಸ್ಕೃತಿಕ ಏಕರೂಪತೆಯನ್ನು ಪಡೆಯುವತ್ತ ಆಸಕ್ತಿ ತೋರುತ್ತಿರುವುದು ಗಮನಾರ್ಹವಾಗಿದೆ. ಅಂದರೆ ಇಸ್ಲಾಂ ಧಾರ್ಮಿಕ ಜ್ಞಾನದ ಕೊರತೆಯೇ ಪಿಂಜಾರರನ್ನು ಸಾಮಾಜಿಕವಾಗಿ ಅಪಮಾನಿಸುವುದಕ್ಕೆ ಮಾನದಂಡವಾಗಿದ್ದುದರಿಂದ ಆ ಬಗೆಯ ಜ್ಞಾನ ಪಡೆಯುವತ್ತ ಆಸಕ್ತರಾಗುತ್ತಿದ್ದಾರೆ. ಅನೇಕ ಊರುಗಳಲ್ಲಿ ಐದು ಹೊತ್ತು ನಮಾಜು ಮಾಡುವ, ಗಡ್ಡ ಬಿಡುವ, ಇಜಾರ ತೊಡುವ ಬಾಹ್ಯರೂಪದ ಅನುಕರಣೆಯಲ್ಲಿ ಕೆಲವರು ತೊಡಗಿದ್ದಾರೆ. ವಿಶೇಷವಾಗಿ ಹೆಣ್ಣುಮಕ್ಕಳಿಗೆ ಕುರಾನ್ ಓದಿಸುವುದು, ಮದರಸಾಗಳಿಗೆ ಕಳಿಸುವುದು, ಉರ್ದು ಭಾಷೆಯನ್ನು ಕಲಿಸುವುದು ಮುಂತಾದ ಚಟುವಟಿಕೆಗಳು ಕೌಟುಂಬಿಕ ನೆಲೆಯಲ್ಲಿ ನಡೆಯುತ್ತವೆ. 'ಓದಿಕೆ'ಯೇ ಬರದಿದ್ದ ಪಿಂಜಾರರು ಈಗೀಗ ತಮ್ಮ ಮನೆಯಲ್ಲಿ ಒಬ್ಬರಾದರೂ ಅದನ್ನು ಕಲಿತು ತಮ್ಮ ಮನೆಗಳಲ್ಲಿ ನಡೆಯುವ ಹಬ್ಬ ಮೊದಲಾದ ಆಚರಣೆಗಳಲ್ಲಿ ತಾವೇ 'ಓದಿಕೆ' ಮಾಡುತ್ತಾರೆ. ಕೋಳಿ, ಕುರಿ ಜುಬಾ ಮಾಡಿಸುವುದಕ್ಕೆ ಮುಲ್ಲಾನನ್ನು ಅವಲಂಬಿಸದೆ ತಾವೇ ಆ ಬಗೆಗಿನ ಕರ್ತವ್ಯ ನಿರ್ವಹಿಸುತ್ತಾರೆ. ಮುಸಲ್ಮಾನರನ್ನು ದೂರವಿಡದೆ ಅವರೊಂದಿಗೆ ಸಹಬಾಳುವೆಗಾಗಿ ಹಂಬಲಿಸುತ್ತಾರೆ. ನಗರಗಳಲ್ಲಿ ಆಗಾಗ್ಗೆ ನಡೆಯುವ ಇಸ್ಲಾಂ ಧಾರ್ಮಿಕ ಸಮ್ಮೇಳನಗಳ - ಇಸ್ತೆಮಾ, ಮುಶೇರಾ - ಪ್ರಭಾವದಿಂದ ಈ ಬಗೆಯ ಪರಿವರ್ತನೆಯಾಗುತ್ತದೆ ಎಂಬುದನ್ನು ಗಮನಿಸಬೇಕು. ನಗರಗಳಲ್ಲಿ ಸಣ್ಣಪುಟ್ಟ ಕಾರಣಗಳಿಗೆ ನಡೆಯುವ ಹಿಂದೂ-ಮುಸ್ಲಿಮರ ನಡುವಿನ ಗಲಭೆಗಳು

ಮುಸ್ಲಿಮರಲ್ಲಿ ಸಾಮಾಜಿಕ ಅಭದ್ರತೆಯನ್ನು ಉಂಟು ಮಾಡುತ್ತವೆ. ಈ ಬಗೆಯ ಆತಂಕಗಳಿಂದಲೇ ಅಲ್ಪಸಂಖ್ಯಾತರು 'ದ್ವೀಪ'ಗಳಲ್ಲಿ ಬದುಕುವಂತಾಗಿದೆ. ವೈಯಕ್ತಿಕವಾದ, ವ್ಯಾವಹಾರಿಕವಾದ ದ್ವೇಷದ ಸಂದರ್ಭಗಳನ್ನು ಧಾರ್ಮಿಕ ಅವಹೇಳನಗಳಂತೆ ಬಣ್ಣಕಟ್ಟಿ ಪ್ರಚೋದಿಸುವ ಎರಡೂ ಧರ್ಮಗಳ ಮತಾಂಧರು ಮುಗ್ಧರ ಆಸ್ತಿ, ಮಾನ ಪ್ರಾಣ ನಾಶಕ್ಕೆ ಕಾರಣವಾಗುತ್ತಾರೆ. ಪಿಂಜಾರರು ಕೂಡ ಇದರಿಂದ ನಿತ್ಯ ನರಳುತ್ತಲೇ ಜೀವನ ಸಾಗಿಸಬೇಕಾಗಿದೆ.

ಆದರೆ ಹಳ್ಳಿಗಳಲ್ಲಿನ ಪಿಂಜಾರರು ಸದ್ಯ ಇಂತಹ ಆತಂಕಗಳಿಂದ ಮುಕ್ತರಾಗಿದ್ದಾರೆ. ಗ್ರಾಮ ಜೀವನದ ಎಲ್ಲ ಮುಖ್ಯ ಸಂದರ್ಭಗಳಲ್ಲಿ ಎಲ್ಲ ಜನಾಂಗದವರಲ್ಲಿ ಅವರ ಪಾಲುದಾರಿಕೆ ಇರುತ್ತದೆ. ಮುಖ್ಯವಾಗಿ ಲಿಂಗಾಯಿತರು, ತಳವಾರರು, ಕುರುಬರು ಮೊದಲಾದ ಜನಾಂಗದವರೊಡನೆ ಪಿಂಜಾರರಿಗೆ ಅತ್ಯಂತ ಭಾವನಾತ್ಮಕ ಸಂಬಂಧಗಳಿವೆ. ಇಲ್ಲೆಲ್ಲಾ ರಾಷ್ಟ್ರ - ರಾಜ್ಯಗಳ ರಾಜಕಾರಣ, ದೇವರು-ದಿಂಡರುಗಳ ಕುರಿತಾಗಿ ಸಂವಾದ ಎಷ್ಟೋ ಸಲ ಅಗ್ಗದ ತಮಾಷೆಯ ನೆಲೆಯಲ್ಲಿ ನಡೆದರೂ ಅದರಿಂದ ಈ ಜನಾಂಗಗಳ ನಡುವಿನ ಬಾಂಧವ್ಯ ಕೆಡುವುದಿಲ್ಲ. ತಪ್ಪುಗಳು ನಡೆದರೆ ಅದು ಆ ತಪ್ಪಿತಸ್ಥ ಮತ್ತು ಆತನ ಕುಟುಂಬಕ್ಕಷ್ಟೇ ಸೀಮಿತವಾಗಿ ಬಿಡುತ್ತದೆ.

ಈ ವಿವರಗಳ ಜೊತೆಗೆ ಪಿಂಜಾರರ ಸಾಮಾಜಿಕ, ಆರ್ಥಿಕ ಸ್ಥಿತಿಗಳ ನೆಲೆಯನ್ನು ಗುರುತಿಸುವಲ್ಲಿ ಸಹಾಯಕವಾಗುವ ಅಂಶವೆಂದರೆ ಪಿಂಜಾರರ ಪೂರ್ವಾಶ್ರಮದ ಸಂಸ್ಕೃತಿಯ ನಿಚ್ಚಳವಾದ ಜೀವಂತಿಕೆ ಮತ್ತು ಹಿಂದೂ ಶೂದ್ರ ಸಮುದಾಯದವರೊಂದಿಗಿನ ಒಡನಾಟ. ಲಿಂಗಾಯ್ತರು, ಕುರುಬರು, ಬಳೆಗಾರರು, ತಳವಾರರು ಮುಂತಾದ ಜನಾಂಗದವರೊಡನೆ ಪಿಂಜಾರರ ಸಂಬಂಧ ಎಷ್ಟು ಆಪ್ತವಾದುದೆಂದರೆ ಇವತ್ತಿಗೂ ಇವರ ನಡುವೆ ಬೀಗರು, ಅಣ್ಣ-ತಮ್ಮಂದಿರು, ಚಿಕ್ಕದೊಡ್ಡಪ್ಪನ ಮಕ್ಕಳು ಮುಂತಾದ ರೀತಿಯ ಭಾವನಾತ್ಮಕ ನಂಟಿದೆ. ಈವರೆಗೆ ಪಿಂಜಾರರಿಗೂ ಹಿಂದೂಗಳಿಗೂ ಧಾರ್ಮಿಕ ವಿಚಾರದಲ್ಲಿ ಭಿನ್ನಾಭಿಪ್ರಾಯಗಳೇ ಕಂಡುಬಂದ ಉದಾಹರಣೆಗಳಿಲ್ಲ. ಮುಸ್ಲಿಮರಿಗೆ ಗೊತ್ತಾಗದ ರೀತಿಯಲ್ಲಿ ಇವತ್ತಿಗೂ ಗುಪ್ತವಾಗಿ ಎಲ್ಲಮ್ಮ ದೇವತೆಯನ್ನು ಆರಾಧಿಸುವ ಪಿಂಜಾರರು ಈ ದೇವತೆಯನ್ನು ಪೂಜಿಸುವ ಇತರೆ ಜನಾಂಗದವರು ನಮಗೆ (ಪಿಂಜಾರರಿಗೆ) ಅಣ್ಣ-ತಮ್ಮಂದಿರಾಗಬೇಕೆನ್ನುತ್ತಾರೆ. ಮತ್ತು ಸಣ್ಣಪ್ಪ, ದೊಡ್ಡಪ್ಪ ಎಂದೂ ಕರೆದಾಡುತ್ತಾರೆ. ಸ್ವಾರಸ್ಯಕರ ಸಂಗತಿ ಎಂದರೆ ಮುಸ್ಲಿಮರನ್ನು ಪಿಂಜಾರರು ಕೂಡ ಭಯ, ತಾತ್ಸಾರದಿಂದ ನೋಡುವುದು. ಇದು ನೇರವಾಗಿ ವ್ಯಕ್ತವಾಗದೆ ಪಿಂಜಾರರ ನಡುವೆ ಮಾತ್ರ ವ್ಯಕ್ತವಾಗುತ್ತದೆ.

ಇದುವರೆಗೂ ಪಿಂಜಾರರ ಸಂಸ್ಕೃತಿಯ ಹಿನ್ನೆಲೆಯಲ್ಲಿ ಕಂಡುಕೊಂಡ ವಿವರಗಳ ನೆಲೆಯಲ್ಲಿ ಸ್ಪಷ್ಟವಾಗುವ ಸಂಗತಿ ಎಂದರೆ ಪಿಂಜಾರರು ಮೂಲ ಸಂಸ್ಕೃತಿಯ ಸಹಜ ಅರಿವಿನ ಜೊತೆಯಲ್ಲಿ ಇಸ್ಲಾಂ ಕುರಿತಂತೆ ಒತ್ತಾಯದ ಮೂಲಕ ಬಂದಂತಹ ತಿಳುವಳಿಕೆಯನ್ನು ಹೊಂದಿರುವುದು. **Though Muhammadans they have adopted or retained many of the customs of the Hindus around them, tying a tali to the bride at marriage, being very ignorant**

**of the Muhammadan religion and even joining the Hindu worship as far as allowable** ಎನ್ನುವ ಥರ್ಸ್‌ಟನ್ ಅವರ ಮಾತನ್ನು ಇಲ್ಲಿ ನೆನೆಯಬೇಕು. ಮತಾಂತರದ ನಂತರದ ನೂರಾರು ವರ್ಷಗಳು ಕಳೆದರೂ ಪಿಂಜಾರರ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳ ಮೂಲ ನೆಲೆಯಲ್ಲಿ ನಿರ್ದಿಷ್ಟ ಬದಲಾವಣೆಯಾಗದಿರುವುದು, ಆದುದರಿಂದಲೇ ಪಿಂಜಾರರ ಮತಾಂತರದ ನಿರೀಕ್ಷಿತ ಹಾಗೂ ಉದ್ದೇಶಿತ ಗುರಿಗಳು ಈಡೇರಲು ಸಾಧ್ಯವಾಗಿಲ್ಲ, ಬದಲಾಗಿ ತಮ್ಮ ಮೂಲ ನೆಲೆಯ ಅವಮಾನದ ಜೊತೆಗೆ ಹೊಸದೊಂದು ಬಗೆಯ ಕೀಳರಿಮೆಯನ್ನು ಅಸಹಾಯಕತೆಯ ಪಟ್ಟಿಯಲ್ಲಿ ಸೇರಿಸಿಕೊಳ್ಳುವುದಷ್ಟೇ ಸಾಧ್ಯವಾಯಿತು. ಈ ಮೂಲಕ ಕೆಳಜಾತಿಗಳ ದುರಂತ ಯಾವ ಧರ್ಮದ ನೆರಳಿನಲ್ಲಿಯೂ ಕಡಿಮೆಯಾಗುವುದು ಸಾಧ್ಯವಿಲ್ಲ ಎನ್ನುವಂತಹ ಹತಾಶೆಯ ಭಾವನೆಗೆ ಕಾರಣವಾಯಿತು.

ಹಾಗಾಗಿ ಇವತ್ತಿಗೂ ಹಳ್ಳಿ, ನಗರಗಳಲ್ಲಿ ವಾಸವಾಗಿರುವ ಪಿಂಜಾರರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿ ಉತ್ತಮವಾಗಿದೆ ಎಂದು ಹೇಳಲಾಗುವುದಿಲ್ಲ. ನಗರಗಳಲ್ಲಿರುವವರಿಗೆ ಆಧುನಿಕತೆಯ ವೇಗದ ಅರಿವಾಗುತ್ತದೆ ಎನ್ನುವುದನ್ನು ಬಿಟ್ಟರೆ ಆಧುನಿಕತೆಯ ಅನಿಷ್ಟಗಳೇ ಆದ ನಿರುದ್ಯೋಗ ಮತ್ತು ಧರ್ಮಮೂಲವಾದ ತಳಮಳಗಳು ಹುಟ್ಟಿಸುವ ಭೀತಿ ಪಿಂಜಾರರನ್ನು ಮತ್ತಷ್ಟು ನರಕದ ಕೂಪಕ್ಕೆ ತಳ್ಳುತ್ತಿವೆ ಎನ್ನಬಹುದು. ಹಳ್ಳಿಗಳಲ್ಲಿರುವ ಪಿಂಜಾರರು ಧರ್ಮದ ವಿಷಯದಲ್ಲಿ ನಗರದ ಪಿಂಜಾರರು ಅನುಭವಿಸುವ ಆತಂಕದಲ್ಲಿಲ್ಲ ಅನ್ನುವುದು ಸ್ವಲ್ಪಮಟ್ಟಿನ ಸಮಾಧಾನ ಹುಟ್ಟಿಸುವ ಸಂಗತಿ.

ಇವತ್ತಿಗೂ ಪಿಂಜಾರರ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳು ಸಮಾಧಾನಕರವಾಗಿಲ್ಲದಿರುವುದಕ್ಕೆ ಚಾರಿತ್ರಿಕ ಕಾರಣಗಳಿರುವ ಹಾಗೆಯೇ ಸಮಕಾಲೀನ ಕಾರಣಗಳೂ ಇವೆ. ಮೂಲ ಕಸುಬನ್ನು ಪೂರ್ತಿ ಬಿಡದೆ ಕೃಷಿ ಕೆಲಸಗಳಿಂದ ಹಿಡಿದು ಗಾರೆ ಕೆಲಸ, ಬಳೆ ಮಾರುವ, ತೊಡಿಸುವಂತಹ ಕೆಲಸಗಳವರೆಗೂ ಪಿಂಜಾರರು ತಮ್ಮನ್ನು ತೊಡಗಿಸಿಕೊಂಡಿರುವುದನ್ನು ಗಮನಿಸಿದರೆ ಹೊಟ್ಟೆ ಹೊರೆಯುವ ನಿರಂತರ ಹೋರಾಟದಲ್ಲಿರುವುದು ತಿಳಿಯುತ್ತದೆ. ಮುಖ್ಯವಾಗಿ ಧಾರ್ಮಿಕ ತಿಳುವಳಿಕೆಯನ್ನು ಅಪೇಕ್ಷಿಸುವ ಸಮಾಜದಿಂದ ಪಿಂಜಾರರು ಯಾವ ಬಗೆಯ ಉದ್ಧಾರವನ್ನೂ ಬಯಸುವಂತಿಲ್ಲ. ಪಿಂಜಾರರನ್ನು ಪ್ರತಿನಿಧಿಸುವವರಿಲ್ಲದೆ ಸರ್ಕಾರಿ ವಲಯದಲ್ಲಿ ತಮ್ಮನ್ನು ತಾವು ಗುರುತಿಸಿಕೊಳ್ಳಲಾಗದ ಅಸಹಾಯಕತೆ ಅವರಲ್ಲಿ ದಟ್ಟವಾಗಿದೆ. ತಮ್ಮ ವಿಶಿಷ್ಟ ಸಂಸ್ಕೃತಿಯನ್ನು ಉಳಿಸಿಕೊಂಡೇ ಎಲ್ಲರಂತೆ ಮನುಷ್ಯರಾಗಿ ಬದುಕಬೇಕೆಂಬ ಹಂಬಲ ಅಂತಹವರಲ್ಲಿದೆ. ಎಲ್ಲವನ್ನು ಒಳಗೊಳ್ಳುವ ಸಂಸ್ಕೃತಿಯ ಪ್ರತಿನಿಧಿಗಳಾಗಿರುವ ಪಿಂಜಾರರು ಮುಖ್ಯವಾಗಿ ಉತ್ತಮ ಶಿಕ್ಷಣದತ್ತ ಒಲವು ತೋರಬೇಕಾಗಿದೆ. ಆ ಮೂಲಕ ಸಂಸ್ಕೃತಿಯ ವಿಶಿಷ್ಟ ವಿವರಗಳನ್ನು ಸಾರ್ವಜನಿಕವಾಗಿ ಮಂಡಿಸುತ್ತಾ ತಮ್ಮ ಸಂಸ್ಕೃತಿಯ ಹಿರಿಮೆಯನ್ನು ಅಜ್ಞಾತ ಜಗತ್ತಿಗೆ ಸಾರಬೇಕಾಗಿದೆ. ಈ ಕೆಲಸವಾಗಬೇಕಾದರೆ ಎಲ್ಲ ಜನಾಂಗದವರ ಸಹಕಾರ ಮತ್ತು ಎಲ್ಲದಕ್ಕಿಂತ ಮಿಗಿಲಾಗಿ ಆಳುವ ವ್ಯವಸ್ಥೆಯ ಕಣ್ಣು ತೆರೆಯಬೇಕಾಗಿದೆ. ಪಿಂಜಾರರ ಶಿಕ್ಷಣಕ್ಕೆ ಪ್ರೋತ್ಸಾಹ, ಪಕ್ಕದ ಆಂಧ್ರಪ್ರದೇಶದಲ್ಲಿ ಅಲ್ಲಿನ ಪಿಂಜಾರರಿಗೆ (ದೂದೇಕುಲ) ಸಿಗುತ್ತಿರುವ ಮೀಸಲಾತಿ ಸೌಲಭ್ಯವನ್ನು ಕರ್ನಾಟಕದ ಪಿಂಜಾರರಿಗೂ ವಿಸ್ತರಿಸುವಂತಹ ಜವಾಬ್ದಾರಿಯನ್ನು ಆಳುವ ವ್ಯವಸ್ಥೆ ಹೊತ್ತುಕೊಳ್ಳುವಂತೆ ಮಾಡಬೇಕಾಗಿದೆ.

ಸಮಕಾಲೀನ ಸಮಾಜದ ಅನೇಕ ಬಗೆಯ ಆತಂಕ, ತಳಮಳಗಳು ಪಿಂಜಾರರನ್ನು ಬೇರೆ ಯಾರಿಗಿಂತಲೂ ವಿಶಿಷ್ಟವಾಗಿ ಕಾಡುತ್ತಿವೆ. ಅದರಲ್ಲೂ ಮುಖ್ಯವಾಗಿ ಮುಸ್ಲಿಂ - ಪಿಂಜಾರರ ನಡುವಿನ ಸಂಬಂಧಕ್ಕಿಂತ ಹಿಂದೂ-ಮುಸ್ಲಿಮರ ನಡುವಿನ ಭೀಕರ ದ್ವೇಷ ಮತ್ತು ಈ ಮೂಲದ ಕ್ಷೋಭೆಗಳು ಪಿಂಜಾರರ ಪಾಲಿಗೆ ಶಾಪವಾಗಿವೆ. ಹೆಚ್ಚು ಹೆಚ್ಚು ಮುಸ್ಲಿಮರು ಪಿಂಜಾರರನ್ನು ಉರ್ದು, ನಮಾಜು ಕಲಿಯುವಂತೆ, ಕಡ್ಡಾಯವಾಗಿ ಧಾರ್ಮಿಕ ಆಚರಣೆಗಳನ್ನು ಅನುಸರಿಸುವಂತೆ ಒತ್ತಾಯಿಸುತ್ತಿದ್ದಾರೆ. ಈ ಒತ್ತಾಯ ಪ್ರೀತಿಯ ಮಧುರ ಮಾರ್ಗದಲ್ಲಿ ನಡೆಯುತ್ತಿಲ್ಲ ಅನ್ನುವುದೇ ಪಿಂಜಾರರ ಭೀತಿಗೆ ಕಾರಣವಾಗಿದೆ. ಹಿಂದೂಗಳ ವಿರುದ್ಧದ ಸಂಘಟನೆ ಮತ್ತು ಆತ್ಮರಕ್ಷಣೆಯ ರೂಪದಲ್ಲಿ ಅಂಥ ಒತ್ತಾಯಗಳು ನಗರಗಳಲ್ಲಿ ಹೆಚ್ಚಾಗಿ ಕಂಡು ಬರುತ್ತಿವೆ. ಇದು ಸಹಜವಾದದ್ದು. ಇಂಡಿಯಾದಲ್ಲಿ ಹಿಂದೂ-ಮುಸ್ಲಿಮರ ನಡುವಿನ ದ್ವೇಷಕ್ಕೆ ಒಂದು ಇತಿಹಾಸವೇ ಇದೆ. ಸ್ವಾತಂತ್ರ್ಯಾನಂತರ ಕಾಲದಲ್ಲಂತೂ ಇಲ್ಲಿನ ಮುಸ್ಲಿಮರಿಗೆ ತಾವು ಈ ದೇಶದ ಎರಡನೆಯ ದರ್ಜೆಯ ಪ್ರಜೆಗಳು ಎಂಬಂತಹ ಕೀಳರಿಮೆ ಕಾಡುತ್ತಿದೆ. ಜೊತೆಗೆ ಒಟ್ಟಾರೆ ಅವರ ಬದುಕಿಗೆ ಎಂದಿಲ್ಲದ ಅಭದ್ರತೆ ಬರುಬರುತ್ತ ತೀವ್ರವಾಗುತ್ತಿದೆ. ಬಹು ಸಂಖ್ಯಾತರೆಂದು ಹೇಳಿಕೊಳ್ಳುವ ಕೆಲವು ಮೂಲಭೂತವಾದಿಗಳಿಂದ ಹಿಡಿದು ಸರ್ಕಾರದ ಆಡಳಿತ ಸೂತ್ರ ಹಿಡಿದವರು, ಹಿಡಿಯಲು ಹೊರಟವರು ಎಲ್ಲರೂ ಹಿಂದೂ-ಮುಸ್ಲಿಂ ಎರಡೂ ಧರ್ಮದ ಅಮಾಯಕರನ್ನು ಬಳಸಿಕೊಂಡು ಸಮಾಜದಲ್ಲಿ ಕ್ಷೋಭೆ ಉಂಟಾಗಲು ಕಾರಣರಾಗುತ್ತಿದ್ದಾರೆ. ಎರಡೂ ಧರ್ಮದ ಮೂಲಭೂತವಾದಿಗಳು ಸರಳ ಜೀವನವಿಧಾನವನ್ನು ಹೇಳಿಕೊಡದೆ ಧರ್ಮದಂತಹ ಅಮೂರ್ತ ಸಂಗತಿಯನ್ನು ವೈಭವೀಕರಿಸಿ ಸಾರ್ವಜನಿಕ ಬದುಕಿಗೆ ಧರ್ಮವೊಂದು ಅನಿವಾರ್ಯವಾದ ಅರ್ಹತೆ ಎಂಬಂತಹ ಭ್ರಮೆಯನ್ನು ಸಾಮಾನ್ಯರಲ್ಲಿ ತುಂಬುತ್ತಿದ್ದಾರೆ. ಧಾರ್ಮಿಕ ಗುರುಗಳನ್ನು ಓಲೈಸುವ ರಾಜಕಾರಣಿಗಳು ಪರಸ್ಪರರನ್ನು ನಂಬುವ ಸ್ಥಿತಿಯಲ್ಲಿಲ್ಲ. ಯಾವತ್ತೂ ಧರ್ಮದ ವಿಷಯದಲ್ಲಿ ಭಾವುಕರಾಗಿರುವ ಸಾಮಾನ್ಯರು ಧಾರ್ಮಿಕ ರಾಜಕಾರಣಗಳ ಬಗ್ಗೆ ಇಟ್ಟುಕೊಂಡು ಭಯ-ಭಕ್ತಿಯೇ ಅವರ ನಾಶಕ್ಕೆ ಕಾರಣವಾಗುತ್ತಿದೆ. ಕುರ್ಚಿ ರಾಜಕಾರಣ ಭಾರತವನ್ನು ಎಂದೂ ನೆಮ್ಮದಿಯಾಗಿಟ್ಟ ಉದಾಹರಣೆಯಿಲ್ಲ. ಅದು ಯಾವ ದೇಶದಲ್ಲೂ ಸಾಧ್ಯವಾಗುವುದಿಲ್ಲ. ಅಲ್ಲದೆ ಸ್ವಾತಂತ್ರ್ಯಾನಂತರ ಕಾಲದ ವೈಜ್ಞಾನಿಕ ಪ್ರಗತಿಯಿಂದ ಶೋಷಿತ ವರ್ಗಗಳಿಗೆ ಸಿಗುತ್ತಿರುವ ಶಿಕ್ಷಣ ಹಾಗೂ ರಾಜಕೀಯ ಅಧಿಕಾರವನ್ನು ಮೇಲ್ಜಾತಿಯ ಜನರು ಸಹಿಸುತ್ತಿಲ್ಲ. ಜಾತಿಪದ್ಧತಿಯ ನಾಶವಾದರೆ ಅದು ಮೇಲ್ಜಾತಿಗಳ ಪಾಲಿಗೆ ನರಕವಾಗುತ್ತದೆ. ಜಾತಿಪದ್ಧತಿಯನ್ನು ಜೀವಂತವಾಗಿಡಲು ಅಗತ್ಯವಾದ ಎಲ್ಲ ಬಗೆಯ ತಂತ್ರಗಳನ್ನು ಮೇಲ್ಜಾತಿಯವರು ರೂಪಿಸುತ್ತಿದ್ದಾರೆ. ಶೋಷಿತರ ಆಲೋಚನೆ, ಕನಸುಗಳು ಕ್ರಿಯಾಶೀಲವಾಗುವ ಮೊದಲೇ ಅವುಗಳನ್ನು ಹತ್ತಿಕ್ಕುವ ಬಗ್ಗೆ ಮೇಲ್ವರ್ಗದ ಮನಸ್ಸು ಕಾರ್ಯತಂತ್ರವನ್ನು ರೂಪಿಸುತ್ತದೆ. ಸಾವಿರಾರು ವರ್ಷಗಳಿಂದ ಸೇವೆ ಮಾಡಿಕೊಂಡು ಬಂದ ಶೂದ್ರರು ಆಳುವುದನ್ನು ಸಹಿಸಿಕೊಳ್ಳಲು ಮೇಲ್ಜಾತಿಗಳಿಂದ ಸಾಧ್ಯವಾಗುತ್ತಿಲ್ಲ. ಶೂದ್ರರ ಅಭ್ಯುದಯವನ್ನು ತಮಗಾಗುತ್ತಿರುವ ಅವಮಾನವೆಂದೇ ಅವು ಭಾವಿಸುತ್ತಿವೆ. ಮೇಲ್ಜಾತಿಗಳ ಈ ಬಗೆಯ ತಳಮಳ ಕೂಡ ಇವತ್ತಿನದಲ್ಲ. ಇತಿಹಾಸದ ಯಾವ ಯಾವ ಸಂದರ್ಭದಲ್ಲಿ ಮೇಲ್ಜಾತಿಗಳ ವಿರುದ್ಧದ ಆಂದೋಲನ ನಡೆದಿದೆಯೋ (ಮುಖ್ಯವಾಗಿ ಬುದ್ಧ, ಬಸವಣ್ಣ ಮತ್ತು ಮುಸ್ಲಿಮರ ಆಡಳಿತದ

ಕಾಲ) ಆ ಎಲ್ಲ ಸಂದರ್ಭವನ್ನು ಧಾರ್ಮಿಕ ಪುನರುಜ್ಜೀವನದ ನೆಪದಲ್ಲಿ ಮೇಲ್ಜಾತಿಗಳು ಒಡೆಯುತ್ತಾ ಬಂದಿವೆ. ಆದ್ದರಿಂದ ಮೇಲ್ಜಾತಿಗಳಿಗೆ ನಿರೀಕ್ಷೆ ಮೀರಿದ ರಾಜಕೀಯ ಲಾಭವಾಗಿದೆ. ಏಕಕಾಲದಲ್ಲಿ ಶೂದ್ರರನ್ನು ಎಂದಿನ ಅವಮಾನದ ಕೂಪಕ್ಕೆ ತಳ್ಳುವುದು ಮತ್ತು ತಮ್ಮ ಎಂದಿನ ಗೌರವದ ಸ್ಥಾನವನ್ನು ಪುನರ್ ಸಂಪಾದಿಸುವುದು ಇದರಿಂದ ಸಾಧ್ಯವಾಗಿದೆ. ಇತಿಹಾಸದ ಇಂತಹ ತಂತ್ರವನ್ನೇ ಇವತ್ತು ಕೂಡ ಮೇಲ್ಜಾತಿಗಳು ಅತ್ಯಂತ ಉಪಯುಕ್ತ ಎಂದು ಭಾವಿಸುವುದರಿಂದಲೇ ಧಾರ್ಮಿಕ ಏಕತೆ ಅನ್ನುವುದು ಸಾಮಾನ್ಯರನ್ನು ಸಲೀಸಾಗಿ ಮರುಳುಗೊಳಿಸುವ ಜನಪ್ರಿಯ ಮಂತ್ರವಾಗಿದೆ. ಗುಡಿಗುಂಡಾರಗಳಲ್ಲಿದ್ದರೆ ಉಪಯೋಗವಿಲ್ಲ, ಆಡಳಿತದ ವಿವಿಧ ಅಂಗಗಳನ್ನು ವಶಪಡಿಸಿಕೊಳ್ಳುವುದರಿಂದ ಐಷಾರಾಮದ ಜೀವನ ವಿಧಾನ ಅನಾಯಾಸವಾಗಿ ದಕ್ಕುತ್ತದೆ. ಅಲ್ಲದೆ ತಮಗಾಗದವರ ಸುತ್ತಲೂ ನಿಷ್ಠುರ ಸಂವಿಧಾನವನ್ನು ಹೆಣೆಯುವುದು ಸಾಧ್ಯ ಎಂದು ಸ್ಪಷ್ಟವಾಗಿ ತಿಳಿದುಕೊಂಡಿರುವ ಮೂಲಭೂತವಾದಿಗಳ, ವಸಾಹತುಶಾಹೀ ಧೋರಣೆಯೇ ಇವತ್ತಿನ ಸಾಮಾಜಿಕ ಸಂವೇದನೆಗಳನ್ನು ರೂಪಿಸುವ ದೃಷ್ಟಿಯೂ ಆಗಿರುವಂತಿದೆ.

ಇದೆಲ್ಲದರ ಪರಿಣಾಮದಲ್ಲಿ ಏನಾಗುತ್ತದೆಂದರೆ ನೂರಾರು ಬಗೆಯ ಸಂಸ್ಕೃತಿಗಳಿರುವ ಭಾರತದಲ್ಲಿ ಯಾವುದು ಹಿಂದೂ ಯಾವುದು ಮುಸ್ಲಿಂ ಎನ್ನುವ ಸರಳ ಪ್ರಶ್ನೆ ಹುಟ್ಟುತ್ತದೆ, ಈ ಪ್ರಶ್ನೆಗೆ ಉತ್ತರ ಪಡೆಯುವಾಗ ಒಬ್ಬ ಅಸ್ಪೃಶ್ಯ, ಮತ್ತೊಬ್ಬ ಪಿಂಜಾರನಿಂದ ಯಾವ ಬಗೆಯ ಉತ್ತರ ನಿರೀಕ್ಷಿಸಬಹುದು ? ಅದು ಇನ್ನೂ ಸರಳ. ಅಲ್ಲಿಗೆ ಏನಾಯಿತು ? ಅಸ್ಪೃಶ್ಯನ ಮತ್ತು ಪಿಂಜಾರನ ಎಲ್ಲ ಬಗೆಯ ವಿಶಿಷ್ಟ ಸಂವೇದನೆಗಳೂ ಸ್ವರೂಪದಲ್ಲಿ ಸಂಕುಚಿತಗೊಂಡು ಹಿಂದೂ ಮತ್ತು ಮುಸ್ಲಿಂ ಅನ್ನುವ ಸರಳ ನೆಲೆಗೆ ತಲುಪುತ್ತವೆ. ಎರಡೂ ಧರ್ಮದ ಮೂಲಭೂತವಾದಿಗಳ ದಾರಿ ಸಲೀಸಾಗುತ್ತದೆ.

ಮೇಲಿನ ರೀತಿಯ ಕೆಟ್ಟ ಪ್ರಭಾವದಿಂದ ಪಿಂಜಾರರು ತಲ್ಲಣಗೊಂಡಿದ್ದಾರೆ. ನೂರಾರು ವರ್ಷಗಳಿಂದ ಒಟ್ಟಾಗಿ ಬದುಕಿದ್ದ ಪಿಂಜಾರರನ್ನು ಮೊಟ್ಟಮೊದಲ ಬಾರಿಗೆ ಕೆಟ್ಟ ಕಣ್ಣಿನಿಂದ ನೋಡಲಾಗುತ್ತಿದೆ. ಇದು ಪಿಂಜಾರರ ಸಾಮಾಜಿಕ ಭದ್ರತೆಗೆ ಒದಗಿರುವ ದೊಡ್ಡ ಆಘಾತ. ಹಿಂದೂಗಳು ಮತ್ತು ಮುಸ್ಲಿಮರಿಬ್ಬರಿಂದಲೂ ಅಸಹನೆಗೆ ಗುರಿಯಾದರೆ ಪಿಂಜಾರರನ್ನು ಯಾರು ರಕ್ಷಿಸಬೇಕು ? ಸಾಮಾಜಿಕ ರಕ್ಷಣೆಯನ್ನು ಅಪೇಕ್ಷಿಸುವುದಾದರೆ ಯಾವುದಾದರೊಂದು ಧರ್ಮದ ಆಚರಣೆಗಳನ್ನು ಪೂರ್ಣಪ್ರಮಾಣದಲ್ಲಿ ಒಳಗೊಳ್ಳಬೇಕಾಗಿರುವುದು ಇಂಡಿಯಾದ ಇತಿಹಾಸದ ಅತಿದೊಡ್ಡ ವ್ಯಂಗ್ಯ. ಧಾರ್ಮಿಕ ಏಕತೆಯ ಮಂತ್ರ ಪಠಿಸುತ್ತಾ ಮುಸ್ಲಿಮರ ನಡತೆಯನ್ನು ಪ್ರಶ್ನಿಸಲಾಗುತ್ತಿರುವ ಈ ಸಂದರ್ಭದಲ್ಲಿ ಪಿಂಜಾರರನ್ನು ಯಾರು ಕೇಳಬೇಕು ? ಭಾಷೆ ಮತ್ತು ಧಾರ್ಮಿಕ ಅಜ್ಞಾನದ ಕಾರಣಕ್ಕೆ ಮುಸ್ಲಿಮರ ಭೀತಿಯನ್ನು ಅನುಭವಿಸುವ ಪಿಂಜಾರರು ಭಾಷೆ ಮತ್ತು ಹೆಸರಿನ ಕಾರಣಕ್ಕೆ ಹಿಂದೂಗಳ ಅಸಹನೆಯನ್ನು ಎದುರಿಸಬೇಕಾಗಿದೆ. ಹಾಗಾಗಿ ಅಲ್ಲಿ ಇಲ್ಲಿ ಎಲ್ಲೂ ಸಲ್ಲದಿರುವ ತಮ್ಮ ಸಂಸ್ಕೃತಿಗೆ ತಿಲಾಂಜಲಿ ಕೊಟ್ಟು ಎಲ್ಲೋ ಒಂದು ಕಡೆ ಸಲ್ಲುವ ಬಯಕೆಯಿಂದ, ಸಲ್ಲಲೇಬೇಕಾಗಿರುವ ಅನಿವಾರ್ಯತೆಯಿಂದ ಪಿಂಜಾರರು ಭಯ, ಆತಂಕ, ಅವಮಾನಗಳಿದ್ದಾಗ್ಯೂ ಮುಸ್ಲಿಮರತ್ತ ಒಲವು ತೋರುತ್ತಿದ್ದಾರೆ. ಈ ಬಗೆಯ ಒಲವು ನಗರದ ಪಿಂಜಾರರಲ್ಲಿ ಹೆಚ್ಚಾಗಿ ಮತ್ತು ಹಳ್ಳಿಗಳಲ್ಲಿ ಮಾಡಲು

ಕೆಲಸವಿಲ್ಲದೇ ಕುಳಿತ ಕೆಲವರಲ್ಲಿ ಕಂಡುಬರುತ್ತಿದೆ. ಈ ಒಲವು ಕಾಣಿಸಿಕೊಳ್ಳುವ ರೀತಿ ಹೇಗೆಂದರೆ ಗಡ್ಡ ಬಿಡುವುದು, ಟೋಪಿ, ಇಜಾರ ತೊಡುವುದು, ಹರಕು-ಬರಕು ಉರ್ದು ಮಾತಾಡುವುದು, ಪ್ರತಿ ಶುಕ್ರವಾರ ಮಸೀದಿಗೆ ಹೋಗಿ ನಮಾಜಿನ ಅನುಕರಣೆ ಮಾಡುವುದು ಮುಂತಾದ ತಾಂತ್ರಿಕ ರೂಪಗಳಲ್ಲಿ ಮಾತ್ರ ಮತ್ತು ಸಾಂಪ್ರದಾಯಿಕ ಮುಸ್ಲಿಮರು ಕೆಲವು ಮುಖ್ಯ ಕ್ಷಣಗಳಲ್ಲಿ ಹೇಳುವ ಕುರಾನ್ ಮೂಲದ ಉದ್ಗಾರಗಳನ್ನು ಪಿಂಜಾರರು ಅವುಗಳ ಅರ್ಥ ಗೊತ್ತಿಲ್ಲದಿದ್ದರೂ, ಹೇಳುವುದನ್ನು ರೂಢಿ ಮಾಡಿಕೊಳ್ಳುತ್ತಿದ್ದಾರೆ. ಸೀನು ಹೊಡೆದಾಗ 'ಅಲ್‌ಹಮ್‌ದುಲಿಲ್ಲಾ', ಆಕಳಿಸಿದಾಗ 'ಹಸ್ತಕ್‌ಫಿರಿಲ್ಲಾ', ಊಟದ ಮೊದಲು 'ಬಿಸ್ಮಿಲ್ಲಾ', ತೇಗು ಬಂದಾಗ 'ಶುಕ್ರಿಯಾ ಅಲ್ಲಾ', ಯಾರನ್ನಾದರೂ ಬೀಳ್ಕೊಡುವಾಗ 'ಖುದಾ ಹಾಫೀಜ್', ದಿನದಲ್ಲಿ ಮೊದಲು ಭೆಟ್ಟಿಯಾದಾಗ 'ಸಲಾಂ ಅಲೇಕುಂ' ಮತ್ತು 'ವಾಲೇಕುಂ ಅಸ್ಸಲಾಂ', ಸುಸ್ತು, ನೋವು ಉಂಟಾದಾಗ 'ಯಾ ಅಲ್ಲಾ', ಭರವಸೆಗಳನ್ನು ಕೊಡುವಾಗ 'ಇನ್‌ಶಾ ಅಲ್ಲಾ' - ಮುಂತಾದ ಇಸ್ಲಾಮಿಕ್ ಭಾಷಾರೂಪಗಳು ಪಿಂಜಾರರಲ್ಲಿ ಕಂಡುಬರುತ್ತಿವೆ. ಹಳೆಯ ಕಾಲದ ಪಿಂಜಾರರು ಇಂಥ ಸಂದರ್ಭದಲ್ಲಿ 'ಭಗವಂತ', 'ಪರಮಾತ್ಮ', 'ಶಿವ' ಮೊದಲಾದ ರೂಪಗಳನ್ನು ಉಳಿಸಿಕೊಂಡಿದ್ದು ಮೇಲಿನ ರೀತಿಯ ಪ್ರಭಾವ ಪಿಂಜಾರರ ಯುವಸಮುದಾಯದಲ್ಲಿ ಹೆಚ್ಚಾಗಿದೆ. ಆದರೆ ಇಂಥವರೂ ಕೂಡ ಇಸ್ಲಾಂನ ಅಧಿಕೃತ ಜ್ಞಾನ ಪಡೆಯುವಲ್ಲಿ ಅನಾಸಕ್ತರಾಗಿದ್ದು ಕೇವಲ ತೋರಿಕೆಗಾಗಿ ಮತ್ತು ಸಾಮಾಜಿಕ ಕಾರಣಕ್ಕಾಗಿ ಈ ಬಗೆಯ ಅನುಕರಣೆಯಲ್ಲಿ ತೊಡಗಿದ್ದಾರೆ.

ಪಿಂಜಾರರು ಎರಡೂ ಕಡೆಯ ಅಭದ್ರತೆಯನ್ನು ನಿವಾರಿಸಲು ಮುಸ್ಲಿಮರಾಗುತ್ತಿದ್ದರೆ ಮುಸ್ಲಿಮರು ತಮ್ಮ ಧಾರ್ಮಿಕ ಸಂಘಟನೆಯ ದೃಷ್ಟಿಯಿಂದ ಪಿಂಜಾರರನ್ನು ಒಳಗೊಳ್ಳುವುದರತ್ತ ಮುಂದಾಗಿದ್ದಾರೆ. ಪಿಂಜಾರರಿಂದ ಮುಸ್ಲಿಮರು ಬಯಸುವುದು ಮಾತ್ರ ಒಂದೇ. ಪಿಂಜಾರರು ನಮಾಜು ಮಾಡಬೇಕು, ಇಸ್ಲಾಂ ಧಾರ್ಮಿಕ ಜ್ಞಾನವನ್ನು ಹೆಚ್ಚಾಗಿ ತಿಳಿದುಕೊಳ್ಳಬೇಕು, ಅಂದರೆ ಪೂರ್ಣ ಅರ್ಥದಲ್ಲಿ ಮುಸ್ಲಿಮರಾಗಬೇಕು ಎಂಬುದಷ್ಟೇ.

ಪಿಂಜಾರರ ಇಂತಹ ಆತಂಕದ ಪರಿಸ್ಥಿತಿಗೆ ಸಮಕಾಲೀನ ಸಮಾಜದಲ್ಲಿ ಕಾಡುತ್ತಿರುವ ಧಾರ್ಮಿಕ ಅಸಹನೆಯೇ ಕಾರಣವಾಗಿದೆ. ಮೂಲಭೂತ ವ್ಯವಸ್ಥೆಯಲ್ಲೇ ಇರುವ ಈ ದೋಷದಿಂದಾಗಿ ಪಿಂಜಾರರಂತಹ ವಿಶಿಷ್ಟ ಸಂಸ್ಕೃತಿ ರೂಪಗಳು ಅಪಾಯವನ್ನು ಎದುರಿಸುತ್ತಿವೆ. ಸಮಕಾಲೀನ ಸಮಾಜದಲ್ಲಿ ಒಟ್ಟಾರೆಯಾಗಿ ಮುಸ್ಲಿಮರಿಗೇ ಇರುವ ಆತಂಕದ ಹಿನ್ನೆಲೆಯಲ್ಲಿ ಪಿಂಜಾರರು ಮುಸ್ಲಿಮರತ್ತ ತೋರುವ ಒಲವು ಮತ್ತು ಪಿಂಜಾರರಿಗೆ ಕಡ್ಡಾಯವಾಗಿ ನಮಾಜು ಮಾಡಲು ಒತ್ತಾಯಿಸುವ ಮುಸ್ಲಿಮರ ಪ್ರಯತ್ನವನ್ನು ಗಮನಿಸಬೇಕು. ಹಾಗೆ ನೋಡಿದಾಗ ಪಿಂಜಾರರ ಮತ್ತು ಮುಸ್ಲಿಮರ ಹೆಜ್ಜೆಗಳು ಅಸಹಜವಾದವುಗಳೆನಿಸುವುದಿಲ್ಲ.

ಆದರೆ ಇಲ್ಲಿ ಒಂದು ಅಪಾಯವೂ ಇದ್ದಂತಿದೆ. ಪಿಂಜಾರರ ಸಾಮಾಜಿಕ ಆರ್ಥಿಕ ಪರಿಸ್ಥಿತಿ ಇವತ್ತಿಗೂ ಅಸಹನೀಯವಾಗಿದೆ. ಈ ಜನರಿಗೆ ಮುಸ್ಲಿಂ ಧಾರ್ಮಿಕ ತಿಳುವಳಿಕೆಗಿಂತ ಅಗತ್ಯವಾಗಿ ಆಗಬೇಕಾದ ಕೆಲಸಗಳಿವೆ. ಪಿಂಜಾರರಿಗೆ ಜರೂರಾಗಿ ಶಿಕ್ಷಣದ ಅಗತ್ಯವಿದೆ. ಪಿಂಜಾರರಲ್ಲಿರುವ ಬಡತನವನ್ನು,

ಕೀಳರಿಮೆಯನ್ನು ನಿವಾರಿಸಬೇಕಾಗಿದೆ. ಆ ಜನತೆಗೆ ತಮ್ಮ ಸಂಸ್ಕೃತಿಯ ಅಸ್ತಿತ್ವದ ಪರಿಣಾಮ ಮಾಡಿಕೊಡಬೇಕಾಗಿದೆ. ಆ ಮೂಲಕ ವ್ಯಕ್ತವಾಗುವ ಸೂಕ್ಷ್ಮ ದನಿ, ಸಂವೇದನೆಗಳನ್ನು ಸಾಹಿತ್ಯಕ ವಲಯದಲ್ಲಿ ದಾಖಲಿಸುವಂತಾಗಬೇಕು. ಪಿಂಜಾರರು ಸ್ವತಃ ಆಸಕ್ತಿ, ಶ್ರದ್ಧೆಯಿಂದ ನಮಾಜು ಮಾಡುವುದನ್ನು ಕಲಿತರೆ, ಕಲಿಯುವಂತಾದರೆ ಒಳ್ಳೆಯದೇ. ಅದನ್ನು ಯಾರೂ ಬೇಡವೆನ್ನಲಾಗುವುದಿಲ್ಲ. ಅಲ್ಲದೆ ಮುಸ್ಲಿಮರು ಕೂಡ ಪಿಂಜಾರರಿಗೆ ನಮಾಜು ಮುಂತಾದುವನ್ನು ಪ್ರೀತಿ, ಆತ್ಮೀಯತೆಯಿಂದ ಕಲಿಸಿಕೊಡುವಂತಾಗಬೇಕು. ಅದನ್ನು ಯಾರ ಮೇಲೂ ಒತ್ತಾಯಪೂರ್ವಕವಾಗಿ ಹೇರುವುದರಿಂದ ಮುಸ್ಲಿಮರ ಬಗ್ಗೆ ಪಿಂಜಾರರಿಗೆ ಮತ್ತಷ್ಟು ಭಯ, ತಾತ್ಸಾರಗಳು ಉಂಟಾಗುತ್ತವೆ. ಇಂತಹದ್ದನ್ನು ಪಿಂಜಾರರು ವಿರೋಧಿಸುತ್ತಿದ್ದಾರೆ. ತಮ್ಮ ದೈನಂದಿನ ಕಷ್ಟಗಳನ್ನು ಕೇಳದವರು ನಮಾಜು ಮಾಡಲು ಯಾಕೆ ಒತ್ತಾಯಿಸಬೇಕು ? ಎಂದು ಕೇಳುತ್ತಿದ್ದಾರೆ. ಇದು ನಿಜ. ಪಿಂಜಾರರ ನಿತ್ಯದ ಕಷ್ಟಗಳಿಗಾಗುವವರು ಹಿಂದೂಗಳು. ಮುಸ್ಲಿಮರಲ್ಲ. ಪರಿಸ್ಥಿತಿ ಹೀಗಿರುವಾಗ ಪಿಂಜಾರರ ಬದುಕಿನ ಅರೆ-ಕೊರೆಗಳನ್ನು ತುಂಬಿಕೊಳ್ಳಲು ಮುಸ್ಲಿಮರು ಸಹಕರಿಸಬೇಕು. ಮುಸ್ಲಿಮರಲ್ಲಿ ದಟ್ಟವಾದ ಬಡತನ, ಅನಕ್ಷರತೆಯಿದೆ. ಆದರೆ ಪಿಂಜಾರರಲ್ಲಿನ ಬಡತನ, ಅನಕ್ಷರತೆ ಅದನ್ನು ಮೀರಿಸುತ್ತದೆ. ಪಿಂಜಾರರ ಕಷ್ಟಗಳನ್ನು ಅರಿತು, ಹಂಚಿಕೊಂಡು, ಸಾಧ್ಯವಾದಷ್ಟು ಪಿಂಜಾರರ ಸಾಮರಸ್ಯದ ಸಂಸ್ಕೃತಿಯನ್ನು ಮುಸ್ಲಿಮರೂ ಒಳಗೊಳ್ಳುವಂತಾಗಬೇಕು. ಹಾಗಾದಾಗ ಸಹಜವಾಗಿಯೇ ಕೋಮುವಿದ್ವೇಷಕ್ಕೆ ತೆರೆ ಬೀಳುತ್ತದೆ. ಇಂಥ ದಾರಿಯನ್ನು ಬಿಟ್ಟು ಬರೀ ನಮಾಜು ಕಲಿಯಿರಿ, ಉರ್ದು ಕಲಿಯಿರಿ ಎಂಬ ಒತ್ತಾಯ ಹೇರುತ್ತಾ ಹೋದರೆ ಪಿಂಜಾರರು ಮತ್ತೆ ದ್ವೀಪವಾಗುತ್ತಾರೆ.

ಈಗೀಗ ಅಲ್ಲಲ್ಲಿ ಪಿಂಜಾರರು ತಮ್ಮ ಮಕ್ಕಳನ್ನು ವಿದ್ಯಾಭ್ಯಾಸಕ್ಕೆ ಕಳಿಸುತ್ತಿದ್ದಾರೆ. ಅವರೆಲ್ಲ ಸಾಮಾಜಿಕ ಪ್ರಜ್ಞೆಯನ್ನು ಒಳಗೊಳ್ಳುವ ಮೊದಲೇ ಅವಮಾನಗಳನ್ನು ಎದುರಿಸುತ್ತಿದ್ದಾರೆ. ಕೆಲವು ಪಟ್ಟಣಗಳಲ್ಲಿನ ಮುಸ್ಲಿಂ ಹಾಸ್ಟೆಲ್‌ಗಳು ಅಂತಹ ಕೇಂದ್ರಗಳಾಗಿರುವುದು ವಿಷಾದನೀಯ. ಪಿಂಜಾರ ವಿದ್ಯಾರ್ಥಿಗಳು ಉರ್ದು ಮಾತನಾಡುವುದಿಲ್ಲ, ನಮಾಜಿಗೆ ಬರುವುದಿಲ್ಲ ಎಂಬ ಒಂದೇ ಕಾರಣದಿಂದ ಅವರಿಗೆ ಮಾನಸಿಕ ಕಿರಿಕಿರಿಯನ್ನುಂಟು ಮಾಡಲಾಗುತ್ತಿರುವುದರ ಬಗ್ಗೆ ಅನೇಕರು ದೂರುತ್ತಿದ್ದಾರೆ. ಇದರಿಂದ ಕೆಲವು ಸೂಕ್ಷ್ಮ ವ್ಯಕ್ತಿತ್ವದ ವಿದ್ಯಾರ್ಥಿಗಳು ವಿದ್ಯಾಭ್ಯಾಸಕ್ಕೆ ಕಾಯಂ ಆಗಿ ತಿಲಾಂಜಲಿ ಕೊಡುವಂತಾಗಿದೆ. ಉರ್ದು ಮಾತನಾಡುವುದು, ನಮಾಜು ಮಾಡುವುದು ಮುಸ್ಲಿಮನೊಬ್ಬನ ಅನಿವಾರ್ಯ ಅರ್ಹತೆ ಎಂದು ತಿಳಿಯಲಾಗುತ್ತಿದೆ.

ಪಿಂಜಾರರು ಸಮಾಜದ ಇತರೆ ಜನಾಂಗಗಳೊಡನೆ ಬೆರೆಯುವ ರೀತಿ ಕೂಡ ವಿಶಿಷ್ಟವಾದುದೇ ಆಗಿದೆ. ಹಿಂದೂ ಶೂದ್ರ ಸಮುದಾಯದ ಜನರೊಂದಿಗೆ, ಅಂದರೆ ಲಿಂಗಾಯ್ತರು, ತಳವಾರರು, ಕುರುಬರು, ಉಪ್ಪಾರರು, ಆರೇರು ಮುಂತಾದ ಜನಾಂಗದವರೊಡನೆ ಅತ್ಯಂತ ನಿಕಟವಾಗಿ ಬೆರೆಯುತ್ತಾರೆ. ಅಸ್ಪೃಶ್ಯತೆಯೊಂದನ್ನು ಬಿಟ್ಟು ಉಳಿದೆಲ್ಲ ವಿವರಗಳಲ್ಲಿ ಅಸ್ಪೃಶ್ಯರು ಅನುಭವಿಸುವ ಯಾತನೆಯನ್ನೇ ಅನುಭವಿಸಿದರೂ ಪಿಂಜಾರರು ಅಸ್ಪೃಶ್ಯರನ್ನು ತಾತ್ಸಾರದಿಂದ ಕಾಣುವುದು - ವಿಚಿತ್ರವಾಗಿ ತೋರುತ್ತದೆ.

ಪಿಂಜಾರರು ಅಸ್ಪೃಶ್ಯರೊಂದಿಗೆ ಎಷ್ಟೇ ನಿಕಟವಾದ ಸಂಬಂಧ ಹೊಂದಿದ್ದರೂ, ಅವರೊಂದಿಗೆ ಹಬ್ಬ ಹರಿದಿನಗಳಲ್ಲಿ ಆಪ್ತವಾಗಿ ಬೆರೆತರೂ ಅವರನ್ನು ಕೀಳು ಎನ್ನುವ ದೃಷ್ಟಿಯಲ್ಲಿ ನೋಡುವುದಿದೆ. ಒಂದು ವ್ಯತ್ಯಾಸವೆಂದರೆ ಈ ಎರಡೂ ಜನಾಂಗದವರು ಒಟ್ಟಿಗೆ ಕೂಲಿ-ನಾಲಿ ಮಾಡುವುದು, ಕಷ್ಟ ಸುಖ ಮಾತನಾಡುವುದು, ಹಂಚಿಕೊಳ್ಳುವುದು ಸಾಮಾನ್ಯವಾಗಿದೆ. ಆದರೆ ಹಿಂದೂ ಸವರ್ಣೀಯರು ಅಸ್ಪೃಶ್ಯರ ಬಗ್ಗೆ ತೋರುವ ಕ್ರೌರ್ಯವನ್ನಾಗಲೀ, ದೌರ್ಜನ್ಯವನ್ನಾಗಲೀ ಪಿಂಜಾರರು ತೋರುವುದಿಲ್ಲ. ದೈನಂದಿನ ಬದುಕಿನಲ್ಲಿ ಅನ್ಯೋನ್ಯವಾಗಿರುವ ಪಿಂಜಾರರು ಮತ್ತು ಅಸ್ಪೃಶ್ಯರ ನಡುವೆ ಸಮಾನವಾದ ಸಂಗತಿಯೊಂದಿದೆ. ಕೆಲವು ಊರುಗಳಲ್ಲಿ ಅಸ್ಪೃಶ್ಯರ ದೇವತೆಯಾದ ಚೌಡಮ್ಮನ ಆರಾಧನೆ, ಉತ್ಸವವನ್ನು ಒಟ್ಟಿಗೇ ಖುಷಿ, ಸಂಭ್ರಮದಿಂದ ಆಚರಿಸುತ್ತಾರೆ. ಇಷ್ಟಾದರೂ ಪಿಂಜಾರರು ಕೆಲವರು ತಮ್ಮ ಮನೆಯ ಒಳಗೆ ಅಸ್ಪೃಶ್ಯರನ್ನು ಬಿಟ್ಟುಕೊಳ್ಳುವುದಿಲ್ಲ. ಇದೇ ವಿಚಿತ್ರವಾದ ಸಂಗತಿ. ಇದರಿಂದ ಹಿಂದೂ ಸಾಂಸ್ಕೃತಿಕ ಪರಿಸರದಿಂದ ಪಿಂಜಾರರು ಪ್ರಭಾವಿತರಾಗಿರುವ ರೀತಿ ಮತ್ತು ಪಿಂಜಾರರ ಒಟ್ಟಾರೆ ಸಾಮೂಹಿಕ ನೆಲೆ ತಿಳಿಯುತ್ತದೆ.

## ೮.೪ *ಪಿಂಜಾರರು ಮತ್ತು ಜಾಗತೀಕರಣದ ಹೊತ್ತು*

ಜಾಗತೀಕರಣ ಎನ್ನುವುದು ಪಿಂಜಾರರ ವಿಚಾರದಲ್ಲಿ ಅಂತಹ ಪರಿಣಾಮವನ್ನು ಬೀರಿದಂತಿಲ್ಲ. ಇದು ಕೇವಲ ಆರ್ಥಿಕವಾದ, ಜಾಗತಿಕ ಮಾರುಕಟ್ಟೆಗೆ ಸಂಬಂಧಿಸಿದ ವಿಷಯವೋ, ಇಂಡಿಯಾದ ಸಾಮಾಜಿಕ ಸಾಂಸ್ಕೃತಿಕ ಒಳಾವರಣಗಳನ್ನು ಪಲ್ಲಟಗೊಳಿಸಬಲ್ಲ ಮಾಯಾವಿಯೋ ಎಂಬ ಬಗ್ಗೆ ತಜ್ಞರಲ್ಲಿಯೇ ಗೊಂದಲವಿದ್ದಂತಿದೆ. ಮುಖ್ಯವಾಗಿ ಪಿಂಜಾರರಿಗೆ ಕೈಮಗ್ಗಗಳು ನಾಶವಾಗಿ ಆಧುನಿಕ ಯಂತ್ರಗಳು ಕಾಲಿಟ್ಟಾಗಲೇ ಜಾಗತೀಕರಣದ ಅನುಭವವಾಗಿಬಿಟ್ಟಿದೆ. ಅವರ ಆರ್ಥಿಕ ಜೀವನ ಭದ್ರತೆಯಿಲ್ಲದೆ ಕೇವಲ ವರ್ತಮಾನಕ್ಕೆ ಅಂಟಿಕೊಂಡಿದೆ. ಭವಿಷ್ಯದ ಆಲೋಚನೆಗಳೇ ಇಲ್ಲದ ಇಂಥ ಹತ್ತಾರು ಜನಾಂಗಗಳು ತಮ್ಮ ಪರಂಪರಾಗತ ಜೀವನವಿಧಾನವನ್ನು ಜಾಗತೀಕರಣದಂತಹ ಯಾವುದೇ ದಾಳಿಗಳಿಂದ ರಕ್ಷಿಸಿಕೊಳ್ಳಬಲ್ಲವಾಗಿವೆ. ಅಂದರೆ ಆರ್ಥಿಕವಾಗಿ ಉತ್ತಮವಾಗಿರುವ ಸಮಾಜದ ಮೇಲುಸ್ತರಗಳೇ ಜಾಗತೀಕರಣದಿಂದ ಪರಿವರ್ತನೆಗೆ ಒಳಗಾಗುತ್ತವೆ. ಪಿಂಜಾರರಂತಹ ಜನಾಂಗಗಳು ಜಾಗತೀಕರಣವನ್ನು ತೆರೆದ ವಿಸ್ಮಯದ ಕಣ್ಣುಗಳಿಂದ ನೋಡಬಲ್ಲವೇ ಹೊರತು ಸಂಸ್ಕೃತಿಯ ನಿಜರೂಪಗಳನ್ನು ಅದಕ್ಕೆ ತೆರೆದುಕೊಳ್ಳುವುದಿಲ್ಲ.

ಜಾಗತೀಕರಣದಿಂದ ವಿಶ್ವವೇ ಹಳ್ಳಿಯಾಗಿದೆ. ಪ್ರಪಂಚದ ಮೂಲೆಮೂಲೆಗಳ ಸುದ್ದಿ ಕ್ಷಣಮಾತ್ರದಲ್ಲಿ ಲಭ್ಯವಾಗುತ್ತದೆ. ಜಗತ್ತಿನ ಯಾವುದೇ ಭಾಗದ ಉತ್ಪನ್ನಗಳು ರಸ್ತೆ ಕಾಣದ ಹಳ್ಳಿಗಳನ್ನು ತಲುಪುತ್ತವೆ. ಅಗತ್ಯವಿರಲಿ ಇಲ್ಲದಿರಲಿ ಜನರ ಮನೆ-ಮನಸುಗಳಲ್ಲಿ ಷೋಕಿ-ಶೃಂಗಾರದ ವಸ್ತುಗಳು ರಾರಾಜಿಸುತ್ತವೆ. ಜನ ತಮ್ಮ ಭಾಷೆಯಲ್ಲಿ ಅನ್ಯಭಾಷೆಯ ಪದಗಳನ್ನು ಸೇರಿಸಿಕೊಳ್ಳಬಹುದು. ಉಡುಗೆ-ತೊಡುಗೆಯಲ್ಲಿ ಆಧುನಿಕರಾಗಬಹುದು. ಇಂಡಿಯಾದ ಸಾಮಾಜಿಕ ರಚನೆಯ ಒಳಭಾಗದಲ್ಲಿ

ಹೂತು ಹೋಗಿರುವ ಧಾರ್ಮಿಕವಾದ ಸಂವೇದನೆಗಳು ಮಾತ್ರ ಬದಲಾಗಲಾರವು. ಜಾಗತೀಕರಣ ಭಾರತದ ರೈತರ ಕೃಷಿಗೆ ಅಪಾಯಕಾರಿಯಾಗಿರುವ ಹಾಗೇನೂ ಇತರ ಕ್ಷೇತ್ರಗಳಿಗೆ ಹಾನಿಕರವಲ್ಲ ಎಂಬಂತಹ ಅಭಿಪ್ರಾಯಗಳಿವೆ. ಆಳುವ ವ್ಯವಸ್ಥೆಯೇ ಅಂತರರಾಷ್ಟ್ರೀಯ ವಾಣಿಜ್ಯ ಒಪ್ಪಂದಗಳನ್ನು ಮಾಡಿಕೊಂಡು ದೇಶೀ ಉತ್ಪನ್ನಗಳು ಕಡಿಮೆ ಬೆಲೆಗೆ ಮಾರಾಟವಾಗುವಂತೆ ನೋಡಿಕೊಳ್ಳುತ್ತದೆ. ಹೀಗಿರುವಾಗ ಇಲ್ಲಿನ ನೆಲ-ಜಲದಂತಹ ಮೂಲ ಅವಶ್ಯಕತೆಗಳನ್ನು ಮತ್ತು ಸಾಂಸ್ಕೃತಿಕ ಸಂವೇದನೆಗಳ ಮೂಲ ಸ್ವರೂಪವನ್ನು ಸಮಕಾಲೀನ ಪ್ರೇರಣೆಗಳ ಜೊತೆಗೇ ಉಳಿಸಿಕೊಳ್ಳುವ ಬಗ್ಗೆ ಚರ್ಚೆಯಾಗಬೇಕಿದೆ. ಪಿಂಜಾರರ ಬದುಕಿನ ಪರಿವರ್ತನೆಯನ್ನು ಕೂಡ ಈ ನೆಲೆಯಲ್ಲಿಯೇ ಗಮನಿಸಬೇಕಿದೆ.

ಸಾಮಾಜಿಕ ಪರಿವರ್ತನೆಯನ್ನು ಸಾಮಾನ್ಯವಾಗಿ ಸಮಾಜ ಸ್ವೀಕರಿಸುವ ಸಮಕಾಲೀನ ಪ್ರೇರಣೆ - ಪ್ರಭಾವಗಳ ನೆಲೆಯಲ್ಲಿ ಗುರುತಿಸಲಾಗುತ್ತದೆ. ಚಲನಶೀಲ ಸಮಾಜದ ಜೀವನವಿಧಾನ ಮತ್ತು ಆಲೋಚನಾಕ್ರಮ ರೂಪಗೊಳ್ಳುವುದು ಮತ್ತು ಪರಂಪರಾಗತ ಆಚರಣೆಗಳಲ್ಲಿ ಅನೇಕ ಬಗೆಯ ಒತ್ತಡಗಳಿಂದಾಗಿ ಹಲಕೆಲವು ಮಾರ್ಪಾಡುಗಳನ್ನು ತಂದುಕೊಳ್ಳುವುದು ಸಮಕಾಲೀನ ಪ್ರೇರಣೆ-ಪ್ರಭಾವಗಳಿಂದ ಸಾಧ್ಯವಾಗುತ್ತದೆ. ಜನಸಂಖ್ಯೆ, ಬದಲಾಗುತ್ತಿರುವ ಸಾಮಾಜಿಕ ಸಂವೇದನೆಗಳು, ಬದುಕಿನ ತೀವ್ರಗತಿ, ರಾಜ್ಯವ್ಯವಸ್ಥೆಯಲ್ಲಿ ಕಂಡುಬರುತ್ತಿರುವ ಬದಲಾವಣೆ, ತಂತ್ರಜ್ಞಾನದ ಆಶ್ಚರ್ಯಕರ ಬೆಳವಣಿಗೆ ಮತ್ತು ವ್ಯಾಪ್ತಿ, ಪರಿಸರ ಪ್ರಜ್ಞೆ, ಧರ್ಮಮೂಲವಾದ ಆತಂಕ, ತಳಮಳ, ಸಾಮಾನ್ಯರ ಬದುಕಿನ ಭದ್ರತೆಗಿರುವ ಅಪಾಯಗಳು, ರಾಷ್ಟ್ರದ ಒಳ-ಹೊರಗಿನ ಒಟ್ಟಾರೆ ವಿದ್ಯಮಾನಗಳು - ಹೀಗೆ ಸಮಾಜ ಅನ್ನುವುದು ಹತ್ತು-ಹಲವು ದಿಕ್ಕುಗಳ ದೃಷ್ಟಿಗಳ ತಾಕಲಾಟದಲ್ಲಿ ಸಂಕೀರ್ಣಗೊಳ್ಳುತ್ತಿರುವುದು ನಿಜ. ಸಮಾಜದ ಸಂಕೀರ್ಣತೆಗೂ, ಈ ಸಂಕೀರ್ಣತೆಯನ್ನು ಗೋಜಲುಗೊಳಿಸಲು ಬಹುಮಟ್ಟಿಗೆ ಕಾರಣವಾಗುವ ಧಾರ್ಮಿಕ, ರಾಜಕೀಯ ಒತ್ತಡಗಳಿಗೂ ಇರಬಹುದಾದ ಸಂಬಂಧ ವಸಾಹತುಶಾಹಿ ಆಡಳಿತ ವ್ಯವಸ್ಥೆಯ ಮೂಲದಲ್ಲಿರುವಂತಿದೆ. ಶತಮಾನಗಳ ಕಾಲ ವಸಾಹತುವಾಗಿಯೇ ಉಳಿದಿದ್ದ ಇಂಡಿಯಾ ಸ್ವಾತಂತ್ರ್ಯದ ನಂತರ ಕೂಡ ಆ ಮೂಲದ ಲಕ್ಷಣಗಳನ್ನು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ನಿಚ್ಚಳವಾಗಿ ಕಾಪಾಡಿಕೊಂಡು ಬಂದದ್ದರ ಪರಿಣಾಮವಾಗಿ ಇಲ್ಲಿನ ಸಂಸ್ಕೃತಿ ಕೂಡ ನವ ವಸಾಹತುಶಾಹಿ ಗುಣಗಳನ್ನು ಇನ್ನೂ ಅರಗಿಸಿಕೊಳ್ಳುವುದರಲ್ಲೇ ಇದೆ. ಹಾಗಾಗಿ ಇಂಡಿಯಾದ ಪ್ರಾಚೀನ ಸಂಸ್ಕೃತಿಯ ನೆಲೆ-ಬೆಲೆಯನ್ನು ಸಮಕಾಲೀನ ಸಂದರ್ಭದ ಒಳ-ಹೊರ ಒತ್ತಡಗಳ ಹಿನ್ನೆಲೆಯಲ್ಲಿ ಗುರುತಿಸುವಾಗ ವಸಾಹತು ಮೂಲದ ಆಧುನಿಕತೆಯೇ ಮಾನದಂಡವಾಗುತ್ತಿದೆ. ಬದುಕಿನ ಬಾಹ್ಯರೂಪ ಮತ್ತು ಮನೋಧರ್ಮದ ನಡುವಿನ ಅಂತರದಲ್ಲಿ ಸಾಮಾಜಿಕ ಸಂವೇದನೆಗಳ ಮತಧರ್ಮ ನಿರಪೇಕ್ಷ ಗುಣವನ್ನು ಕಾಣಬಹುದಾದ್ದರಿಂದ ಸಂಸ್ಕೃತಿ ಅನ್ನುವುದು ಸಾಮಾಜಿಕ ಪರಿವರ್ತನೆಯ ಸಂದರ್ಭದಲ್ಲಿ ಬೇರೆಯದೇ ಆದ ಆವರಣದಲ್ಲಿ ಅಭಿವ್ಯಕ್ತವಾಗುತ್ತದೆ. ಈ ಮಾತು ಪಿಂಜಾರರ ಸಂಸ್ಕೃತಿಯನ್ನು ಸಾಮಾಜಿಕ ಬದಲಾವಣೆಯ ಹಿನ್ನೆಲೆಯಲ್ಲಿ ಗಮನಿಸುವಾಗಲೂ ನಿಜವೆನಿಸುತ್ತದೆ.

ಪಿಂಜಾರರ ಸಂಸ್ಕೃತಿ ೨-೩ ಶತಮಾನಗಳಷ್ಟೇ ಹಿಂದಿನ ರಾಜಕೀಯ ಉದ್ದೇಶಗಳನ್ನು ಪೂರೈಸಿಕೊಳ್ಳುವ ತರಾತುರಿಯಲ್ಲಿ ನಡೆದ ಮತಾಂತರದಿಂದ ರೂಪಗೊಂಡದ್ದು. ಇಂಡಿಯಾದ ಸಾಮಾಜಿಕ ಇತಿಹಾಸದ ಸಂದರ್ಭದಲ್ಲಿ ಮತಾಂತರಕ್ಕೆ ಇರುವ ಹಿನ್ನೆಲೆಯನ್ನು ಹಿಂದೆ ಗಮನಿಸಿರುವ ಹಾಗೆ ಬಲಾತ್ಕಾರ ಮತ್ತು ಭದ್ರತೆಯ ಬಯಕೆಯ ಹಿಂದಿರುವ ಸ್ವಯಂಪ್ರೇರಣೆಯೂ ಕಾರಣವಾಗಿರುವಾಗ ಪಿಂಜಾರರಂತಹ ಒಂದು ಜನಾಂಗ ತನ್ನ ಸಾಮಾಜಿಕ, ಆರ್ಥಿಕ ಸ್ಥಿತಿಗಳನ್ನು ಉತ್ತಮ ಪಡಿಸಿಕೊಳ್ಳುವಂತಹ ಅವಕಾಶ ನಿಜಕ್ಕೂ ದೊರೆಯಿತೇ ಎನ್ನುವುದು ಪ್ರಶ್ನೆಯಾಗಿಯೇ ಉಳಿದಿದೆ. ಯಾಕೆಂದರೆ ೨-೩ ಶತಮಾನಗಳಷ್ಟು ಹಿಂದೆಯೇ ಯಾವ ಆಮಿಷಗಳನ್ನು ತೋರಿ ಕೆಳಜಾತಿಯವರನ್ನು ಮತಾಂತರಗೊಳಿಸಲಾಯಿತೋ ಮತ್ತು ಯಾವ ಸವಲತ್ತುಗಳನ್ನು ಬಯಸಿ ಈ ಜನರು ಮತಾಂತರಕ್ಕೆ ಒಳಗಾದರೋ, ಅಂತಹ ಯಾವ ಸೌಲಭ್ಯಗಳೂ ಮತಾಂತರದ ನಂತರದ ಕಾಲಮಾನದಲ್ಲಿ ಕಂಡುಬಂದಿಲ್ಲ. ಇವತ್ತಿನ ಪಿಂಜಾರರ ಒಟ್ಟಾರೆ ಸಾಮಾಜಿಕ, ಆರ್ಥಿಕ ನೆಲೆಯನ್ನು ತೆರೆದ ಮನಸ್ಸಿನಿಂದ ಗಮನಿಸಿದರೆ ಈ ಮಾತು ಇನ್ನೂ ಸ್ಪಷ್ಟವಾಗುತ್ತದೆ.

ಹಿಂದೂ ವರ್ಣವ್ಯವಸ್ಥೆಯ ಲಾಭ ಪಡೆಯುತ್ತಲೇ ಬಂದ ಬ್ರಾಹ್ಮಣರು ಮುಸ್ಲಿಮರ ಕಾಲದಲ್ಲಾಗಲೀ, ಬ್ರಿಟಿಷ್ ಮತ್ತಿತರ ಐರೋಪ್ಯರ ಕಾಲದಲ್ಲಾಗಲೀ ತಮ್ಮ ಪಾರಂಪರಿಕ ಸ್ಥಾನಮಾನಗಳನ್ನು ವ್ಯವಸ್ಥಿತವಾಗಿ ಕಾಪಾಡಿಕೊಂಡು ಬಂದ ಪರಿಣಾಮವೇ ಮುಸ್ಲಿಂ ಆಳರಸರ ಆಡಳಿತದಲ್ಲಿ ಮತಾಂತರಗೊಂಡ ಹಿಂದೂ ಕೆಳಜಾತಿಗಳ ಜನರು ಎಂದಿನ ದಯನೀಯ ಸ್ಥಿತಿಯನ್ನು ನಿರಂತರವಾಗಿ ಅನುಭವಿಸಿಕೊಂಡು ಬರಲು ಕಾರಣವಾಯಿತು. ಹಾಗಾಗಿ ಧಾರ್ಮಿಕ ತಿಳುವಳಿಕೆಯಾಗಲೀ, ಸಾಮಾಜಿಕ ಭದ್ರತೆಯಾಗಲೀ ಕೆಳಜಾತಿಗಳ ಪಾಲಿಗೆ ದೂರವೇ ಉಳಿಯಿತು. ಅಲ್ಲದೆ ವಸಾಹತುಶಾಹಿಯ ನಿಜವಾದ ಪ್ರತಿನಿಧಿಗಳಂತಿದ್ದ ಅರಸರಾಗಲೀ, ಬ್ರಿಟೀಷರಾಗಲೀ ಬಯಸುತ್ತಿದ್ದದ್ದು ಸಾಮ್ರಾಜ್ಯ ವಿಸ್ತರಣೆಯನ್ನು ಮತ್ತು ಆ ಮೂಲಕ ವಸಾಹತು ವ್ಯವಸ್ಥೆಯ ಅನಿಷ್ಟ ಬೇರುಗಳನ್ನು ಇಲ್ಲಿ ನೆಡುವುದನ್ನು ಮಾತ್ರ. ಇದರಿಂದ ಅವರ ಅಧಿಕಾರ, ಆಡಳಿತದ ಲಾಭ ನಿರಂತರವಾಗಿ ನಿರಾಯಾಸವಾಗಿ ಅವರಿಗೆ ತಲುಪುವುದು ಸಾಧ್ಯವಾಯಿತು. ಅಪಾರ ಕನಸುಗಳನ್ನು ಕಾಣತೊಡಗಿದ್ದ ಕೆಳಜಾತಿಯ ಜನರಿಗೆ ತಮ್ಮ ಧಣಿಗಳ ಸೇವೆ ಮಾತ್ರ ಎಂದಿನ ರೀತಿಯಲ್ಲೇ ಉಳಿಯುತ್ತಾ ಬಂದಿತು. ಇದೇ, ಪಿಂಜಾರರಲ್ಲಿ ಇವತ್ತಿಗೂ ಜೀತದಾಳುಗಳಾಗಿ ದುಡಿಯುವಂತಹ ಜೀವನವಿಧಾನಕ್ಕೆ ಕಾರಣವಾಯಿತು. ಮೂಲಕಸುಬಾದ ಹಾಸಿಗೆ ಮಾಡುವುದನ್ನು ಪೂರ್ತಿ ಬಿಡದಿದ್ದರೂ ಕೈಗಾರಿಕೀಕರಣದ ಪರಿಣಾಮವಾಗಿ ಅನೇಕರು ಕೃಷಿ ಕೂಲಿಕಾರರಾಗಿ ಬದುಕುವುದು ಅನಿವಾರ್ಯವಾದಂತೆ ಪಿಂಜಾರರ ಬದುಕು ಭೂಮಿಗೆ ನಿಕಟವಾದಂತೆ, ಚುನಾಯಿತ ಸರ್ಕಾರದ ಪ್ರತಿನಿಧಿಗಳಿಗೂ ನಿರಂಕುಶ ಆಡಳಿತ ವ್ಯವಸ್ಥೆಯ ಅರಸು-ಮಂತ್ರಿಗಳಿಗೂ ಸ್ಪಷ್ಟ ವ್ಯತ್ಯಾಸವಿಲ್ಲದೇ ಹೋದಂತೆ ಪಿಂಜಾರರು ಧರ್ಮವನ್ನಾಗಲೀ, ರಾಜ್ಯ ವ್ಯವಸ್ಥೆಯನ್ನಾಗಲೀ ನಂಬಿ ಬದುಕಬಹುದಾದ ಭರವಸೆಯನ್ನೇ ಕಳೆದುಕೊಂಡಂತಿದೆ. ಧರ್ಮ ಮತ್ತು ರಾಜಕಾರಣವನ್ನು ಒಟ್ಟಾಗಿ ತಿರಸ್ಕರಿಸುತ್ತಾ ಬಂದ ಪಿಂಜಾರರು ಆ ಮೂಲಕವೇ ಪಡೆಯಬಹುದಾದ ಶಿಕ್ಷಣದಿಂದಲೂ ವಂಚಿತರಾಗುತ್ತಾ ಬಂದರು. ಇದೇ ಧಾರ್ಮಿಕ ಮತ್ತು ರಾಜಕೀಯ ಹಿತಾಸಕ್ತಿಗಳು ಸಮಾಜವನ್ನು ನಿಯಂತ್ರಿಸುವ ಬಗೆ. ಹಾಗಾಗಿ ನಿತ್ಯ ಹೊಟ್ಟೆ ಬಟ್ಟೆಗಾಗಿ ಹೋರಾಟ ನಡೆಸುತ್ತಲೇ ಬಂದ

ಪಿಂಜಾರರು ವೃತ್ತಿ ಮೂಲದ ಸ್ಥಿತ್ಯಂತರವನ್ನು ಸ್ವಾತಂತ್ರ್ಯಾನಂತರದಲ್ಲಿ ಅನುಭವಿಸಿದರೆಂಬುದನ್ನು ಬಿಟ್ಟರೆ ಸ್ವಾತಂತ್ರ್ಯಪೂರ್ವದ ಮತ್ತು ನಂತರದ ಅವರ ಆರ್ಥಿಕ ಸ್ಥಿತಿಗಳ ನಡುವೆ ಮೂಲಭೂತವಾದ ವ್ಯತ್ಯಾಸವೇ ಕಾಣುವುದಿಲ್ಲ. ಆರ್ಥಿಕ ಮತ್ತು ಶೈಕ್ಷಣಿಕ ಬೆಳವಣಿಗೆ ಯಾವಾಗಲೂ ಧರ್ಮ, ರಾಜಕಾರಣದ ಆಶ್ರಯ, ಅವಲಂಬನೆಯಲ್ಲೇ ಸ್ಥಾನ ಪಡೆದುಕೊಳ್ಳುತ್ತಾ ಬಂದಿರುವುದರಿಂದ ಧರ್ಮ, ರಾಜಕಾರಣದ ಬಗೆಗಿನ ಉಪೇಕ್ಷೆ ಶೈಕ್ಷಣಿಕ, ಆರ್ಥಿಕ ಪ್ರಗತಿಯ ಉಪೇಕ್ಷೆಯೂ ಆಗಿ ಪಿಂಜಾರರು ಸಾಮಾಜಿಕವಾಗಿ ಕೂಡ ತಮ್ಮ ಮೂಲಾಶ್ರಮದ ಸ್ಥಿತಿಯಲ್ಲೇ ಇದ್ದಾರೆ.

ಇಂಡಿಯಾದ ಒಟ್ಟಾರೆ ಸಾಮಾಜಿಕ ಇತಿಹಾಸದಲ್ಲಿ ಧಾರ್ಮಿಕ ತಿಳುವಳಿಕೆಯೇ ಶ್ರೇಷ್ಠವಾದದ್ದು, ಅದು ಎಲ್ಲ ಪ್ರಗತಿಯ ಮೂಲ ಎಂಬಂತಹ ವಾತಾವರಣ ಸೃಷ್ಟಿಗೆ ಧರ್ಮವನ್ನು ಬಂಡವಾಳವಾಗಿಸಿಕೊಂಡು ಸಲೀಸು - ಸಂಭ್ರಮದಲ್ಲಿ ಬದುಕಿದ ಜನವರ್ಗವೇ ಕಾರಣ. ಮುಸ್ಲಿಮರ ಸಂದರ್ಭದಲ್ಲಿ ಇದು ಸತ್ಯ. ಮುಸ್ಲಿಂ ಮೂಲಭೂತವಾದಿಗಳು ಪಿಂಜಾರರನ್ನು ನಡೆಸಿಕೊಳ್ಳುವ ರೀತಿಗೂ ಹಿಂದೂ ಮೂಲಭೂತವಾದಿಗಳು ಅಸ್ಪೃಶ್ಯರನ್ನು ನೋಡುವ ರೀತಿಗೂ ಮೂಲಭೂತ ವ್ಯತ್ಯಾಸವಿಲ್ಲ. ಪಿಂಜಾರರು ಇಸ್ಲಾಂ ಧಾರ್ಮಿಕ ತಿಳುವಳಿಕೆಯಿಂದ ದೂರವಿರುವುದಕ್ಕೆ ಮುಸ್ಲಿಮರು ತಮ್ಮನ್ನು ಕೀಳಾಗಿ ನಡೆಸಿಕೊಳ್ಳುವುದೇ ಆಗಿದೆ - ಎಂದೇ ಪಿಂಜಾರರು ನೇರವಾಗಿ ದೂರುತ್ತಾರೆ. 'ಲದಾಫ ದೀನ್ ಮೇ ನೈ ದುನಿಯಾ ಮೆ ನೈ' ಇದು ಮುಸ್ಲಿಮರು ಪಿಂಜಾರರನ್ನು ಕುರಿತು ಸಾಮಾನ್ಯವಾಗಿ ಆಡುವ ಮಾತು. ಪಿಂಜಾರರಿಗೆ ಮುಸ್ಲಿಮರ ದೃಷ್ಟಿಯಲ್ಲಿ ಧರ್ಮ ಮತ್ತು ಪ್ರಪಂಚದಲ್ಲಿಯೇ ಯಾವ ಬಗೆಯ ಅಸ್ತಿತ್ವವೂ ಇಲ್ಲ. ಪಿಂಜಾರರಿಗೆ ಇರುವ ಮತ್ತೊಂದು ತೊಂದರೆ ಭಾಷೆಯದು. ಕನ್ನಡ ಭಾಷೆಯನ್ನು ಹಿಂದೂ ಭಾಷೆ ಎಂಬಂತೆ ತಿಳಿದು ವ್ಯವಹರಿಸುವ ಜನ ಹಿಂದೂ ಮತ್ತು ಮುಸ್ಲಿಮರಿಬ್ಬರಲ್ಲಿಯೂ ಇದ್ದಾರೆ. ಅಂದರೆ ಭಾಷಾ ಮೂಲದ ಗೊಂದಲದಲ್ಲಿರುವ ಜನರು ಭಾಷೆಯ ಬಗ್ಗೆ ಅತ್ಯಂತ ಸ್ಪಷ್ಟತೆ ಹೊಂದಿರುವ ಪಿಂಜಾರರಿಗೆ ಭಯಾನಕವಾಗಿ ಕಾಣುತ್ತಿದ್ದಾರೆ. ಮುಸ್ಲಿಮರು ಧಾರ್ಮಿಕ ಕ್ರಿಯೆಗಳಲ್ಲಿ ಉರ್ದು ಅಥವಾ ಅರಬಿಕ್ ಬಳಸುವುದು ಹಿಂದೂ ಪುರೋಹಿತರು ಸಂಸ್ಕೃತ ಬಳಸುವ ರೀತಿಯಲ್ಲಿಯೇ ಇರುತ್ತದೆ. ಪುರೋಹಿತರ ದೃಷ್ಟಿಯಲ್ಲಿ ಸಂಸ್ಕೃತ ಬಾರದಿರುವವರೆಲ್ಲ ಅಪ್ಪಟ ಶೂದ್ರರಂತೆ ಕಾಣುವ ಹಾಗೆಯೇ ಉರ್ದು ಅಥವಾ ಅರಬಿಕ್ ಬಾರದ ಪಿಂಜಾರರು ಮುಸ್ಲಿಮರ ದೃಷ್ಟಿಯಲ್ಲಿ ಕಾಣುತ್ತಾರೆ. ಸಂಸ್ಕೃತದ ಶ್ಲೋಕ, ಮಂತ್ರಗಳನ್ನು ಕನ್ನಡ ಅಥವಾ ಇತರೆ ಪ್ರಾದೇಶಿಕ ಭಾಷೆಯಲ್ಲಿ ಹೇಳುವುದು ಅಪಚಾರವೆಂಬಂತೆ ಅವರು ನಡೆದುಕೊಳ್ಳುತ್ತಾರೆ. ಉರ್ದು ಅಥವಾ ಅರಬಿಕ್‌ನಲ್ಲಿ ಹೇಳುವ ಮಾತುಗಳನ್ನು ಕನ್ನಡದಲ್ಲಿ ಹೇಳುವಂತೆ ಒತ್ತಾಯಿಸಿದರೆ ಮುಸ್ಲಿಂ ಪುರೋಹಿತರೂ ಉರಿದು ಬೀಳುತ್ತಾರೆ. ಹಾಗಾಗಿ ಈ ಬಗೆಯ ಅರಿವಿಲ್ಲದ ಪಿಂಜಾರರು ವರ್ಷಕ್ಕೆರಡು ಸಲ ಮಾತ್ರ ನಮಾಜಿನಲ್ಲಿ ಮುಸ್ಲಿಮರ ಸಾಲಿನಲ್ಲೇ ನಿಂತು ಅವಮಾನ ಅನುಭವಿಸುವ ಬದಲು ಎಲ್ಲರಿಗಿಂತ ಹಿಂದೆ ನಿಂತು ಮುಂದಿನವರನ್ನು ನೋಡಿಕೊಂಡು ನಮಾಜು ಮುಗಿಸಿಕೊಳ್ಳುವಷ್ಟರ ಮಟ್ಟಿಗೆ ತಮ್ಮ ಕೀಳರಿಮೆಯನ್ನು ಒಪ್ಪಿಕೊಂಡಿದ್ದಾರೆ. ಇದು ಪಿಂಜಾರರ ಸಾಂಸ್ಕೃತಿಕ ವಿಚಾರಗಳಲ್ಲಿ ಜಾಗತೀಕರಣ ಏನೂ ಪ್ರಭಾವ ಬೀರಿಲ್ಲ ಎನ್ನುವುದು ತೋರಿಸುತ್ತದೆ. ಮತ್ತು

ಇಂಡಿಯಾದಲ್ಲಿ ಆಧುನಿಕತೆ ಹೆಚ್ಚಾದಂತೆ ಧಾರ್ಮಿಕ ಸಂಪ್ರದಾಯಗಳ ಬಗೆಗಿನ ಶ್ರದ್ಧೆ ಕೂಡ ಹೆಚ್ಚಾಗುತ್ತದೆ ಎನ್ನುವುದನ್ನು ಸಮಕಾಲೀನ ಬೆಳವಣಿಗೆಯಲ್ಲಿ ಕಾಣಬಹುದು. ಈಗ ಹತ್ತು ವರ್ಷಗಳ ಹಿಂದೆ ಹಬ್ಬ ಹರಿದಿನ -ಮದುವೆ - ಮುಂಜಿಯಂತಹ ಆಚರಣೆಗಳಲ್ಲಿ ವ್ಯಕ್ತವಾಗುತ್ತಿದ್ದ ಆಡಂಬರ, ಶ್ರದ್ಧೆಗಿಂತ ಈಗ ಅದು ದ್ವಿಗುಣವಾಗಿದೆ. ಹೊರಗಡೆ ಆಧುನಿಕವಾದ ಬೂಟು-ಸೂಟು ಧರಿಸುವ ಮನುಷ್ಯ ಒಳಗಡೆ ಜನಿವಾರ, ಲಿಂಗ ಧರಿಸುತ್ತಾನೆ. ಹೊರಗಡೆ ಸಾಂಪ್ರದಾಯಿಕ ಬುರ್ಖಾ ತೊಡುವ ಮುಸ್ಲಿಂ ಮಹಿಳೆ ಒಳಗಡೆ ಹೊಸಶೈಲಿಯ ಆಭರಣ ಮತ್ತು ಹೊಸರೀತಿಯ ಚೂಡಿದಾರ್ ಹಾಗೂ ಹೈಹೀಲ್ಡ್ ಚಪ್ಪಲಿಯನ್ನು ಧರಿಸುವುದು ಮಾಮೂಲಿಯಾಗಿದೆ. ಹಳೆಯದನ್ನು ಬಿಡಲಾರದ, ಹೊಸದನ್ನು ದೂರ ತಳ್ಳಲಾರದ ಇಲ್ಲಿನ ಸಾಂಸ್ಕೃತಿಕ ಚಹರೆಯಂತೆಯೇ ಪಿಂಜಾರರು ಕೂಡ ತಮ್ಮ ಉಭಯ ಸಂಸ್ಕೃತಿ ರೂಪಗಳಿಗೆ ಧಕ್ಕೆ ಬರದಂತೆ ಬದುಕುತ್ತಿದ್ದಾರೆ.



ಅಧ್ಯಾಯ - ೯

# ಸಮಾರೋಪ

ಸದ್ಯದ ಸಾಂಸ್ಕೃತಿಕ ವಾತಾವರಣ ತೀವ್ರ ಬಿಕ್ಕಟ್ಟಿನಲ್ಲಿರುವಂತಿದೆ. 'ಸಂಸ್ಕೃತಿ' ಪದದ ಅರ್ಥ ಗೊತ್ತಿರುವವರು, ಗೊತ್ತಿಲ್ಲದವರೂ ಅದನ್ನು ಕುರಿತು ಮಾತನಾಡುತ್ತಾರೆ. ಅಷ್ಟರ ಮಟ್ಟಿಗೆ ಆ ಪದ ಚ್ಯೂಯಿಂಗ್ ಗಮ್ ಆಗಿಬಿಟ್ಟಿದೆ. ವ್ಯಕ್ತಿ ವಿಶಿಷ್ಟವಾದ ನೀತಿ-ನಡವಳಿಕೆಗಳು ಮತ್ತು ಸಾಮುದಾಯಿಕ ನಂಬಿಕೆ ಆಚರಣೆಗಳ ನಡುವಿನ ಸಂಬಂಧ ಶಿಥಿಲಗೊಳ್ಳುತ್ತಿದೆ. ಶತಮಾನದ ಹಿಂದೆ ಆಧುನಿಕತೆ ಎನ್ನುವುದು ಸಾಂಪ್ರದಾಯಿಕ ಸಮಾಜದ ಜಡತೆಯನ್ನು ಸಡಿಲಿಸಿ ನಿಧಾನವಾಗಿ ಎಲ್ಲ ಬಗೆಯ ಧಾರ್ಮಿಕ ವಿಧಿ-ವಿಧಾನಗಳಲ್ಲಿ ಮುಕ್ತ ಸ್ವಾತಂತ್ರ್ಯವನ್ನು ತಂದುಬಿಟ್ಟಿತು. ವೈಜ್ಞಾನಿಕ ಆವಿಷ್ಕಾರಗಳು ಧಾರ್ಮಿಕ ವಲಯವನ್ನು ಪ್ರವೇಶಿಸಿ ಶತಮಾನಗಳಿಂದ ನಿರ್ಬಂಧನೆಗೊಳಗಾಗಿದ್ದ ಜನಾಂಗಗಳಿಗೆ ಅಚ್ಚರಿಯ ಅಸ್ತಿತ್ವವನ್ನು ತಂದುಕೊಟ್ಟವು. ಅದರ ಪರಿಣಾಮವಾಗಿ ನಮ್ಮ ನಾಡಿನ ಎಲ್ಲ ಜನಾಂಗಗಳ ಮೂಲ ಕಸುಬುಗಳು ವೇಗದ ಆಧುನಿಕತೆಯನ್ನು ಪಡೆಯುತ್ತಾ ಆಕರ್ಷಣೆಯ ಮಾರುಕಟ್ಟೆಯನ್ನು ಸೃಷ್ಟಿಕೊಂಡವು. ಜನಾಂಗಗಳ ವಿಶಿಷ್ಟ ವೃತ್ತಿ ಮತ್ತು ಉತ್ಪಾದನೆಗಳು ಮಾರುಕಟ್ಟೆಯ ಸರಕಾದಂತೆ 'ಸಂಸ್ಕೃತಿ' ಎನ್ನುವುದು ಹಿನ್ನೆಲೆಗೆ ಸರಿದು ಕೇವಲ ಅಕ್ಷರ ಮಾಧ್ಯಮದ ಅಧ್ಯಯನದ ವಸ್ತುವಾಗಿ ಉಳಿಯಿತು.

ಇದೀಗ ದೇಶೀಯ ಮಾರುಕಟ್ಟೆ ಅಸ್ತಿತ್ವವಿಲ್ಲದ, ಅರ್ಥವಿಲ್ಲದ, ಲಾಭಕಾರಿಯಲ್ಲದ ಉದ್ಯಮದಂತೆ ಗೋಚರವಾಗುತ್ತಿದೆ. ಜಾಗತಿಕ ಮಾರುಕಟ್ಟೆಯಲ್ಲಿ ಅನ್ಯದೇಶೀಯ ಉತ್ಪನ್ನಗಳ ಮುಕ್ತ ಪ್ರವೇಶದಿಂದಾಗಿ ದೇಶೀಯ ಕರಕುಶಲ ಕೈಗಾರಿಕೆಗಳ ಉತ್ಪನ್ನಗಳಿಗೆ ಬೆಲೆಯಿಲ್ಲವಾಗಿದೆ. ಇದು ಆಧುನಿಕತೆಯ ಮುಂದುವರಿದ ರಾಕ್ಷಸ ರೂಪವಾಗಿದೆ. ಹೆಚ್ಚು ಕಡಿಮೆ ಎಲ್ಲ ಬಡ, ಅಭಿವೃದ್ಧಿಶೀಲ ರಾಷ್ಟ್ರಗಳು ರೂಪಕ್ಕೆ ಮಾರುಹೋಗುವುದು ಅನಿವಾರ್ಯವಾದಂತಿದೆ. ಈ ದೇಶಗಳ ರೈತ, ಕಾರ್ಮಿಕ, ಕಲಾವಿದ, ಶಿಕ್ಷಕ ಹೀಗೆ ಪ್ರತಿಯೊಬ್ಬ ವೃತ್ತಿನಿರತ ಮನುಷ್ಯ ತನ್ನ ದುಡಿಮೆಯ ಫಲವನ್ನು ಅನುಭವಿಸಲಾಗದ ಇಕ್ಕಟ್ಟಿನಲ್ಲಿದ್ದಾನೆ ; ಮಾತ್ರವಲ್ಲ, ಜೀವನದ ಭದ್ರತೆಯನ್ನು ಉಳಿಸಿಕೊಳ್ಳಲಾಗದ ಆತಂಕದಲ್ಲಿದ್ದಾನೆ. ಕೋಟ್ಯಾಂತರ ನಿರುದ್ಯೋಗಿಗಳ ಸಂಖ್ಯೆ ಹೆಚ್ಚಾಗುವ ಭೀತಿಯಿದೆ. ಇದು ರಾಜಕೀಯ ಅರಾಜಕತೆಯ ಸಾಮಾಜಿಕ ಕ್ಷೋಭೆಯ ಸೂಚನೆ. ಹೀಗಿರುವಾಗ ಜಾಗತೀಕರಣದಿಂದ ಪಾರಾಗುವುದು ಇಂದಿನ ಪ್ರಶ್ನೆಯಾಗಿ ಉಳಿದಿಲ್ಲ. ಬದಲಾಗಿ ನಮ್ಮ ಎಲ್ಲ ಬಗೆಯ ಮೂಲ ಕಸುಬು ಮತ್ತು ಕಲಾವಂತಿಕೆಯನ್ನು ಜೀವಂತವಾಗಿ ಉಳಿಸಿಕೊಳ್ಳುತ್ತ ಸಾಮಾಜಿಕ ಚಲನೆಗೆ ಸಂವೇದನೆಗಳನ್ನು ತೊಡಿಸುವ ಬಗ್ಗೆ ಯೋಚಿಸಬೇಕಾಗಿದೆ. ಯಾಕೆಂದರೆ ವ್ಯಾಪಾರೀ ಮನೋಭಾವದ ಜಗತ್ತಿನಲ್ಲಿ 'ಸಂಸ್ಕೃತಿ'ಯನ್ನು ಹರಾಜಿಗಿಡುವ ಪ್ರಯತ್ನಗಳು ನಡೆಯುತ್ತಿವೆ. ಎಲ್ಲ ಜನಾಂಗಗಳೂ, ಧಾರ್ಮಿಕ ಪಂಥಗಳೂ, ಮೂಗಿನ ನೇರಕ್ಕೆ ಸಂಸ್ಕೃತಿ ವಿಶ್ಲೇಷಣೆ ಮಾಡುತ್ತಿವೆ. ಒಂದೊಮ್ಮೆ ಶ್ರೇಷ್ಠ-ಕನಿಷ್ಠಗಳ ತರತಮದಲ್ಲಿ ವ್ಯಾಖ್ಯಾನಗೊಳ್ಳುತ್ತಿದ್ದ ಸಂಸ್ಕೃತಿ ಇದೀಗ

ಮಾರುಕಟ್ಟೆಯ ಪೈಪೋಟಿಗಿಳಿದು ಬಿಟ್ಟಿದೆ. ಈ ಮಾರುಕಟ್ಟೆ ರಾಜಕೀಯ ಅಧಿಕಾರವನ್ನು ಸಾಧಿಸಿ ಕೊಡುವ ಸಾಧನವಾಗಿರುವುದು ಪೈಪೋಟಿಯ ತೀವ್ರತೆಗೆ ಕಾರಣವಾಗಿದೆ.

ಇಂತಹ ಸಂದರ್ಭದಲ್ಲಿ ಸಂಸ್ಕೃತಿ ಅಧ್ಯಯನಕ್ಕೆ ತೊಡಗುವುದು ಜನಾಂಗವೊಂದರ ಸಾಂಸ್ಕೃತಿಕ ರೂಪಗಳ ಶೋಧನೆ ಮತ್ತು ವಿಶ್ಲೇಷಣೆಯ ದೃಷ್ಟಿಯಿಂದ ಮಾತ್ರವಲ್ಲದೆ ಆಯಾ ಜನಾಂಗಗಳ ಆರ್ಥಿಕ, ಸಾಮಾಜಿಕ ಹಾಗೂ ರಾಜಕೀಯ ಸ್ಥಿತ್ಯಂತರಗಳನ್ನು ಗುರುತಿಸುವ ದೃಷ್ಟಿಯಿಂದ ಕೂಡ ಮಹತ್ವವಾದುದು. ಸಂಸ್ಕೃತಿ ಅಧ್ಯಯನ ಈ ತೆರನಾದ ಜವಾಬ್ದಾರಿಯನ್ನು ನಿರ್ವಹಿಸಬೇಕಾದ ಅನಿವಾರ್ಯತೆಯಿದೆ. ಆದುದರಿಂದ ಜನಾಂಗಿಕ ಅಧ್ಯಯನಗಳು ಜನಪರವೂ, ಧರ್ಮನಿರಪೇಕ್ಷವೂ ಆದ ದೃಷ್ಟಿಕೋನಗಳಿಂದ ನಡೆಯಬೇಕಾಗಿದೆ. ನಮ್ಮ ಬಹುಪಾಲು ಬುಡಕಟ್ಟು ಜನಾಂಗಗಳಿಗೆ ವಿಶಿಷ್ಟವಾದ ಸಾಂಸ್ಕೃತಿಕ ಐಡೆಂಟಿಟಿಯನ್ನು ಉಳಿಸಿಕೊಂಡೇ ಅನ್ಯ ಜನಾಂಗಗಳ ವಿಷಯವಾಗಿ ತೋರುವ ಸಹನೆ ಮತ್ತು ಪ್ರೇಮದ ಭೂಮಿಕೆಯನ್ನು ಗುರುತಿಸುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

ಇತರ ಜ್ಞಾನಶಿಸ್ತುಗಳಿಗಿಂತ ಜಾನಪದ ಅಧ್ಯಯನಕ್ಕೆ ಇಂತಹ ಸಾಧ್ಯತೆ ಹೆಚ್ಚಾಗಿರುವುದು ಮಹತ್ವದ ಸಂಗತಿಯಾಗಿದೆ. ಜಾನಪದ ಎನ್ನುವುದು 'ಆಚಾರ, ವಿಚಾರ, ಪದ್ಧತಿ, ಸಾಹಿತ್ಯದ ಬಗೆಗಳು, ಮದ್ದು, ಕ್ರೀಡೆ, ಕಲೆ, ನೃತ್ಯ, ನಾಟಕ, ಅಡಿಗೆ, ಉಡುಗೆ ತೊಡುಗೆ, ಮನರಂಜನಾ ಮಾಧ್ಯಮಗಳು, ಧಾರ್ಮಿಕ ಕ್ರಿಯೆಗಳು, ಜೀವನ ವಿಧಾನ' - ಮುಂತಾದವುಗಳ ಅಧ್ಯಯನವಾಗಿರುವಂತೆಯೇ ಅವುಗಳನ್ನು ಚರಿತ್ರೆ ಮತ್ತು ಸಮಕಾಲೀನ ಸಂದರ್ಭದ ಸವಾಲುಗಳೊಂದಿಗೆ ವಿಶ್ಲೇಷಣೆ ನಡೆಸುವ ಹೊಣೆಗಾರಿಕೆಯುಳ್ಳದ್ದೂ ಆಗಿದೆ.

ಜಾಗತೀಕರಣದಿಂದಾಗಿ ಮತಧರ್ಮಪರವಾದ ನಂಬಿಕೆಗಳು ಛಿದ್ರಗೊಳುತ್ತಿರುವುದನ್ನು ಗಮನಿಸುತ್ತ ಸಂಭ್ರಮಿಸಲಾರದ ಹಾಗೆ ಇನ್ನೊಂದು ಕಡೆ ಅನ್ಯಮತ ಧರ್ಮಗಳ ವಿರುದ್ಧ ಅಸಹನೆ ತೀವ್ರವಾಗುತ್ತಿದೆ. ಅಪಾರ ಸಂಖ್ಯೆಯ ಜನಸಮೂಹ ವ್ಯಾವಹಾರಿಕ ಜಗತ್ತಿನಲ್ಲಿ ಬದುಕುವುದಕ್ಕಾಗಿ ಸೆಣಸುತ್ತ ದೇಶ, ಭಾಷೆ, ಜಾತಿ, ಧರ್ಮಗಳ ಗಡಿ ಮೀರಿ ನಡೆಯುತ್ತಿರುವುದು ಅನಿವಾರ್ಯವಾದಂತಿದೆ. ಅಷ್ಟೇ ಈ ಪೈಪೋಟಿಯಲ್ಲಿ ಪರಂಪರಾಗತ ಸುಖ ಸಂಭ್ರಮಗಳನ್ನು ಕಳೆದುಕೊಳ್ಳುವ ಹುಸಿ ಆತಂಕವನ್ನು ಪ್ರಕಟಿಸುತ್ತಿರುವ ಪುರೋಹಿತಶಾಹಿ ವರ್ಗ ಅನ್ಯಮತಧರ್ಮಗಳ ವಿರುದ್ಧ ಅಸಹನೆ ಬಿತ್ತುತ್ತಿರುವುದು ಆಂತರಿಕ ಸಂಘರ್ಷಕ್ಕೆ ಕಾರಣವಾಗಿದೆ. ಆದುದರಿಂದ ಇಂದಿನ ಸಾಂಸ್ಕೃತಿಕ ಅಪೇಕ್ಷೆಗಳನ್ನು ಕಂಡುಕೊಳ್ಳುವುದು ಕೂಡ ಜನಾಂಗಿಕ ಅಧ್ಯಯನದ ಭಾಗವಾಗಿದೆ.

ಈ ಹಿನ್ನೆಲೆಯಲ್ಲಿ ದೇಶೀಯ ಸಾಂಸ್ಕೃತಿಕ ನಿಜನೆಲೆಗಳನ್ನು ಶೋಧಿಸುವ ಹಾಗೂ ಈ ಹೊತ್ತಿನ ಸವಾಲುಗಳೊಂದಿಗೆ ಅವುಗಳನ್ನು ಚರ್ಚಿಸುವ ದೃಷ್ಟಿಯಿಂದ 'ಕರ್ನಾಟಕದ ಪಿಂಜಾರರ' ಅಧ್ಯಯನ ಮಹತ್ವವಾದುದು. ನಮ್ಮ ದೇಶದ ಜಾತಿ ವ್ಯವಸ್ಥೆಯಲ್ಲಿನ ಪ್ರತಿಯೊಂದು ಜನಾಂಗವೂ ತನ್ನದೇ ಆದ ಪೌರಾಣಿಕ ಹಾಗೂ ಚಾರಿತ್ರಿಕ ನೆನಪುಗಳನ್ನು ಹೊಂದಿರುತ್ತದೆ. ಮತ್ತು ಈ ಜಾತಿಪದ್ಧತಿಯ ಕಾರಣಕ್ಕೆ ಪ್ರತಿಯೊಂದು ಜನಾಂಗವು ಅನ್ಯ ಜನಾಂಗದ ನಡುವೆ ಶ್ರೇಷ್ಠವೋ ಕನಿಷ್ಠವೋ ಆದಂತಹ ಸಾಮಾಜಿಕ

ನಡವಳಿಕೆಗಳನ್ನು ರೂಪಿಸಿಕೊಂಡಿರುತ್ತದೆ. ತಾನು ಅನ್ಯರಿಗಿಂತ ಶ್ರೇಷ್ಠ ಎಂಬಂತಹ ನಂಬಿಕೆಗಳನ್ನಿಟ್ಟುಕೊಂಡ ಜನಾಂಗ ಬರುಬರುತ್ತ ವಿವೇಕಶೂನ್ಯವಾಗಿ ಸಾಮಾಜಿಕ ನೀತಿ-ನಿಯಮಗಳನ್ನು ರೂಪಿಸುವ ಸ್ವಯಂ ಅಧಿಕಾರವನ್ನು ಪಡೆಯುತ್ತದೆ ಈ ಅಧಿಕಾರ ಒಟ್ಟು ಸಮುದಾಯದ ಮೇಲಿನ ನಿಯಂತ್ರಣವನ್ನು ತಂದುಕೊಡುತ್ತದೆ. ಆದುದರಿಂದಲೇ ಜಾತಿಗಳ ನಡುವಿನ ಅಸಮಾನತೆಯ ಅಂತರ ಏರುತ್ತಲೇ ಹೋಗುತ್ತದೆ. ಆದರೆ ಅಲೆಮಾರಿ ಹಾಗೂ ಬುಡಕಟ್ಟು ಜನಾಂಗಗಳ ಬದುಕು ಹೀಗೆ ಸಮಾಜದ ಹಂಗಿಗೆ ಒಳಗಾಗುವುದಿಲ್ಲವೆಂದು ಕಾಣುತ್ತದೆ. ಯಾಕೆಂದರೆ ಆಸ್ತಿ ಸಂಗ್ರಹಣೆಯ ಮತ್ತು ತನ್ನಷ್ಟಕ್ಕೆ ತಾನು 'ಉತ್ತಮ' ಅಥವಾ 'ಅಧಮ' ಎಂಬ ತಿಳುವಳಿಕೆಯಿಂದ ಈ ಜನಾಂಗಗಳು ಹೊರತಾಗಿರುತ್ತವೆ. ಈ ಜನಾಂಗಗಳ ಪ್ರಜ್ಞೆ ಕೆಲವೊಮ್ಮೆ ಸಾಂಪ್ರದಾಯಿಕ ಕುಟುಂಬಗಳ ಚೌಕಟ್ಟನ್ನು ಮೀರಿ ವರ್ತಿಸುತ್ತದೆ. ಹಾಗಾಗಿ ಸಮಾನತೆ ಮತ್ತು ಪರಸ್ಪರ ಪ್ರೀತಿ ಔದಾರ್ಯಗಳು ಈ ಜನಾಂಗಗಳ ಜೀವನದಲ್ಲಿ ವಿನಾಕಾರಣವಾಗಿ ಪ್ರಾಪ್ತವಾಗುತ್ತವೆ. ಶಿಷ್ಟ ಸಂಸ್ಕೃತಿಯಲ್ಲಿ ಗೌರವಾದರಗಳು ದೊರೆಯಬೇಕಾದರೆ ಉಚ್ಚ ಜಾತಿಯೋ, ಉತ್ತಮ ಪದವಿಯೋ ಇರಬೇಕೆಂಬ ನಿಯಮವಿರುತ್ತದೆ. ಆದರೆ ಬುಡಕಟ್ಟುಗಳಲ್ಲಿ ನಿಯತಿಯ ನಿಯಮವೇ ಅಂತಿಮ. ಇಲ್ಲಿ ಎಲ್ಲವೂ ಸ್ವಾಭಾವಿಕವಾಗಿ ಲಭ್ಯವಾಗುತ್ತದೆ. ಆಧುನಿಕತೆಯ ನೆಪದಲ್ಲಿ ನಾಗರಿಕತೆಯನ್ನು ಸೃಷ್ಟಿಸಿಕೊಂಡ ಶಿಷ್ಟ ಸಂಸ್ಕೃತಿಯ ಅಂಗವಾದ ಆಳುವ ವರ್ಗ ಅಕ್ಷರ ಮಾಧ್ಯಮವನ್ನು ಸ್ವಾರ್ಥಕ್ಕೆ ಬಳಸಿಕೊಂಡ ಹಾಗೆಯೇ ನಿಸರ್ಗದ ಎಲ್ಲಾ ಸಂಪನ್ಮೂಲಗಳ ಲೂಟಿಗೆ ತೊಡಗಿತು. ಅತ್ಯಂತ ದುರ್ಗಮವೆನಿಸಿದ್ದ ಗಿರಿ-ಗಹ್ವರಗಳು, ಕಾಡು-ಮೇಡುಗಳು ಆಳುವವರ ಲಾಲಸೆಯನ್ನು ಪೂರೈಸುವ ಪ್ರವಾಸಿ ತಾಣಗಳಾಗಿಬಿಟ್ಟವು. ಅಲ್ಲಿನ ಅಪರೂಪದ ವೃಕ್ಷ ಮತ್ತು ಖನಿಜ ಸಂಪತ್ತು ಉಳ್ಳವರ ಬಂಗಲೆಯ ಅಲಂಕಾರದ ಗೂಡಿನಲ್ಲಿ ಬಂಧಿಯಾಗಿಬಿಟ್ಟಿತು. ಪರಿಣಾಮವಾಗಿ ಇದೆಲ್ಲವನ್ನೂ ಮಮಕಾರದಿಂದ ತಮ್ಮ ಬದುಕಿನ ಭಾಗವೆಂಬಂತೆ ಕಾಪಾಡಿಕೊಂಡು ಬಂದಿದ್ದ ಬುಡಕಟ್ಟುಗಳು ಆಧುನಿಕತೆ - ನಾಗರಿಕತೆಗಳೆಂಬ ಭೂತಬೇತಾಳಗಳ ಮಂಗಚೇಷ್ಟೆಗೆ ಬಲಿಯಾಗಿಬಿಟ್ಟವು.

ಇಂತಹ ಬುಡಕಟ್ಟುಗಳು ಅದು ಯಾವಾಗ ಜಾತಿ ವ್ಯವಸ್ಥೆಯ ಒಳಗಿನ ಭಾಗವಾಗಿ ಸೇರಿಹೋದವು? ಮತ್ತು ಸೃಷ್ಟಿಯ ಕುರಿತಾದ ವಿಶಿಷ್ಟ ತಿಳುವಳಿಕೆಯನ್ನು ಹೊಂದಿದ್ದೂ, ದೇವರು, ಧರ್ಮಗಳ ಪ್ರಪಂಚದಲ್ಲಿ ಒಂದಾಗಿಬಿಟ್ಟವು? ಎನ್ನುವುದು ಪ್ರಶ್ನೆಯಾಗಿಯೇ ಉಳಿದಿದೆ. ದೇವರು, ಧರ್ಮ, ಅವತಾರಗಳು, ಜಾತಿಪದ್ಧತಿ ಇವೆಲ್ಲ ನಿಸ್ಸಂಶಯವಾಗಿ ಅಕ್ಷರ ಸಮುದಾಯದ ಸೃಷ್ಟಿ. ಇವೆಲ್ಲ ಎಂದು ಹುಟ್ಟಿಕೊಂಡವೋ ಅಂದಿನಿಂದ ವಿಜ್ಞಾನದೊಂದಿಗಿನ ಸಂಘರ್ಷವನ್ನು ಮುಂದುವರಿಸಿಕೊಂಡೇ ಬಂದಿವೆ. ಕೆಲವೊಮ್ಮೆ ಧರ್ಮದ ಕೈ ಮೇಲಾಗಿ ವೈಜ್ಞಾನಿಕ ಸತ್ಯಪ್ರತಿಪಾದನೆಗೆ ಅಡ್ಡಿಯಾದದ್ದು ಇದೆ. ಧರ್ಮ ಎಲ್ಲ ಕಾಲದ ಪ್ರಭುತ್ವದ ಯಜಮಾನನಾಗಿ ಮೆರೆಯುತ್ತ ಬಹುಮುಖೀ ಜೀವನ ಸ್ವರೂಪಗಳನ್ನು ಕಡೆಗಣಿಸಿದೆ. ಧರ್ಮ ಬರಬರುತ್ತ 'ಅಧ್ಯಾತ್ಮ'ದ ಸೋಗು ಹಾಕಿಕೊಂಡು ಆರ್ಥಿಕ ರಾಜಕೀಯ ಹಿತಾಸಕ್ತಿಗಳನ್ನು ರೂಪಿಸುವ ಮಾಧ್ಯಮವಾಗಿ ಬಿಟ್ಟಿತು. ಇದರ ಪರಿಣಾಮವಾಗಿಯೇ ನಿರ್ದಿಷ್ಟ ಧರ್ಮದ ಆವರಣವನ್ನು ಒಪ್ಪಿಕೊಂಡು ಬದುಕುತ್ತಿದ್ದ ಹತ್ತಾರು ಜನಾಂಗಗಳು ಅದರಿಂದ ಬಿಡುಗಡೆ ಕಾಣುವ ಅವಕಾಶಕ್ಕಾಗಿ ಕಾಯುತ್ತಲೇ ಇರುವಂತಾಯಿತು.

ಕರ್ನಾಟಕದ ಪಿಂಜಾರರನ್ನು ಕುರಿತು ಮೇಲಿನ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲಾಗಿದೆ. ಪಿಂಜಾರರ ಸಂಸ್ಕೃತಿಯ ಅಧ್ಯಯನದ ಸಂದರ್ಭದಲ್ಲಿ ಒದಗುವ ತೊಡಕುಗಳನ್ನು ಗಮನದಲ್ಲಿಟ್ಟುಕೊಂಡು ಅವರ ಆಚರಣೆಯ ನೆಲೆಯಲ್ಲಿ ಮತ್ತು ಪಿಂಜಾರರಿಂದ ದೊರೆತ ಅಧಿಕೃತ ಮಾಹಿತಿಗಳ ಆಧಾರದಲ್ಲಿ ಈವರೆಗಿನ ಅಂಶಗಳನ್ನು ಇಲ್ಲಿ ದಾಖಲಿಸಲಾಗಿದೆ. ಪಿಂಜಾರ ಜನಾಂಗದ ಸಂಸ್ಕೃತಿಯ ವಸ್ತು ನಿಷ್ಠ ವಿವರಗಳನ್ನು ಅವರಲ್ಲಿರುವ ಭಾಷಿಕ ನುಡಿಗಟ್ಟುಗಳನ್ನೇ ಸಾಧ್ಯವಾದಷ್ಟು ಬಳಸಿ ಇಲ್ಲಿ ಕೊಡಲಾಗಿದೆ. ಪಿಂಜಾರರ ವಿಶಿಷ್ಟತೆಯಿರುವುದೇ ಆಚರಣೆ ಮತ್ತು ಪ್ರಾದೇಶಿಕವಾದ ಜೀವನ ವಿಧಾನದಲ್ಲಿ. ಪಿಂಜಾರರು ಭಾರತದಾದ್ಯಂತ ಇರುವುದಾಗಿ ತಿಳಿದು ಬರುತ್ತದಾದರೂ ಕರ್ನಾಟಕದ ಮಟ್ಟಿಗಿನ ಅವರ ಜೀವನಕ್ರಮವನ್ನು ವಸ್ತುನಿಷ್ಠವಾಗಿ ಕೊಡಲು ಪ್ರಾಮಾಣಿಕವಾಗಿ ಪ್ರಯತ್ನಿಸಲಾಗಿದೆ. ಪಿಂಜಾರರ ಬದುಕು ಸ್ವರೂಪದಲ್ಲಿ ಧರ್ಮ ನಿರಪೇಕ್ಷವಾದುದು ಎಂದು ಥಟ್ಟನೆ ಅನಿಸುತ್ತದೆ. ಇಂಡಿಯಾ ಸ್ವಾತಂತ್ರ್ಯಾನಂತರ ಜಾತ್ಯಾತೀತ ರಾಷ್ಟ್ರ ಎಂದು ಘೋಷಿಸಿಕೊಳ್ಳುವುದಕ್ಕಿಂತ ಹಿಂದಿನ ನೂರಾರು ವರ್ಷಗಳಿಂದ ಅಂಥ ಜಾತ್ಯಾತೀತ ಸಂಸ್ಕೃತಿಯ ನಿಚ್ಚಳ ಪರಂಪರೆಯನ್ನು ಆಚರಣೆಯಲ್ಲೇ ಅಳವಡಿಸಿಕೊಂಡು ಬಂದ ಪಿಂಜಾರರಂತಹ ಅನೇಕ ಉಪಸಂಸ್ಕೃತಿಗಳು ನಮ್ಮ ಸಾಮಾಜಿಕ ಇತಿಹಾಸದಲ್ಲಿ ಸಿಗುತ್ತವೆ, ಈ ಉಪ ಸಂಸ್ಕೃತಿಗಳೆಂದು ಕರೆಸಿಕೊಳ್ಳುವ ಜನವರ್ಗವೆಲ್ಲಾ ನಮ್ಮ ಸಮಾಜ ವ್ಯವಸ್ಥೆಯ ಕೆಳಸ್ತರದ ಜನಾಂಗಗಳೇ ಆಗಿರುವುದು ಅವುಗಳ ವಿಶಿಷ್ಟ ಮನೋಧರ್ಮವನ್ನು ತೋರುತ್ತದೆ. ಅಲ್ಲದೆ ಇಂಥ ಜನಾಂಗಗಳ ಸಂಸ್ಕೃತಿಯ ನೆಲೆ ನೋವು, ಅವಮಾನಗಳಿಂದ ತುಂಬಿದ್ದರೂ, ಸಾವಿರಾರು ವರ್ಷಗಳ ಕಾಲ ಅಕ್ಷರಗಳಿಂದ ದೂರ ಉಳಿದುಕೊಂಡರೂ ಸಂಸ್ಕೃತಿಯ ಸ್ವರೂಪದಲ್ಲಿ ಮೂಲಭೂತ ಬದಲಾವಣೆಗಳಾಗದಿರುವುದು ಆ ಪರಂಪರೆಯ ಕ್ರಿಯಾಶೀಲತೆಯನ್ನೇ ಹೇಳುವಂತಿದೆ. ಇಂಡಿಯಾದ ಸಾಮಾಜಿಕ ಇತಿಹಾಸ ಕಂಡ ಅತ್ಯುತ್ತಮ ಸಂಸ್ಕೃತಿ ರೂಪಗಳಲ್ಲಿ ಪಿಂಜಾರ ಸಂಸ್ಕೃತಿಯೂ ಒಂದು ಎಂದು ಹೆಮ್ಮೆಯಿಂದ ಹೇಳಬಹುದು. ಈ ಕೃತಿಯಲ್ಲಿ ಈವರೆಗೆ ಪಿಂಜಾರ ಸಂಸ್ಕೃತಿಯ ವಿವರಗಳನ್ನು ಕೊಡುವಾಗಲೆಲ್ಲಾ ಅದರ ಪರವಾದ ಒಂದು ಬಗೆಯ ಸಮರ್ಥನಾ ದನಿಯಿರುವುದು ಕಂಡುಬಂದರೆ ಅದಕ್ಕೆ ಕಾರಣ ಸಮಕಾಲೀನ ಬದುಕಿನ ಕ್ಷೋಭೆಯ, ತಳಮಳದ ಕ್ಷಣಗಳು ಪಿಂಜಾರ ಸಂಸ್ಕೃತಿಯ ಹಿನ್ನೆಲೆಯಲ್ಲಿ ಅರ್ಥಹೀನ, ಅನಾಗರಿಕ ಅನಿಸಿರುವುದೇ ಆಗಿದೆ. ಪಿಂಜಾರರನ್ನು ಅವರ ಜೀವನದ ಬೇರೆ ಬೇರೆ ಸಂದರ್ಭಗಳ ವಿವರಗಳಲ್ಲಿ ಅಧ್ಯಯನ ಮಾಡಲಾಗಿದೆ. ಪಿಂಜಾರರ ಸಾಮಾಜಿಕ, ಆರ್ಥಿಕ ಸ್ಥಿತಿಗಳು, ಅವರ ಧಾರ್ಮಿಕ ಆಚರಣೆಗಳು, ನಂಬಿಕೆಗಳು ಅವರಲ್ಲಿನ ಸಾಹಿತ್ಯರೂಪಗಳಲ್ಲಿ ದೊರೆಯುವುದಕ್ಕಿಂತ ಹೆಚ್ಚಾಗಿ ಅವರ ಸಾರ್ವಜನಿಕ ಬದುಕಿನಲ್ಲಿ ಸಿಗುತ್ತವೆ. ಹಾಗಾಗಿ ಪಿಂಜಾರರ ಜೀವನವಿಧಾನ, ಸಾಮಾಜಿಕ ವ್ಯವಸ್ಥೆ, ಕಸುಬು-ಆಚರಣೆ ಮತ್ತು ಕಲೆಗೆ ಸಂಬಂಧಪಟ್ಟಂತೆ ಹಿರಿಯ ಪಿಂಜಾರರಿಂದ ಮಾಹಿತಿಗಳನ್ನು ಸಂಗ್ರಹಿಸಿ ಕೊಡಲಾಗಿದೆ. ಸಮಾಜದ ಎಲ್ಲ ವರ್ಗದ ಜನರೊಂದಿಗೆ ಪಿಂಜಾರರ ಸಂಬಂಧ ಮತ್ತು ಪಿಂಜಾರರ ಬಗ್ಗೆ ಇತರೆ ಜನಾಂಗದವರಿಗಿರುವ ಅಭಿಪ್ರಾಯಗಳನ್ನು ಸೂಕ್ತ ಸಂದರ್ಭದಲ್ಲಿ ಆಗಾಗ್ಗೆ ಪ್ರಸ್ತಾಪಿಸಲಾಗಿದೆ. ಮುಖ್ಯವಾಗಿ ಎಡ್ಗರ್ ಥರ್ಸ್‌ಟನ್ ಅವರ ಅಧ್ಯಯನ ಪಿಂಜಾರರ ಬದುಕನ್ನು ಸೂಕ್ಷ್ಮವಾಗಿ ಗಮನಿಸಿದುದರ ಫಲವಾಗಿರುವುದರಿಂದ ಅದನ್ನು ಇಡಿಯಾಗಿ ಕೊಡಲಾಗಿದೆ. ಹಾಗೆ ನೋಡಿದರೆ ಥರ್ಸ್‌ಟನ್ ಅವರ ಬರಹ ಇಲ್ಲಿನ ಒಟ್ಟಾರೆ ಬರವಣಿಗೆಗೆ ಸಹಾಯಕವಾಗಿದೆ.

ಈ ಬರವಣಿಗೆಯಲ್ಲಿ ಪಿಂಜಾರರ ಮೂಲ ಮತ್ತು ಪ್ರಾಚೀನತೆ ಹಾಗೂ ಸಮಕಾಲೀನ ಸಮಾಜದ ಪರಿವರ್ತನೆಯ ಪ್ರಭಾವಗಳ ಹಿನ್ನೆಲೆಯಲ್ಲಿ ಪಿಂಜಾರರ ಮೇಲಾಗುತ್ತಿರುವ ಪರಿಣಾಮಗಳನ್ನು ಕುರಿತಂತೆ ಗಂಭೀರ ಚರ್ಚೆ ನಡೆಸಲಾಗಿದೆ. ಈ ಚರ್ಚೆಯಲ್ಲಿ ಪ್ರಜ್ಞಾವಂತ ಪಿಂಜಾರರನ್ನು ಒಳಗೊಂಡು ಇತರೆ ಜನಾಂಗದವರ ಅಭಿಪ್ರಾಯಗಳನ್ನು ಗಮನಿಸಲಾಗಿದೆ. ಈ ಅಭಿಪ್ರಾಯಗಳ ಜೊತೆಗೆ ಭಾರತದ ಸಾಮಾಜಿಕ ಇತಿಹಾಸದ ಅನೇಕ ಸಂದರ್ಭಗಳನ್ನು ಕುತೂಹಲದಿಂದ ನೋಡಲಾಗಿದೆ. ಪಿಂಜಾರರ ಮೂಲವನ್ನು ಮುಸ್ಲಿಂ ಅರಸರ ಆಡಳಿತದಲ್ಲಿ ನಡೆದ ವ್ಯಾಪಕ ಪ್ರಮಾಣದ ಮತಾಂತರದಲ್ಲಿ ಗುರುತಿಸಲಾಗಿದೆ. ಅಲ್ಲದೆ ನಮ್ಮ ಸಾಮಾಜಿಕ ಸಂದರ್ಭದಲ್ಲಿ ಮತಾಂತರಕ್ಕೆ, ಅದರಲ್ಲೂ ಹಿಂದೂ ಧರ್ಮದಿಂದ ಮುಸ್ಲಿಂ ಧರ್ಮಕ್ಕೆ ಮತಾಂತರಗೊಳ್ಳಲು ಇರುವ ಕಾರಣಗಳನ್ನು ಸ್ಪಷ್ಟಪಡಿಸಲಾಗಿದೆ. ಮತ್ತು ಅನೇಕ ಜಾತಿ, ಉಪಜಾತಿಗಳಿಂದ ಇಡಿಕಿರಿದಿರುವ ಹಿಂದೂ ಧರ್ಮದ ಯಾವ ನಿರ್ದಿಷ್ಟ ಜಾತಿ ಅಥವಾ ಉಪಜಾತಿಗಳ ಜನರ ಮತಾಂತರ ನಡೆಯಿತು ಅನ್ನುವುದಕ್ಕೆ ಇತಿಹಾಸದಲ್ಲಿ ಸ್ಪಷ್ಟ ಪುರಾವೆಗಳು ಸಿಗದಿದ್ದರೂ ಪಿಂಜಾರರ ಆಚರಣೆಗಳ ಸೂಕ್ಷ್ಮನೆಲೆಯನ್ನು ಗಮನಿಸಿ ಪಿಂಜಾರರನ್ನು ಹೋಲುವ ಹಿಂದೂ ಧರ್ಮದ ಕೆಳಜಾತಿಗಳ ಹೆಸರುಗಳನ್ನು ನಿರೂಪಿಸಲಾಗಿದೆ. ಸಾಮಾಜಿಕ ಇತಿಹಾಸದ ಸಂದರ್ಭದಲ್ಲಿ ಮತಾಂತರಕ್ಕೆ ಒಳಗಾಗುವಂತಹವರು ಸಾಮಾಜಿಕ ರಚನೆಯ ಕೆಳಸ್ತರದ ಜನಾಂಗದವರೇ ಎನ್ನುವ ಅಭಿಪ್ರಾಯಕ್ಕೆ ಯಾರಲ್ಲೂ ವಿರೋಧ ಕಂಡುಬರಲಿಲ್ಲ. ಮತ್ತು ಅದು ವಾಸ್ತವ ಸಂಗತಿ ಕೂಡಾ. ಹಾಗಾಗಿ ಪಿಂಜಾರರು ಹಿಂದೂ ವರ್ಣ ವ್ಯವಸ್ಥೆಯ ಕೆಳಜಾತಿಗಳಿಂದ ಮತಾಂತರಗೊಂಡವರೆಂಬುದು ಸ್ಪಷ್ಟವಾಗಿದೆ.

ಇನ್ನು ಸಮಕಾಲೀನ ಸಮಾಜದ ಪರಿವರ್ತನೆಯ ಪ್ರಭಾವಗಳ ಹಿನ್ನೆಲೆಯಲ್ಲಿ ಪಿಂಜಾರರ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳ ವಿವರಗಳನ್ನು ಸೂಕ್ಷ್ಮವಾಗಿ ಗಮನಿಸಿರುವುದರ ಜೊತೆಗೆ ಪಿಂಜಾರರ ಸಂಸ್ಕೃತಿ ಎದುರಿಸುತ್ತಿರುವ ಅಪಾಯಕಾರಿ ಬೆಳವಣಿಗೆಗೆ ಸದ್ಯದ ಹಿಂದೂ-ಮುಸ್ಲಿಂ ವಿದ್ವೇಷದಲ್ಲಿಯೇ ಕಾರಣಗಳನ್ನು ಹುಡುಕಲಾಗಿದೆ. ಪಿಂಜಾರರ ಸಂಸ್ಕೃತಿಯನ್ನು ಉಳಿಸಿಕೊಳ್ಳಲೇಬೇಕಾದ ಅಗತ್ಯವನ್ನು ಈ ಸಂದರ್ಭದಲ್ಲಿಯೇ ಹೇಳಲಾಗಿದೆ. ಪಿಂಜಾರ ಸಂಸ್ಕೃತಿಯನ್ನು ಧಾರ್ಮಿಕ ಆಚರಣೆಗಳ ನೆಲೆಗಟ್ಟಿಗೆ ಸೀಮಿತಗೊಳಿಸುವ ಪ್ರಯತ್ನದಲ್ಲಿರುವ ಮುಸ್ಲಿಂ ಮೂಲಭೂತವಾದಿಗಳು ಮತ್ತು ಅವರಿಗೆ ಒಂದು ರೀತಿಯಲ್ಲಿ ನೇರ ಪ್ರಚೋದನೆ ಕೊಡುತ್ತಿರುವ ಹಿಂದೂ ಮೂಲಭೂತವಾದಿಗಳು ಒಟ್ಟಾರೆ ಮತಧರ್ಮ ನಿರಪೇಕ್ಷ ವ್ಯವಸ್ಥೆಯ ವಿರೋಧಿಗಳೇ ಆಗಿದ್ದಾರೆ. ಇಂತಹವರ ಪ್ರಯತ್ನದಿಂದ ತಮ್ಮ ಸಂಸ್ಕೃತಿಯನ್ನು ಉಳಿಸಿಕೊಳ್ಳುವ ಸಲುವಾಗಿ ಪಿಂಜಾರರು ಸಂಘಟಿತರಾಗುತ್ತಿರುವ ಮತ್ತು ಅವರ ಸಂಘಟನೆಯ ನೆಲೆಯನ್ನು ಸ್ಪಷ್ಟಪಡಿಸಿಕೊಳ್ಳುವ ಬಗ್ಗೆ ಮುಕ್ತವಾಗಿ ಚರ್ಚಿಸಲಾಗಿದೆ. ಒಟ್ಟಾರೆಯಾಗಿ ಪಿಂಜಾರ ಸಂಸ್ಕೃತಿಯ ಮೂಲಸ್ವರೂಪವನ್ನು ಸದ್ಯದ ಆತಂಕಕಾರಿ ಸಂಗತಿಗಳು ವಿರೂಪಗೊಳಿಸಲು ಅವಕಾಶ ಕೊಡದಂತೆ ಸರ್ಕಾರಿ ಆಡಳಿತ ವಲಯ ಯೋಗ್ಯ ಪ್ರೋತ್ಸಾಹಕಾರಿ ಸವಲತ್ತುಗಳನ್ನು ಒದಗಿಸಬೇಕೆಂಬುದೇ ಈ ಚರ್ಚೆಯ ಮೂಲಭೂತ ಆಶಯವಾಗಿದೆ.

ಪಿಂಜಾರರ ಬದುಕು ಅತ್ಯಂತ ದಯನೀಯವಾಗಿರುವ ಈ ಸಂದರ್ಭದಲ್ಲಿ ಅವರ ಸಂಸ್ಕೃತಿಯನ್ನು ಕುರಿತ ಅಧ್ಯಯನ ಸಾಧ್ಯವಾಗಿರುವುದು ಪಿಂಜಾರರಲ್ಲಿ ಸಾಮಾಜಿಕ ಎಚ್ಚರವನ್ನುಂಟು ಮಾಡುವ

ಪ್ರಯತ್ನದ ಮೊದಲ ಹೆಜ್ಜೆಯೂ ಆಗಿದೆ. ಪಿಂಜಾರರು ತಮ್ಮ ಕೀಳರಿಮೆ, ಆಂತರಿಕ ಭೀತಿಯಿಂದ ಹೊರಬಂದು ಸಾಮಾಜಿಕವಾಗಿ ತಮ್ಮನ್ನು ತಾವು ಹೆಮ್ಮೆಯಿಂದ ಗುರುತಿಸಿಕೊಳ್ಳುವಂತಾಗಬೇಕು. ತಮ್ಮ ಸಂಸ್ಕೃತಿಯ ಸ್ವೋಪಜ್ಞತೆಯನ್ನು ಉಳಿಸಿಕೊಂಡೇ ಮನುಷ್ಯ ಸಮಾನವಾದ ಸಮಾಜ ನಿರ್ಮಾಣದಲ್ಲಿ ನಿರ್ಭಿಡೆಯಿಂದ ಪಿಂಜಾರರು ತೊಡಗಿಸಿಕೊಳ್ಳಬೇಕಾಗಿದೆ. ಸ್ಪರ್ಧಾತ್ಮಕವಾದ ಈ ಜಗತ್ತು ಮನುಷ್ಯರ ನಡುವಿನ ಕನಿಷ್ಠ ಸೌಜನ್ಯ ಮತ್ತು ಹೃದಯ ಸಂವಾದದ ಸಾಧ್ಯತೆಯನ್ನೇ ಕಳೆದುಕೊಂಡು ಅನಾಗರಿಕ ಆಗುತ್ತಿರುವಾಗ ಪಿಂಜಾರರು ಮತ್ತು ಅವರಂತಹ ನಿರ್ಲಕ್ಷ್ಯಕ್ಕೆ ಒಳಗಾದ ಎಲ್ಲ ಜನಾಂಗಗಳಿಗೆ ಸಾಂಸ್ಕೃತಿಕವಾಗಿ ಮಹತ್ವದ ಜವಾಬ್ದಾರಿಯಿದೆ. ಈ ಬಗೆಯ ಹೊಣೆಗಾರಿಕೆ ಸಮಾಜದ ಮೂಲಚೈತನ್ಯವೇ ಆಗಿರುವ ದಲಿತರು, ಹೆಣ್ಣುಮಕ್ಕಳು ಮತ್ತು ಅಲ್ಪ ಸಂಖ್ಯಾತರನ್ನು ಒಳಗೊಂಡು ಕ್ರಿಯಾಶೀಲವಾಗಬೇಕಾಗಿದೆ. ನಿರ್ವ್ಯಾಜ ಮಾನವ ಪ್ರೇಮ ಮತ್ತು ನಿಷ್ಠುರ ಸಮಾನತೆಯೇ ಅಡಿಗಲ್ಲಾಗುವ ಹೊಸ ಸಾಂಸ್ಕೃತಿಕ ಪರಿಸರವನ್ನು ಕಟ್ಟುವ ನಿರಂತರ ಪ್ರಯತ್ನ ಎಲ್ಲ ಜನಪರ ಸಂಘಟನೆಗಳ ಕಾರ್ಯ ಯೋಜನೆಯಲ್ಲಿರಬೇಕಾಗಿದೆ. ವೈಜ್ಞಾನಿಕ ಶಿಕ್ಷಣ ಮತ್ತು ಪ್ರಗತಿಯಿಂದ ಅಂತಹದ್ದೊಂದು ಸಾಮಾಜಿಕ ಜವಾಬ್ದಾರಿಯ ವಾತಾವರಣ ನಿರ್ಮಾಣದಲ್ಲಿ ಅಪಮಾನಿತ ಜನವರ್ಗ ಆಸಕ್ತಿ ತೋರುತ್ತಿರುವುದು ಆಶಾದಾಯಕವಾಗಿದೆ.

ಉಭಯ ಸಂಸ್ಕೃತಿಯ ಪಿಂಜಾರರು ಕಳೆದ ೧೦-೧೫ ವರ್ಷಗಳಿಂದ ವಿಚಿತ್ರವಾದ ಸಾಮಾಜಿಕ ಇಕ್ಕಟ್ಟನ್ನು ಅನುಭವಿಸುತ್ತಿದ್ದಾರೆ. ಕೇವಲ ೧೦-೨೦ ವರ್ಷಗಳ ಹಿಂದೆ ಪಿಂಜಾರರಿಗೆ ಧಾರ್ಮಿಕವಾಗಿ 'ಅನ್ಯ'ತೆಯ ಭಾವನೆ ಕಾಡಿರಲಿಲ್ಲ. ಹಾಗೂ ಮುಸಲ್ಮಾನರಿಗೆ ಮಾತ್ರ ಮೀಸಲಾಗಿದ್ದ ಸಾಮಾಜಿಕ ಅಭದ್ರತೆಯೂ ಅವರನ್ನು ಕಂಗೆಡಿಸಿರಲಿಲ್ಲ. ಯಾಕೆಂದರೆ ಅವರು ಹೆಚ್ಚು ಕಡಿಮೆ ಹಿಂದೂಗಳ ಒಳಗಿನ ಪಂಗಡವೊಂದರಂತೆ 'ಒಳಗಿನವರಾಗಿ' ಇದ್ದುಬಿಟ್ಟಿದ್ದರು. ಹಾಗಾಗಿ ಅವರಿಗೆ ಧಾರ್ಮಿಕವಾಗಿ ಪ್ರಧಾನ ಧರ್ಮವೊಂದರ ಆವರಣದಲ್ಲಿ ಗುರುತಿಸಿಕೊಳ್ಳುವ ಅವಶ್ಯಕತೆಯೇ ಇರಲಿಲ್ಲ. ಮತ್ತು ಮುಸಲ್ಮಾನರಿಂದ ಪೂರ್ಣವಾಗಿ ಪ್ರಭಾವಿತರಾಗದೇ ಕೇವಲ ತಾಂತ್ರಿಕ ಆಚರಣೆಗಳ ಮಟ್ಟಿಗೆ ಮಾತ್ರ ಅವರನ್ನು ಆಶ್ರಯಿಸಿದ್ದರು. ಉಳಿದಂತೆ ಎಲ್ಲ ಭಾವನಾತ್ಮಕ ಒಡನಾಟ - ವ್ಯವಹಾರಗಳು ಹಿಂದೂಗಳ ನಡುವೆಯೇ ಜೀವ ಪಡೆಯುತ್ತಿದ್ದವು.

ಆದರೆ ಇತ್ತೀಚಿನ ೧೦-೧೫ ವರ್ಷಗಳು ಪಿಂಜಾರ ಜನಾಂಗದ ಪಾಲಿಗೆ ತೀರ ಆತಂಕದ ದಿನಗಳಾಗಿವೆ. ಹಳ್ಳಿಗಳಲ್ಲಿ ಕೂಡ ಕೋಮುವಾದಿಗಳು ಕ್ರಿಯಾಶೀಲವಾಗಿರುವ ಈ ದಿನಗಳಲ್ಲಿ ಪಿಂಜಾರರು ಜೀವರಕ್ಷಣೆ ಮತ್ತು ಸಾಂವಿಧಾನಿಕ ಭದ್ರತೆಯನ್ನು ಅರಸಿ ನಗರಗಳತ್ತ ಬರುತ್ತಿದ್ದಾರೆ. ತಾವು ಎಲ್ಲಾದರೂ ಸಲ್ಲಲೇಬೇಕೆಂಬಂತೆ ಇಸ್ಲಾಂನ ಆಚರಣೆಗಳತ್ತ ಹೆಚ್ಚು ಆಕರ್ಷಿತರಾಗುತ್ತಿದ್ದಾರೆ. ಪಿಂಜಾರರು ಎಂದು ಹೇಳಿಕೊಳ್ಳದೆ ಮುಸ್ಲಿಮರು ಎಂದೇ ಹೇಳುತ್ತಿದ್ದಾರೆ. ವಿಷದ ಗಾಳಿಯಂತೆ ಹರಡುತ್ತಿರುವ ಕೋಮುವಾದ ಪಿಂಜಾರರಂತಹ ಉಭಯ ಸಂಸ್ಕೃತಿ ರೂಪಗಳನ್ನು ಉಸಿರುಗಟ್ಟಿಸುತ್ತಿದೆ. ರಾಜ್ಯಾಧಿಕಾರದ ಆಕಾಂಕ್ಷೆಯಲ್ಲಿ ಕೆಲವು ಕೋಮುವಾದೀ ಸಂಘಟನೆಗಳು ಪ್ರಭುತ್ವ ಮತ್ತು ಅಧಿಕಾರಶಾಹಿಯ ಜಂಟಿ ಕಾರ್ಯಾಚರಣೆಯಲ್ಲಿ

ವ್ಯವಸ್ಥಿತವಾದ ಕೋಮುಗಲಭೆಯನ್ನು ಪ್ರಾಯೋಜಿಸುತ್ತಿವೆ. ಇದಕ್ಕೆ ಹಿಂದೂ-ಮುಸ್ಲಿಂ ಅಮಾಯಕ ಯುವ ಸಮುದಾಯ 'ಹಿಂಸೆ'ಯನ್ನು ವೈಭವೀಕರಿಸುತ್ತಿರುವುದು ಆತಂಕಕಾರಿಯಾಗಿದೆ.

ಇದನ್ನೆಲ್ಲಾ ಪಿಂಜಾರರು ಈಗೀಗ ಕುತೂಹಲದಿಂದ ಗಮನಿಸುತ್ತಿದ್ದಾರೆ. ಸಮಕಾಲೀನ ಸಮಾಜದ ಬೇರೆ ಬೇರೆ ಸಂಘಟನೆಗಳು ಆಯಾ ಜನಾಂಗದ, ವರ್ಗದ ಉನ್ನತಿಗೆ ಹಾಕಿಕೊಂಡಿರುವ ಯೋಜನೆಗಳು ಪಿಂಜಾರರಿಗೆ ತಿಳಿಯುತ್ತಿವೆ. ಪಿಂಜಾರರು ಮೊದಲು ಶೈಕ್ಷಣಿಕವಾಗಿ ಮುಂದುವರಿಯುವ ಬಗ್ಗೆ ಆಲೋಚಿಸಿ ಸಂಘಟಿತರಾಗುವ ಅಗತ್ಯವನ್ನು ಕಂಡುಕೊಳ್ಳುತ್ತಿದ್ದಾರೆ. ಈ ಸಂಘಟನೆಯ ಚಿಂತನೆ ಮುಖ್ಯವಾಗಿ ಪಿಂಜಾರರ ಹಿತಾಭಿವೃದ್ಧಿಯನ್ನು ಗಮನದಲ್ಲಿಟ್ಟುಕೊಂಡಂತಿದೆ. ಈ ನಿಟ್ಟಿನಲ್ಲಿ ಪಿಂಜಾರರು ಪ್ರಭಾವಿತರಾಗುತ್ತಿರುವುದು ಅರ್ಥಪೂರ್ಣವಾಗಿದೆ. ಇಂತಹದ್ದೊಂದು ಸಂಘಟನೆಯನ್ನು ಹಿಂದೂ-ಮುಸ್ಲಿಮರೆಲ್ಲರೂ ಸೇರಿ ಪ್ರೋತ್ಸಾಹಿಸುವುದರ ಮೂಲಕ ಈ ನೆಲದ ಜಾತ್ಯಾತೀತ ಸಂಸ್ಕೃತಿ, ಪರಂಪರೆಯನ್ನು ಮತ್ತಷ್ಟು ಗಟ್ಟಿಗೊಳಿಸಬೇಕಿದೆ.

ಪಿಂಜಾರರು ಧಾರ್ಮಿಕ (ಇಸ್ಲಾಂ) ಆಚರಣೆಗಳನ್ನು ಕುರಿತು ಉಪೇಕ್ಷೆಯಿಂದಿರುವುದಕ್ಕೆ ಐತಿಹಾಸಿಕವಾಗಿ, ಸಾಮಾಜಿಕವಾಗಿ ಬೇರೆ ಬೇರೆ ಕಾರಣಗಳಿವೆ. ಆ ಕಾರಣಗಳ ಶೋಧನೆಯ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಸಾಧ್ಯವಿರುವ ಮಟ್ಟಿಗೆ ಮಾಡಲಾಗಿದೆ. ಸಮಕಾಲೀನ ಸಮಾಜದ ಪ್ರಭಾವಗಳನ್ನು ಅಷ್ಟಿಷ್ಟು ಅರಗಿಸಿಕೊಳ್ಳುತ್ತಿರುವ ಪಿಂಜಾರರು ತಮ್ಮ ಸಂಸ್ಕೃತಿಯ ಜಾತ್ಯಾತೀತ ಸ್ವರೂಪವನ್ನು ಕಾಪಾಡಿಕೊಳ್ಳಬೇಕೆಂಬುದು ಈ ಅಧ್ಯಯನದ ಪ್ರಧಾನ ಆಶಯವಾಗಿದೆ. ಸದ್ಯದ ಸಮಕಾಲೀನ ಸಮಾಜದ ಪ್ರಕ್ಷುಬ್ಧ ಪರಿಸ್ಥಿತಿಯಲ್ಲಿ ಪಿಂಜಾರರ ಸಂಸ್ಕೃತಿ ಮೂಡಿಸುವ ಹೆಮ್ಮೆ ವಿಶಿಷ್ಟವಾದುದಾಗಿದೆ.



# ರಿವಾಯಿತಿ ಪದಗಳು

೧

ಮೊದಲು ನೆನಿವೆ ಭಕ್ತೀಲೆ ಅಲ್ಲಾಗೆ ಜನನ ಮರಣರಹಿತ ಸಾಂಬಾಗೆ ॥
ಭೂಮಿಗೆ ಮೊದಲು ಶರಣರ ನೂರು । ಇದರಿಂದ ಭೂಮಂಡಲ ಆಯ್ತು ತಯ್ಯಾರು ॥
ಭೂಮಿಯು ಮಾನವನ ಸೃಷ್ಟೀಗೆ । ಮಣ್ಣ ತರಿಸಿ ಗೊಂಬೆ ಮಾಡಿದ ದೇವಗೆ ॥
ಹಿಂದೂ ಧರ್ಮದ ಪುರಾಣದೊಳಗೆ । ಬರೆದು ಸಾರುತ್ತಿರುವುದು ಹೀಗೆ ।
ಓಂಕಾರವೆಂದು ಶಬ್ದ ಹುಟ್ಟಿತೊಂದು । ಆದಿ ಶಕ್ತಿಯೆಂದು ಶಕ್ತಿ ಹುಟ್ಟಿತೊಂದು ।
ತ್ರಿಮೂರ್ತಿಗಳ ಸೃಷ್ಟಿಸಿ ಮೊದಲಿಗೆ । ಭೂಮಿಗೆ ಬಿಟ್ಟಾಳು ಸೃಷ್ಟಿ ಸ್ಥಿತಿಲಯ ಕಾಗಿ ॥
ಭಜಿಸುತ್ತಲಿ ಆ ತ್ರಿಮೂರ್ತಿಗಳಿಗೆ । ಚೌಕು ನಡೆಸ್ತೀವಿ ಸಂತೋಷದೊಳಗೆ ।
ರಾಮರಹೀಮರು ಸಂತ ಶರಣರು । ಬಾಳಿ ಬೆಳಗಿದರು ಮುಕ್ತಿ ಮಾರ್ಗ ತೋರಿದರು ।
ಅರಸುತ್ತಲಿ ಅಂತಹವರ ನೀತಿಗಳಿಗೆ । ಜ್ಞಾನದ ಜ್ಯೋತಿ ಬೆಳಗಲೆಂದು ಆತ್ಮದೊಳಗೆ ॥
ಮಕ್ಕಾಮದೀನ ಪುಣ್ಯದ ಸ್ಥಾನ ಜಗದೊಳಗೆ । ದರ್ಶನಕ್ಕಾಗಿ ಹಂಬಲವಿರಲಿ ಮನದೊಳಗೆ ।
ಈಡೇರಿಸುವುದು ಸಾಂಬಗ ಸೇರಿದ್ದು । ಆಸೆಪಡುವುದು ಮಾನವ ಪಡೆದಿರುವುದು ।
ಆಸೆ ಈಡೇರಿಸೆನ್ನುತ ಭಗವಂತನಿಗೆ । ದುವ್ವಾ ದರುದು ಕಳಿಸುವೆ ಪ್ರಭುವಿಗೆ ॥
ತಾಯಿ ತಂದೆಯ ಪುಣ್ಯ ಗರ್ಭಸ್ಥಾನದೊಳಗೆ ಹುಟ್ಟಿ ಬಂದೆವು ಜಗದೊಳು ಹೂವಿನಂಗೆ
ಹೂವಾಗಿ ಬಾಳಬೇಕು ಹೆಸರುಳಿಸಬೇಕು । ಮುಳ್ಳಾಗಬಾರದು ಮಾನಕಳಿಯಬಾರದು ॥
ಇಂದಲ್ಲ ನಾಳೆ ಆಗುವ ಜೀವಿಗೆ । ದುಂದು ದುರಾಚಾರವಿರಬಾರದು ನಮಗೆ ॥
ಇರಲಿ ಗುರುವಿನ ದಯಾ ನನ್ನ ಮ್ಯಾಗೆ । ಅನುಗಾಲವು ಈ ಅಲ್ಪಬಾಲನಿಗೆ ।
ಊರ ಹಿರಿಯರು ಉರುಸ್ ಕಮಿಟಿಯವರು । ಪ್ರೇಮದಿಂದ ಎಲ್ಲ ಕರೆಸಿ ಕೊಂಡಿರುವರು ।
ಸಂತೋಷದಿಂದಲಿ ಸಲಾಂ ಮಾಡುತ್ತಲಿ ಅವರೀಗೆ । ಕೂಡಿದಂತ ದೈವದ ಜನರೀಗೆ ॥
ಪ್ರೀತಿಯ ಸ್ಥಾನವಿರುವುದು ನನಗೆ । ಹೊಳಲ್ ಗ್ರಾಮ ಸುತ್ತಲೂ ವಾಹಿನಾಗೆ ।
ಮಾಬುಸುಬಾನಿ ಪುಣ್ಯದ ದಾನಿ । ವಾಸವಾಗಿರುವ ಮಾಡುತ್ತ ರಕ್ಷಣೆ ।
ಆತನ ದಯ ಅನುಗಾಲವು ನನ್ನ ಮ್ಯಾಗೆ । ಇರುವುದು ಕರುಣೆಯ ಸಾಗರವಾಗೆ ।

೨

ಸುತ್ತು ಕೂಡಿರಿ ಪ್ರೀತೀಲೆ ಹತ್ತು ಜನ ಹಾಡ್ವೆವು ಮೋಜೀಲೆ ಶಿಸ್ತು ಸಂಭ್ರಮದಲ್ಲಿ
ಹುಡುಕಿ ತಗದನಿ ಪುರಾಣದಲ್ಲೆ ದೃಢ ಭಕ್ತಿಯಿಂದ ಆಗುವ ಲೀಲೆ
ಅಭಿದಾ ಎಂಬ ಹೆಣ್ಣು ಮಗಳೇ ನಮಾಜು ದೇವರೆಸರಿನಲ್ಲೇ ಮಾಡ್ವಳು ಭಕ್ತಿಯಲ್ಲೇ ॥
ನಮಾಜು ಮಾಡಿಸು ಜತೆಯಲ್ಲೇ ರಕಾತು ಕಟ್ಟಿ ನೇಮದಲ್ಲೇ ಶಾಸ್ತ್ರ ಓದುತ್ತಲೇ
ನಮಾಜು ಕೆಡಿಸುವಾತುರದಲ್ಲೇ ಇಬನಿಸ ಬಂದನು ವೇಗದಲ್ಲೇ
ಹೋಗಿ ನಿಂತು ಬಾಗಿಲಲ್ಲೇ ಯಾರು ಇರುವಿರಿ ಮನೆಯಲ್ಲೇ ಎಂದು ಕೂಗುತ್ತಲೇ ॥
ಎಷ್ಟು ಕೂಗಿದರು ಬಾಗಿಲಲ್ಲೇ ರಕಾತು ಮುರಿಯರಿಲ್ಲ ಆ ಬಾಲೇ
ಒಳಗೆ ಬಂದ ಕ್ಷಣದಲ್ಲೇ ನಿಂತ ಇಬನಿಸ ನೋಡುತ್ತಲೇ
ಮಲಗಿದ್ದ ಕೂಸು ತೊಟ್ಟಿಲದಲ್ಲೇ ಎತ್ತಿಕೊಂಡು ಬಗಲಲ್ಲೇ

ನಮಾಜು ಕೆಡಿಸುವಾತುರದಲ್ಲೇ ಎದುರಿಗೆ ಕಂಡವಲೇ ॥
ಕಂಡರು ಜುಪ್ಪೆನಲಿಲ್ಲ ಬಾಲೆ ಮಗ್ನಳಾಗಿದ್ದಳು ಭಕ್ತಿಯಲ್ಲೇ ಏಕಮನಸ್ಸಿನಲ್ಲೇ
ಇಬನಿಸಗವಮಾನ ಆದಂಗಾತಲ್ಲೇ ಕಾದ ಹಂಚ ಕಂಡ ಒಲೀಯ ಮ್ಯಾಲೆ
ಕೆಂಪಗ ಕಾದಿತ್ತ ಬೆಂಕಿಯಲೇ ಕೂಸ ಇಟ್ಟ ಆದರಲ್ಲೇ ಓಡಿದ ನಿಲ್ಲದಲೇ ॥
ಭಕ್ತಿಯಲಿ ದೃಢ ಮನಸಿದ್ದ ಮ್ಯಾಲೆ ಬೆಂಕಿಯೇನು ಮಾಡಲಾರದಲ್ಲೇ ಎಲ್ಲ ದೇವರ ಲೀಲೆ
ಶಿವನ ಕರುಣ ಕೂಸಿನ ಮ್ಯಾಲೆ ಹಂಚೀತು ಹೂವಿನಾಕೃತಿಯಲ್ಲೆ
ಕೇಕಿ ಹೊಡಿಯುತ ಲೀಲೆಯಲಿ ಆಡುತ್ತಿತ್ತು ವಿನೋದದಲಿ ಬಾಳ ಸಂತೋಷದಲಿ ॥
ನಮಾಜು ಮುಗಿಸಿ ಬಂದ ಬಾಲೆ ಕಣ್ಣಾರೆ ಕಂಡು ದೇವರ ಲೀಲೆ ಎತ್ತಿಕೊಂಡ್ಳು ಮುದ್ದೀಲೆ
ಸಾಕು ಮಾಡುವೆ ಶಾಸ್ತ್ರದ ಲೀಲೆ ಭಕ್ತಿಗೆ ಸಮ ಯಾವುದಿಲ್ಲವೆನುತಲೆ
ಕವಿಗಳು ಹುಟ್ಟುವುವು ಹೊಳಲಲ್ಲೇ ಫಕರೂದ್ದೀನನ ನುಡಿಗಳಲೇ ವಂದಿಸಿ ಶರಣರ ಲೀಲೆ ॥

೩

ಭರ್ತಿ ದೈವ ಕುರಿತು ಕೇಳಿರಿ ಮಹಬೂಬ್ ಶರಣರ ಲೀಲಾ
ಹುಟ್ಟನು ಮಹಬೂಬ ಪ್ರಭುಲಾ ಚಂದ್ರನಂತೆ ಅವರೇ ಅಕಲಾ
ಸುಂದರ ಶರಣರ ಮಹಿಮವು ತೋರುವುವು ಬಹು ಅಸಲಾ
ಚಂದವಾಗಿ ಕಾಣ್ವದು ಜನಕ್ಕೆ ಕೇಳ್ವದಕ್ಕೆ ಪೈಲಾ
ಮಹಬೂಬ್ ಶರಣರ ಕಾಲ್‌ಕೀರ್ತಿಲೆ ದೈವ ಕೇಳಿರಿ ಇನ್ನಮೇಲಾ
ಬಡವನ ಮಗ ಇದ್ದ ಮುಖಬೂಲಾ ಕೂಡಿ ಆಡ್ವ ರಾತರೀ ಹಗಲಾ
ಸತ್ಯ ರೀತಿಲಿಂದ ಆಟ ಆಡ್ವರು ಚಂಡು ಗೋಲಿ ಆಕೇಲಾ
ಮಾಬೂಬ ಶರಣರದಾಟವೇರಿತು ಮುಖಬೂಲನ ಮೇಲಾ
ಹೊತ್ತು ಮುಳುಗಿತು ಕತ್ತಲಾಗಿತು ದೈವೇ ಕೇಳರಿ ಇನ್ನಮೇಲಾ
ತಾಯಿ ಕರೆದಳು ಮುಖಬೂಲ ಊಟಕೆ ಹೊತ್ತಾದೀತಲ್ಲ
ಮಹಬೂಬಗೆ ಮುಖಬೂಲನು ಹೇಳುತ್ತಾನೋ ಆ ಕೇಲಾ
ಊಟ ಮಾಡಿ ಆಡಾನು ಸ್ವಾಮಿ ನಾಳೀನ ಹಗಲಾ
ಪ್ರೀತಿಲಿಂದ ಊಟ ಮಾಡಿ ಮಲಿಗ್ಯಾನು ಮುಖಬೂಲಾ
ಭರ್ತಿ ಆರು ತಾಸೀನ ಮ್ಯಾಲ ಮರಣ ಬಂತ್ರಿ ಅವನಿಂಬಾಲ
ಮಹಾಬೂಬರು ತೋರಿದರಾಗ ಕಂದ್ಯಗೆ ಗೊತ್ತಿಲ್ಲ
ಏಕಾಏಕಿ ಹಾರಿತು ದೈವೇ ಮುಖಬೂಲನ ಉಸಲಾ
ಆ ತಾಯಿ ಬೋರ್ಯಾಡಿ ಭೂಮಿಗೆ ಬಿದ್ದು ಹೊರಳ್ಯಾಡೆಳೆಲ್ಲಾ
ಶಿವ ಮುನಿದನೋ ನಮ್ಮ ಮೇಲ ಯಾರಿಗೆ ಕುಡಿಸಲಿ ಮಲಿ ಹಾಲ
ಬಾಯಿ ತೆರೆದು ಬಾ ಅಂತ ಯಾರಿಗೆ ಕರೀಯಲಿ ಮುಖಬೂಲ
ಬ್ರಹ್ಮ ಬರೆದ ಪಣಿಯಲ್ಲಿ ಬರಹ ಯಾರಿಗೆ ತಪ್ಪಿಲ್ಲ
ಇತ್ತ ಮಹಬೂಬ ಶರಣರಿಗೆ ಆದೀತು ಆಟದ ಕೇಲ
ಏಳೀ ಹರಿದು ಬೆಳಗದ ಮ್ಯಾಲ ಆಟಕೆ ಬರಲಿಲ್ಲ ಮುಖಬೂಲ

ದೌಡು ಮಾಡಿ ಅಲ್ಲಿಗೆ ಬಂದನು ಸತ್ತಿದ್ದು ಗೊತ್ತಿಲ್ಲ
ಮನಿಯೊಳಗೆ ನಡಿದೈತಿ ದೈವೇ ದುಃಖದ ಗದ್ದಲಾ
ಶಾಸ್ತ್ರದಂತೆ ಸರಿಮಾಡಿ ದಪಾನ ಮಾಡ್ಲಿಕ್ಹೊರಟರಲ್ಲ
ಮಹಾಬೂಬ ಅಂತಾರ ಮಖಬೂಲ ಆಟಕೊಡೊ ನಂದೊಂದು ಪೈಲಾ
ಮಹಬೂಬ ಅಂತಾರ ಮಖಬೂಲ ಆಟಕೊಡೆ ಮನದೊಂದಕಲಾ
ಶಬ್ದ ಕೇಳಿ ಎದ್ದ ಮಖಬೂಲ ಏನೇನ ಭಯವಿಲ್ಲ
ಮಸ್ತಿನ ಮಹಾಬೂಬ ಸ್ವಾಮಿ ನಿಮ್ಮದು ಆಟಕೊಡಿ ಮೊದಲ
ಇಬ್ರಾಳು ಗೆಳೆಯರು ಪ್ರೀತೀಲಿಂದ ಆಟ ಆಡೆರಲ್ಲ
ಏರಿದಾಟ ಇಳಿದೀತಲ್ಲ ಏನೇನು ಕಸರುಳಿಯಲಿಲ್ಲ
ಸಲಾಮು ಕೊಟ್ಟು ಸ್ವರಗಕೆ ಹೊರಟು ಹೋದನು ಮಖಬೂಲ
ಹಾಯ್ ಹಾಯ್ ಅಯಸ್ಕತ್ತದ ಮಹ್ಮದ ರಸಲುಲ್ಲಾ
ಸಾಕು ಮಾಡ್ವೆ ಶಾಸ್ತ್ರದ ಅಮಲ ಬರಿಯಲಿಕ್ಕೆ ಶಕ್ತೇನಲ್ಲ
ಧರೆಯೋಳು ತಿಳುವಳ್ಳಿ ಐತ ಪೀರನ ದಯದಿಂದ ಸಣ್ಣ ಬಾಲರು ಸಾರುವೆವು ಶರಣರ ಲೀಲ.

೬

ಕುಂತು ಕೇಳ್ರಿ ಸಂತೋಷದಲ್ಲಿ ಗುಲ್ಲವ ಮಾಡದಲೇ
ಜನಾ ನೀವು ಕುಂತೀರಲ್ಲಿ ಕುಂತು ಕೇಳ್ರಿ ಸಂತೋಷದಲಿ
ಪತಿವಾಕ್ಯದಂತೆ ತಪ್ಪದೆ ನಡೆಯುವವಳೆ ಪತಿವ್ರತೆ ಬಾಲೆ
ಹುಮನಾಬಾದಿ ಪಟ್ಟಣದಲ್ಲಿ ಗಂಡಹೆಂಡರಲ್ಲಿ
ಇದ್ದರು ಒಳ್ಳೇ ಪ್ರೀತಿಯಲಿ ಇದ್ದರು ಒಳ್ಳೇ ನಿಷ್ಠೆಯಲಿ
ಗಂಡನಾಜ್ಞೆ ಎಷ್ಟು ಮೀರದೆ ನಡೆಯುತ್ತಿದ್ದಳಾ ಬಾಲೆ
ಸೇದು ಬಾವಿ ಇದ್ದಾರೊಂದು ಅವರ ಹಿತ್ತಲಲ್ಲೆ
ಹೆಂಡತಿ ನೀರ ಜಗ್ಗುತಲಿ ಗಂಡ ನಿಂತಿದ್ದ ನೋಡುತಲಿ
ಪತಿವ್ರತಾ ಧರ್ಮ ಇರುವುದು ನೋಡು ಬಾಲೆಯಲಿ
ಅರ್ಧ ಬಾವೀಗೆ ಕೊಡ ಜಗ್ಗುತಲಿ ನಿಂತದ್ದ ನೋಡುತಲಿ
ಗಂಡ ನೋಡುವಷ್ಟರಲ್ಲಿ ಹೆಂಡತಿಗೆ ಕರೆದನು ಬಾ ಇಲ್ಲಿ
ತಡಮಾಡದೆ ಗಡಾ ಬರುಬೇಕು ಜರೂರೈತಿ ಮನೆಯಲ್ಲಿ
ಇಷ್ಟು ಕೇಳಿ ಝಟ್ಟನೆ ಬಾಲೆ ಕೊಡ್ಕ ಬಿಟ್ಕಳಲ್ಲೆ
ಕೊಡಾ ನಿಂತಿತು ನಿಂತಲ್ಲೆ ಪತಿವ್ರತಾವ ಸಲುವುತಲಿ
ಪ್ರತಿವ್ರತಾನ ಹೆಚ್ಚಿಂದು ಸುಟ್ಟರು ಸುಡಲಿಲ್ಲ ಬೆಂಕಿಯಲಿ
ಸತಿಯಿಂದ ಸದ್ಗತಿ ಹೊಂದುವರು ಹೇಳ್ವರು ಆದಿಯಲಿ
ಇಡಗೋಡು ಗ್ರಾಮದಲಿ ಕವಿ ಹುಟ್ಟುವರು ಪ್ರೇಮದಲಿ
ಮಾಬುಸುಬಾನಿ ದಯಾ ಸಂಪೂರ್ಣ ನಮ್ಮೇಲಿರಲಿ ನಿಮ್ಮೇಲಿರಲಿ.

೨೫

ಪೈಗಂಬರರು ಭೂಲೋಕದಿ ನಡೆಸ್ಯಾರು ಸತ್ಯವಚನವನ
ಏ ಏಕನಿಷ್ಠೆ ಶರಣರ ವಚನ ಕಂತು ಕೇಳರಿ ಸಾವು ಜನ
ಅಸಲ್ ಬಯಾನಿದು ಕುಶಬರಿ ಕೇಳರಿ ಕುಂತರ ಶೀಖರ ಜನ
ಮಸೂತಿಯೊಳಗೆ ನಬೀಸಾಹೇಬ ಶರಣರು ಕುಳಿತಿದ್ದರೊಂದೀನ
ಶರಣರಿಗಿನ್ನು ಆ ಶಿವ ಕೇಳ್ರಿ ಆ ದಿನ ನೋಡಿದ ಭಕ್ತಿಯನ
ಆಗ ಕರೆಸಿ ಯಮದೂತರನ ಜುಬರಾ ಇಲ್ಲ ಇದರ ಹೀಲರನ
ಜುಬರಾ ಇಲ್ಲ ಆಗ ತಳ್ಳಿಬಿಟ್ಟಾನು ಆದಾನು ಗರುಡನ
ಇದುರಾ ಹೀಲ ತಾಳಿಬಿಟ್ಟ ಪಾರಿವಾಳ ಪಕ್ಷಿಯ ರೂಪವನ
ಭೂಲೋಕವನ ಹೊಕ್ಕರು ದೂತರು ಬಿಟ್ಟು ಕೈಲಾಸವನ
ಏ ಗಿಡಗ ಹತ್ತಿ ಪಾರಿವಾಳ್ವ ಬೆನ್ನ ಕೆಂಪಗ ಮಾಡಿ ಎರಡು ಕಣ್ಣ
ಮಸೂತಿಯಲ್ಲಿ ಕುಳಿತಿದ್ರು ಪೈಗಂಬರರು ಹೋಗಿ ಬಿತ್ತು ಅವುರ ಬೆನ್ನ
ಪಾರಿವಾಳನ್ನ ಕೈಯಲ್ಲಿ ಹಿಡಿದು ಮಾಡ್ಯಾನು ಮಜೂರಿಯನ
ಆ ಕ್ಷಣದಲ್ಲಿ ಬಂದಿತ್ತರಿ ಗಿಡಗ ಕೆಂಪಗ ಮಾಡಿ ಎರಡು ಕಣ್ಣ
ಏ ಶರಣ ಕೇಳ್ಯಾರು ಸಮಾಧಾನ ಕೊಲ್ಲಬ್ಯಾಡ ಈ ಪಾರಿವಾಳನ
ಪಾಪ ಬರುವುದು ಮಾಪ ಮಾಡಿರೆಂದೇಳಿದಾರು ನಬೀಶರಣ
ಕೇಳಿ ಗಿಡಗ ಹಿಡಿದಿತ್ತು ಕತ್ತೀನ ಶರಣರೀಗಾ ದಿನ
ಕರುಣದಿಂದ ನಾ ಅಟ್ಟಿತಂದಿನಿ ಬಿಟ್ಟು ಬಿಡರಿ ಇದನ
ಏ ಹೊಟ್ಟೆಗಿಲ್ಲರಿ ಅನ್ನವನ ಸ್ವಾಮಿ ಆತರಿ ಮೂರು ದಿನ
ಕಷ್ಟದಂತೆ ಅವುರು ಕೊಟ್ಟ ವಚನಕೆ ಕೈಯೊಳಿಡಿದು ಚೂರಿಯನ
ಎತ್ತಾರು ಕೈಯ ಕೊಯ್ಯಾಕ ಶರಣರು ಏಕನಿಷ್ಠಿವಾನ
ಶರಣರ ಭಕ್ತೀಗೆ ಮೆಚ್ಚಿದ ಗಿಡಗವು ಹಿಡಿದೀತು ಚೂರಿಯನ
ಏ ಹೀಗೆ ಇರುವುದು ಶಿವಧ್ಯಾನ ಭಕ್ತಿಗಿಲ್ಲರಿ ಭಯವೇನ
ಸ್ವಾಮಿ ಕೊಯ್ದು ನಿಮ್ಮ ತುಟೀಯನಾ ಕೊಟ್ಟರೆ ತುಂಬುವುದು ಹೊಟ್ಟೆಯನ
ಕಷ್ಟದಂತೆ ಅವುರು ಕೊಟ್ಟ ವಚನಕ್ಕೆ ಕೈಯಲಿಡಿದು ಚೂರಿಯನ
ಕೊಯ್ಯಕ ಶರಣರು ಕೈಯ ಎತ್ಯಾರು ಆಗ ಏಕನಿಷ್ಠಿವಾನ
ಶರಣರ ಭಕ್ತಿಗೆ ಮೆಚ್ಚಿದ ಗಿಡುಗವು ಹಿಡದೀತು ಚೂರಿಯನ
ಏ ಹೀಗೆ ಇರುವುದು ಶಿವಧ್ಯಾನ ಭಕ್ತಿ ಗಿಲ್ಲರಿ ಭಯವೇನ
ಹಸ್ತವಿಟ್ಟು ಕೈಲಾಸಕೆ ಹೋದರು ಬಿಟ್ಟು ಈ ಭೂಲೋಕವನ
ಸೃಷ್ಟಿಯೊಳು ಶ್ರೀಕರ್ತನ ಧ್ಯಾನ ಮಾಡಿರಿ ಅನುದಿನ
ವಸತಿಯೊಳು ಹೊಳಲ್‌ಪ್ಯಾಟಿ ಕವಿಗಳು ಹೊಳೆದಂಗ ಸವರನ್ನ
ಹಾಸ ಖಾಸಿಂಸಾಬರು ಪಾಸು ಮಾಡಿದ ಕವಿ ದೇಶಕೆಲ್ಲ ವಾಹೀನ
ತ್ರಾಸೀನಲ್ಲಿ ತೂಗಿದಂಗ ಆಯ್ತರಿ ಹಚ್ಚಿ ಸಕ್ಕರಿಯನ

೬

ಬಯಾನ್ ಕೇಳರಿ ದೈವೆಲ್ಲ ಮಾಡಬಾರ‍್ದು ಗುಲ್ಲ
ಉತ್ತರದೇಶದ ಅರಸ ಸತ್ಯವಂತರು ಖಾಸ
ಬಗದಾದ ಪಟ್ಟಣದ ಸ್ಥಳ ಆಳುವರಲ್ಲಾ
ಚಿಕ್ಕ ಪ್ರಾಯದಲಿ ಮಾಬೂಬ ಶರಣ
ಗುಂಡುಗೋಲಿಗಳನಾಡುವ ಜಾಣ
ಅವರಾ ವರುಣ ಚಂದ್ರನ ಕಿರುಣ
ಚಲ್ವಿಕಿ ವೋಲ್ವಿಕಿ ಬಾಲಾನ ರೂಪ
ಥಳಾಥಲಾ ಹೊಳೆವ ತುಟಿಗಲ್ಲಾ ನೋಡರಿ ಖಿಲ್ಲಾ
ಒಬ್ಬ ಬಾಲೆ ಕಂಡು ನಿರ್ಮಲ ಮರುಳಾದಳಲ್ಲಾ
ಮಾಬೂಬ ಸುಬಾನಿ ಮನೀಗೆ ಬರಬೇಕು ದಾನಿ
ಅಡುಗೆ ಮಾಡಿವೀ ದಿನ ಮೌಲ ಉಣಸುವೇನಲ್ಲ
ಕರಕಂಡು ಹೋಗಿ ತನ್ನ ಮನೀಗೆ ಬಾಲೆ
ಶ್ರೇಷ್ಠ ಶರಣರಿಗೆ ಮಾಡುವಳು ನಕಲಿ
ಮಂಚಾದ ಮ್ಯಾಲೆ ಹೂವೀನ ಮಾಲೆ
ವಿಸ್ತಾರ ತಯ್ಯಾರ ಶೃಂಗಾರ ಮಾಲೆ
ಕೈಯಾಕಿ ಶರಣರ ಮೇಲ ಎಳಿಯುವಳಲ್ಲ
ಗಾಬರಿಯಾದರು ಗುಣಶೀಲ ಹೇಳುವನಲ್ಲ
ಇಂಥ ಪಾಪದ ಕೆಲಸ ಮಾಡಬಾರದು ಮನಸ
ದೃಢ ಭಕ್ತಿಯನಿಡು ನನಮೇಲ ಕೆಡಹುವನಲ್ಲ
ಬಾಲೆ ಹೇಳುವಳು ಕೇಳರಿ ಸ್ಪಷ್ಟ ಪ್ರೀತಿಲಿಂದ ಮಾಡುವಳು ಆಟ
ಮಾಬೂಬ ಬಂದ ಮನೀಗೆ ಇಂದ
ಎಳೀದ ಆಳೀದ ಕಳೀದ ಮಾನ ಬೇಡಿಕೊಂಡರೆ ದಯಾ ಬರಲಿಲ್ಲ
ಕೆಡಸುವನಲ್ಲ ಗಂಡ ಹೇಳಿದ್ದು ಕಂಡು ಈ ಮೂಲ ತಿಳುಕೊಂಡನಲ್ಲ
ಸತ್ಯ ಶರಣರ ವಂಶ ಹಿಡಿಯಲಾರೆನು ಸಂಶ
ಮನದೊಳು ಸ್ತ್ರೀಯರ ಜಾಲ ಕೆಟ್ಟದ್ದು ಅಕಲ
ದೈವ ಕೇಳರಿ ಸ್ವಲ್ಪ ಹೆಣ್ಣೀನ ತಾರೀಪ
ಕೆಟ್ಟ ಕೆಲಸ ಮಾಡಿದಿ ಹೊಯ್‌ಮಾಲಿ
ಶ್ರೇಷ್ಠ ಶರಣರಿಗೆ ಹಚ್ಚಿದಿ ನಕಲಿ
ಇರುಬ್ಯಾಡ ಇಲ್ಲಿ ನನ್ನ ಮನಿಯಲ್ಲಿ
ಆತುರ ಚತುರ ಸರ್ವರಿಗೆ ತಿಳಸಿ
ಹಚ್ಚಿ ಹೊಡದ ಹೊಸ ಬಾರ್ಕೋಲ ಓಡುವಳಲ್ಲ
ಶವರೂರಿಗೆ ಹೋದಳು ತತ್ಕಾಲ ನೋಡರಿ ಮೊದಲ
ಹೋಗಿ ಕೇಳುವರು ಪ್ರಶ್ನೀ ಹೇಳುವರು ಮಹಬೂಬರ ಕಾಟ

ಬಾಲಿಯ ತಲಿಯೊಳಗ ಹುಣ್ಣು ಹುಟ್ಟಿತು ಆಗ
ಹುಳ ಬಿದ್ದು ಬಳಲುವಳಲ್ಲ ರಾತರೀ ಹಗಲಾ
ಬಗದಾದ ಗ್ರಾಮಕ್ಕೆ ಬಂದು ಬಿದ್ದಳು ನೆಲಕೆ
ಹಿಡಕೊಂಡಳು ಶರಣರ ಕಾಲ ಹೊರಳುವಳಲ್ಲ
ನನ್ನ ತಪ್ಪು ಕ್ಷಮಿಸು ಸುಬಾನಿ
ಮಹಾಬೂಬರೇಳ್ವರು ಗಂಡನ ಮನಿ
ಬಿಡಬ್ಯಾಡ ನೀನು ಬಡಿವೇನು ನಾನು
ಆದರ ಪರಿಹಾರ ಹೊಳಲು ಗ್ರಾಮ
ಚಿಕ್ಕ ಮಸೂತಿ ಶರಣರ ಮೇಲ ಹೂವಿನ ಮಾಲ.

೭

ದೈವೇ ಎಲ್ಲ ಮಾಡಬಾರದು ಗುಲ್ಲ ಕೈಮುಗಿವೆನು ಬಾಲ
ಬಂದು ಕೂತಿರಿ ದೈವೆಲ್ಲ ಯೂನಸ ಪೈಗಂಬರ ಲೀಲ
ಶರಣರಿಗೆ ಕೆಲವು ದಿನ ಬುದ್ಧಿ ಏನೂ ಇದ್ದಿಲ್ಲ
ಯಹೂದಿ ಕೆಲಸ ಮಾಡಲಿಕ್ಕೆ ಶರಣರು ಪಕ್ಕ ಹಿಡಿದರಲ್ಲ
ಹಗಲೆಲ್ಲ ಮರ್ತಾರು ಶರಣರು ಬಾಯಲಿ ಬಿಸಮಿಲ್ಲ
ಏ ಹೀಗೆ ಇರುತ ಕೆಲದಿನ ಮೇಲ ಶನಿ ಹರಿಯದು ಬಂತಲ್ಲ
ಮಹಮದ್ ಪೈಗಂಬರು ಇದ್ದರು ನೋಡ್ಯಾರು ಶಿವಲೋಲ
ಯೂನಸ್ ಪೈಗಂಬರಿಗೆ ಮಹ್ಮದ್ ಪೈಗಂಬರು ಬುದ್ಧಿ ಹೇಳೆರಲ್ಲ
ಯಹೂದಿ ಕೆಲಸ ಮಾಡಿದರ ನಿಮಗ ಸ್ವರ್ಗ ಸಿಗೋದುಲ್ಲ
ಏ ರಾಜಪಿಂಡ ಮೊದಲೇ ಮಿಗಿಲ ಮಾತಿಗೆ ಒಪ್ಯಾರು ತಾತ್ಕಾಲ
ಯೂನಸ್ ಪೈಗಂಬರು ಎಲ್ಲಿಗೆ ಒಂದಿನ ಪಯಣ ಹೊರಟರಲ್ಲ
ಏ ಅವರು ಹೋದ ಮಾರ್ಗದ ಮೇಲ ಸಮುದ್ರ ಎದುರಿಗೆ ಬಂತಲ್ಲ
ಜನಗಳು ಮತ್ತು ಶರಣರು ಹತ್ಯಾರು ದೋಣಿಯ ಮೊದಲ
ಅಂಬಿಗರಣ್ಣ ಹಾಕ್ಯಾನು ದೋಣಿ ಮುಂದೆ ಸಾಗಲಿಲ್ಲ
ಅಂಬಿಗರಣ್ಣ ಕೇಳ್ತಾನೆ ನಿಂತು ಕುಂತ ಜನಾಕೆಲ್ಲ
ಏ ದೊಕಿಣಿಯೊಳಗಿನ ಜನರೆಲ್ಲ ಕರೆವೇಳರಿ ತಪಶೀಲ
ಪಾಪ ಇದ್ದವರು ನನ್ನ ದೋಣಿಯೊಳು ಕೂಡ್ರದು ತರವಲ್ಲ
ಅಂದಾಕ್ಷಣಕೆ ಯೂನಸ್ ಪೈಗಂಬರು ಮೊದಲು ತಿಳಿಸರಲ್ಲ
ಅಂಬಿಗಬಾಲ ಪಾಪ ಐತೆ ತಮ್ಮ ನನ್ನ ತಲಿಯ ಮೇಲ
ಅಂಬಿಗ ಕೇಳಿದ ತಾತ್ಕಾಲ ಶರಣರಿಗೊಗೆದ ನೀರಿನ ಮೇಲ
ದೋಣಿ ಸಾಗಿತು ಮೀನು ಬಂದಿತು ಶರಣರ ಹಿಂಬಾಲ
ಶರಣರಿಗೆ ನುಂಗೀತು ಮೀನು ಬಿಡದೆ ಆ ಕಾಲ
ಶರಣರನು ನುಂಗಲು ಮೀನಿಗೆ ಬಂದಿತು ಬಡಿಗಲ್ಲ
ಏ ಹತ್ತು ಇಪ್ಪತ್ತು ದಿನಗಳ ಮೇಲ ಅದರ ಹೊಟ್ಟೆ ಕರಗಲಿಲ್ಲ

ಮೀನಿನ ಹೊಟ್ಟಿಗಿಟ್ಟಂಗಾತ್ರಿ ನೂರು ಮಣದ ವಜೀಕಲ್ಲ
ಮೀನು ಎತ್ತಿ ಬಾಯಿ ಬಿಡತೈತಿ ಸ್ವಾಮಿ ಏನು ತಂದೆ ಕಾಲ
ಮೀನಿನ ಡೌಲ ಏನಿಲ್ಲರಿ ತೆರೆದ ಬಾಯಿ ಮುಚ್ಚೇ ಇಲ್ಲ
ಏ ಸಾಂಬನ ಭಜನೆ ಹಗಲೆಲ್ಲ ಮಾಡುತ ಕುಂತನು ಭೂಪಾಲ
ಹೀಗೆ ಇರುತ ಕೆಲದಿನ ಸೆಂದವು ಕೇಳರಿ ಇನ್ನಮೇಲ
ಬಾದೆ ತಾಳಲಾರದೆ ಕಕ್ಕೀತು ಮೀನು ನಲವತ್ತು ದಿನದ ಮೇಲ
ಮೀನು ಕಾಲ ಹಿಡಕೊಂಡು ಶರಣರಿಗೆ ಬೇಡಿಕೊಂಡಿತಲ್ಲ
ಏ ಶರಣರು ನೋಡ್ಯಾರು ಆಮ್ಯಾಲ ಮೀನಿಗೆ ಅನಿಸ್ಯಾರು ಬಿಸಮಿಲ್ಲ
ನೀನು ಮಹ್ಮದೀ ಕಲ್ಮ ಓದಿದ್ರೆ ಇದು ಏನು ಸುಳ್ಳಲ್ಲ
ಅಲ್ಲಿಂದ ಶರಣರು ಬಂದು ಸೇರ್‍ಯಾರು ಮನಿತನದ ಮೇಲ
ಹಗಲೆಲ್ಲ ನಮ್ಮ ನೇಮ ಇರುವುದು ಬಾಯಲಿ ಬಿಸಮಿಲ್ಲ
ಏ ಸಾಕು ಮಾಡ್ರಿ ಶಾಸ್ತ್ರಾದ ಆಮಲ ಬರಿಯಲಿಕ್ಕೆ ಶಕ್ತೇನಲ್ಲ

೮

ಸಭೈ ಸೊಸೇರಾರು ಕೇಳಾರಿ ದೈವೆ ಹೊಸಾದೈತಿ ಮಾತು
ಏ ಬಸವ ಪುರಾಣದೊಳಗಿನ ಮಾತು ಪುಣ್ಯವಂತರು ಕೇಳಬೇಕು ಕುಂತು
ಅಹಲ್ಯದೇವಿಗು ಗೌತಮ ಋಷಿಗು ಲಗ್ನವಾದ ಮಾತು
ಮೂವರೊಳು ವ್ಯಾಜ್ಯ ಬಹಳವಿತ್ತು
ಅಹಲ್ಯದೇವಿ ನಿದ್ರಿಯ ಟೈಮಿಗೆ ದೇವೇಂದ್ರನು ಸ್ವಂತು
ಅಹಲ್ಯದೇವಿ ಪತಿವ್ರತ ಕೆಟ್ಟಿತು ಗೌತಮ ಋಷಿಗೆ ತಿಳಿದಿಲೇ ಮಾತು
ಋಷಿ ಶಾಪದಿಂದ ದೇವೇಂದ್ರನ ಮೈತುಂಬ ಯೋನಿಯಾಗಿ ಬಿಡ್ತು
ಹೆಂಡತಿ ಕಲ್ಲು ಆಗಿಬಿಡ್ತು ಮಗಳಿನ ಎರಡು ಕಣ್ಣು ಹೋತು
ಅಹಲ್ಯೆದೇವಿ ಪವಿವ್ರತಾ ಕೆಟ್ಟಿತು ಪರಮಾತ್ಮನಿಗೊತ್ತು
ಅಹಲ್ಯೆದೇವಿ ಪತಿವ್ರತಾವು ಸ್ವಂತು ಸರಿಯಾಗಿ ಕಲಿಯೊಳು ಬಂದಂತ ಗುರ್ತು
ಶಾಣೆ ಶಾಹಿರಾ ತೋರ್‍ಸಿ ಕೊಡಪ ಮೂರು ದಿನ ಮುದ್ದತ್ತು
ಬಂದ್ರೆ ಯಾವ ಯೋಗ ಇತ್ತು
ಹಮ್ಮಿನಿಂದ ಹರಿಬ್ರಹ್ಮ ಕೆಟ್ಟುದಾರೆ ಮನಸ್ಸಿಗಿರ್ಲಿ ಗುರ್ತು
ಏ ಕೋತಿಯಂತೆ ಹಾರಾಡುತ ನಿಂತು ಸನ್ನುತ ಬರಬೇಕು ಸಭೆಯೊಳು ಸ್ವಂತು
ಶಿಶುನಾಳಾಧೀಶನ ಕರುಣದಿ ಇಡಗೋಡು ಬೆಳಕಿಗೆ ಬಂತು
ತಿಳಿಯದೆ ಹಾಡ್ತಿಏ ಗುರುವಿಗೆ ಮರ್ತು

೯

ತೆಗಿ ನಿಂದಲ್ಲ ಸವಾಲು ಹಾಡೋ ರೀತಿಯು ಹಂಗಲ್ಲ
ಗುರುವಿನತ್ತಿರ ಕಲ್ತು ಶಾಹಿರ ಅನುಭವ ನೀನು ಪಡುದೇ ಇಲ್ಲ

ನಿನಿಗೊಂದು ಅರ್ಥ ಕೇಳ್ತಿನಿ ತೋಡಿ ಹೇಳುವಂತೆ ಆಮೇಲ
ಪಕ್ಷಿಯ ಲೀಲ ಕೇಳ್ತೇನಲ್ಲ ಮುಸಣಿ ತಮ್ಮ ಹಾಕ್ಬೇಡ ಜೋಲ
ಮೂರು ತರದ ಬಣ್ಣಗಳಿರುವುವು ಪಕ್ಷಿಯ ಮೈಮೇಲ
ಪಕ್ಷಿ ಕೂತರೆ ಒಂಟಿಯಾಕಾರದಂಗ ಕಾಣ್ವದು ನೋಡಪ ಡೌಲ
ಮುಖ ನೋಡಿದರ ಕುದುರಿ ಆಕಾರದಂಗ ಕಾಣುವುದಲ್ಲ
ಅದೇ ಪಕ್ಷಿಯ ತಲಿಯ ಮೇಲೆ ಸಿಖಾ ಬಿಡಸಿತ್ತು ನೋಡಪ ಡೌಲ
ಹುಟ್ಟಿಡ ಆರು ತಿಂಗಳಿಗೆ ಪಕ್ಷಿ ಮರಣ ಆಗುವುದಲ್ಲ
ಯಾವ ಪಕ್ಷಿಯು ಇರುವುದಲ್ಲ ಶಾಹಿರ ತೋಡಿ ಹೇಳಪ ಮೊದಲ
ದಿಕ್ಕು ದಿಸೆಗೆ ಕಬ್ಬಾರ ಕವಿಗಳು ಹೀಗೆ ಮೆರೆವರಲ್ಲ
ಶಾಹೀರಾದರೆ ಇದರಾ ತೋಡೆ ಜಲ್ದೀ ಹೇಳಬೇಕಲ್ಲ.

# ಲಾವಣಿಗಳು

## ೧

ಕಲಿಯುಕ ಕೆಟ್ಟಿತು ನೆಲಿಯ ಉಳಿಯಲಿಲ್ಲ ಚೂರ ಸಲಿಗೆ ಮಾಡುವಂತ ಜಗವಾಯ್ತು ಪುರ । ಮೂಲ ಹೆಣ್ಣು ಗಂಡಿನೊಳು ಶೀಲ ಉಳಿಯಲಿಲ್ಲ ಚೂರ ಬಾಳು ಮಾಡುವುದು ಮುಂದೆ ಬಂತೋ ಘೋರ। ಹಸುರು ಬಳಿ ಸ್ತ್ರೀಯರೆಲ್ಲ ಹಸುರು ಕಾಣದೋದರಣ್ಣ ಉಸುರ ಹಾಕುವನು ನಮ್ಮ ದೇಶದ ಬಳಿಗಾರ । ಹೇಸಿ ಹುಳುಗಳಂತೆ ಬಳಿ ಪಾಸ್‌ಮಾಡಿ ಉಡುವರು ದೇಶ ಹಾಳ ಆಗುವುದು ಇಲ್ಲ ಕಬುರ । ಬಳಿ ಇಡುವ ರೀತಿಯನ್ನ ನೆನಪು ಮಾಡಿಕೊಡತೀನಿ ಎರಡುಕ್ಕೆಚ್ಚೆ ಇರುವುದಿಲ್ಲ ಕೈಯಲ್ಲಿ ಬಳಿ ಮತ್ತೆ ಸೈಲ ಬೇಕು ಒಳ್ಳೇ ಚಾಳಿ ಕಲಿತಾಯ್ತು ಗಂಡಸ್ರಂಗೆ ಕಾಣ್ತ ರಿವುರು ದಾಳಿ ಒಡಿಯಲಿ

*ಸೈ ಹೇಳ್ವೆ ಕಲಿಕಿ ಅವತಾರ*
*ಬೈಬ್ಯಾಡ್ರಿ ಕುಂತ ಹಿರಿಯೋರ*
*ನವೀನಾಗಿ ಬಂತು ವೈಯಾರ*
*ಕೈ ಬೀಸುತಾರ ಮಾರು ದೂರ*

ನೀಲಿ ಕಪ್ಪಿನ ಸೀರೆ ಬಿಟ್ರು ಚಲೋ ರೇಷ್ಮೆ ಕುಸುಬ ಮರತ್ರು ಬಾಂಡು ಮತ್ತು ಚೀಟುಗಳಿಗೆ ಮರುಳಾಗ್ಯಾರ.

ಮೂಲದೇಶಿ ಸೀರಿ ಬಿಟ್ಟು ಗೋಳ್‌ಕುಂತು ಕೂಳ್ ಕಾಣದೋದ್ರು ನಮ್ಮ ದೇಶದ ನೇಯ್ಗಾರ ಗಿರಣಿ ಸೀರೆ ಅಂಚಿನ ಚೀಟು ಕಾಲಹರಣಕ್ಕಾದವಣ್ಣ ಕುಬುಸ ಹೋಲ್ಸಾದೇಳಲಾರೆ ನಾನ್ಯೆತರ ದಡ್ಡ ಜನರಲ್ರಿ ಅಣ್ಣ ದೊಡ್ಡ ಜನುರು ಹೋಲ್ಸುತಾರೆ ಆಚಾರ ಹೇಳೋರು ಮಾಡುತಾರೆ ಇಂತ ವಿಚಾರ ಜಂಪರಂತ್ರೀ ಅಣ್ಣ ಅವು ತೋಳು ಮುಂಚೆ ಮಾಯವಾದ್ವು ಭುಜುತಂಕ ಕೈತಿರಿವಿ ತೋರುವರು ಬಂದೂರಾದ ದೇಶದ್ ಸೀರಿ ಮಾಯವಾಗಿ ಹೋದುವಣ್ಣ ಚಂದವಾದ ಪತ್ಲಕಂಬಿ ಬಾಂಡು ಉಡುವರು ಆರು ಪದ್ರೀಲುಟ್ಟುತಾನೆ ಮೈಯೆಲ್ಲ ಕಾಣುವದು ಮೂರು ತಿಂಗಳಿಗೊಂದರಂತೆ ಹರಿಯುವರು.

*ಅಡ್ಡಡ್ಡ ಬೈತಲೆಯ ಸೋಕಿ*
*ಗಂಡುಸರ್ದು ಇಲ್ರೀ ಹೆದರೀಕಿ*
*ಗಂಡುಸ್ರತ್ತೊ ಸೈಕಲ್ಮ್ಯಾಲೆ ಕೆಣಕಿ*
*ಕುಂಡಿ ಊರಿ ಕುಂದ್ರುತಾರೆ ತಿಣುಕಿ*

ಇಂತ ಚೈನೀತನದಿಂದ ಸಂಪತ್ತೆಲ್ಲ ಹಾಳಾದ್ರೂ ಬುದ್ಧಿ ತರವಲ್ರು ನಮ್ಮ ದೇಶದ ಜನರು
ಇಂತ ಮೋಹದೊಳು ಬಿದ್ದು ವ್ಯರ್ಥ ಸಾಯುವರೆಂದು ತಿಳಿದು ಚಿಂತಿ ಮಾಡುವರು
ಮಹಾತ್ಮಾ ಗಾಂಧಿಯವರು

೨

ಕಳ್ಳಬೆಳ್ಳಿ ಮಾತಲ್ಲ ಒಳ್ಳೆ ಒಳ್ಳೆ ಜನ ಕೇಳ್ರಿ ತರಿಯಂಥ ದಂದೆ ಬಿಟ್ಟು ಹೋಟ್ಳಡ್ತಾರ
ಬೆಳಗ ಮುಂಜೇಲೆದ್ದು ಸುಳ್ಳೆ ಶೇಂಗ ಎಣ್ಣೆಯೊಳಗ ಕರ್ದು ತುಪ್ಪದೋಸಿಯಂತ ಗಟ್ಟಿ ಗದ್ಲ ಮಾಡ್ತಾರ
ಗುದ್ಲಿ ಹೊತ್ತ ರೈತರೆಲ್ಲ ತುಪ್ಪದ್ ದ್ವಾಸಿ ಅಂದಕೂಡ್ಲ ಬಾಯೊಳಗ ಜುಳು ಜುಳು ನೀರು ತರ್ತಾರ
ಎದ್ದ ಕೂಡ್ಲ ಮನೀ ಹೆಂಡ್ರು ತುಪ್ಪಹಚ್ಚಿ ರೊಟ್ಟಿ ಕೊಟ್ರ ಮನಸಪೂರ್ತಿ ಹೋಟ್ಲ ಕಡಿಗೆ ನಡದುಬಿಡ್ತಾರ
ಸೊಂಟದೊಳಗಿನ ಗಂಟುಬಿಚ್ಚಿ ಆರು ಕಾಸಿಗೊಂದರಂತೆ ಮೂರು ಗುಕ್ಕಿಗಾರು ದ್ವಾಸೆ ನುಂಗಿ ಬಿಡ್ತಾರ
ಹಸ್ಗಪಿಸ್ಗ ದ್ವಾಸಿ ತಿಂದು ಮ್ಯಾಲ್ ಸಿಂಗಲ್ ಚಾ ಕುಡ್ದು ಹೊಟ್ಟೆಕೆಟ್ಟು ಆಳ್ಕ ಪಿಳ್ಕ ಹೇತಗಂತಾರ
ಹಬ್ಬಹುಣವಿ ನಿಬ್ಬಣ ತೇರು ಹುಗ್ಗಿ ಹೋಳ್ಗಿ ಉಣ್ಣುವಾಗ ಬಗ್ಗಿ ಹೊರಗೆ ಬಂದು ಚಾ ನೆನಿಸಿಬಿಡ್ತಾರೆ
ಸಭ್ಯ ರೀತೀಲಿಂದ ಕೇಳ್ರಿ ಗೊಬ್ಬರದಂಥ ಚಾ ನೆನ್ಸಿ ಅಮೃತದಂತ ಅಡಿಗೆ ಅರ್ಧ ಹೊಟ್ಟೆ ಉಣ್ತಾರ
ಕುಂದ್ರಲಿಕ್ಕೆ ಕುರ್ಚ ಏಸ್ಸು ಕಪ್ಪು ಬಸಿ ಕುಡಿಯಕಾತು ಮೂರು ತಿಂಗಳೊಳ್ಗೆ ರೊಕ್ಕ ಹಾಳು ಮಾಡ್ತಾರೆ
ಬಡ್ಡಿ ದುಡ್ಡು ಎಲ್ಲ ಹೋಯ್ತು ದ್ವಾಸಿ ಲೆಕ್ಕ ಇಲ್ಲದಾಯ್ತು ಕಾರ ತಿಂದು ಚಾ ಕುಡ್ದು ಉದ್ರಿ ಹೇಳ್ತಾರ
ಖಾತ್ರಿ ಇದ್ರ ಹೋಟಲ್ನೋರು ಖಾತೆದೊಳು ಬರೀತಾರ ಇಲ್ಲದಿದ್ರೆ ಮಂದಿಯೊಳಗೆ ಬಯ್ದೆ ಬಿಡ್ತಾರ
ಕುಂತ ಮಂದಿಯೊಳಗೆ ಮಾನ ಹಾನಿಯಾದ್ರು ನಾಚಿಕಿಲ್ಲ ಹಲ್ಲುಕಿಸ್ತು ನಾಳೆ ಕೊಡ್ತೀನಂತ ಹೇಳಿಬಿಡ್ತಾರ
ಹಣಹೋಯ್ತು ಗುಣಹೋಯ್ತು ಕೂಳ್‌ಕಟ್ಟಿ ತ್ರಾಣಹೋಯ್ತು ರೋಗ ಬಂದರಂತೆ ಜನ ಸೊರಗಿಬಿಡ್ತಾರ
ತಣ್ಣಂದಾದ್ರು ಮುಟ್ಟಕಿಲ್ಲ ಕೆಟ್ಟ ಸುಡೋ ಚಾ ಕುಡ್ದು ತಿಂದು ಕರಗಿ ಗಂಡಸ್ತನ ಕಳ್ಕಂಬುಡ್ತಾರ
ಸಿಟ್ಟು ಹಿಡಿಯಬ್ಯಾಡ್ರಿ ಹೊಳ್ಳ ಗುಟ್ಟು ನಾನು ಹೇಳತೇನಿ ಮುನಿಯಂದ್ರ ಮನಸಿನೊಳಗ ಬ್ಯಾಸತ್ ಬಿಡ್ತಾರ
ಕಟ್ಟಕಡಿಗೆ ಹೆಂಡ್ರ ಮುಂದೆ ತಗಣಿ ಕಾಟದ್ ನೆವಹೇಳಿ ಊರಮುಂದ ಗುಡಿನೋಡಿ ಮಲಗೋಕೊಕ್ಕಾರ.

೩

ಬಂತ ನೋಡು ಪೇಷನ್ ಕಾಲ ನಯಾಪೈಸದ ನವೀನ ಕಾಲ
ಸಿನಿಮಾ ಪದ್ಧತಿ ಶಿಸ್ತಿನ ಕಾಲ ನವಯುಗ ಕೆಡಿಸಿತು ನಪ್ರಾಣಿ ಕಾಲ ॥
ಮಿಂಚಿ ಹೋತು ಮುಂಚಿನ ಕಾಲ ಇದು ಲಂಚ ಬಡುಕರ ಕಾಲ
ಶ್ರೀಮಂತರ ಸಿಡಲಿನ ಕಾಲ ಬಡವ ಬಡವನಾಗಿ ಉಳಿಯುವ ಕಾಲ
ಬಡತನದಲ್ಲಿ ಒಡ ಹುಟ್ಟಿದವರು ಹೊಡೆದಾಡಿ ಸಾಯುವ ಕಾಲ ॥
ಬಂಡ ವರದಕ್ಷಿಣೆ ತಿನ್ನುವ ಕಾಲ ಗಂಡನು ಹೇಣ್ತಿಗೆ ಹೆದರುವ ಕಾಲ
ಕಂಡಕಂಡವರು ಕುಲಗೆಡುವ ಕಾಲ ಹೆಂಡಖಂಡ ತಿನ್ನುವ ಕಾಲ
ಗುಂಡ ಜನರು ಪಂಚಮರಾಗಿ ಪಂಚಾತಿ ಹೇಳುವ ಕಾಲ
ಕಂಡಕಂಡವರು ಗದ್ದಿಗೆ ಏರಿ ದೇಶಕೆ ಬಂತು ದರಿದ್ರ ಕಾಲ ॥
ತೂಕದ ಅನ್ನ ತಿನ್ನುವ ಕಾಲ ಲೆಕ್ಕದ ಮ್ಯಾಲ ಮಕ್ಕಳ ಹಡೆಯುವ ಕಾಲ
ಹುಡುಗ ಹುಡುಗಿ ಒಪ್ಪಿದ ಕಾಲ ಮುದುಕ ಮುದುಕಿ ಮುದ್ದಾಡೊ ಕಾಲ

ಸೀರಿ ಕುಪ್ಪಸ ಉಡುವದ ಬಿಟ್ಟು ಹೆಣ್ಣುಮಕ್ಕಳು ಚಣ್ಣ ಕೊಟ್ಟು
ಮುಂದೆಲಿ ಕೂದಲ ಕತ್ತರಿಸಿಕೊಂಡು ಮುಂದೇನು ಉಳಿಯದೆ ಮುಗಿಸಿದ ಕಾಲ ॥
ವಿಚಾರ ಮಾಡೋ ವಿಚಿತ್ರ ಕಾಲ ಆಚಾರ ಹೇಳಿ ಅಡ್ಡಾ ನಡೆಯುವ ಕಾಲ
ದೇವರ ದುಡ್ಡಿನ ದುಬಾರಿ ಕಾಲ ದೊಡ್ಡ ಮೌಲಿ ಜನರು ಬಡ್ಡಿ ಸಾಲ
ಗುಡ್ಡದ ಮ್ಯಾಲೆ ಜೋಳ ಬಿತ್ತಿ ದೊಡ್ಡ ದೊಡ್ಡ ನದಿಗಳು ಬತ್ತಿ
ಮೇವು ನೀರು ಇಲ್ಲದೆ ದನಗಳ ಕಟುಕರು ಕೆಡವಿ ಕೊಯ್ಯುವ ಕಾಲ ॥
ಸಾಧು ಸನ್ಯಾಸಿ ಸುಳಿದಾಡುವ ಕಾಲ ಸತ್ಯವಂತರ ಸ್ವರ ಬತ್ತಿದ ಕಾಲ
ತುಟ್ಟಿಭತ್ಯೆ ತೂಗ್ಯಾಡೋ ಕಾಲ ಹೌದಾ ಹೌದ ಇದು ಹೈಬ್ರಿಡ್ ಕಾಲ
ಅತ್ತಿಯ ಮನೀಗೆ ಸೋಸೀಯು ಬಂದು ಅಧಿಕಾರ ಮಾಡುವ ಕಾಲ
ಹಡೆದ ತಾಯಿತಂದಿಗೆ ಮರೆತು ಹೇಣ್ತಿ ಹೇಳಿದಂಗ ಕೇಳುವ ಕಾಲ ॥
ಉಂಡ ಮನೀಗೆರಡು ಬಗಿಯುವ ಕಾಲ ನಾವು ಕಂಡೆವಯ್ಯ ಇಂಥಾ ಕಾಲ
ವರುಷಕೊಂದು ಮಳೆ ಬರುವ ಕಾಲ ಮೇವು ನೀರು ಇಲ್ಲದೆ ದನಗಳು ಸಾಯುವ ಕಾಲ
ಹಾಲಿನಲ್ಲಿ ನೀರು ಹಾಕಿ ಹಣ ಗಳಿಸುವುದು ಇದೂ ಒಂದು ಕಾಲ
ಸತ್ತೂರ ಕವಿಗಳು ಸಾರಿ ಹೇಳುವರು ಸದ್ಯಕೆ ಬಂತು ಸುಮಾರ ಕಾಲ ॥

೪

ನಕ್ಕಂತ ಹೇಳುವೆ ತಕ್ಕ ಸಭಾದೊಳು ನೀತಿವಂತ ಮಾತು
ಕಬ್ಬಲ್ ಶಾರದಾ ಹತ್ತಿರ ಒಂದು ಹಳ್ಳಿ ಊರು ಇತ್ತು
ಹಳ್ಳಿ ಜನ ಬಾಳ ಶಿಸ್ತು
ಒಬ್ಬ ಮುಸಾಫರ ಬಂದನೂರಿಗೆ ಒಳ್ಳೇ ಸರವೊತ್ತು
ಅವನಿಗೆ ರೋಗ ಬಾಳವಿತ್ತು
ಮಸೂತಿ ಒಳಗೆ ವಸ್ತಿ ಮಾಡಲು ಹೋದನವನು ಸತ್ತು
ಯಾರೂ ದಿಕ್ಕು ಇಲ್ಲದೋಯ್ತು
ಬೆಳಗ್ಗೆ ಎದ್ದು ಬಂದನು ಮುಲ್ಲ ನಮಾಜಿನ ಹೊತ್ತು
ಯಾರೋ ಬಿದ್ದುದಾನೆ ಸತ್ತು
ಮುಲ್ಲಸಾಬನು ಊರಿನ ಜನ ಸೇರಿದಾರೆ ತುರ್‍ತು
ಮನೆಯ ತಲೆಯ ಮೇಲೆ ಚಂದಾ ಎತ್ಯಾರ ಹೆಣಾ ದಫನ್ ಮಾಡ್ವದಕಾವತ್ತು
ಮೈಯ ತೊಳಿವಾಗ ಬಟ್ಟೆ ಹರಿದರೆ ಅದರೊಳಗಿತ್ತು ಸಾವಿರದಿಪ್ಪತ್ತು
ಗಡ್ಡದ ಸಾಬನ ಎದೆ ದಸಗ್ ಅಂತು
ಜೊಲ್ಲು ಗಡ್ಡದ್ಮೇಲೆ ಬಿತ್ತು
ಗಡ್ಡದ ಸಾಬು ದುಡ್ಡು ಹೊಡಿಯಕೆ ಮಾಡುತಾನೆ ಶಿಸ್ತು
ನೋಟು ರೂಪಾಯಿ ಗೋರಿಯ ಒಳಗೆ ಹುಗುದಾನಾವತ್ತು
ಗಡ್ಡದ ಸಾಬುಗೆ ರಾತ್ರಿಗಲೆಲ್ಲ ನಿದ್ದೆಯಿಲ್ಲದೋಯ್ತು
ದೀಪ ಹಚ್ಚಿದಾನೆ ಕುಂತು, ಒಳ್ಳೇ ಸಟ್ಟಂಬ ಸರವೊತ್ತು

ಚಲ್ಕೆ ಪುಟ್ಟಿ ಅಲ್ಲೇ ಇತ್ತು, ಹೊರಟಾನು ಹೆಗಲ್ಮೇಲೆ ಹೊತ್ತು
ಗೋರಿಯ ಮಣ್ಣ ತಗಿಯಾಕೆ ನಿಂತನು ತಲೆ ಹಿಂದಿನ ಶಿಸ್ತು
ದುಡ್ಡು ಅಲ್ಲೇ ಕಂಡು ಬಂತು
ದುಡ್ಡು ತಗಿಯಕೆ ಬಗ್ಗಿದ ಮುಲ್ಲ, ಸಾಂಬನಾಟ ಅಂಗೆ ಇತ್ತು
ಅವಾನ ಕಡುದ ಆವನ ಮಣ್ಣು ಅವಾನ ಮ್ಯಾಲೆ ಬಿತ್ತು
ಅಯ್ಯೋ ರುಂಡ ಒಳಾಗೋಯ್ತು
ರುಂಡ ಒಳಗೆ ಕಾಲು ಮ್ಯಾಲೆ ಅಗುಲ್ಯಾಡತಿತ್ತು
ಅದೇ ಟೈಮಿಗೆ ಒಂದು ಸರ್ಪವು ಅಲ್ಲಿ ಬರುತ್ತಿತ್ತು
ಸರ್ಪದ ಕಾಟ ದೂತರ ಒಡೆತ ಊರಿಗೆ ಕೇಳಸ್ತಿತ್ತು
ಊರಿನ ಜನ ಬರುತ್ತಿತ್ತು
ಗಡ್ಡದ ಸಾಬನ ಕಿತ್ತು ನೋಡಿದರೆ ಮಾರೆ ಮುಸುಣಿಯು ಹಂದಿ ಷರಾಪಿತ್ತು
ತಾವು ದುಡಿದರೆ ತಮಗೆ ಬರುವುದು ಬ್ಯಾಡೋ ಪರರ ಸ್ವತ್ತು
ಒಗಿಯೋ ಇಂತ ಮುತ್ತಿನಂತ ಮಾತು
ಶಭಾಷ್ ಅಂದರೆ ಸಾಕು ನನಗೆ ಬ್ಯಾಡೋ ದೌಲತ್ತು, ಮುಕ್ತಿ ಪರದೊಳು ಸಿಕ್ಕೀತು



# ಕತೆಗಳು

೧

ಇದೇ ನವಿಲೇಹಾಳು ಗ್ರಾಮದಲ್ಲಿ ಈ ತ್ಯಾವುಣಿಗಿಗೋಗ ದಾರಿ ಐತಲ್ಲ ಆ ದಾರಿ ಪಕ್ಕಕ್ಕೆಯಾ ಒಂದು ಉಣುಸೆ ಮರದ ಚೌಡವ್ವ ಅಂತೇಳಿ ಒಂದು ಚೌಡವ್ವಿತ್ತು. ಆ ಚೌಡವ್ವುಗೆ ಇಡೀ ಗ್ರಾಮುದ್ ಜನೆಲ್ಲ ಎಡೆಬಿಡಾರ ಒಯ್ಯೋರು. ಆ ಚೌಡವ್ವ ಇರ್ತಕ್ಕಂತ ರೀತಿ ನೀತಿ ಎಂಗುತ್ತಪ ಅಲ್ಲಿ ಅಂದ್ರೆ ಆ ಮರದ್ಬುಡನ ಸ್ವಲ್ಪ ಒಂದು ಕೈಮಾರು ದೂರಬಿಟ್ಟು ಮುಂದುಕಿತ್ತು ಚೌಡವ್ವ. ಈ ಭಕ್ತಾದಿಗಳು ವೋದೋರೇನ್ ಮಾಡಾರಲ್ಲ. ಆ ಚೌಡವ್ವಗೆ ವಿಭೂತಿ ಕುಂಕ್ಮ ಅರುಸ್ಣ ಅದೆಲ್ಲ ಹಚ್ಚಿ ಕಾಯಿ ಕರ್ಪೂರ ಒಡ್ಡು ಅದರ್ ಮ್ಯಾಲೆ ಮಂಗ್ಳಾರ್ತಿ ಎತ್ತಿ ಪೂಜೆ ಮುಗಿಸಿದ್‌ಮ್ಯಾಲೆ ಪ್ರದಕ್ಷಿಣೆ ಮಾಡಾರು, ಪ್ರದಕ್ಷಿಣೆ ಯಂಗ್ ಮಾಡಾರಪ ಅಂದ್ರೆ ಮರಾನ ಬಿಡ್ಬಿಡಾರು ಹಿಂದುಕ್ಕೆ, ಅಷ್ಟಾಕ್ಕೆ ಆ ಚೌಡವ್ವನ ಕಲ್ಲುಗಳೇನಿದ್ವಲ್ಲ ಅಷ್ಟುಕ್ಕೆ ಪ್ರದಕ್ಷಿಣೆ ಮಾಡ್‌ಕೆಂದು ಚೌಡವ್ವು ಗಡ್ಬಿದ್ದು ಮಾತಾಯಿ ನಮ್ಮವ್ವ ನಮ್ಗೇನಾರ ಕಷ್ಟ ಆಪತ್ತು ಬಂದ್ರೆ ನಮ್ಮುನ್ ಕಾಪಾಡವ್ವ ಅಂತೇಳಿ ಆಕೀಗೆ ನಮಸ್ಕಾರ ಒಡ್ಡು ಮನೀಗ್ಬರಾರು. ಇದುನ್ನ ಆ ಉಣುಸೆ ಮರ ದಿನಾ ನೋಡೇ ನೋಡದು. ಹಿಂದ್ಕಿತ್ತಲ್ಲಾ ಆ ಉಣುಸೆ ಮರಕೇನಾತು ಬಾಳ ಸಿಟ್ಬಂದ್ಬುಡ್ತು. ಎಲಾ ಇವುನ ನನ್ ಆಶ್ರಯದಾಗದಾಳಿಕಿ, ಈ ಚೌಡಿ, ಈ ಜನಾ ಭಕ್ತಾದಿಗಳು ಬಂದೋರು ಇಕೀಗೇ ಹಣ್ಣು ಕಾಯಿ ಎಡೆ ಮಾಡ್ತಾರೆ ಕುಂಕ್ಮ ವಿಭೂತಿ ಗಂಧಾಕ್ಷತೆಗಳನ್ನು ಇಕೀಗೆ ಅಚ್ತಾರೆ, ಮಂಗ್ಳಾರ್ತಿ ಎತ್ತಿ ಇಕೀಗೇ ಅಡ್ಬಿದ್ದು ಇಕೀನ್ನೇ ಸುತ್ತರ್‍ದು ವೊಕ್ಕಾರೇ ವೊರ್‍ತು ನನ್ನ ಯಾರು ಅಂತ ಮಾತಾಡ್ಸದುಲ್ಲ ಅಂತೇಳಿ ಸಿಟ್ಮಾಡ್ಕೆಂತು. ಒಂದಿನ ಏನ್ಮಾಡ್ತು ಮರ ಏ ಚೌಡಿ ನನ್ನಾಶ್ರಯದಲ್ಲಿದ್ದ ನಿನಿಗೆಷ್ಟು ಜನ ಭಕ್ತಾದಿಗಳು ಬಂದು ನಿನ್ನುನ್ನ ಭಕ್ತಿಯಿಂದ ಪೂಜೆ ಪುನಸ್ಕಾರ ಮಾಡ್ತಾರೆ. ಒಂದೂದಿ ಕಡ್ಡಿನಾರ ನನಗಚ್ಚಿದಾರೇನು ನನಿಗೆ ಯಾರಾರ ಒಂದು ಕುಂಕುಮುದ್ ಬಟ್ಟಿಟ್ಟುದಾರೇನು ನನ್ನತ್ರ ಇರ್ ಬ್ಯಾಡ ನೀನು ಏಳೇಳು ಮ್ಯಾಕೆ ನನ್ ಜಾಗ ಬಿಟ್ಟು ವೋಗ್ಬಿಡು ಮಾದರ್‌ಚೋದ್ ಮುಂಡೆ ನಡೀ ಅತ್ಲಾಗೆ ಅಂತೇಳಿ ಉಣುಸೆಮರ ಆ ಚೌಡವ್ವುಗೆ ಗಲಾಟೆ ಮಾಡ್ತು.

ಯಾಕಣ್ಣ ನಾನೇನ್ಮಾಡಿದೆನಪ ನಿನ್ ಪೂಜೆ ಮಾಡರಿಗೆ ನಿನಗೆ ಕಾಯಿ ಕರ್ಪೂರ ಅಚ್ಚರಿಗೆ ನಾನೇನ್ ಬ್ಯಾಡ ಅಂದುದೇನ, ಅವುರಂಗ್ ಮಾಡಿ ವೋಗೋದುಕ್ಕೆ ನಾನೇನ್ಮಾಡ್ಲಿ. ನನಿಗೆ ಎದ್ದು ವೋಗು ಇಲ್ಲಿರ್ ಬ್ಯಾಡ ಅಂತೀಯಲ್ಲ ?

ನೀನೆದ್ದಳ್ ಮ್ಯಾಕೆ ಅಂದ್ರೆ ಎದ್ದಳಕು. ಒಂದರಕ್ಷಣ ನಿಲ್‌ಕೂಡ್ದು ನೀನು ಎದ್‌ವೋಗ್ಬುಡು ನೀನು ಎಲ್ಯಾರ ಬ್ಯಾರೆತಾಕ್ ಸೇರ್‍ಕೆ. ಅಂಗೆಂತೇಳಿ ಆ ಉಣುಸೆ ಮರ ಎನ್ಮಾಡ್ತು ಆ ಚೌಡವ್ವುನ ಒದ್ದು ಓಡ್ಸಿಬುಡ್ತು. ಅದು ಈ ಕಾರಾ ಅರಿಯೋ ಅಂತದು ಒಂದು ದುಂಡ್‌ಕಲ್ಲು ಚೌಡವ್ವುನ್ ಕಲ್ಲು ದುಡುದುಡು ಅಂತ ಉಲ್‌ಡ್ಕೆಂಡೋಗಿ ಒಂದಷ್ಟು ದೂರ ಪಾಂದಿನ್‌ಮ್ಯಾಲೆ ದಾರಿ ಪಕ್ಕುಕ್ಕೋಗಿ ಕುತ್ಕಂಬುಡ್ತು. ಕುತ್ಕಂಡುದ್ದಾಗ ಇಷ್ಟಾಗೇನಾತು ಇದೇ ನವಿಲೇಹಾಳ್ ಗ್ರಾಮುದಲ್ಲಿ ಚೌರ್‌ದಾರುಮ್ಮಣ್ಣ ಅಂತ ಇದ್ದ, ತ್ಯಾವುಣಿಗ್ಯಾಗೆ

ಅವುಂದು ಲಗ್ನಾಗಿತ್ತು. ಆ ತ್ಯಾವುಣಗ್ಯಾಗೆ ಮಾರಿ ಜಾತ್ರೆ. ಆ ಮಾರಿ ಜಾತ್ರಿಗೆ ಉಮ್ಮಣ್ಣನೇಣ್ತೀನ ಕರಿಯಕೇಂತ ಬಂದ್ರು ಯಾರು ಆ ತ್ಯಾವುಣಿಗೇರು. ಗಾಡಿಗೀಡಿ ಕಟ್ಕೆಂದು ಬಂದುದ್ರೆ, ಮತೆ ಅಬ್ಬಂತೆ ಆ ಗಾಡಿ ಮ್ಯಾಲೆ ಹೋಗ್ತಾನ್ನಾನು, ವೋಗಿ ಅಬ್ಬ ಮಾಡ್ಕೆಂದು ಬರ್ತೀನಿ ಅಂತೇಳಿ ಏಣ್ತಿ ಗಂಡುನ್ನ ಕೇಳಿದ್ಳು. ನೀನೊಬ್ಬಳೇ ಯಾಕೆ ನಾನೂ ಬರ್ತ್ನಡೀ ಇಬ್ರು ವೋಗಿ ಅಬ್ಬ ಮುಗಿಸ್ಗೆಂದು ಬಂದ್ಬುಡನ ಅಂತೇಳಿ ಗಂಡ ಏಣ್ತಿ ಕೂಡ ವೊಂಟ್ರು. ಬೀಗರ್‌ಗಾಡಿ ಮ್ಯಾಲ್ಕುಂತ್ಕಂದು ತ್ಯಾವುಣಿಗಿಗೆ ವೊಂಟ್ರು. ಈ ದಾರಿ ಪಕ್ಕುಕ್ಕೆ ಕುಂತ್ಕಂಡಿತ್ತೇ ಆ ಚೌಡವ್ವನ್ ಕಲ್ಲು ಅದು ಉಮ್ಮಣ್ಣನೇಣ್ತಿ ಕಣ್ಣಿಗ್ಬಿತ್ತು. ಆಕಿ ಗಂಡಂಗೇಳಿದ್ಳು ನೋಡ್ದೋ ಮಾರಾಯ ಎಂತಾ ಪಾಡೈತೆ ಆ ಕಲ್ಲು ಕಾರ ಅರಿಯಾಕೆ ಎಷ್ಟು ಗಂದಿನಾ ಆತು ಕಾರ ಅರಿಯಾ ಕಲ್ಲು ತಂಬಾ ಅಂತೇಳಿ ಎಂದೆಂದೂ ಒಂದು ಕಲ್ಲು ತರ್ಲಿಲ್ಲ ಇದುನ್ನ ಗಾಡ್ಯಾಗೆ ಅಕ್ಯಬಾರ್ದಾ ಅಂತೇಳಿ ಹೇಳಿದ್ಳು. ಇವುನು ಗಾಡಿ ಮ್ಯಾಗಳಿಂದ ದಬುಕ್ನೆ ದುಮುಕಿ ಕೆರಗಾಲಿನಿಂದ ಉಲ್ಡಿಸ್ಯಾಡಿ ನೋಡಿ ಏ ಇತ್ಲಗಿಂದ ಯಾಕೆ ಒಯ್ಯದು ಇದುನ್ನ ಅತ್ಲಿಂದ ಬರ್ತತಲ್ಲೆ ಗಾಡಿ. ಅತ್ಲಿಂದ ಬರ್ಬೇಕಾರೆ ಅಕ್ಕಂದು ಹೋಗನಂತೆ ಇರ್ಲಿ ನಡಿ ಅದುನ್ಯಾರೊಯ್ತರೆ ಅಂದು ಅವುರು ಮುಂದುಕ್ಕೋದ್ರು. ಇದುನ್ಯಾರು ನೋಡಿದ್ರು ಆ ಉಣುಸೇ ಮರ ನೋಡ್ತು. ನೋಡಿ ಏಳ್ತತೆ ಏ ಚೌಡಿ, ನೋಡ್ಕ್ಯ ನಿನ್‌ಗತಿ ಏನಾತು, ನನ್ ಆಶ್ರಯದಾಗಿದ್ದಾಗ ನಿನಿಗೆ ಎಷ್ಟು ಪೂಜೆ ಏನು ಪುರಸ್ಕಾರ ನಿನಿಗಡ್‌ಬೀಳದೇನು ಕಾಯೊಡಿಯದೇನು ಕರ್ಪೂರ ಹಚ್ಚದೇನು ಎಷ್ಟು ಭಯಭಕ್ತಿಯಿಂದ ನಿನಿಗೆ ಪೂಜೆ ಮಾಡ್ತುದ್ರು ನನ್‌ಜಾಗ ಬಿಟ್ಟುವೋದೆ ವೋದೆ ನಿನ್ನ ಕೆರಗಾಲೀಲಿ ಉಲ್ಡಿಸ್ಯಾಡಿದ್ರು ಈಗೇನು ನಿನಿಗೆ ಮರ್ಯಾದೆ ಐತೇನು ಇನೂ ಈಟೇ ಇಲ್ಲ ಅತ್ಲಿಂದ ಉಮ್ಮಣ್ಣನ ಗಾಡಿ ಬರ್ಲಿ ಗಾಡಿ ಮ್ಯಾಲೆ ಅಕ್ಕೆಂದೋಗಿ ಮನೆ ಅತ್ರ ಮೈತುಂಬ ಕಾರ ಅರಿತಾರೆ. ಮೈಯೆಲ್ಲ ಅಂಗೆ ಅಂಗೆ ಭಗಭಗ ಉರಿಬೇಕು ಇನ್ನು ನಿನ್ಗತಿ ನೋಡ್ಲಾಸಲ್ಲ ಅಂತೇಳಿ ಉಣುಸೇ ಮರ ಅಂತು. ಇದುನ್ನ ಚೌಡವ್ವ ಕೇಳಿ ಎಂತಾ ಮೋಸ ಆಗ್ಬಿಡ್ತಲ್ಲ ನಾನು ಆ ಜಾಗ ಬಿಟ್ಟು ಬಂದುದ್ದಲ್ಲ ಒಳ್ಳೇ ತೊಡರಿಗೆ ಸಿಕ್ಕಂ ಬಿಟ್ನೆಲ್ಲ ಅಂತ ಯೋಚ್ನೆ ಮಾಡ್ತು.

ಅಷ್ಟಾಗೆ ಇದೇ ನವಿಲ್ಯಾಳು ಗ್ರಾಮುದಾಗೆ ಒಕ್ಕುಲ್ರ ಮುದ್ದಣ್ಣ ಅಂತೇಳಿ ಒಬ್ಬ ಯಜಮಾನ. ಅವುನಿಗಿಬ್ರು ಗಂಡು ಮಕ್ಳು. ಅವುರ್ಮದ್ವೆಗೇಂತ ಹೆಣ್‌ಪಣ್ಣು ನೋಡಿ ಮದ್ವೆಗೆಲ್ಲ ಏರ್ಪಾಡು ಮಾಡ್ಕೆಂಡಿದ್ದ. ಈ ಮದಿವಿಗೆ ಅಡಿಗೆ ಮಾಡಕೆ ಸೌದೆ ಇರ್ಲಿಲ್ಲ. ಸೌದೆ ತರೋ ಸಂದರ್ಭ ಬಂತು-ಅವುನಿಗೆ. ಬಂದ ಇಂಗೇ ಅಡ್ಡಾಡ್ಕೆಂತ ಚೌಡವ್ವನ್ ಮರದ್ಕಡಿಕೆ, ನೋಡಿದ ಅದುನ್ನೇ ಕೆಳಕೆ ಮ್ಯಾಕೆ. ಏ ಸರ್ಕಾರಿ ರೋಡ್‌ನಾಗೈತಿ ಕಣೊ ಕಡುದ್ರೆ ಯಾವನೇನ್ ಕೇಳ್ತಾನಿದುನ್ನ ಅಂದು ಮನಸ್ಮಾಡಿ ನಾಳೆ ಎಲ್ಡಾಳು ಎಲ್ಡ್ ಗಾಡಿ ಕೊಡ್ಲಿಗಿಡ್ಲಿ ಮಸ್ಕಂದು ಈ ಮರಾನ ಬುಡವರ್ಗೆ ಕಡ್ಕಂದು ವೋಗಿಬಿಟ್ರಾತು ಅಂತ ಲೆಕ್ಕ ಆಕ್ಕೆಂದು ಮನೀಗ್ಬಂದ. ಮನೀಗ್ಬಂದನೇ ಅವ್ನು ಆಲೆ ಗಾಡಿಗುಳ್ನ ಸಜ್ಜು ಮಾಡ್ತ ಆದಾನೆ ಇದುನ್ನ ಯಾರು ನೋಡಿದ್ರು ಈ ಚೌಡವ್ವ ನೋಡ್ತು. ಉಣುಸೇ ಮರದಣ್ಣ ನಾನಲ್ಲಿದ್ದಾಗ ನಿನಿಗೆ ಎಷ್ಟು ಗೌರವ ಇತ್ತು ಅಲೆಲೆ ಇದು ಚೌಡವ್ವನ್ ಮರ ಕಣೋ ಇದುರ್ ಸವಾಸ ಬ್ಯಾಡ ಅಂತ ಎಷ್ಟೋ ಜನ ಎದುರಿ ವೋಗೋರು. ಈಗ ನಾನು ನಿನ್ ಜಾಗ ಬಿಟ್ಟು ಬಂದೇ ಬಂದೆ ಅಲೇ ಕೊಡ್ಲಿಗುಳು ತಾರ್ತ್ಯಾಡ್ತವೆ ನಿನಿಗೆ. ನಾಳೆ ಮುದ್ದಣ್ಣ ಬರ್ತಾನೆ ಎಲ್ಡುಗಾಡಿ ಊಡ್ಕೆಂದು ಕೊಡ್ಲಿ ಮಚ್ಚು ತಗಬಂದು ನಿನ್ ಬೇರು ಬೆಳ್ಳುಳ್ಳಿ ಅಗುದು ಕಡ್ತೆಲೆ ಮಾಡಿ ನಿನ್ನ ಅಂಗಾಂಗಗಳ್ನೆಲ್ಲ ತುಕ್ಡ ತುಕ್ಡ ಮಾಡಿ ಸೀಳಿ ಒಲಿಯಾಗಿಟ್ಟು ಸೀಮೆಣ್ಣೆ ಸುರ್ದು ಬೆಂಕಿ ಅಚ್ಚಿ ಅಂಗೆ ಧಗ ಧಗ

ಧಗಾ ಉರಿಸಿ ಸುಟ್ಟು ನಿನ್ನ ಬಸ್ಮಾ ಮಾಡ್ತರೆ. ನಿನ್ಗತೀನು ಅಕ್ಕತೆ ತಡಿಯಪ್ಪಾ ಉಣುಸೇ ಮರದಣ್ಣಾ ನನ್‌ಬಿಡಿಸಿದ್ದೀಯಲ್ಲಾ ಜಾಗಾನ ಅಂತ ಚೌಡವ್ವಂತು. ಈ ಎಲ್ಲೂ ಮಾತ್ನೂ, ಇದು ಅಂಗಂತು, ಅದು ಇಂಗಂತು, ಕೇಳಿ ಎವೆಲ್ಲೂ ಮಾತಾಡ್ಕೆಂಬುಟ್ವು, ಅಲಿವುನೇಣ್ತಿ ಚೌಡೀನ ಓಡ್ಸಿದ್ದಲ್ಲೇನೋ ಕಣ ನಾನು ಆಕೀನ್ನೂ ಆತ್ರುಕ್ಕೆ ಕರ್ಕನದೇ ಪಾಡು ಅಂತ ಉಣುಸೇಮರ ಅಂದ್ಕಂತು. ಇಂಗ್ ಮಾತಾಡ್ಕೆಂದು ಅವೆಲ್ಲೂ ವೊಂದ್ಕೆನಕೆ ಸಜ್ಜಾಗಿದವೆ, ಇಲ್ಲಾನಾಗತೆ ಈ ಕಡೆ ಅಬ್ಬ ತೀರಿಸ್ಲೆಂದು ಉಮ್ಮಣ್ಣ ವೊಂಟುದಾನೆ ಗಾಡಿ ಊಡ್ಕೆಂದು ಅಲ್ಲಿ ಎತ್ತುಗ್ಳು ರಕ್ತರಕ್ತನೇ ಉಚ್ಕೆಂದ್ವು. ಅವುರಿಗೆ ಎದ್ರಿಕೆ ಆಗಿಬಿಡ್ತು. ಅಲಿವುನ ಯಾಕಿಂಗೆ ಆಗಾಕೆ ಕಾರಣೇನು ಸುಕಾಸುಮ್ನೆ, ಅಲ್ಲಿ ಬರಾಕರ ದಾರೀಲಿ ಒಂದು ಕಲ್ಲು ಉಲ್ಡಿಸ್ಯಾಡಿ ಬಂದಿದ್ನೆಲ್ಲ ಅದು ಚೌಡವ್ವುನ್ ಕಲ್ಲಿರ್‌ಬೇಕೇನೋ ಕಣೆ ಅದುಕಿಂಗಾಗೇತೋ ಏನೋ ಏ ಅದುಕ್ಕೊಂದತ್ ಪೈಸ ಅರಕೆ ಕಟ್ಟು ಆ ಚೌಡವ್ವಗೆ ವೋಳ್ಗೆ ಮಾಡಿ ಎಡೆ ಆಕ್ಯಾನಂತೆ - ಅಂತೇಳೆ ಅತ್‌ಪೈಸ ಅರ್ಕೆ ಕಟ್ಟಿದ್ರು. ಅಲ್ಲಿಗೆ ಎತ್ತುಗ್ಳು ಪಾಡಾದ್ವು. ಸಲೀಸು ಊರಿಗೆ ಬಂದು ಮುಟ್ಟಿದ್ರು. ಇಲ್ಲಿ ಮುದ್ದಣ್ಣ ಗಾಡಿ ಸಜ್ಜು ಮಾಡಿದ್ನಲ್ಲ ಅಂಗೆ ಎತ್ತುಗ್ಳು ಊಡಿ, ಗಾಡಿ ಮುಂದುಕೊಡುದ್ರೆ ಗಾಲೀನೇ ತಿರುಗೊಲ್ವಂತೆ ಅಂಗೆ ದುರ್ ಅನ್ನವಂತೆ, ಎತ್ತುಗ್ಳು ಅಂಗೆ ಜೀಬಿಗ್ಗಾಲು ಕೊಟ್ಟು ಎಳುದ್ರೂ ಗಾಲಿ ಉಲ್‌ಡೊಲ್ಲು ಮುಂದುಕ್ಕೆ. ಅಲಿವ್ನ ಇದೇನ ಮಾರಾಯ ಇಂಗಾಗಾಕೆ ಕಾರಣ ಏನಿದು ನಿನ್ನೆ ವೋಗಿ ಆ ಮರ ಕಡ್ಕಂಬರಬಕು ಅಂತ ನಾನು ಅಂದಾಜು ಮಾಡ್ಕೆಂಬಂದೆ. ಚೌಡವ್ವುನ ಮರ ಏನ ಕಣ ಅದು. ಮೊದ್ಲು ಚೌಡವ್ವಿತ್ತು ಏನಂದ್ರೆ. ಅದುಕಿಂಗಾಗಿದ್ಯಾತ, ಏ ತಮಾ ಒಂದು ಅತ್ ಪೈಸ ಅರಕೆ ಕೊಟ್ಟು ನಾವು ಯಾರಿಗರ ಬ್ಯಾರೇರ್ ಕೈಲಿ ಒಂದು ಕೋಳಿ ಉಂಜುನ್ನ ಕೊಟ್ಟು ಹಾರ ಕೊಡಾನಂತೆ - ಆಕಿಗೆ ಅಂತೇಳಿ ಅವುರೂ ಅತ್‌ಪೈಸ ಅರ್ಕೆ ಕಟ್ಟಿದ್ರು. ಅವುರೂ ಪಾಡಾದ್ರು. ಆವಾಗ ಈ ಉಣುಸೇ ಮರದಣ್ಣಾ ಚೌಡೀ ಬಂದ್ಬುಡು ನನ್ನತ್ರುಕ್ಕೆ ನೀನು ಬಂದು ನೀನು ಮೊದ್ಲು ನನ್‌ಬಿಟ್ಟು ಮೂರು ಮಾರು ದೂರ ಕುಂತಿದ್ಯಲ್ಲ ಅಂಗ್ ಕುಂತ್ಕಬ್ಯಾಡ ಸೀದ ಬಂದು ನನ್ ಬುಡುಕ್ಕೇ ಕುಂತ್ಬುಡು. ಆ ಬಂದೋರು ಸುತ್ತರಿಯೋರು ನನ್ ಸಮೇತ ಸುತ್ತರಿಬೇಕು ಇಪಟು. ಅಂತೇಳಿ ಉಣುಸೇ ಮರದಣ್ಣ ಕರೀತು. ಬುಡು ಬುಡು ಉಲ್ಡಿಕೆಂತ ವೋಗಿ ಆ ಚೌಡವ್ವುನ ಕಲ್ಲು ಉಣುಸೇ ಮರದ ಬುಡಕ್ಕೇ ಕುತ್ಕಂತು.

## ಕತೆ- ೨

ಇಬ್ರು ಗಂಡ ಏಣ್ತಿ ಇದ್ರಂತೆ. ಅವ್ರಿಗೆ ನಾಕ್ ಜನ ಮಕ್ಳು. ಅದರಾಗೆ ಮೂರು ಜನ ಗಂಡುಡುಗರು. ಒಂದೇ ಒಂದು ಎಣ್ಮಗಳು. ಇಂಗಿರುವಾಗ ಆ ನಾಕ್ ಜನಾನು ಪ್ರಬುದ್ಧಮಾನಕ್ಕೆ ಬಂದ್ರು. ಮಗ್ಳು ಚಿಕ್ಕೋಳು ಈ ಗಂಡ್ಮಕ್ಳೆಲ್ಲ ಇರಿಯೋರು. ಇರಿಯರ್ನೆಲ್ಲ ಮದ್ವೆ ಮಾಡ್ಕೆಂತ ವೋದ, ಅಮ್ಯಾಲೆ ಈ ಚಿಕ್ಕುಡ್ಗಿ ಒಂದಿತ್ತಲ್ಲ, ಎಂತೋರು ಸಿಕ್ತಾರೋ ಏನೋ ಇದ್ದೂರಾಗೆ ನಂ ಕಳ್ಳುಬಳ್ಳಾಗೆ ಕೊಟ್ಕಂಬುಟ್ರೆ ನಾವುನು ಎಡಗಣ್ಣು ಬಲಗುಣ್ಣು ನೋಡ್ಕೆಂಡು ಏನು ವೋಟಲ್ಪಸ್ವಲ್ಪ ಕೊಟ್ಕಂಡು ಅವುರ್ ಜೀವುನಕ್ಕೆ ತೊಂದ್ರೆ ಯಾಗ್ದಂಗೆ ನೋಡ್ಕಂಡಿರಕೆ ಬರ್ತತೆ. ಅಂಗೆಂತೇಳಿ ನೆರವೂರಾಗೆ ಗಂಡು ಉಡುಕ್ದೆ ಇದ್ದೂರಾಗೆ ಅವುರ ಸ್ವಂತ ಬಂಧುತ್ವದಲ್ಲಿ ಆ ಮಗುಳನ್ನ ಕೊಟ್ಟು ಲಗ್ನ ಮಾಡ್ದ್ರು. ಅವುರಿಗೆ ಸ್ವಲ್ಪ ಬಡತನ ಇತ್ತು. ಒಂದ್ ಮನೆ ಕಟ್ಸಿ ಕೊಟ್ರು. ಒಂದೆಲ್ಡು ಎಕ್ರೆ ವೊಲ ಕೊಡಿಸಿದ್ರು - ಅಮ್ಯಾಲೊಂದ್ ಜತೆ ಎತ್ತುಗುಳ್ನು ಕೊಡುಸ್ದ. ಎಲ್ಲ ಅವುರಿಗೆ ವ್ಯವಸ್ಥೆ ರೆಡಿಮಾಡಿ ಇದುರ್ಮುಂದೆ ನೀವು ಬಾಳೇವ್ ಮಾಡ್ಕೆಂದು ಹೋಗ್ರೆಪ ಅಂತೇಳಿ ಅಳಿಯ್ನಿಗೂ

ಮಗಳಿಗೂ ವ್ಯವಸ್ಥೆ ಮಾಡ್ದ ಯಾರು ಆ ಮಗಳು ಕೊಟ್ಟ ಮಾವ. ಆವಾಗ ಈಗಿ ನಂಗೇನೂ ನೀರಾವರಿ ಅಲ್ಲ. ಬೆದ್ಲು ಕಾಲ ಬ್ಯಾಸ್ಗೆ ಕಾಲ್ದಗೆ ಆರಂಬಾಗಿ ಬಿಡ್ತಲ್ಲ ಈ ಶಿವುರಾತ್ರಿ ಮುಂದೆ ಎಲ್ಲರೂ ವೊಡದಂಗೆ ಇವ್ನೂ ಬ್ಯಾಸೆ ಊಡಿ ಕೆಂದು ವೋದ ವೊಲಕ್ಕೆ ಯಾರು ಅಳೆಮಯ್ಯ. ವೋಗಿ ಮಧ್ಯಾನ್ದೊರೆಗು ಒಳ್ಳೆ ಒಂದ್ಗಂಟೆ ಸುಮಾರ್ತಂಕ ಬ್ಯಾಸೆ ವೊಡ್ಕಂದು ಮನೀಗ್ಬರ್ತಾನೆ ಎತ್ತುಗುಳು ಬಿಟ್ಕಂಡು. ಬಾರಿ ಬಿಸುಲು ಆ ಬಿಸುಲಿನ ತಾಪುಕ್ಕೆ ತಾಳಲಾರ್ದೆ ಬಾಯಾರ್ಸಿಕೆಂದು ವೊಟ್ಟೆ ಅಸುವಾಗಿ ಮನೀಗ್ಬಂದು ಕುಡ್ಲೆ ಎತ್ತುಗುಳು ಕೊಳ್ಳರ್ದು ಕಟ್ಯಾಕಿ ಮೇವಾಕಿದ. ಗಡಗಡ ಕೈಕಾಲು ತೊಳ್ಕಂಡು ಉಣ್ಣಾಕೆ ಕುತ್ಕಂದ. ಅವುನೇಣ್ತಿ ಏನಡಿಗೆ ಮಾಡಿದಾಳೆ ವೋಸ್ರೋಟ್ಟಿ ಬಡುದ್ದಳೆ ವೋಟು ಪುಡಿಗಾರ ಕುಟ್ಟಿ ಇಟ್ಟುಬ್ಟದಾಳೆ. ಪುಡಿಗಾರ ಕುಟ್ಟಿಟ್ಟಾಗ ಅದುನ್ನೆ ಕೊಟ್ಟು ಮತಿನ್ನೇನು ನಿರ್ವೇ ಇಲ್ಲ ಉಣ್ಕಂತ ಕುತ್ಕಂದ. ಉಣ್ತ ಉಣ್ತ ಏನಾಗ್ಬುಡ್ತು ನೆತ್ತಿಗೆ ಕಾರ ಅಡರಿಬುಡ್ತು. ಕಾರ ಅಡರಿ ಹಾ ಹಾ ಹಾ ಅನ್ನಕತ್ತಿದ. ಸಿಟ್ಟಂದುಬುಡ್ತು ಅವುನಿಗೆ ಅಲ್ಲೇ ಈ ಮುನ್ನೂರು ನಾನೂರು ಮನೆ ಗ್ರಾಮುದಾಗೆ ಯಾರು ಒಂದು ನಾಕ್ ಮಜ್ಜಿಗೆ ಕಾಳು ವೋಟು ಮೊಸುರು ಕೊಡ್ಲಿಲ್ಲ ನಿನಗೆ ಇಂತ ಪುಡಿಗಾರ ಅರದು ರೊಟ್ಟಿ ಮಾಡಿಟ್ಟೀದೀಯಲ್ಲ ಇದುನೆಂಗ್ ತಿನ್ನದು ಅಂತೇಳಿ ಏಣ್ತಿಗೆ ಸ್ವಲ್ಪ ಗಲಾಟೆ ಮಾಡಿದ. ಏ ಬಿಡು ಮಾರಾಯ ಈಗತ್ತನ್ನೆಲ್ದು ವರ್ಸಾತು ನಿನ್ ಮದ್ವೆ ಮಾಡಿಕೆಂದು. ಒಂದೆಮ್ಮೆ ತಂಬಾ ಎಮ್ಮೆ ತಂಬಾ ಅಂತ ಏಳಿಕತ್ತಿ ನಾನೂ ಸೋತುಬಿಟ್ಟೆ, ನೆರ್ಮನೇರೆಷ್ಟು ದಿವುಸ ಅಂತ ಕೊಡ್ತರೆ ಆಲು ಮೊಸುರ್ನ ನಾನೂ ಅಲ್ಲಿ ಇಲ್ಲಿ ತಿರ್ಕಂಬಂದು ಆಕ್ದೆ. ನನಗೂ ಆಲೆ ನಾಚ್ಕೆ ಬಂದು ಇಗ ಇಂತ ಅಡ್ಗೆ ಮಾಡಿಟ್ಟುದನಿ. ನಾನೇನ್ಮಾಡ ಕೋಗನ ಉಂಡ್ರುಣ್ಣು ಬಿಟ್ರುಬಿಡು ಅಂದ್ಳು. ಅಕೀಗೂ ಸಿಟ್ಟು ಬಂದು ಅಂದ್ಯೇ ಆವಾಗ ಇವುನೇನೇಳ್ತಾನೆ ಗಂಡ ಅಲಿವುನ ಎಮ್ಮೆ ತಂಬಾ ಅಂತ ಏಳ್ತಿ ನೀನು ಎಮ್ಮೆ ತಗಂಬರದು ಬಾರಿ ದೊಡ್ಮಾತಂತ ತಿಳ್ಕಂಡಿದೀಯಾ ನಾಳೆಂದ್ರೆ ನಾಳೆ ಈಗಂದ್ರೆ ಈಗೇ ತಂದ್ಬಿಟ್ಟೇನು ಇದ್ದೂರಾಗೆ ತವುರ್ಮನೆ ನಾನತ್ಲಾಗೆ ಬ್ಯಾಸೆಕೋದ್ ಟೈಂ ನೋಡಿಕೆಂದು ಆಲು ಮೊಸ್ರು ಎಲ್ಲ ತವುರ್ಮನಿಗೆ ಅಡಕಿ ಬಿಟ್ರೆ ನಾನ್ತಿನ್ನದೇನು ಅಂದ. ಮತ್ತೆ ಈಸ್ತಿನ ಈಗತ್ತನ್ನೆಲ್ದು ವರ್ಸುದ್ದಿನ ಅಕ್‌ಪಕ್ಕುದ್ ಮನೇರತ್ರ, ಅಲ್ಲಿ ಇಲ್ಲಿ ನಮಿಗೆಲ್ಲಿ ಸಂಬಂಂದೈತೋ ಅಲ್ಲೆಲ್ಲ ಇಸುಕಂದ್ಬಂದು ತಿಂದುಲ್ಲ ಮತೆ ನಮ್ಮನೇಗೆ ಕರಾವುದ್ದಾಗ ಅವ್ರು ಬರ್ತಾರೆ ಆಲ್ಕೊಡು ಮಜ್ಜಿಗೆ ಕೊಡು ಮೊಸ್ರು ಕೊಡು ಅಂತ. ಮತೆ ಕರಾವುದ್ದಾಗ ಇಲ್ಲ ಅನ್ನಕಕ್ಕತೇನು ನಾವೂ ಈಟೀಟು ಕೊಡ್ಲೇ ಬೇಕಕ್ಕತೆ ಅಂದ್ಳು. ಇಷ್ಟಂದುದ್ದೇ ಸೈ ಯಾರಪ್ಪುನ್ ಮನೆ ಗಂಟು ಅಂತ ಕೊಡ್ತೀಯೆ ನಿನ ತಾಯಿ ನಾಡ ಅಂದು ಬಾರಿಕೋಲು ತಗಂದು ತರದ್ತರದು ಬಡುದುಬುಟ್ಟ. ವೊಡ್ದುದ್ದೆ ಅವು ನೇಣ್ತಿ ವೊಡ್ತ ತಿಂದು ಅತ್ಕಂತ ತವುರ್ಮನಿಗೆ ವೋಗೇಬಿಟ್ಳು. ವೋದುರೋದೆ ವೋಗೆ ನೀನಲ್ಲುದ್ರೆ ನಿಮ್ಮಪ್ಪನಂತಾಳ್ತಂದು ಮದ್ವೆ ಮಾಡಿಕೆಂತಿನಿ ಅಂದು ಅವುನ್ಮನೇಗವ್ನು ಸ್ವಸ್ತದಾನೆ. ಈ ಇಕೆ ಅತ್ಲಂತ ತವುರ್ಮನೆ ಕಡೀಕೋದ್ಳ ಅಪ್ಪ ಅವ್ವ ಬಾಗ್ಲಾಗೆ ಕುತ್ಕಂದುದ್ರು. ಯಾಕ ತಾಯಿ ಅತ್ಕಂತ ಬರ್ತಾಳ್ ಕಣೇ ಅಕಿ ಕರುದ್ರು ಬರಾಕೆಲ್ಲ ಮನೀಗೆ ಅಂತ ಅವುರಪ್ಪ ಅವ್ವ ಮಾತಾಡಿಕೆಂದ್ರು. ವೋದುಕುಟ್ಲೆ ಮಗುಳ್ನ ಉಬ್ಸಿ ಒಳೀಗ್ಕರದು ಕುಂದ್ರಿಸ್ಕೆಂದು ಯಾಕವ ಏನು ಎಂತು ಯಾಕ್ ಗುದ್ಯಾಡಿದ್ರಿ ಅಂತೆಲ್ಲ ವಿಷಯ ಕೇಳಿದ್ರು. ಕೇಳಿದಾಗ ಈ ಮಾತ್ಗೆ ಈ ಮಾತಪ ನಿನ್ನಳಿಯ ನನ್ನಿಂಗೆ ಇಡ್ಕಂಡು ವೊಡುದ್ಬುಟ್ಟ. ವೊಡೀಲಿ ವೊಡೀಲಿ ಬಾ ಅಂಗಂತೇಳಿ ಏ ತಾಯಿ ಅಪುರೂಪುಕ್ಬಂದುದಳೆ ಅಕಿ ಕರುದ್ರು ಬರುಕೆಲ್ಲ ಒಂದಿಷ್ಟು ವೋಳ್ಗೆ ಮಾಡು ಸಾಯುಂಕಾಲ್ಕೆ ವೋಳ್ಗೆ ಪಾಳ್ಗೆ ಉಣ್ಸಿ ಇವತ್ತು ಉಳಿಸ್ಕೆಂದಿದ್ದು ಬೆಳಿಗ್ಗೆ ಗಂಡಗೇನಾರ ಸ್ವಲ್ಪ ಬುದ್ಧಿ ಹೇಳಿ

ಕಳ್ಸಿ ಬಂದ್ರಕ್ಕತೆ ಅಂಗೆಂತೇಳಿ ಬೇಳೆ ಅಕಿ ವೋಳ್ಗೆ ಮಾಡಿದಾರೆ. ಅಟತ್ತಿಗೆ ಈ ಅಣ್ಣುಗಳು ಬದುಕು ಬಳಿಗೆ ವೋಗಿರೋರು ಬೈಗಾಗೋ ವೊತ್ತಿಗೆ ಮನಿಗ್ಬಂದ್ರು. ಬಂದು ಊಟುಕ್ಕುಂತಂದಾಗ ತಾಯಿ ಕರುದ್ರು ಬರ್ತುದ್ದುಲ್ಲ ಯಾಕ ಬಂದ್ಬುಟ್ಟುದಾಳಲ್ಲ ಅಂದು ಊಟ ಉಪಚಾರ ಮಾಡ್ಕೆಂತ ಕುತ್ಕಂತುದ್ದಂಕ್ಲೆ ಎಲ್ಲ ವಿಷಯ ತಗ್ದ್ರು. ಏನುಲ್ಲಣ್ಣ ಇಂಗೆ ಈ ಮಾತ್ನೆ ಈ ಮಾತಂತುದ್ದಂಕಲೇ ನಾನೀ ವಾತಂದೆ. ಆಟುಕ್ಕೆ ವೊಡುದು ಬುಟ್ಟ ನಿವ್ಮ್ಮಾವ. ಓಹೋ ಇಂಗ್ಯೆತೇನು ಎಮ್ಮೆ ತರದಲೆ, ಕರಾವ್ ಕಟ್ದಲೆ ನಿನ್ನ ವೊಡುದುರ್‌ಬೇಕಾರವುನು ಆ್ನ ಅಲೆ ತಮ ಅವುರಣ್ಣ ತಮ್ಮ ವೂರು ಜನ ವಾತಾಡ್ಕೆಂದ್ರು ಈಗ ಬಾರುಕೋಲು ಆದಾವಲ್ಲ ಎಲ್ಡು ಅವುಕ್ಕೆ ಎಣ್ಣೆ ಅಚ್ಚಿಡ್ರಲೆ ಅವುನೆಂಗೂ ಸಗುಣಿ ಪುಟ್ಟಿ ವೊತ್ಗಂದು ಇಲ್ಯಾಸಿ ಬರ್‍ತಾವಲ್ಲ ಪುಟ್ಟಿ ಒಗ್ದು ಊರು ಬಾಕ್ಲಾಗೆ ನಿಲ್ಲಸ್ಗೆಂದು ವೊಡೀಬೇಕವುನ್ನ ನೋಡನ ಮುಂದೇನ್ ಬರ್‍ತತೆ ಅಂತ ಮಾತಾಡ್ಕೆಂಬುಟ್ರು. ಮಾತಾಡ್ಕೆಂದು ರಾತ್ರಿ ತಂಗಿನ್ನ ಸಮಾಧಾನ ಮಾಡಿ ಮಲಗಿಸೆಂದಾರೆ ಮನೇಗೆ. ಬೆಳುಕರೀತು, ಇವುನೆದ್ದು ಸಗುಣಿ ಪುಟ್ಟಿ ಒತ್ಕಂದೋಗಿ ಒಗ್ದು ತಿರುಗಿ ಆಕಡಿಂದ ಬರ್‍ತುದ್ದ. ಇವುರು ರಡಿಯಾಗಿ ನಿಂತುದ್ರು. ಏ ನಿಲ್ಲ ನಿನ್ ತಾಯಿನಾಡ ಅಲೆ ನೀನು ಮಾವಾಗಿರ್ ಬವುದಲೇ ನಾಳೆ ನೋಡ್ಕೆನನ ನಿಂತ್ಗಳ ನಿನ್ನವುನ್ ಮಿಂಡುನ್ನಾಡ ಅಂದ್ರು. ಅಗಸೆಬಾಗ್ಲಾಗೆ ನಿಲಿಸ್ಗೆಂದು ಎದುರಬದುರಾ ನಿತ್ಕಂದು ವೊಡಿಯಕತ್ತಿದ್ದು ಅಯ್ಯಪ ಸತ್‌ನ್ಯೋ ಅಂತ ಒಯ್ಕಂತಾನೆ. ಅಷ್ಟತ್ತಿಗೆ ನಂ ಪಟೇಲ್ರು ಶಿವಪ್ಪ ಇದ್ನಲ್ಲ ಅವ್ನು ಅಲೆಲೆಲೆ ತಮ್ಮ ತಡೀರೋ ತಡೀರೋ ಸಾಯ್ಸಿಬಿಟ್ಟೀರಿ ಅಂದು ನಿಲ್ಲಿಸ್ದ. ಏನ್ರಲೆ ಇದು ಯಾಕ ಲೆ ನ್ಯಾಯ ಯಾಕ್ರೋ ನಿಮ್ಮಾವುನ್ನ ವೊಡೀತರಲಲ್ಲೇ ಮಾವುನ್ನ ವೊಡೀತಾರೇನೋ ಏನು ಬುದ್ಧಿಗಿದ್ದಿ ಐತಿಲ್ಲೊ ನಿಮಿಗೆ ಅಂತೇಳಿ ಗೌಡಜ್ಜು ಅವುರಿಗೆ ಬೆದ್ರಿಸಿದ. ಗೌಡ್ರೇ ನೀನೀ ಊರಿಗೆ ಗೌಡ ನೀನ್ ನ್ಯಾಯವಾಗಿ ಪಂಚಾತಿ ಹೇಳಕು ಹೇಳದಾದ್ರೆ. ಅವ್ನು ನಮ್ಮಾವ. ನಮ್ತಂಗಿ ಕೊಟ್ಟು ಈಗತ್ತನೆಲ್ಡು ವರ್ಸಾತು ಇಲ್ಲೀವರ್‍ಗೂ ಇವುರಿಗೂ ನಮುಗು ಯಾವ್ತರದ್ದೂ ನ್ಯಾಯನಿಗದಿ ಇರ್‌ಲಿಲ್ಲ. ಮನ್ನೆ ದಿವುಸ ಇವುನು ಒಂದೆಮ್ಮೆ ತಂದುದಾನಂತೆ. ಎಮ್ಮೆ ತಂದು ಕರಾವುಣ್ಣ ಚೋದಿ ಮಗ ಎಮ್ಮೆ ಬಿಗ್ಯಾಗಿ ಕಟ್‌ಕೆಬೇಕೋ ಬ್ಯಾಡ್ರಿ ಉಣ್ಣೋನಿವುನು ವೊಲಾ ಆಳಾಗದು ನಮ್ದು ಇಲ್ಲೇ ಊರ್‌ಬಡ್ಡೆ ವೊಲ್ದಾಗೆ ನೀವೆ ನೋಡಿದ್ರೆಲ್ಲ ಏಳೆಂಟು ಚೀಲ ಬಿಳಿಜೋಳ ಆಗಂಗಿದ್ದು ಅವುನೆಮ್ಮೆ ರಾತ್ರಿ ಬಂದು ಒಂತೆನೆ ಬಿಟ್ಟುಲ್ಲ ಎಲ್ಲ ತಿಂದತೆ ಅಂಗೆಂತೇಳಿ ಒಪ್ಪುಸ್ತುದ್ರು. ಅಲೆ ಏನ ತಮ್ಮ ಎಮ್ಮೆ ವೋಟು ಬಿಗ್ಯಾಗಿ ಕಟ್ಟಕುದ್ದುಲ್ಲೇನೋ ಯಾರದ್ಯೆತ್ರಿ ಎಮ್ಮೆ, ಎಮ್ಮೆ ಯಾವಂದ್ಯೆತಿ ನಮ್ಮನೇಗೆ ಎಮ್ಮೇನೇ ಇಲ್ಲ ಬಾರಪ ಹೋಗನ ನಮ್ಮನ್ಯಾಗೆ ಎಲ್ಡೆತ್ ಬಿಟ್ರೆ ಬ್ಯಾರೆ ದನ ದಾವೇನ ನೋಡ್ರಿ ಅಂಗೆಂತ ಅವುನೇಳ್ತುದ್ದ. ಅಟತ್ಗೆ ಗೌಡ್ರು ಏನ್ರಲೆ ಅವುಂದು ಎಮ್ಮೆನೇ ಇಲ್ಲಂತೆ. ಮತೆ ಎಮ್ಮೆನೇ ಇಲ್ಲದ್‌ಮ್ಯಾಲೆ ಇವುನೇಣ್ತೆ ಆಲುತುಪ್ಪ, ಮೊಸರು ಇನ್ನೇಟುರಮಟ್ಟಿಗೆ ಅಡಕಿದ್ದಾಳು ನೀನೇ ಏಳಪ ಮತ್ತೆ ನೀನೂರ ಗೌಡ ಸರ್ರ್‍ಯಾಗಿ ಪಂಚಾತಿ ಏಳು ಅಂದಾಗ ಏನೋ ಮತೆ ಎಮ್ಮಿಲ್ಲ ಅಂತಿಯಾ ನಿನೇಣ್ತಂಗೆ ಆಲು ವೊಸುರು ತವುರ್ಮ್ನಿಗಡಕಿದಾಳೆ ಅಂದು ವೊಡುದೆಂತೆಲ್ಲೋ ನಿನ್ನಾಗೆ. ಬಾಯಿ ಬಂದಾಗಿಬಿಡ್ತು ಅವುಂದು. ಆಮ್ಯಾಲೆ ಆ ಉಡುಗುರಿಗೆ ಬಯ್ದಾಡಿ ಅಲ್ಲೋ ನಿಮ್ತಂಗಿ ಕೊಟ್ಟು ಏಸ್ ವರ್ಸಾತೋ ಇವುನಿಗೆ ಮತೆಮ್ಮೆ ವೊಡುದ್ದಿರಾ ಬಳುಲಿಯಾ ಕಳ್‌ಸೂಳೆಮಕ್ಳ ಮರ್‍ಯಾದಿಂದ ಬಳುಲಿ ವೊಡೀರಿ ಅಂಗೆಂತೇಳಿ ಗೌಡ ಬಯ್ದಾಡಿ ಒಂದೆಮ್ಮೆ ಬಳುಲಿ ವೊಡುಸಿದ್ನಂತೆ ಆವಾಗ. ಬಳುಲಿ ವೊಡುಸಿದ್‌ಮ್ಯಾಲೆ ಆವಾಗ ಆ ಎಮ್ಮೆ ಕಟ್ಕೆಂದು ಸುಖವಾಗಿ ಕರಾವುಂಡ್ಕಂತ ಮೊದ್ಲಂಗೆ ಕೂಡ್ಕೆಂದು ಸುಖುವಾಗಿ ಬಾಳೇವು ಮಾಡ್ಕೆಂತ ವೋದ್ನಂತೆ.





ಹತ್ತಿ, ಹಾಸಿಗೆ ಬಟ್ಟೆಯೊಂದಿಗೆ
ಪಿಂಜಾರರ ಸವಾರಿ.



ಕಮಾನು, ಕೊಡತಿಯೊಂದಿಗೆ
ಹತ್ತಿ ಸಂಸ್ಕರಿಸುತ್ತಿರುವುದು.







ಗಾದಿ ಹೊಲಿಯುತ್ತಿರುವುದು.



ಆಧುನಿಕ ಯಂತ್ರದಲ್ಲಿ ಹತ್ತಿಯ
ಸಂಸ್ಕರಣೆ




ತಯಾರಾದ ಹಾಸಿಗೆ -
ದಿಂಬಿನ ಅಂಗಡಿ



ಮೊಹರಂ - ಅಲಂಕೃತ
ತಾಬೂತ್



ತಾಬೂತಿನೊಂದಿಗೆ ಊರು ಸುತ್ತಾಟ.



ಮೊಹರಂ ಹಬ್ಬದಲ್ಲಿ ಕೆಂಡ ತುಳಿಯುತ್ತಿರುವುದು.



ಎರಡು ಊರುಗಳ ದೇವರುಗಳು ಗಡಿಯಾಡುತ್ತಿರುವುದು.



ಮೊಹರಂ ;
ಬೇಡರ ಕಣ್ಣಪ್ಪನ ವೇಷ



ಮೊಹರಂ ;
ಕಂಚಿಗೊಲ್ಲರ ಆಟದ
ಒಂದು ಭಂಗಿ



ಮೊಹರಂ ;
ಕೀಲು ಕುದುರೆ
ವೇಷ - ನೃತ್ಯ

ಮೊಹರಂ ;
ಕಾರ್ನಿಕದ ಮೊದಲು
ಬಾವಿಗೆ ಪೂಜೆ



ಮೊಹರಂ ;
ಕಾರ್ನಿಕದ
ಸಮಯದಲ್ಲಿ ನೆರೆದ
ಜನ ಸಮೂಹ







ಮೊಹರಂ ಪದ
ಹೇಳುತ್ತಿರುವ
ಪಿಂಜಾರರು



ಪಿಂಜಾರರ ಮನೆ







ಸರ್ವ ಮತ
ಬಾಂಧವರಿಂದ
ಮೊಹರಂ ಆಚರಣೆ

# ವಕ್ತೃ ವಿವರ

| ಹೆಸರು | ವಯಸ್ಸು | ಜಾತಿ | ವೃತ್ತಿ | ವಿಳಾಸ |
|---|---|---|---|---|
| ನಬೀಸಾಬ್ | ೬೦ | ಪಿಂಜಾರ | ಕೃಷಿ | ಹಿರೇಕೋಗಲೂರು |
| ಕರೇಗೌಡ ಹೊನ್ನೂರ್‌ಸಾಬ್ | ೬೦ | --,,-- | ಬಡಗಿ ಮತ್ತು ಕೃಷಿ | ಕುಡುಪಲಿ, ಹಿರೇಕೆರೂರು ತಾ॥ |
| ಜನ್ನಕ್ಕ | ೫೮ | --,,-- | ಕೃಷಿ | --,,-- |
| ರಾಜಾಸಾಬ್ | ೬೩ | --,,-- | ಕೃಷಿ | --,,-- |
| ಫಕೀರ್‌ಸಾಬ್ | ೭೦ | --,,-- | ಕೃಷಿ | --,,-- |
| ಬಸಪ್ಪ ಮೇದಾರ್ | ೬೫ | ತಳವಾರ | | ಹೊಳಲು, ಹೂವಿನಹಡಗಲಿ ತಾ॥ |
| ಹುಸೇನ್ ಸಾಬ್ | ೭೨ | ಪಿಂಜಾರ | | --,,-- |
| ಬುಡೇನ್‌ಸಾಬ್ | ೩೫ | --,,-- | ಹಾಸಿಗೆ ಹಾಕುವ ಕೆಲಸ | ಮಂಡ್ಯ. |
| ಜಬೀವುಲ್ಲಾ | ೪೦ | --,,-- | --,,-- | --,,-- |
| ಖಾನವ್ವರ ಹುಸೇನ್‌ಸಾಬ್ | ೮೦ | --,,-- | --,,-- | ನವಿಲೇಹಾಳ್ |
| ಹೊನ್ನೂರ್‌ಸಾಬ್ | ೮೦ | --,,-- | ಕೃಷಿ | --,,-- |
| ಅಲ್ಲೆವ್ವ | ೭೦ | --,,-- | ಕೃಷಿ | --,,-- |
| ಬೆಳ್ಳೆರೆ ಬುಡೇನ್‌ಸಾಬ್ | ೬೦ | --,,-- | ಶಿಕ್ಷಕರು | --,,-- |
| ಚೈತುನ್‌ಬಿ | ೫೦ | --,,-- | ಕೃಷಿ | --,,-- |
| ಕಾಲೆದೇರಿ ಜಮಾಲ್‌ಸಾಬ್ | ೬೦ | --,,-- | ಗಾರೆಕೆಲಸ | --,,-- |
| ಜೆ.ಕೆ. ಬಷೀರ್‌ಸಾಬ್ | ೭೦ | --,,-- | ವ್ಯಾಪಾರ | ಜಗಳೂರು. |
| ಜೆ.ಕೆ. ಹುಸೇನ್‌ಮಿಯ್ಯಾ | ೬೫ | --,,-- | ನಿ. ಶಿಕ್ಷಕರು | --,,-- |
| ಹಯಾತ್ ಮೇಷ್ಟ್ರು | ೭೦ | --,,-- | --,,-- | ಬಾಲೇನಹಳ್ಳಿ. |
| ಬುಡೇನ್‌ಸಾಬ್ | ೬೦ | --,,-- | --,,-- | ಹಿರಿಯೂರು. |

| ಹೆಸರು | ವಯಸ್ಸು | ಜಾತಿ | ವೃತ್ತಿ | ವಿಳಾಸ |
|---|---|---|---|---|
| ಡಿ. ಬುಡೆನ್‌ಸಾಬ್ | ೫೬ | --,,-- | ಉಪನ್ಯಾಸಕರು | ಹೊಸದುರ್ಗ |
| ಬಿ.ಕೆ. ಮಹಮದ್ ಹುಸೇನ್ | ೭೫ | --,,-- | ನಿ. ಶಿಕ್ಷಕರು | ಬೆಂಗಳೂರು |
| ದಾದಾಪೀರ್. ಎನ್.ಎ. | ೪೬ | --,,-- | ಕೃಷಿ | ನವಿಲೇಹಾಳ್ |
| ಚನ್ನಬಸಪ್ಪ | ೬೫ | ಲಿಂಗಾಯಿತ | --,,-- | ಕೋಟೆಹಾಳ್ |
| ತಿಪ್ಪೇರುದ್ರಪ್ಪ | ೬೦ | --,,-- | --,,-- | ನವಿಲೇಹಾಳ್ |
| ರೇವಣಸಿದ್ದಪ್ಪ | ೭೫ | --,,-- | --,,-- | --,,-- |
| ಮಾನಂಗಿ ತಿಪ್ಪಣ್ಣ | ೪೫ | ತಳವಾರ | ಮೆಕ್ಯಾನಿಕ್ | --,,-- |
| ಎಂ.ಬಿ. ಚಂದ್ರಪ್ಪ | ೫೫ | ಮರಾಠಿ | ಅಧ್ಯಾಪಕರು | ದಾವಣಗೆರೆ |
| ದೊಡ್ಡ ಬುಡ್ಡಣ್ಣ | ೭೦ | ಪಿಂಜಾರ | ಕೃಷಿ | ದೊಡ್ಡಘಟ್ಟ |
| ಫರೀದಾ | ೫೦ | --,,-- | --,,-- | --,,-- |
| ದಾವಲ್ ಸಾಬ್ | ೫೫ | --,,-- | ಟಿಂಬರ್ ಮರ್ಚೆಂಟ್ | ಹಾವೇರಿ |
| ಜಫ್ರುಲ್ಲಾ | ೫೪ | --,,-- | ಕಬ್ಬಿಣದ ವ್ಯಾಪಾರ | ಹರಿಹರ |
| ಜಮಾಲ್‌ಸಾಬ್ | ೭೫ | --,,-- | ಬಳೆ ವ್ಯಾಪಾರ | ನವಿಲೇಹಾಳ್ |
| ಕಂದಗಲ್ ಚಮನ್‌ಸಾಬ್ | ೮೦ | --,,-- | ಕೃಷಿ | ದೊಡ್ಡಘಟ್ಟ |
| ಎ.ಹೆಚ್. ದಾದಾಪೀರ್ | ೫೭ | --,,-- | ಕೃಷಿ | ನವಿಲೇಹಾಳ್ |
| ಅಡಿಬೆಜ್ಜರ ಚಾಂದಣ್ಣ | ೬೫ | --,,-- | ಕೃಷಿ | --,,-- |
| ಷಬ್ಬೀರಣ್ಣ | ೫೫ | ಮುಸ್ಲಿಂ | --,,-- | --,,-- |
| ಬಳೆಗಾರ್ ಗೌಸಣ್ಣ | ೫೩ | --,,-- | ಬಳೆ ವ್ಯಾಪಾರ | --,,-- |
| ಸಣ್ಣ ಚಮನ್‌ಸಾಬ್ (ಚಿಕ್ಕಣ್ಣ) | ೭೦ | --,,-- | ಕೃಷಿ | --,,-- |
| ಖುದ್ದೂಸಾಬರ ಬುಡ್ಡವ್ವ | ೬೫ | --,,-- | ಕೃಷಿ-ಮನೆಗೆಲಸ | --,,-- |
| ಮಹಮ್ಮದ್ ಜಿಯಾವುಲ್ಲಾ | ೫೫ | --,,-- | ಉಪನ್ಯಾಸಕರು | ಮೈಸೂರು |
| ಚಿರಡೋಣಿ ಮಹಮ್ಮದ್‌ಸಾಬ್ | ೫೮ | ಪಿಂಜಾರ | ಬಳೆಗಾರ | ನವಿಲೇಹಾಳ್ |

# ಪರಾಮರ್ಶಿತ ಗ್ರಂಥಗಳು

೧. ಇತಿಹಾಸ ಮತ್ತು ಇಸ್ಲಾಂ - ಎಂ.ಎನ್. ರಾಯ್ - ಅನು : ಬಿ.ಎಂ. ಹನೀಫ್ - ಸುಹಾ ಪ್ರಕಾಶನ ಹಳೆಯಂಗಡಿ - ಪ್ರಥಮ ಮುದ್ರಣ, ೧೯೯೭.

೨. ಇಸ್ಲಾಂ ಸಂಸ್ಕೃತಿ - ಪ್ರೊ. ಮಹಮ್ಮದ್ ಅಬ್ಬಾಸ್ ಷೂಸ್ತ್ರಿ - ಅನು : ಬಿ.ಎಂ. ಶ್ರೀಕಂಠಯ್ಯ - ಮೈಸೂರು ವಿಶ್ವವಿದ್ಯಾನಿಲಯ ಪ್ರಕಟಣೆ.

೩. ಉಪಸಂಸ್ಕೃತಿ - ಬರಗೂರು ರಾಮಚಂದ್ರಪ್ಪ.

೪. ಗ್ರಾಮಾಯಣ - ರಾವಬಹದ್ದೂರ - ಅಂಕಿತ ಪುಸ್ತಕ, ಬೆಂ. ಪುನರ್ ಮುದ್ರಣ-೨೦೦೧.

೫. ಜನಪದ ಸಾಹಿತ್ಯ - ಕಾಳೇಗೌಡ ನಾಗವಾರ - ಯುಗಾದಿ ಪ್ರಕಾಶನ ಬೆಂ - ಪ್ರಥಮ ಮುದ್ರಣ, ೧೯೯೬.

೬. ದಲಿತ ಸಂಸ್ಕೃತಿ - ಪ್ರೊ. ಎಸ್.ಎಸ್. ಹಿರೇಮಠ - ಕನ್ನಡ ವಿ.ವಿ. ಪ್ರಥಮ ಮುದ್ರಣ, ೨೦೦೧.

೭. ದಕ್ಷಿಣ ಭಾರತ : ವಸಾಹತು ಶಾಹಿ ಮತ್ತು ಸಂಘರ್ಷ - ಡಾ. ಎಸ್. ಚಂದ್ರಶೇಖರ್, ಕನ್ನಡ ವಿ.ವಿ., ಪ್ರಥಮ ಮುದ್ರಣ, ೨೦೦೦.

೮. ಧರ್ಮ (ವಿಶ್ವಕೋಶ) - ಸಂ. ಡಾ. ರಹಮತ್ ತರೀಕೆರೆ, ಅನು : ಸಿ. ನಾಗಣ್ಣ, ಕನ್ನಡ ವಿ.ವಿ., ಪ್ರಥಮ ಮುದ್ರಣ, ೨೦೦೦.

೯. ನಮ್ಮ ಮುಸ್ಲಿಂ ಹಿನ್ನೆಲೆಯ ಜನಪದ ಕತೆಗಳು - ಡಾ. ಎಂ.ಎಸ್. ಶೇಖರ್ - ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಪ್ರಥಮ ಮುದ್ರಣ, ೨೦೦೧.

೧೦. ಪಿಂಜಾರರ ಸಂಸ್ಕೃತಿ - ಬಿ.ಸಿ. ದಾದಾಪೀರ್ - ಕರ್ನಾಟಕ ಸಾಹಿತ್ಯ ಅಕಾಡೆಮಿ, ಪ್ರಥಮ ಮುದ್ರಣ, ೧೯೯೩

೧೧. ಪ್ರತಿ ಸಂಸ್ಕೃತಿ - ಡಾ. ರಹಮತ್ ತರೀಕೆರೆ - ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು, ಪ್ರಥಮ ಮುದ್ರಣ, ೧೯೯೩.

೧೨. ಬಂಡಾಯ ಸಾಹಿತ್ಯ ಸಂವೇದನೆ - ಡಾ. ರಂಗರಾಜು ವನದುರ್ಗ - ಕನಕ ಸಾಹಿತ್ಯ ಪ್ರಕಾಶನ, ಬೆಂಗಳೂರು, ಪ್ರಥಮ ಮುದ್ರಣ -೨೦೦೨.

೧೩. ಬಂಡಾಯ ಸಾಹಿತ್ಯ ಮೀಮಾಂಸೆ - ಬರಗೂರು ರಾಮಚಂದ್ರಪ್ಪ - ಅನ್ವೇಷಣೆ ಪ್ರಕಾಶನ, ಬೆಂಗಳೂರು, ಪ್ರಥಮ ಮುದ್ರಣ - ೧೯೯೧.

೧೪. ಮೈಸೂರು ಆಗ ಮತ್ತು ಈಗ - ಜೆ. ಮಹಮದ್ ಇಮಾಂ - ಇಮಾಂ ಅವರ ಮಕ್ಕಳು, ದಾವಣಗೆರೆ, ದ್ವಿತೀಯ ಮುದ್ರಣ - ೧೯೯೭.

೧೫. ಮರದೊಳಗಣ ಕಿಚ್ಚು - ಡಾ. ರಹಮತ್ ತರೀಕೆರೆ - ಬೆಳ್ಳಿಚುಕ್ಕಿ ಬುಕ್ ಟ್ರಸ್ಟ್ - ಪ್ರಥಮ ಮುದ್ರಣ-೨೦೦೨.

೧೬. ಮೊಹರಂ ಪದಗಳು - ಡಾ. ದಸ್ತಗೀರ್ ಅಲ್ಲೀಭಾಯಿ - ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪ್ರಥಮ ಮುದ್ರಣ- ೧೯೯೯.

೧೭. ಲಾಲ್ ಬನೋ ಗುಲಾಮಿ ಛೋಡೋ ಬೋಲೋ ವಂದೇಮಾತರಂ - ತೆಲುಗುಮೂಲ : ಎನ್.ಕೆ., ಅನುವಾದ : ಡಾ. ಬಂಜಗೆರೆ ಜಯಪ್ರಕಾಶ್ - ಬೆಳ್ಳಿಚುಕ್ಕಿ ಬುಕ್ ಟ್ರಸ್ಟ್ - ದ್ವಿತೀಯ ಮುದ್ರಣ- ೨೦೦೨.

೧೮. ಶಿಷ್ಟ - ಪರಿಶಿಷ್ಟ - ಡಾ. ಪುರುಷೋತ್ತಮ ಬಿಳಿಮಲೆ.

೧೯. ಸಕಾಲಿಕ - ಜಿ.ಎಚ್. ನಾಯಕ - ಶ್ರೀ ರಾಘವೇಂದ್ರ ಪ್ರಕಾಶನ, ಅಂಬಾರಕೊಡ್ಲ, ಅಂಕೋಲಾ - ಪ್ರಥಮ ಮುದ್ರಣ - ೧೯೯೫.

೨೦. ಸಂಸ್ಕೃತಿ ಕಥನ - ಡಾ. ಡಿ.ಆರ್. ನಾಗರಾಜ್ - ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪ್ರಥಮ ಮುದ್ರಣ - ೨೦೦೨.

೨೧. ಸುಪ್ಪತ್ತಿಗೆಯ ಹಿಂದಿನ ಬದುಕು - ಡಾ. ಮಂಜುನಾಥ ಬೇವಿನಕಟ್ಟಿ, ಸಂಘರ್ಷ ಪ್ರಕಾಶನ, ಹೂವಿನಹಡಗಲಿ.

೨೨. **Mysore Gazetteer - Volume II - C. Hayavadanaraya.**

೨೩. **The Mysore Tribes and Castes - Vol. IV - H.V. Nanjundaiah & L.K. Ananthakrishna Iyer.**

೨೪. **Castes and tribes of Southern India - Vol. II - Edgar Thurston .**

೨೫. ಪ್ರಜಾವಾಣಿ, ಸಂಯುಕ್ತ ಕರ್ನಾಟಕ ಪತ್ರಿಕೆಗಳ ಬಿಡಿಬರಹಗಳು.

